ಪ್ರತಿಭಾವಂತ ಸಂಸದೀಯ ಪಟುಗಳ ಬದುಕು-ಬರೆಹ ಮಾಲಿಕೆ

# ಎನ್. ರಾಚಯ್ಯ

ಲೇಖಕರು

ಡಾ. ರಾಮಚಂದ್ರಪ್ಪ ಜಿ.ಟಿ.

ಡಾ. ಎನ್.ಕೆ. ಲೋಲಾಕ್ಷಿ

ಪ್ರಕಟಣೆ

ಕರ್ನಾಟಕ ವಿಧಾನ ಮಂಡಲದ ಗ್ರಂಥಾಲಯ ಸಮಿತಿ
ವಿಧಾನಸೌಧ, ಬೆಂಗಳೂರು - 560 001

ಎನ್. ರಾಚಯ್ಯ
ಪ್ರತಿಭಾವಂತ ಸಂಸದೀಯ ಪಟುಗಳ ಬದುಕು-ಬರೆಹ ಮಾಲಿಕೆ
ಲೇಖಕರು: ಡಾ: ರಾಮಚಂದ್ರಪ್ಪ ಜಿ.ಟಿ.
ಪ್ರಾಧ್ಯಾಪಕರು, ರಾಜ್ಯ ಶಾಸ್ತ್ರ ಅಧ್ಯಯನ ವಿಭಾಗ,
ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು ಮತ್ತು
ಡಾ: ಲೋಲಾಕ್ಷಿ, ಸಹಾಯಕ ಪ್ರಾಧ್ಯಾಪಕಿ,
ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ ಮೈಸೂರು
ಪ್ರಕಾಶನ
ಗ್ರಂಥಾಲಯ ಸಮಿತಿ
ಕರ್ನಾಟಕ ವಿಧಾನ ಮಂಡಲ
ವಿಧಾನಸೌಧ, ಬೆಂಗಳೂರು - 560 001
ಪುಟ : 455 +18 ಬೆಲೆ: ರೂ. 50/-
ಸಭಾಪತಿಗಳು : ಕರ್ನಾಟಕ ವಿಧಾನ ಪರಿಷತ್ತು
ಸಭಾಧ್ಯಕ್ಷರು : ಕರ್ನಾಟಕ ವಿಧಾನ ಸಭೆ
ಮೊದಲ ಮುದ್ರಣ : 2016 ಪ್ರತಿಗಳು : 1800
ಮುದ್ರಣ ಮತ್ತು ವಿನ್ಯಾಸ
ಸರ್ಕಾರಿ ಮುದ್ರಣಾಲಯ, ಬೆಂಗಳೂರು.

**N. RACHAIAH**
**Eminent Parliamentarian Series**
**Written by Dr. G.T. Ramachandrappa**
**Professor, Department of Political Science,**
**Mysore University, Manasagangothri, Mysore &**
**Dr. N.K. Lolakshi, Assistant Professor,**
**Kuvempu Institute of Kannada Studies,**
**Manasagangothri, Mysore**
**Published by**
**Karnataka Legislature Library Committee**
**Vidhana Soudha, Bengaluru - 560 001**
Page: 455 +18 Price: Rs. 50-00/-
Chairman Karnataka Legislative Council
& Speaker Karnataka Legislative Assembly
First Edition : 2016 Copies : 1800
**Printed & Designed by**
Government Press, Bengaluru.

# ಕರ್ನಾಟಕ ವಿಧಾನ ಮಂಡಲ ಗ್ರಂಥಾಲಯ ಸಮಿತಿ
# 2015–2016

**ಅಧ್ಯಕ್ಷರು**

**ಶ್ರೀ ಡಿ.ಹೆಚ್. ಶಂಕರಮೂರ್ತಿ**
ಸಭಾಪತಿಗಳು, ಕರ್ನಾಟಕ ವಿಧಾನ ಪರಿಷತ್ತು

**ಸದಸ್ಯರು**

**ಶ್ರೀ ಕಾಗೋಡು ತಿಮ್ಮಪ್ಪ**
ಸಭಾಧ್ಯಕ್ಷರು, ಕರ್ನಾಟಕ ವಿಧಾನ ಸಭೆ

**ಶ್ರೀ ಹೆಚ್.ಪಿ. ರಾಜೇಶ್**
ವಿಧಾನಸಭಾ ಸದಸ್ಯರು ಹಾಗೂ ಸಮಿತಿಯ ಸದಸ್ಯರು

**ಶ್ರೀ ಬಿ.ಜೆಡ್. ಜಮೀರ್ ಅಹ್ಮದ್ ಖಾನ್**
ವಿಧಾನಸಭಾ ಸದಸ್ಯರು ಹಾಗೂ ಸಮಿತಿಯ ಸದಸ್ಯರು

**ಶ್ರೀ ಎಂ. ಕೃಷ್ಣಾರೆಡ್ಡಿ**
ವಿಧಾನಸಭಾ ಸದಸ್ಯರು ಹಾಗೂ ಸಮಿತಿಯ ಸದಸ್ಯರು

**ಶ್ರೀ ಪಿ. ರಾಜೀವ್**
ವಿಧಾನಸಭಾ ಸದಸ್ಯರು ಹಾಗೂ ಸಮಿತಿಯ ಸದಸ್ಯರು

**ಶ್ರೀ ಡಿ.ಎಸ್. ವೀರಯ್ಯ**
ವಿಧಾನ ಪರಿಷತ್ ಸದಸ್ಯರು ಹಾಗೂ ಸಮಿತಿಯ ಸದಸ್ಯರು

**ಶ್ರೀ ಲಹರ್ ಸಿಂಗ್ ಸಿರೋಯಾ**
ವಿಧಾನ ಪರಿಷತ್ ಸದಸ್ಯರು ಹಾಗೂ ಸಮಿತಿಯ ಸದಸ್ಯರು

**ಶ್ರೀ ಐವನ್ ಡಿ'ಸೋಜಾ**
ವಿಧಾನ ಪರಿಷತ್ ಸದಸ್ಯರು ಹಾಗೂ ಸಮಿತಿಯ ಸದಸ್ಯರು

# ಪ್ರತಿಭಾವಂತ ಸಂಸದೀಯ ಪಟು ಪುಸ್ತಕ ಮಾಲಿಕೆ

## ಅಧಿಕಾರಿ – ಸಂಪಾದಕ ವರ್ಗ

### ಕರ್ನಾಟಕ ವಿಧಾನಸಭೆ ಸಚಿವಾಲಯ

| | |
|---|---|
| ಶ್ರೀ ಎಸ್. ಮೂರ್ತಿ | ಕಾರ್ಯದರ್ಶಿ (ಪ್ರ) |
| ಶ್ರೀಮತಿ ಎಂ.ಕೆ. ವಿಶಾಲಾಕ್ಷಿ | ನಿರ್ದೇಶಕರು |
| ಶ್ರೀಮತಿ ಇಂದಿರಾ ಕೆ.ಕೆ. | ಜಂಟಿ ನಿರ್ದೇಶಕರು |
| ಶ್ರೀಮತಿ ಅನಸೂಯ ಎನ್. ದೇವಗಿರಿ | ಮುಖ್ಯ ಗ್ರಂಥಪಾಲಕರು |

### ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯ

| | |
|---|---|
| ಶ್ರೀ ವಿ. ಶ್ರೀಶ್ | ಕಾರ್ಯದರ್ಶಿ |
| ಶ್ರೀ ಶ್ರೀನಿವಾಸ | ಅಪರ ಕಾರ್ಯದರ್ಶಿ (ಪ್ರ) |

**ಸಂಪಾದಕರು:**

**ಡಾ॥ ರಾಮಚಂದ್ರಪ್ಪ ಜಿ.ಟಿ.**

**ಡಾ॥ ಎಸ್.ಕೆ. ಲೋಲಾಕ್ಷಿ**

# ಮೊಣ್ಣುಂಡಿಯಿಂದ ದೆಹಲಿಯವರೆಗೆ

ಭಾರತ ಭೂಪಟದಲ್ಲಿ ಕರ್ನಾಟಕಕ್ಕೆ ವಿಶೇಷ ಮನ್ನಣೆ ಇದೆ. ಕರ್ನಾಟಕವು ರಾಜಪ್ರಭುತ್ವಶಾಹಿ ಮತ್ತು ವಸಾಹತುಶಾಹಿ ಆಡಳಿತಕ್ಕೆ ಒಳಗಾದ ಕಾಲದಿಂದಲೂ ಕನ್ನಡದ ನೆಲ ರಾಜಕಾರಣವನ್ನು ಭಿನ್ನವಾಗಿ ಅರ್ಥೈಸಿಕೊಂಡಿದೆ. ರಾಜಕಾರಣವೆಂದರೆ ಅಧಿಕಾರ ಮತ್ತು ದರ್ಪದ ಆಚೆಗೆ – ಜನಸಾಮಾನ್ಯರ ಬದುಕನ್ನು ಹಸನುಗೊಳಿಸುವ ಆಡಳಿತವನ್ನಾಗಿ ಪರಿಭಾವಿಸಿಕೊಂಡಿದೆ. ಈ ನೆಲಕ್ಕೆ ಸಹೃದಯ ರಾಜಕಾರಣದ ಸ್ಪಂದನವಿದೆ. ಈ ಸ್ಪಂದನಕ್ಕೆ ಸಾಕ್ಷಿಯಾಗಿ ಹಲವು ಪ್ರಗತಿಪರ ರಾಜಕಾರಣಿಗಳನ್ನು ಗುರುತಿಸಿಕೊಳ್ಳಬಹುದು. ಅಂತಹವರಲ್ಲಿ ಎನ್. ರಾಚಯ್ಯನವರು ಒಬ್ಬರು.

1948ರಲ್ಲಿ ಕರ್ನಾಟಕ ರಾಜಕಾರಣ ಪ್ರವೇಶಿಸಿದ ರಾಚಯ್ಯನವರದು ನೆಲಮೂಲ ರಾಜಕಾರಣವೆ ಹೊರತು ಧನಮೂಲ ರಾಜಕಾರಣ ಮಾಡಿದವರಲ್ಲ. ಜನಮೂಲ ಇವರ ಆದರ್ಶ ನೆಲೆ. 29ನೇ ವಯಸ್ಸಿಗೆ ರಾಜಕಾರಣವನ್ನು ಪ್ರವೇಶಿಸಿದ ಎನ್. ರಾಚಯ್ಯನವರು ಜೀವನದ ಕೊನೆಯ ಉಸಿರಿರುವವರೆಗೆ ಅಂದರೇ 1989ರವರೆಗೆ ಸುಮಾರು 41 ವರ್ಷಗಳ ಕಾಲ ಸತತವಾಗಿ ಕರ್ನಾಟಕದ ರಾಜಕಾರಣವನ್ನು ಸಮಾನತಾ ನೆಲೆಯಲ್ಲಿ ಮುನ್ನಡಿಸಿ ಆಡಳಿತಕ್ಕೆ ಹೊಸ ಭಾಷ್ಯವನ್ನು ಬರೆಯುವ ಮೂಲಕ ರಾಜಕಾರಣದ ಅರ್ಥವನ್ನೇ ಬದಲಾಯಿಸಿಬಿಟ್ಟರು.

ಕೇವಲ ಸದನದೊಳಗೆ ರಾಜಕಾರಣಿಯಾಗಿ ನೆಲೆನಿಂತ ರಾಜಕಾರಣಿಯಲ್ಲ. ಜನಸಾಮಾನ್ಯರ ಪ್ರತಿನಿಧಿಯಾಗಿ ಸದನದೊಳಗೆ ಪ್ರತಿಧ್ವನಿಸಿದವರು. ಸಾರ್ವಜನಿಕ ಬದುಕಿನಲ್ಲಿ ಅವರು ಮಾಡಿದ ಸಾರ್ವಜನಿಕ ಭಾಷಣಗಳು ಮತ್ತು ಸಾರ್ವಜನಿಕ ಸಭೆಗಳು ಅವರಲ್ಲಿದ್ದಂತಹ ಪ್ರಗತಿಪರ ರಾಜಕಾರಣಿಯನ್ನು ಪ್ರತಿಬಿಂಬಿಸುತ್ತವೆ. ಪ್ರತಿಭಾಷಣಗಳು ವೇದಿಕೆಯ ಕೂಗಾಟಗಳಾಗದೆ ಆಗ ತಾನೇ ಜನಿಸಿದ್ದ ಸಂವಿಧಾನ ಎಂಬ ಕೂಸನ್ನು ಜನಸಾಮಾನ್ಯರಿಗೆ ತಲುಪಿಸುವ ರಾಯಭಾರಿಗಳಾಗಿ

ರಾಚಯ್ಯನವರು ಕಂಡುಬಂದರು. ಅವರ ಪ್ರತಿಭಾಷಣದಲ್ಲಿ ಸಂವಿಧಾನದ ಎಚ್ಚರ, ಪ್ರಜಾಪ್ರಭುತ್ವದ ಅರಿವು ಎದ್ದು ಕಾಣುತ್ತಿತ್ತು. ಇವುಗಳ ಸಮತೋಲನದ ರಾಜಕೀಯ ನಡೆ, ರಾಚಯ್ಯನವರ ರಹದಾರಿ. ಹಾಗಾಗಿ ಈ ರಾಜಕಾರಣಿ ಎಲ್ಲೂ ಎಚ್ಚರ ತಪ್ಪಿದವರಲ್ಲ. ಸದಾ ಕಾಲ ಕಾನೂನು ಎಂಬ ಮಿಡಿತ ಇವರ ನಡೆ – ನುಡಿಗಳನ್ನು ನಿಯಂತ್ರಿಸುತ್ತಲೇ ಇತ್ತು. ಹಾಗಾಗಿ ಒಂದು ಸಮಾಜವನ್ನು ಆರೋಗ್ಯಪೂರ್ಣ ದೃಷ್ಟಿಕೋನದಿಂದ ಪರಿಭಾವಿಸಲು ಸಾಧ್ಯವಾಯಿತು.

ಇವರಿಗಿದ್ದ ರೈತಪರ ಕಾಳಜಿ, ಕೆಳವರ್ಗದವರ ಪರವಾದ ಸ್ಪಂದನ, ಮಹಿಳಾ ಪರವಾದ ಸ್ವಾತಂತ್ರ್ಯದ ನಿಲುವು, ದಲಿತರ ಪರವಾದ ಸಮಾನತಾ ನಿಲುವು, ಭ್ರಷ್ಟಾಚಾರಿಗಳ ವಿರುದ್ಧದ ಪ್ರತಿಭಟನೆಯ ನಿಲುವು, ಇವರ ರಾಜಕೀಯ ನಡೆಯ ಯಶಸ್ಸಿನ ಮಾರ್ಗದರ್ಶನ ಸೂತ್ರಗಳು.

ಅಧಿಕಾರಕ್ಕೆ ಹಿಗ್ಗದೆ ಅಧಿಕಾರರಹಿತವಾದಾಗ ಕುಗ್ಗದೆ ಸಮಚಿತ್ತದಿಂದ ಸಮಾಜವನ್ನು ಪರಿಭಾವಿಸುವ ಸ್ಥಿತಿ ರಾಚಯ್ಯರವರಿಗೆ ದೊರೆತದ್ದು ಅವರ ಬದುಕು ಬಾಲ್ಯದಿಂದ ಸವೆಸಿದ ಕಷ್ಟ ಕಾರ್ಪಣ್ಯದ ಅನುಭವದಿಂದಾಗಿ, ಈ ಅನುಭವವೇ ಅವರನ್ನು 'ಜನಪರ ಮಂತ್ರಿಯಾಗಿ' ಮಾರ್ಪಡಿಸಲು ಕಾರಣವಾದದ್ದು. ಜನರ ಸಮಸ್ಯೆಗಳನ್ನೇ ಅಂತರ್ಯದಿಂದ ಗುರುತಿಸುವ ಆ ಯಶಸ್ಸಿನ ಗುಟ್ಟು ದೊರೆತದ್ದು ಅವರ ಮೊಣ್ಣುಂಡಿಯ ಬಾಲ್ಯ ಕಲಿಸಿದ ಮಣ್ಣಿನ ಪಾಠದಿಂದಾಗಿ. ಹಾಗಾಗಿ ಮೊಣ್ಣುಂಡಿಯಿಂದ ಪಾರ್ಲಿಮೆಂಟಿನವರೆಗಿನ ಅವರ ನಡೆ, ಧ್ಯಾನ ಸ್ಥಿತಿಯಲ್ಲಿ ತಥಾಸ್ತು ಎಂದು ಗಳಿಸಿದ್ದಲ್ಲ ಅವಿರತ ಹೋರಾಟದ ಮತ್ತು ಶೋಷಿತರ ಪರವಾದ ಕಾಳಜಿಯ ಕುರುಹುಗಳಾಗಿ, ಪಡೆದಿದ್ದು, ಹಾಗಾಗಿ 41 ವರ್ಷಗಳ ಕಾಲ ಎಲ್ಲಿಯೂ ಯಾವುದೇ ರೀತಿಯ ಕಪ್ಪು ಚುಕ್ಕೆಗಳಿಗೆ ಒಳಗಾಗದ ಪಾರದರ್ಶಕವಾದ ಸ್ಫಟಿಕದ ರೀತಿಯ ರಾಜಕೀಯದ ಬದುಕು ರಾಚಯ್ಯನವರದು. ಇಂತಹ ಸ್ಫಟಿಕ ಮಣಿಯ ಸ್ಪರ್ಶದಿಂದ ರೂಪುಗೊಂಡ ರಾಚಯ್ಯನವರ ಮನೆತನದ ಹಲವು ವ್ಯಕ್ತಿತ್ವಗಳು ಈ ಸ್ಪರ್ಶದ ಅಸ್ತಿತ್ವವನ್ನು ಮರುಸ್ಥಾಪಿಸುತ್ತಲೇ ರಾಜಕಾರಣ  ಪ್ರವೇಶಿಸುತ್ತಾ ಬಂದಿವೆ.

ಎಂ.ಎಲ್.ಸಿ., ಎಂ.ಎಲ್.ಎ., ಎಂಪಿ. ವಿವಿಧ ನಿಗಮ ಮಂಡಳಿ ಅಧ್ಯಕ್ಷರುಗಳು, ರಾಜಕೀಯ ಪಕ್ಷಗಳ ಸಂಘಟನೆಯಲ್ಲಿ ಅಧ್ಯಕ್ಷರು, ಉಪಾಧ್ಯಕ್ಷರು, ಕಾರ್ಯದರ್ಶಿಗಳು ಹೀಗೆ ವಿವಿಧ ಸ್ಥಾನಗಳು, ಸಚಿವರಾಗಿ, ಸಂಸದರಾಗಿ, ಅವಿಚ್ಛಿನ್ನ ಕಾರ್ಯನಿರ್ವಹಿಸಿದ್ದಾರೆ. ಕಾಂಗ್ರೆಸ್, ಜನತಾ ಕಾಂಗ್ರೆಸ್ (ಸ್ವತಃ ರಾಚಯ್ಯನವರೇ ಸಂಸ್ಥಾಪಕರು) ಸಂಸ್ಥಾ ಕಾಂಗ್ರೆಸ್, ಜನತಾ ಪಾರ್ಟಿ, ಭಾರತೀಯ ಜನತಾ ಪಾರ್ಟಿ ಹೀಗೆ ತಾಲ್ಲೂಕು, ಜಿಲ್ಲೆ, ರಾಜ್ಯ, ರಾಷ್ಟ್ರಮಟ್ಟದಲ್ಲಿ ವಿವಿಧ ಸ್ಥಾನಗಳನ್ನು ಅಲಂಕರಿಸಿ ಯಶಸ್ವಿ ರಾಜಕೀಯ ಸೇವೆಯನ್ನು ಸಲ್ಲಿಸಿದ ಯಶಸ್ಸು ಈ ಮನೆತನದ್ದು.

ಕೇವಲ ರಾಜಕೀಯ ಸೇವೆಯಷ್ಟೇ ಅಲ್ಲದೆ ವಿವಿಧ ಶೈಕ್ಷಣಿಕ ಸಂಸ್ಥೆಗಳಾದ ವಿಶ್ವವಿದ್ಯಾಲಯಗಳ ಸಿಂಡಿಕೇಟ್ ಸೆನೆಟ್‌ಗಳಲ್ಲಿ ಸದಸ್ಯರುಗಳಾಗಿ ಮತ್ತು ಸಾಂಸ್ಕೃತಿಕ ಸಂಘಟನೆಗಳಲ್ಲಿ ಸಕ್ರಿಯವಾದ ನಾಡು –.ನುಡಿಯ ಸೇವೆಯನ್ನು ಮಾಡಿದ್ದಾರೆ.

ಒಟ್ಟು ಈ ಕುಟುಂಬದ ರಾಜಕೀಯ ಸೇವೆಯನ್ನು ಪರಿಗಣಿಸುವುದಾದರೆ ವಿಧಾನಸಭೆಯಲ್ಲಿ 29 ವರ್ಷ, ವಿಧಾನ ಪರಿಷತ್‌ನಲ್ಲಿ 50 ವರ್ಷ, ಲೋಕಸಭೆಯಲ್ಲಿ 7 ವರ್ಷ ಹೀಗೆ ಆಡಳಿತ ಮತ್ತು ಅಧಿಕಾರ ಸೇವೆಯನ್ನು ಸದನದಲ್ಲಿ ಸಲ್ಲಿಸಿದ್ದಾರೆ.

ರಾಚಯ್ಯನವರು 41 ವರ್ಷ, ರಾಚಯ್ಯನವರ ತಮ್ಮ ಚಿಕ್ಕಸಿದ್ದಯ್ಯನವರ ಮಗ ಮಗ ಸಿ. ರಮೇಶ್ ಆಹಾರ ನಿಗಮ ಮಂಡಳಿಯ ಅಧ್ಯಕ್ಷರಾಗಿ 3 ವರ್ಷ ಮೈಸೂರು ವಿಶ್ವವಿದ್ಯಾನಿಲಯ ಸಿಂಡಿಕೇಟ್ ಸದಸ್ಯರಾಗಿ, ಕಾಡಾ ಅಧ್ಯಕ್ಷರಾಗಿ 2 ವರ್ಷ, ಟಿ..ಎನ್. ನರಸಿಂಹಮೂರ್ತಿ 30 ವರ್ಷಗಳ ಕಾಲ, ಧರ್ಮಸೇನ ಅವರ ಮಾವ ಜಿ. ವೆಂಕಟೇಶ್ ಅವರು ಕರ್ನಾಟಕ ಕನ್ಸ್ಟ್ರಕ್ಷನ್ ಕಾರ್ಪೋರೇಷನ್‌ನಲ್ಲಿ ಎರಡು ವರ್ಷ ಅಧ್ಯಕ್ಷರಾಗಿ, ಧರ್ಮಸೇನ ಅವರು 12 ವರ್ಷಗಳ ಕಾಲ ಜಿಲ್ಲಾ ಕಾಂಗ್ರೆಸ್ ಅಧ್ಯಕ್ಷರಾಗಿ ಸೇವೆಸಲ್ಲಿಸಿರುತ್ತಾರೆ. ಮಂಜುನಾಥ್ ಅವರು ಆರು ವರ್ಷಗಳ ಕಾಲ ಎಂ.ಎಲ್.ಸಿ. ಆಗಿ, ವೈ. ರಾಮಕೃಷ್ಣ 24 ವರ್ಷಗಳ ಕಾಲ ಹೀಗೆ ಸತತವಾಗಿ ವಿವಿಧ ಪಕ್ಷಗಳಲ್ಲಿ, ವಿವಿಧ ಕ್ಷೇತ್ರಗಳಲ್ಲಿ ಈ ಮನೆತನ ಸಲ್ಲಿಸಿರುವ ಸೇವೆ ಹಲವು ದಶಕಗಳನ್ನು ದಾಟುತ್ತದೆ.

ರಾಚಯ್ಯನವರ ಮಗನಾದ ಆರ್. ಧರ್ಮಸೇನಾ ಅವರು ಜಿಲ್ಲಾ ಕಾಂಗ್ರೆಸ್ ಅಧ್ಯಕ್ಷರಾಗಿ 12 ವರ್ಷ ಸೇವೆ ಸಲ್ಲಿಸಿ, ಸಮಕಾಲೀನ ಸಂದರ್ಭದಲ್ಲಿ ಎಂ.ಎಲ್.ಸಿಯಾಗಿ ಕರ್ನಾಟಕ ಕಾಂಗ್ರೆಸ್ ಪಕ್ಷದಲ್ಲಿ ಸಕ್ರಿಯವಾದ ರಾಜಕೀಯ ಸೇವೆ ಸಲ್ಲಿಸುತ್ತಿದ್ದಾರೆ. ಧರ್ಮಸೇನ ಅವರನ್ನು ರಾಜಕಾರಣಿ ಎನ್ನುವುದಕ್ಕಿಂತ ಪ್ರಜ್ಞಾವಂತ ಮನಸ್ಥಿತಿಯ 'ಸಮಸಮಾಜದ ಕನಸುಗಾರ' ಎಂದು ಕರೆದರೆ ಖಂಡಿತ ಅದು ಉತ್ಪ್ರೇಕ್ಷೆಯಲ್ಲ. ತಂದೆ ರಾಚಯ್ಯನವರ ಪ್ರಾಮಾಣಿಕ ರಾಜಕಾರಣದ ಪ್ರತಿಬಿಂಬವಾಗಿ ಧರ್ಮಸೇನ ಅವರು ಜನಮಾನಸದಲ್ಲಿ ಅಚ್ಚೊತ್ತಿದ್ದಾರೆ. ಅವರ ಈ ರಾಜಕೀಯ ನಡೆ ಅಮೂರ್ತವಾದ ಪ್ರಭಾವವೇ ಹೊರತು ಮೂರ್ತವಾದುದಲ್ಲ. ತಂದೆಯ ಹೆಸರಿನಲ್ಲಿ ಲಾಭ ಮಾಡುವ ವ್ಯಕ್ತಿತ್ವವೂ ಅವರದಲ್ಲ. ಸದನದಲ್ಲಿ ಅವರು ಪ್ರತಿಪಾದಿಸುವ ವಿಷಯಗಳು ಅವರೊಳಗಿರುವ ಶುದ್ಧ ಮಾನವೀಯ ಸಮಾಜವನ್ನು ನಿರ್ಮಿಸುವ ತಹತಹಗಳನ್ನು ಅನಾವರಣಗೊಳಿಸುತ್ತವೆ. ಇದು ಇಡೀ ರಾಚಯ್ಯನವರ ಮನೆತನದ ಎಲ್ಲಾ ರಾಜಕಾರಣ ಪ್ರವೇಶಿಸಿದ ವ್ಯಕ್ತಿಗಳಿಗೂ ಅನ್ವಯಿಸುವ ಮಾತೇ ಆಗಿದೆ.

ಇವರ ಸಂಘಟನಾ ಚಾತುರ್ಯದಿಂದ ಇಂದು ಕಾಂಗ್ರೆಸ್ ಪಕ್ಷ ತನ್ನ ಅಸ್ತಿತ್ವವನ್ನು ಮೈಸೂರು ಜಿಲ್ಲೆಯಲ್ಲಿ ಉಳಿಸಿಕೊಳ್ಳಲು ಕಾರಣವಾಗಿದೆ. 'ಎಲೆಮರೆಯ ಕಾಯಿ'ಯ ಹಾಗೆ 12 ವರ್ಷಗಳ ಸೇವೆ ಸಲ್ಲಿಸಿ ಈಗ ಸದನದೊಳಗೆ ಪರಿಮಳದ ಹೂವಾಗಿ ರಾಜಕಾರಣವನ್ನು ಸುವಾಸನೆಯುಕ್ತಗೊಳಿಸಲು ಶ್ರಮಿಸುತ್ತಿದ್ದಾರೆ.

2015–16ರ ಸಾಲಿನ ರಾಜ್ಯ ಆಯವ್ಯಯದಲ್ಲಿ ಮುಖ್ಯಮಂತ್ರಿ ಸಿದ್ದರಾಮಯ್ಯನವರು ಒಂದು ಕೋಟಿ ಹಣವನ್ನು ಎನ್. ರಾಚಯ್ಯನವರ ಸ್ಮಾರಕ ನಿರ್ಮಾಣ ಮಾಡಲು ಕೊಟ್ಟಿರುವುದು ಈ ಸಂದರ್ಭದಲ್ಲಿ ಒಂದು ಸ್ಮರಣೀಯ ಅಂಶವಾಗಿದೆ. ಕರ್ನಾಟಕ ಸರಕಾರಕ್ಕೆ ಕೃತಜ್ಞತೆಗಳು ಸಲ್ಲುತ್ತವೆ.

ಕರ್ನಾಟಕ ರಾಜ್ಯದ ವಿಧಾನ ಮಂಡಲದ ಸಚಿವಾಲಯವು ರಾಜ್ಯದ ಪ್ರತಿಭಾವಂತ ಸಂಸದೀಯ. ಪಟುಗಳ ಬದುಕು–ಬರಹ ಮಾಲಿಕೆಯ ಅಡಿಯಲ್ಲಿ ರಾಜ್ಯದ ಪ್ರತಿಭಾವಂತ ಸಂಸದೀಯ ಪಟುಗಳ ಬದುಕನ್ನು ಕೃತಿ ರೂಪದಲ್ಲಿ ಪ್ರಕಟಿಸುತ್ತಿರುವುದು ಚರಿತ್ರೆಯನ್ನು ದಾಖಲಿಸುವ ನಿರ್ಮಿತಿ ಕೆಲಸವೇ ಆಗಿದೆ.

ಈ ರಾಜಕೀಯ ಚರಿತ್ರೆಯು ಮಣ್ಣಿನಲ್ಲಿ ಹುದುಗಿ ಹೋದ ಗತವನ್ನು ಶೋಧಿಸುವ, ಮತ್ತು ಮರುಕಟ್ಟುವ ಕೆಲಸ.

ಎನ್. ರಾಚಯ್ಯನವರು ಕರ್ನಾಟಕ ರಾಜಕಾರಣದಲ್ಲಿ ದಲಿತ ಪ್ರತಿನಿಧಿಯಾಗಿ, ಕೆಳವರ್ಗದ, ಮಹಿಳೆಯರ, ಶೋಷಣೆಗೆ ಒಳಗಾದವರ ದನಿಯಾಗಿ ನಿಂತವರು. ಮೊಣ್ಣುಂಡಿಯಿಂದ – ಪಾರ್ಲಿಮೆಂಟಿನವರೆಗಿನ ಅವರ ನಡಿಗೆ ಕಲ್ಲು ಮುಳ್ಳಿನ ಹಾದಿಯೇ ಆಗಿದೆ. ಅವರು ಕ್ರಮಿಸಿದ ಈ ಹಾದಿ ನಮ್ಮ ಕರ್ನಾಟಕದ ದಲಿತ ಕಥನವನ್ನೇ ಬಿಚ್ಚಿಡುತ್ತದೆ. ರಾಜಕೀಯ ಬದುಕು ಇಂದಿನ ಯುವ ರಾಜಕಾರಣಿಗಳಿಗೆ ಮಾರ್ಗದರ್ಶಿಯೇ ಆಗಿದೆ. ಅಧಿಕಾರ ಬಂದಾಗ ಹಿಗ್ಗದೆ – ಅಧಿಕಾರ ಹೋದಾಗ ಕುಗ್ಗದೆ ಸದಾ ನಾಡಿನ ಒಳಿತಿಗಾಗಿ ದುಡಿದ ಈ ದೇಶ ಕಂಡ ಅಪರೂಪದ ರಾಜಕಾರಣಿ ಎನ್. ರಾಚಯ್ಯನವರು.

ಕರ್ನಾಟಕದ ರಾಜಕೀಯ ಚರಿತ್ರೆಯಲ್ಲಿ ದಾಖಲಾಗಬೇಕಾದ ಎನ್. ರಾಚಯ್ಯನವರ ಬದುಕು ಮತ್ತು ರಾಜಕೀಯ ನಡೆಯನ್ನು ಗುರುತಿಸುವುದು ಈ ಕೃತಿಯ ಆಶಯ.

ಇಂತಹ ಜವಾಬ್ದಾರಿಯನ್ನು ಕರ್ನಾಟಕ ವಿಧಾನಸಭಾ ಸಚಿವಾಲಯದ ಗ್ರಂಥಾಲಯ ಉಪಸಮಿತಿ ಮತ್ತು ಗ್ರಂಥಾಲಯ ಅಧಿಕಾರಿ ಶ್ರೀಮತಿ ಅನುಸೂಯ ದೇವಗಿರಿಯವರು ವಹಿಸಿದ್ದು, ನಮಗೆ ಹೆಚ್ಚಿನ ಶೋಧನೆಗೆ ತೊಡಗಿಸಿಕೊಳ್ಳಲು ಅನುವು ಮಾಡಿತು. ಹಾಗಾಗಿ ಅವರಿಗೆ ಕೃತಜ್ಞತೆಯನ್ನು ಸಲ್ಲಿಸುತ್ತೇವೆ. ಹಾಗೆ ಗ್ರಂಥಾಲಯದ ಎಲ್ಲಾ ಸಿಬ್ಬಂದಿ ವರ್ಗಕ್ಕೂ ನಮ್ಮ ಕೃತಜ್ಞತೆಗಳು.

ಎನ್. ರಾಚಯ್ಯನವರ ಮಗನಾದ ಶ್ರೀ ಆರ್. ಧರ್ಮಸೇನರವರು ಪ್ರಸ್ತುತ ಎಂ.ಎಲ್.ಸಿ. ಆಗಿ ಸೇವೆ ಸಲ್ಲಿಸುತ್ತಿದ್ದು, ತಂದೆಯವರ ಕುರಿತಾದ ಮಾಹಿತಿಗಳನ್ನು ಒದಗಿಸಿಕೊಟ್ಟಿದ್ದಾರೆ. ಅವರ ಸರಳತನ ಹಾಗೂ ಸೇವಾನಿಷ್ಠತೆ ಅನುಕರಣೀಯವಾದುದು. ಶ್ರೀ ಧರ್ಮಸೇನ ಅವರಿಗೂ ಅವರ ಪತ್ನಿ ಲಲಿತಾಸೇನಾ ಅವರಿಗೂ ರಾಚಯ್ಯನವರ ಮಕ್ಕಳು, ರಂಗಸ್ವಾಮಿ ಅವರಿಗೂ, ಅಶೋಕ್ ಅವರಿಗೂ ಮತ್ತು ಕುಟುಂಬ ವರ್ಗಕ್ಕೂ ಕೃತಜ್ಞತೆಗಳನ್ನು ಸಲ್ಲಿಸುತ್ತೇವೆ.

ಮಗ ರೇವತ್ ಜುಂಕಲ್‌ಗೆ ಮತ್ತು ಎಲ್ಲಾ ಬಂಧುಗಳಿಗೆ,

ಹೆಚ್ಚು ಮಾಹಿತಿಗಳನ್ನು ಸಂಗ್ರಹಿಸಲು ಸಹಕರಿಸಿದ ಮೈಸೂರು ಗ್ರಾಮಾಂತರ ಜಿಲ್ಲಾ ಕಾಂಗ್ರೆಸ್ ಉಪಾಧ್ಯಕ್ಷರಾದ ಶ್ರೀ ಪ್ರಕಾಶ್ ಕುಮಾರ್ ಅವರಿಗೂ, ಆಪ್ತಸಹಾಯಕರಾದ ದ್ವಾರಕಾನಾಥ್ ಅವರಿಗೂ ಮತ್ತು ಭಟ್ ಅವರಿಗೂ ವಂದನೆಗಳು.

ಈ ಪುಸ್ತಕ ಕೆಲಸದ ಸಂದರ್ಭದಲ್ಲಿ ನೆರವಾದ ಸಿ. ರಮೇಶ್ ಮತ್ತು ಕುಟುಂಬ, ಡಾ. ಮುಜಾಫರ್ ಅಜ಼ಾದಿ, ಡಾ. ಶ್ರೀನಿವಾಸ್‌ಮೂರ್ತಿ, ಡಾ. ಆರ್. ಶಿವಪ್ಪ, ಡಾ. ಕೃಷ್ಣ ಹೊಂಬಾಳ್, ಗುಬ್ಬಿಗೂಡು ರಮೇಶ್, ಸತೀಶ್ ಆರ್. ಮಾಲಿನಿ ಅಭ್ಯಂಕರ್, ಮಹದೇವ ನಾಯಕ್, ನವನೀತ್ ಶೆಣೈ ಅಚ್ಚುಕಟ್ಟಾಗಿ ಡಿ.ಟಿ.ಪಿ. ಮಾಡಿಕೊಟ್ಟ ಪ್ರಿಯಾ ಎನ್ ಶೆಣೈ ಹಾಗೂ ವಿಧಾನಸೌಧದ ಗ್ರಂಥಾಲಯ ಹಾಗೂ ಸಂಶೋಧನಾ ಮತ್ತು ಉಲ್ಲೇಖನ ಶಾಖೆಯ ಸಿಬ್ಬಂದಿಯ ಸಹಕಾರಕ್ಕೆ ಕೃತಜ್ಞತೆಗಳು ಸಲ್ಲುತ್ತವೆ.

ಡಾ. ಜಿ.ಟಿ. ರಾಮಚಂದ್ರಪ್ಪ
ಡಾ. ಎನ್.ಕೆ. ಲೋಲಾಕ್ಷಿ

# ಪರಿವಿಡಿ

ವಿಭಾಗ – ಒಂದು

ವಿಭಾಗ – ನಾಲ್ಕು



ವಿಭಾಗ – ಐದು

ವಿಭಾಗ – ಒಂದು

# ಎನ್. ರಾಚಯ್ಯ ಅವರ ಸ್ವ-ಚರಿತ್ರೆ

- ಜನನ ಕಥನ
- ಶಿಕ್ಷಣ ಪಡೆಯುವ ಹಾದಿಯಲ್ಲಿ
- ವಿವಾಹ ಸಂಬಂಧ
- ಉದ್ಯೋಗ ಮತ್ತು ಕುಟುಂಬ ನಿರ್ವಹಣೆ
- ಹೆಚ್ಚಿನ ವಿದ್ಯಾಭ್ಯಾಸದ ಕನಸುಗಳು
- ರಾಜಕೀಯ ಬದುಕಿನ ನೆಲೆಗಳು
- ಮಹಿಳೆ, ಮಕ್ಕಳು ಮತ್ತು ದಲಿತರ ಆಶಾಕಿರಣ
- ದಲಿತ ಶಿಷ್ಯನಿಗೆ ಸಿಕ್ಕಿದ ಗುರು
- ನ್ಯಾಯಕ್ಕಾಗಿ ಕಾನೂನು ಸಮರ
- ಸಮಾಜ ಸೇವಾ ಕಟ್ಟಾಳು
- ಬಾಬು ಜಗಜೀವನರಾಂ ಮತ್ತು ಅಂಬೇಡ್ಕರ್ ಅವರ ಪ್ರೀತಿ ಪಾತ್ರರು
- ಯಶಸ್ವಿ ರಾಜಕಾರಣ
- ರೈತಪರ ಮಂತ್ರಿ
- ಅಭಿವೃದ್ಧಿಯ ಹರಿಕಾರ
- ಬಡವರ ಬಂಧು
- ನಾಗರಿಕ ಹಕ್ಕು ಒತ್ತಾಯ ಸಮಿತಿ
- ಪತ್ರಿಕೋದ್ಯಮಿಯಾಗಿ ಎನ್. ರಾಚಯ್ಯ
- ಅಂತಿಮ ಬದುಕು
- ಎನ್. ರಾಚಯ್ಯನವರ ಕುಟುಂಬದ ರಾಜಕೀಯ ನಡೆ

# ಎನ್. ರಾಚಯ್ಯ ಅವರ ಸ್ವ-ಚರಿತ್ರೆ

ಕರ್ನಾಟಕ ಚರಿತ್ರೆಯಲ್ಲಿ ಅದೊಂದು ದಿನ ಸುವರ್ಣಾಕ್ಷರಗಳಲ್ಲಿ ಬರೆದಿಡಬೇಕಾದದ್ದು ಘಟಿಸಿತ್ತು. ಮೇ ತಿಂಗಳ ಎಂಟನೇ ತಾರೀಖಿನ 1920ರಂದು ಮೊಣ್ಣಂಡಿ ಗ್ರಾಮದಲ್ಲಿ ಮಣ್ಣಿನ ಮಗನೇ ಜನಿಸಿದ್ದ. ಅದೇ ಕೂಸೇ, ಕನ್ನಡಿಗರನ್ನು, ದಲಿತರನ್ನು, ಹಿಂದುಳಿದವರನ್ನು, ಮಹಿಳೆಯರನ್ನು ಉದ್ಧಾರ ಮಾಡಲು ಜೀವಮಾನ ಪರ್ಯಂತ ಶ್ರಮಿಸಿದ ಶ್ರೀ ಎನ್. ರಾಚಯ್ಯ ಅವರು.

ರಾಚಯ್ಯ ಎನ್. ಅವರ ಕುಟುಂಬದ ಚರಿತ್ರೆ ವಿಶೇಷವಾದುದು. ಮೊದಲ ತಲೆಮಾರು ಎಂದು ಗುರುತಿಸಿಕೊಳ್ಳಲು ಸಾಧ್ಯವಾಗುವ ಬೊಂತರಾಚಯ್ಯ ಮತ್ತು ರಾಚಮ್ಮ ದಂಪತಿಗಳೇ ಆದ್ಯ ಚೇತನಗಳು. ಇವರು ಕೇತಳ್ಳಿಯಿಂದ ಮೊಣ್ಣಂಡಿಗೆ ಬಂದು ನೆಲೆಸಿದರು. ಮೊಣ್ಣಂಡಿ ಗ್ರಾಮ ಮೈಸೂರಿನ ತಾಲ್ಲೂಕು ಕೇಂದ್ರ ಟಿ. ನರಸೀಪುರದಲ್ಲಿದ್ದು, ಅದೇ ಗ್ರಾಮ ಈಗ ಮೊಣ್ಣಂಡಿಗೆ ಬದಲಾಗಿ 'ಗೋಪಾಲಪುರ' ಎಂಬ ಹೆಸರಿನಿಂದ ಕರೆಸಿಕೊಳ್ಳುತ್ತಿದೆ. ಕೇತಳ್ಳಿ, ಮೈಸೂರು ತಾಲ್ಲೂಕಿನ ಟಿ. ನರಸೀಪುರದ ಹೋಬಳಿಯ ಒಂದು ಪುಟ್ಟ ಗ್ರಾಮ. ಇವರು ಗಾರೆಕೆಲಸದಲ್ಲಿ ನಿಷ್ಣಾತರು. ಇದೇ ಈ ಕುಟುಂಬದ ಪ್ರಮುಖ ವೃತ್ತಿ ಮತ್ತು ಕುಲಕಸುಬು.

ಬೊಂತರಾಚಯ್ಯ ಮತ್ತು ರಾಚಮ್ಮ ದಂಪತಿಗಳ ಮಗ ಕುನ್ನಯ್ಯ. ಕುನ್ನಯ್ಯನವರ ಪತ್ನಿ ಸಿದ್ಧಮ್ಮ. ಇವರು ಕೂಡ ಗಾರೆ ಕೆಲಸ ಮತ್ತು ಕೂಲಿಯಲ್ಲಿ ಜೀವನ ಸಾಗಿಸಿದವರು. ಈ ದಂಪತಿಗಳ ಮಗ ನರಸಿಂಹಯ್ಯ. ಇವರಂತೆ ಮಕ್ಕಳೂ ಕೂಡ ಗಾರೆ ವೃತ್ತಿಯಲ್ಲಿ ನೈಪುಣ್ಯತೆ ಪಡೆದವರು. ನರಸಿಂಹಯ್ಯ ಅವರು ನಗರ್ಲೆ ಗ್ರಾಮದ ಮಾದಮ್ಮನವರನ್ನು ವಿವಾಹವಾದರು. ಅವರು ದಕ್ಷಿಣಕಾಶಿ ಎಂದೇ ಪ್ರಸಿದ್ಧವಾಗಿರುವ ಕಾವೇರಿ – ಕಬಿನಿಯರು ಸಂಗಮಗೊಳ್ಳುವ ಸ್ಥಳದಲ್ಲಿ ಬಸವನ ವಿಗ್ರಹ ಕೆತ್ತಿ ದೇವಾಲಯದಲ್ಲಿ ಪ್ರತಿಷ್ಠಾಪಿಸಿದ್ದು, ಅವರ ಕಲೆಯ ಸೊಬಗಿಗೆ ದ್ಯೋತಕ. ಯಾವ ಆಧುನಿಕ ಎಂಜಿನಿಯರ್‌ಗೂ ಕಡಿಮೆ ಇಲ್ಲದ ಯಾವ ವಿಶ್ವವಿದ್ಯಾನಿಲಯದಲ್ಲಿ ಕಲಿಯದ ಅವರ ಗಾರೆ ತಂತ್ರಜ್ಞಾನ ಜಾನಪದ

ತಾಂತ್ರಿಕತೆಯೇ ಆಗಿದೆ. ನರಸಿಂಹಯ್ಯ ಮತ್ತು ಮಾದಮ್ಮ ದಂಪತಿಗಳಿಗೆ ಮುದ್ದಿನ ಮಕ್ಕಳಲ್ಲಿ 6 ಹೆಣ್ಣು ಮಕ್ಕಳು, 4 ಗಂಡು ಮಕ್ಕಳು. ಅವರುಗಳೆಂದರೆ, ಮೊದಲ ಮಗ ಎನ್. ರಾಚಯ್ಯ, ಎನ್. ನರಸಿಂಹಯ್ಯ, ಎನ್. ಚಿಕ್ಕಸಿದ್ಧಯ್ಯ, ಟಿ.ಎನ್. ನರಸಿಂಹಮೂರ್ತಿ. ಹೆಣ್ಣುಮಕ್ಕಳಾದ ಪುಟ್ಟಸಿದ್ಧಮ್ಮ, ರಾಚಮ್ಮ, ನಾಗಮ್ಮ, ಒಟ್ಟಮ್ಮ, ಪುಟ್ಟಲಕ್ಷ್ಮಮ್ಮ ಮತ್ತು ಸಿದ್ಧಲಿಂಗಮ್ಮ. ಒಟ್ಟು ಹತ್ತು ಮಕ್ಕಳ ತುಂಬು ಸಂಸಾರ. ನರಸಿಂಹಯ್ಯ ಮತ್ತು ಮಾದಮ್ಮ ದಂಪತಿಗಳದು. ಗಾರೆ ಕೆಲಸ ಮಾಡಿಕೊಂಡು ಇಡೀ ಕುಟುಂಬವನ್ನು ಪೋಷಿಸುವ ಹೊಣೆಗಾರಿಕೆ ಕಡುಕಷ್ಟದ ಹಾದಿಯೇ ಆಗಿತ್ತು. ಹನ್ನೆರಡು ಹೊಟ್ಟೆಗಳನ್ನು ತುಂಬುವುದೇ ಇಡೀ ದಿನದ ತಪಸ್ಸಾಗುತ್ತಿತ್ತು.

- **ಜನನ ಕಥನ :**

ಯಜಮಾನ್ ನರಸಿಂಹಯ್ಯ ಮತ್ತು ಮಾದಮ್ಮ ದಂಪತಿಗಳ ಬದುಕಿನಲ್ಲಿ ದಿನಾಂಕ 8.05.1919ರಂದು ನಡೆದ ಘಟನೆ ಇಡೀ ದೇಶದ ಚರಿತ್ರೆಯಲ್ಲೇ ವಿಶೇಷವಾಗುತ್ತದೆ ಎಂದು ಯಾರೂ ಊಹಿಸಿರಲಿಲ್ಲ. ಆದಿಕರ್ನಾಟಕ ಜನಾಂಗದಲ್ಲಿ ದೇಶಕಟ್ಟುವವರು ಜನಿಸಬಹುದೆಂದು ಸ್ವಾತಂತ್ರ್ಯಪೂರ್ವ ಸಂದರ್ಭದಲ್ಲಿ ಯಾರೊಬ್ಬರೂ ಭಾವಿಸಿಕೊಂಡಿರಲಿಲ್ಲ. ಮೇ 8 ರ 1919ರಂದು ಅಮಾವಾಸ್ಯೆಯ ಕಪ್ಪು ಕತ್ತಲಿನ ರಾತ್ರಿಯಲ್ಲಿ ಮಾದಮ್ಮನವರ ತವರು ಮನೆ ನಗರ್ಲೆ ಗ್ರಾಮದಲ್ಲಿ ದಲಿತ ಬೆಳಕು ಹುಟ್ಟಿತು. ಆ ಬೆಳಕೇ ಎನ್. ರಾಚಯ್ಯ ಅವರು. ಇಡೀ ಕುಟುಂಬದ ಸಂತೋಷಕ್ಕೆ ಪಾರವೇ ಇರಲಿಲ್ಲ. ನಗುವಿನ ಅಲೆಯೇ ಆವರಿಸಿತ್ತು. ಆದರೆ ಅದು ಕ್ಷಣಿಕವಾಯಿತು.

ಹುಟ್ಟಿದ ಕೆಲವೇ ದಿವಸಗಳಲ್ಲೇ ಮಗು ನಿಸ್ತೇಜವಾಗಿ ಬಿಟ್ಟಿತು. ಉಸಿರಾಟವಿಲ್ಲದ ಮಗು ಮನೆಯವರನ್ನೆಲ್ಲಾ ದುಃಖದ ಕತ್ತಲಿನಲ್ಲಿ ಮುಳುಗಿಸಿತು. ಹುತ್ತ ಬಗೆದು ಮಗುವನ್ನು ಮಣ್ಣು ಮಾಡುವ ಸಂದರ್ಭದಲ್ಲಿ ಕುಟುಂಬದವರ ದುಃಖ ಕಂಡು ಅಲ್ಲಿಗೆ ಬಂದಂತಹ ದಾರಿಹೋಕ ಅಪರಿಚಿತ ವ್ಯಕ್ತಿಯೊಬ್ಬರು ಮಗುವನ್ನು ಗಮನಿಸಿದರು. ನಂತರ ಮಣ್ಣು ಮಾಡಬೇಡಿ ಸ್ವಲ್ಪ ತಡೆಯಿರಿ. ಈ ಮಗು ಸತ್ತ ಹಾಗೆ ಕಾಣಿಸುತ್ತಿಲ್ಲ ಎಂದು ತಡೆದು, ತಕ್ಷಣವೇ ಕತ್ತೆ ಹಾಲನ್ನು ತರಿಸಿದರು. ಅದನ್ನು ಮಗುವಿಗೆ ಕುಡಿಸಿದರು. ತದನಂತರ ಕೆಲವೇ ಕ್ಷಣಗಳಲ್ಲಿ ಮಗು ಕೈಕಾಲು ಅಲುಗಾಡಿಸಿತು ಮತ್ತು ಉಸಿರಾಟ ಆರಂಭವಾಯಿತು. ಇದನ್ನು ಕಂಡು ಎಲ್ಲರೂ

ಮೂಕವಿಸ್ಮಿತರಾದರು. ಅದ್ಭುತ ಪವಾಡವೊಂದು ಘಟಿಸಿದಂತಾಗಿತ್ತು. ಕತ್ತೆಯ ಹಾಲಿನಲ್ಲಿದ್ದ ಜೀವರಕ್ಷಕ ಅಂಶ ಮಗುವನ್ನು ಉಳಿಸಿ ಮರುಜನ್ಮ ನೀಡಿತು. ಇಡೀ ಕುಟುಂಬಕ್ಕೆ ಮರುಜೀವ ಬಂದಂತಾಯಿತು. ದಾರಿಹೋಕ ಜನಪದ ಜ್ಞಾನಿ ಹೇಳಿದ ಔಷಧ ಕೇವಲ ಒಂದು ಕುಟುಂಬಕ್ಕೆ ಆನಂದವನ್ನು ಒದಗಿಸಿದುದಲ್ಲದೆ ಇಡೀ ಶೋಷಿತವರ್ಗಕ್ಕೆ ಒಬ್ಬ ಮಾನವತಾವಾದಿಯನ್ನು ಉಳಿಸಿಕೊಟ್ಟಿತೆಂದು ಅಂದು ಯಾರೂ ಕಲ್ಪಿಸಿಕೊಂಡಿರಲಿಲ್ಲ. ಕತ್ತೆ ಹಾಲಿನ ಶಕ್ತಿ ಮಗುವಿಗೆ ಜೀವದಾನ ಮಾಡಿತ್ತು.

**♦ ಶಿಕ್ಷಣ ಪಡೆಯುವ ಹಾದಿಯಲ್ಲಿ :**

ಮಗುವಿದ್ದಾಗಲೇ ವಿಶೇಷ ಘಟನೆಗೆ ಸಾಕ್ಷಿಯಾದ ಬಾಲಕ ರಾಚಯ್ಯನಿಗೆ ಶಿಕ್ಷಣದ ಬಗ್ಗೆ ತುಂಬಾ ಆಸಕ್ತಿ. ಹಾಗಾಗಿ ಮೊಣ್ಣುಂಡಿಯಲ್ಲಿ ಪ್ರಾಥಮಿಕ ಶಾಲೆ ಸೇರಿದರು. ಬೆಳೆಯುವ ಪೈರು ಮೊಳಕೆಯಲ್ಲೇ ಎಂಬಂತೆ ಅತ್ಯುತ್ಸಾಹ, ಶ್ರದ್ಧೆ ಅವರ ಗುಣಗಳಾಗಿದ್ದವು.

ಪ್ರಾಥಮಿಕ ಶಾಲೆಯ ನಂತರ ಮುಂದಿನ ಓದಿಗಾಗಿ ನಗರಕ್ಕೆ ಹೋಗಬೇಕಾಗಿತ್ತು. ಹಳ್ಳಿಗಳಲ್ಲಿ ಶಾಲೆಗಳಿರಲಿಲ್ಲವಾದ ಕಾರಣ ರಾಚಯ್ಯ ಅವರು 1929ರಲ್ಲಿ ಮೈಸೂರು ನಗರಕ್ಕೆ ಹೊರಟರು. ಅಂದು ಮೈಸೂರಿನಲ್ಲಿ ಮಹಾರಾಜರು ಸ್ಥಾಪಿಸಿದ್ದಂತಹ ನಜರ್‌ಬಾದ್‌ನಲ್ಲಿದ್ದ ಡಿಪ್ರೆಸ್ಡ್ ಕ್ಲಾಸ್ (ಇಂದಿನ ದಲಿತ ಜನಾಂಗ) ವಿದ್ಯಾರ್ಥಿ ನಿಲಯಕ್ಕೆ ಹೋದರು. ಮೊಣ್ಣುಂಡಿಯಿಂದ ಬಡತನದ ವರವಾದ ಖಾಲಿ ಹೊಟ್ಟೆಯಲ್ಲಿ ಹಳ್ಳಿಯಿಂದ ಮೈಸೂರಿಗೆ ನಡೆದುಕೊಂಡೇ ಬರುವಷ್ಟರಲ್ಲಿ ತಡವಾಗಿತ್ತು. ಕಛೇರಿ ವೇಳೆ ಮೀರಿದ್ದರಿಂದ ಹಾಸ್ಟೆಲ್‌ನಲ್ಲಿ ಪ್ರವೇಶ ಸಿಗಲಿಲ್ಲ. ಅಲ್ಲಿನ ಅಧಿಕಾರಿಗಳು ಅಲ್ಲಿಂದ ಹೊರಟು ಹೋಗುವಂತೆ ಹೇಳಿದರು. ಅವರ ಆಜ್ಞೆಯನ್ನು ಪಾಲಿಸದೆ ಹಾಗೇ ನಿಂತಿದ್ದ ಬಾಲಕನನ್ನು ಗದರಿಸಿದರೂ ಕದಲಲಿಲ್ಲ. ಕೊನೆಗೆ ಹಾಸ್ಟೆಲ್‌ನ ಆಡಳಿತ ಸಿಬ್ಬಂದಿ ಕತ್ತು ಹಿಡಿದು ಹೊರಗೆ ತಬ್ಬಿದರು. ಆಗಲೂ ಬಾಗಿಲ ಬಳಿಯಲ್ಲೇ ಭದ್ರವಾಗಿ ತಡೆದು ನಿಂತು ಓದಲೇ ಬೇಕೆಂದು ಬಂದಿರುವ ಆದಮ್ಯ ಆಸೆಯನ್ನು ಹಠದೊಂದಿಗೆ ತೋರಿಸಿದ್ದರು.

ರಾಚಯ್ಯ ಅವರ ಈ ಸಹಿಸುವ ಗುಣದಿಂದಾಗಿ ವಾರ್ಡನ್ ಅವರ ಮನಕರಗಿತು. ತಾವೇ ಕರೆದು ಪ್ರವೇಶ ನೀಡಿದರು. ಹಸಿದ ಹೊಟ್ಟೆಯಲ್ಲಿ

ಊರಿಂದ ಊರಿಗೆ ನಡೆದು ಬಂದಿದ್ದ ಬಾಲಕ ರಾಚಯ್ಯ ಅವರ ಮೊದಲ ಹೋರಾಟ ಯಶಸ್ವಿ ಆಗಿತ್ತು. 1933ರವರೆಗೆ ನಾಲ್ಕು ವರ್ಷ ವಿದ್ಯಾಭ್ಯಾಸವನ್ನು ತಪಸ್ಸಿನಂತೆ ಮುಗಿಸಿ ಎಲ್.ಎಸ್. ಪದವಿ ಪಡೆದುಕೊಂಡರು. (ಇಂದಿನ ಎಸ್.ಎಸ್.ಎಲ್.ಸಿ.) ಮೈಸೂರಿನ ಓದಿನ ನಂತರ ಮುಂದಿನ ಶಿಕ್ಷಣಕ್ಕಾಗಿ 1934ರಲ್ಲಿ ಬೆಂಗಳೂರಿಗೆ ನಡೆದರು.

♦ **ವಿವಾಹ ಸಂಬಂಧ :**

ಎನ್. ರಾಚಯ್ಯ ಅವರು ವಿವಾಹವಾದದ್ದು ಕೂಡ ಕೌಟುಂಬಿಕ ಸಂಬಂಧಗಳ ಎಳೆಗಳನ್ನು ಗಟ್ಟಿಗೊಳಿಸಿಕೊಳ್ಳುವ ನೆಲೆಯಲ್ಲಿ. ಮೈಸೂರಿನ ಜಲಪುರಿ ಎಂಬ ಪ್ರದೇಶದಲ್ಲಿ ವಾಸವಾಗಿದ್ದ ರಾಚಯ್ಯ ಅವರ ಸೋದರತ್ತೆ ಶ್ರೀಮತಿ ರಾಚಮ್ಮ ಅವರ ಯಜಮಾನರಾದ ದಾಸಪ್ಪ ಅವರ ಕುಟುಂಬ ಅಂದಿನ ಕಾಲಕ್ಕೆ ಊಟ – ಬಟ್ಟೆಗಿದ್ದ ಸುಖಿ ಕುಟುಂಬ. ಈ ದಂಪತಿಗಳ ಕೊನೆಯ ಮಗು ಲಕ್ಷ್ಮಮ್ಮ. ಹಾಲು ಕುಡಿಯುವ ಹಸುಳೆಯನ್ನು ಬಿಟ್ಟು ತಾಯಿ ರಾಚಮ್ಮ ಇಹಲೋಕ ತ್ಯಜಿಸಿದರು. ತಬ್ಬಲಿಯಾದ ಕಂದನನ್ನು ರಾಚಮ್ಮನವನ ಅಣ್ಣನಾದ ಡಿ. ಚಿಕ್ಕರಂಗಯ್ಯ ತಾಯಿಯಾಗಿ ಸಾಕಿದರು. ಲಕ್ಷ್ಮಮ್ಮನನ್ನು ಎಲ್ಲರೂ ಮುದ್ದಿನಿಂದ 'ಬಟ್ಟು' ಎಂದೇ ಕರೆಯುತ್ತಿದ್ದರು. ಪ್ರೀತಿಯ ಬಟ್ಟು ಗುಣಗಳ ಕಟ್ಟು ಆಗಿದ್ದಳು.

ರಾಚಯ್ಯನವರು ತಮ್ಮ ಸೋದರತ್ತೆಯ ನಿಧನಾನಂತರ ತಬ್ಬಲಿಯಾಗಿ ಬೆಳೆದ ಬಟ್ಟುವನ್ನು ಮದುವೆಯಾಗುವ ಮೂಲಕ ಸೋದರತ್ತೆಯ ಸಂಬಂಧವನ್ನು ಕಡಿದು ಹೋಗದಂತೆ ಗಟ್ಟಿಗೊಳಿಸಿದರು ಮತ್ತು ತಾಯಿ ಇಲ್ಲದ ಹೆಣ್ಣಿಗೆ ಆಸರೆಯಾದರು.

♦ **ಉದ್ಯೋಗ ಮತ್ತು ಕುಟುಂಬ ನಿರ್ವಹಣೆ :**

ಲಕ್ಷ್ಮಮ್ಮ ಬಾಳಸಂಗಾತಿಯಾಗಿ ರಾಚಯ್ಯನವರ ಬದುಕನ್ನು ಪ್ರವೇಶಿಸಿದ್ದು ಶುಭ ಸಂದರ್ಭವೇ ಆಗಿತ್ತು. ಮೈಸೂರು ವಿದ್ಯುಚ್ಛಕ್ತಿ ಮಂಡಳಿಯಲ್ಲಿ ಗುಮಾಸ್ತ ಉದ್ಯೋಗ ದೊರಕಿತು. ಸರ್ಕಾರಿ ನೌಕರರಾದ ರಾಚಯ್ಯ, ಲಕ್ಷ್ಮಮ್ಮನವರ ದಾಂಪತ್ಯ ಬದುಕು ಹಲವಾರು ಊರುಗಳಲ್ಲಿ ಸರ್ಕಾರಿ ಸೇವೆ ಸಲ್ಲಿಸುವ ಮುಖಾಂತರ ಮುಂದುವರೆಯಿತು. ಮುದ್ದಿನ ಆರು ಮಕ್ಕಳು ಅವರ ಸುಂದರ

ದಾಂಪತ್ಯದ ಕುರುಹುಗಳಾದವು. ಆರ್. ಧರ್ಮಸೇನ, ಆರ್. ಚಿತ್ತಬೋಧ ಎನ್.ಆರ್.ಶಂಕರ್, ಆರ್.ಸರೋಜಾ, ಆರ್.ಶಾರದಾ, ಆರ್.ಸುಜಾತ ಎಂಬ ಒಟ್ಟು ಆರು ಮಕ್ಕಳು. ಚಿನ್ನ, ಮುತ್ತು, ಹವಳ, ವಜ್ರ, ವೈಢೂರ್ಯ, ಮಾಣಿಕ್ಯಗಳೇ ಆದವು. ರಾಚಯ್ಯ ಅವರು ಮಕ್ಕಳಿಗೆ ಇಟ್ಟ ಹೆಸರುಗಳೂ ಕೂಡ ಅವರ ಬುದ್ಧ ಪ್ರಭಾವದ ಸುಳುವುಗಳೇ ಆಗಿವೆ.

1946ರ ವರ್ಷಗಳಲ್ಲಿ ಸರ್ಕಾರಿ ಕೆಲಸದಲ್ಲಿದ್ದರೂ ಸಿಗುತ್ತಿದ್ದ ಸಂಬಳ ಅತೀ ಕಡಿಮೆ. ತಿಂಗಳಿಗೆ 30 ರೂಪಾಯಿಗಳು. ಅಷ್ಟರಲ್ಲಿಯೇ ಹೆಂಡತಿ, ಮೂರು ಮಕ್ಕಳು, ತಂದೆ ತಾಯಿ, ಒಡಹುಟ್ಟಿದವರು ಎಲ್ಲರ ಹೊಟ್ಟೆಯನ್ನು ಸಾಕುವುದು ಕಷ್ಟಕರವಾಗಿತ್ತು. ತುಂಬು ಕುಟುಂಬಕ್ಕೆ ಬಡತನವೂ ತುಂಬಿಯೇ ಇತ್ತು. ಅಂದು ಜೀತಕ್ಕೆ ಬೇರೆಯವರ ಮನೆಯಲ್ಲಿದ್ದ ಎಲ್ಲಾ ತಮ್ಮಂದಿರನ್ನು ಜೀತದಿಂದ ಮುಕ್ತಗೊಳಿಸಿ ಓದಲು ಪ್ರೇರೇಪಿಸಿ ಸಹಾಯ ಮಾಡಿದ್ದು ಅಣ್ಣ ರಾಚಯ್ಯ. ಎನ್. ಅವರ ಭ್ರಾತೃತ್ವದ ಸಂಕೇತವೇ ಆಗಿದೆ.

ತಮ್ಮ ಟಿ.ಎನ್. ನರಸಿಂಹಮೂರ್ತಿ (ಪುಟ್ಟಸ್ವಾಮಿ) ಆರು ವರ್ಷದ ಪುಟ್ಟ ಬಾಲಕ ಮಗುವಿನ ಜವಾಬ್ದಾರಿಯು ಹಿರಿಯ ಅಣ್ಣ ರಾಚಯ್ಯ ಮತ್ತು ಪತ್ನಿ ಬಾಲವನ್ನೇ ಅವಲಂಬಿಸಿತ್ತು. ತಮ್ಮ ಕಿತ್ತು ತಿನ್ನುವ ಬಡತನವನ್ನು ಲೆಕ್ಕಿಸದೆ ಇಡೀ ಕುಟುಂಬವನ್ನು ಸಂರಕ್ಷಿಸುವ ನೆಲೆಯಲ್ಲಿ ಟಿ.ಎನ್. ನರಸಿಂಹಮೂರ್ತಿಯ ಬದುಕನ್ನು ಕಟ್ಟಿಕೊಳ್ಳುವವರೆಗೆ ರಾಚಯ್ಯನವರೇ ಊರುಗೋಲಾದರು.

ಇನ್ನುಳಿದು ಇಬ್ಬರು ತಮ್ಮಂದಿರಾದ ಎನ್. ನರಸಿಂಹಯ್ಯ ಮತ್ತು ಎನ್. ಚಿಕ್ಕಸಿದ್ಧಯ್ಯ (ಸಿ. ರಮೇಶ್, ಮಾಜಿ ವಿಧಾನಪರಿಷತ್ ಸದಸ್ಯರು, ಇವರ ತಂದೆ) ಇಬ್ಬರೂ ಚಿಕ್ಕವಯಸ್ಸಿನಿಂದಲೇ ಗರ್ಗೇಶ್ವರಿಯಲ್ಲಿ ಮುಸ್ಲಿಂ ಮನೆಗಳಲ್ಲಿ ಜೀತಕ್ಕಿದ್ದರು. ತಮ್ಮಂದಿರ ಸಂಕಷ್ಟವನ್ನು ನೋಡಲಾರದೆ ಮನನೊಂದ ಅಣ್ಣ ಎನ್. ರಾಚಯ್ಯನವರು ಜೀತದಿಂದ ಬಿಡುಗಡೆಗೊಳಿಸಲು ಶಿಕ್ಷಣವೇ ರಹದಾರಿ ಎಂದು ಪರಿಗಣಿಸಿ ಜೀತದಿಂದ ಬಿಡಿಸಿ ತಮ್ಮ ಕಿತ್ತು ತಿನ್ನುವ ಬಡತನದಲ್ಲಿ ಜವಾಬ್ದಾರಿ ತೆಗೆದುಕೊಂಡು ಶಾಲೆಗೆ ಸೇರಿಸಿದರು.

ಹುಲ್ಲಿನ ಗುಡಿಸಲಿನಲ್ಲಿ ಕಿಟಕಿಗಳ ಬಾಗಿಲು ಮತ್ತು ಮುಖ್ಯ ಬಾಗಿಲುಗಳೇ ಇಲ್ಲದೆ ತೆರೆದ ಬಾಗಿಲು ಆಗಿತ್ತು. ಮೇಲ್ಹಾವಣಿಯು ಸರಿಯಾಗಿ ಹುಲ್ಲನ್ನು

ಹೊದಿಸಿಕೊಳ್ಳದೆ ಬೆತ್ತಲೆ ಆಗಿತ್ತು. ಮನೆಯ ಮೇಲಿನಿಂದ ಹಾರಿ ಬರುವ ಕಾಗೆ, ಗುಬ್ಬಚ್ಚಿಗಳು ಒಳಗೆಲ್ಲಾ ಓಡಾಡಿ ಬಾಗಿಲು – ಕಿಟಕಿಗಳಿಲ್ಲದ ಮನೆಯಲ್ಲಿ ಎಲ್ಲಿ ಬೇಕೆಂದರಲ್ಲಿ ಹಾರಿ ಹೋಗುತ್ತಿದ್ದವು. ಮಳೆ ಬಂದರೆ ಜೋಪಡಿಯು ಸೋರಿ ಒಳಗೆಲ್ಲಾ ನೀರು ನಿಲ್ಲುತ್ತಿತ್ತು.

ಟಿ. ನರಸೀಪುರದ ತಂದೆ ಕಾಲದ ಪುಟ್ಟ ಹುಲ್ಲು ಜೋಪಡಿಗೆ ಈಗ ಹೆಚ್ಚುವರಿಯಾಗಿ ಹೆಂಡತಿ ಆರು ಮಕ್ಕಳು ಸೇರಿದ ಮೇಲೆ ಗುಡಿಸಲು ಕಿರಿದಾಗಿ ಒಂದು ಹೊತ್ತಿನ ಊಟಕ್ಕೂ ಸಂಬಳ ಸಾಕಾಗದಂತಾಗಿತ್ತು. ಎಷ್ಟೋ ಬಾರಿ ಬಡತನ – ಹಸಿವು ಕಂಡು ರಾಚಯ್ಯನವರು ದುಃಖಿಸಿ ಅಳುತ್ತಿದ್ದರು. ಇಂತಹ ಕಷ್ಟಕರ ಬದುಕನ್ನು ಕೊನೆಗಾಣಿಸಲು ಇನ್ನೂ ಹೆಚ್ಚಿನ ವಿದ್ಯಾಭ್ಯಾಸ ಮಾಡಿ ಉನ್ನತ ಹುದ್ದೆ ಪಡೆಯಬೇಕೆಂದು ನಿರ್ಧಾರ ಮಾಡಿದರು.

ಸೋದರತ್ತೆಯ ನಿಧನದಿಂದಾಗಿ ಬಹಳ ಬೇಗ ಮದುವೆಯಾಗಿ ವಿದ್ಯಾಭ್ಯಾಸವನ್ನು ಮೊಟಕುಗೊಳಿಸಿದ್ದರು. ಈಗ ವಿದ್ಯೆಯ ಹಂಬಲ ಮತ್ತೆ ಹೆಚ್ಚಿತು. ಹಾಗಾಗಿ ಹೆಂಡತಿಯನ್ನು ಹೀಗೆ ಕೇಳಿದರು.

"ನೋಡು ಬಟ್ಟು, ನಿನ್ನ ತವರು ಮನೆಯವರು ಸಾಕಷ್ಟು ಸ್ಥಿತಿವಂತರಾಗಿದ್ದಾರೆ. ನನ್ನ ಬಡತನ ಅವರನ್ನು ಆಶ್ರಯಿಸಬಾರದು, ನೀನು ಯಾವ ಕಾರಣಕ್ಕೆ ಆಗಲಿ ನಮ್ಮ ಮಕ್ಕಳನ್ನು ಹೊಡೆದು ನಿಮ್ಮಪ್ಪ ನನಗೇನು ಕೊಟ್ಟಿದ್ದಾನೆ? ಎಂದು ಕೇಳಬೇಡ. ಜೀವನವಿಡೀ ಮಳೆಯಲ್ಲಿ ಸುರಿಯುವ ಜೋಪಡಿಯ ಆಸರೆ, ರಾತ್ರಿಹೊತ್ತು ಹೊಟ್ಟೆಗೆ ತಣ್ಣೀರು ಬಟ್ಟೆ ಎಂದು ಜನರೆದುರು ಹೀಯಾಳಿಸಿ ಮಾತನಾಡಬೇಡ, ಕಷ್ಟವೋ – ಸುಖವೋ ನೀನು ನನ್ನನ್ನು ಅನುಸರಿಸು ಎಂದು ಹೇಳುತ್ತಾ ನಾನು ಇನ್ನು ಮುಂದೆ ಕೆಲಸಕ್ಕೆ ಹೋಗಲಾರೆ, ಓದಲು ಕಾಲೇಜು ಸೇರುತ್ತೇನೆ. ನಾನು ಮುಂದೆ ಒಳ್ಳೆಯ ದಿನಗಳನ್ನು ಕಾಣುತ್ತೇನೆ, ಇಂದು ನಿನಗೆ ಉಡಲು ಒಂದೇ ಸೀರೆಯಿದ್ದು ಬದಲಾಯಿಸಲು ಬೇರೆ ಸೀರೆ ಇಲ್ಲಾ. ಮುಂದೆ ರೇಷ್ಮೆ ಸೀರೆ ಉಡುತ್ತೀಯ, ನಿನ್ನ ಮನೆ ಮುಂದೆ ಕಾರು ನಿಲ್ಲಿಸುತ್ತೇನೆ, ಆದ್ದರಿಂದ ನೀನು 'ಹೂಂ' ಅನ್ನಬೇಕು, ನಾನು ಓದಲು ಹೋಗುತ್ತೇನೆ" ಎಂದು ಪರಿಪರಿಯಾಗಿ ಕೇಳುತ್ತಾ ಒಪ್ಪಿಗೆಗಾಗಿಯೇ ಎದುರು ನೋಡುತ್ತಿದ್ದರು.

ಬಟ್ಟುವಾದರೂ ಏನು ಹೇಳಲು ಸಾಧ್ಯ? ಒಂದು ಹೊತ್ತು ಹೊಟ್ಟೆ ತುಂಬಿಸಿಕೊಳ್ಳಲು ಸಾಧ್ಯವಾಗದ, ತನ್ನ ಮೈಮೇಲಿರುವ ಬಟ್ಟೆಗಳನ್ನೇ ಒಗೆದು ತಂತಿಯ ಮೇಲೆ ಹಾಕಿ ಒಣಗುವವರೆಗೂ ಕಾದು ನಂತರ ಉಟ್ಟುಕೊಳ್ಳುವ ಪರಿಸ್ಥಿತಿ ಇರುವಾಗ, ಈಗ ಇರುವ ಕೆಲಸವನ್ನು ಬಿಟ್ಟು ಹೋಗುತ್ತೇನೆಂದಾಗ! ಆದರೂ ಗಂಡನ ಅಭಿಲಾಷೆ, ಕನಸಿನ ಗೋಪುರಕ್ಕೆ ಒಲ್ಲದ ಮನಸ್ಸಿನಿಂದಲೇ ಲಕ್ಷ್ಮಮ್ಮ ಒಪ್ಪಿಗೆ ಕೊಟ್ಟರು.

ಈ ಸಂದರ್ಭದಲ್ಲಿ ಲಕ್ಷ್ಮಮ್ಮನ ಅಕ್ಕನಾದ ಸಣ್ಣಮ್ಮ. ಪತಿಯ ಮರಣಾನಂತರ, ಮಕ್ಕಳಿಲ್ಲದೆ ಒಬ್ಬರೆ ಇದ್ದುದರಿಂದ, ತನ್ನ ತಂಗಿಯ ಕುಟುಂಬವನ್ನು ತನ್ನ ಜೋಪಡಿಯಲ್ಲಿ ಸೇರಿಸಿಕೊಂಡರು. ಮೈಸೂರಿನಲ್ಲಿ ವಿದ್ಯಾಭ್ಯಾಸ ಮುಂದುವರಿಸಿದ ರಾಚಯ್ಯ ಅವರಿಗೆ ಸಂಸಾರದ ಚಿಂತೆ ಇಲ್ಲದಂತೆ ಸಂಪೂರ್ಣ ಜವಾಬ್ದಾರಿ ಹೊತ್ತ ಸಣ್ಣಮ್ಮ ಅವರ ವಿಶಾಲ ಹೃದಯ ಹಾಗೂ ತ್ಯಾಗ ಮನೋಭಾವವೇ ರಾಚಯ್ಯ ಅವರ ಬೆಳವಣಿಗೆಗೆ ಪೂರಕ ಶಕ್ತಿ ಆಗಿತ್ತು.

♦ **ಹೆಚ್ಚಿನ ವಿದ್ಯಾಭ್ಯಾಸದ ಕನಸುಗಳು :**

ಮುಂದಿನ ವಿದ್ಯಾಭ್ಯಾಸಕ್ಕೆಂದು ಮೈಸೂರಿಗೆ ಆಗಮಿಸಿದ ರಾಚಯ್ಯ ಅವರು 1947ರಲ್ಲಿ ಬಿ.ಎ. ತರಗತಿಗೆ ಸೇರಿಕೊಂಡರು. ಊರಿನಿಂದ ತಂದ ರಾಗಿ ರೊಟ್ಟಿಯನ್ನು ಕಾಗದದಲ್ಲಿ ಸುತ್ತಿಕೊಂಡು ಕಾಲೇಜು ಸೇರುತ್ತಿದ್ದರು. ಮೈಸೂರಿನಲ್ಲಿ ತಮ್ಮ ಕಷ್ಟ ದುಃಖಗಳ ಅಹವಾಲುಗಳನ್ನು ಹೇಳಿಕೊಳ್ಳುತ್ತಿದ್ದ ಎಲ್ಲರನ್ನು ಸಂತೈಸುತ್ತಾ ಅರ್ಜಿಗಳನ್ನು ಬರೆದುಕೊಡುತ್ತಾ, ಆ ಅರ್ಜಿಗಳನ್ನು ಎಲ್ಲಿಗೆ ಕೊಡಬೇಕಿತ್ತೋ ಅಲ್ಲಿಗೆ ತಲುಪಿಸುತ್ತಿದ್ದರು. ಮೈಸೂರು ಜಿಲ್ಲೆಯ ಸುತ್ತಮುತ್ತಲಿನ ಎಲ್ಲಾ ಹಳ್ಳಿಗಳ ದಲಿತರ ಮನದಲ್ಲಿ ಬಂಧುವಾಗಿ ಸ್ಥಾಪನೆಯಾದರು. ಅನಕ್ಷರಸ್ಥ, ಬಡವರ ಸಮಾಜಸೇವೆಯಿಂದಾಗಿ ಎಲ್ಲರ ಮನಸ್ಸಿನಲ್ಲಿ ಚಿರಸ್ಥಾಯಿಯಾದರು. ಮೈಸೂರಿನ ಮಹಾರಾಜ ಕಾಲೇಜಿನಲ್ಲಿ ಬಿ.ಎ. ಪದವಿ ಪಡೆದು ಮುಂದೆ ಕಾನೂನು ವ್ಯಾಸಂಗ ಮಾಡಲು ಬೆಂಗಳೂರು ಸೇರಿದರು.

ಬೆಂಗಳೂರಿನ ವಿದ್ಯಾಭ್ಯಾಸ ಹಾಗೂ ಅನೇಕ ಪ್ರಭಾವಗಳು ರಾಚಯ್ಯ ಅವರನ್ನು ಬೆಳೆಸಿದವು. ಆಗತಾನೇ ಸ್ವಾತಂತ್ರ್ಯ ಪಡೆದಿದ್ದ ಭಾರತ ಬದಲಾವಣೆಯ ತುಡಿತದಲ್ಲಿತ್ತು. ಬೆಂಗಳೂರಿನ ಮಾಗಡಿ ರಸ್ತೆ ಗೋಪಾಲಪುರದಲ್ಲಿ ಮಹಾತ್ಮ

ಗಾಂಧೀಜಿಯವರಿಂದ ಸ್ಥಾಪಿಸಲ್ಪಟ್ಟಿದ್ದ ಆದಿಜಾಂಬವ ವಿದ್ಯಾರ್ಥಿ ನಿಲಯ ಅಂದರೆ ಈಗಿನ ಬಾಪೂಜಿ ಹಾಸ್ಟೆಲ್‌ನಲ್ಲಿ ಉಳಿದುಕೊಂಡರು.

ಬಾಪೂಜಿ ವಿದ್ಯಾರ್ಥಿ ನಿಲಯದ ಸಂಸ್ಥಾಪಕರಲ್ಲೊಬ್ಬರಾದ ಹಾಗೂ ಹಿರಿಯ ಮುತ್ಸದ್ದಿ ಶ್ರೀ ಚಿಕ್ಕ ಹನುಮಂತಯ್ಯ ಅವರ ಜೀವನದ ಸಾಧನೆ – ಸಂಕಷ್ಟ ಮತ್ತು ರಾಜಕೀಯ ನೈಪುಣ್ಯತೆಗಳು ರಾಚಯ್ಯ ಅವರನ್ನು ಪ್ರಭಾವಿಸಿದವು. ಅವರ ಮಾರ್ಗದರ್ಶನವು ಇವರಿಗೆ ದೊರಕಿತು.

**◆ ರಾಜಕೀಯ ಬದುಕಿನ ನೆಲೆಗಳು :**

ಕಾನೂನು ಪದವಿ ಪಡೆದ ರಾಚಯ್ಯನವರಿಗೆ ವಕೀಲರಾಗಿ ಸಂಪಾದನೆ ಮಾಡಿಕೊಳ್ಳುವ ಸ್ವಾರ್ಥ ಬದುಕಿಗಿಂಥ ಸಮಾಜಸೇವೆಗೆ ಅವಕಾಶವಿರುವ ರಾಜಕೀಯ ಜೀವನ ಆಕರ್ಷಕವಾಗಿತ್ತು. ಜೊತೆಗೆ ಶ್ರೀ ಸಾಹುಕಾರ ಚನ್ನಯ್ಯ ಅವರಂಥ ರಾಜಕೀಯ ಮುತ್ಸದ್ಧಿಗಳ ಜೊತೆಯಲ್ಲಿ ಕೆಲಸ ಮಾಡಿದುದರಿಂದ ರಾಜಕಾರಣ ಕರಗತವಾಗಿತ್ತು.

ಹಾಗಾಗಿ 1950ರಲ್ಲಿ ಮೈಸೂರಿನ ಜಲಪುರಿಯಲ್ಲಿ ಮಾವನ ಮನೆಯ ಸಹಕಾರ ಹಾಗೂ ಒಡಹುಟ್ಟಿದವರ ಪ್ರೋತ್ಸಾಹದಿಂದ ಮೈಸೂರು ನಗರದ ಕೌನ್ಸಿಲರಾಗಿ ಆಯ್ಕೆಯಾದರು. ಇವರ ದಕ್ಷ ಸೇವೆಯನ್ನು ಪರಿಗಣಿಸಿ ಉಪಾಧ್ಯಕ್ಷ ಸ್ಥಾನವನ್ನು ಅಲಂಕರಿಸುವಂತಾಯಿತು. 'ನಜರಾಬಾದ್‌ನ ನವಾಬ' ಎನಿಸಿದ್ದ ಸಾಹುಕಾರ್ ಚೆನ್ನಯ್ಯ ಇವರ ದಕ್ಷತೆಗೆ ಮಾರುಹೋಗಿದ್ದರು.

ಉಪಾಧ್ಯಕ್ಷರಾಗಿ ಆಯ್ಕೆಯಾದ ನಂತರ ಇವರು ಮಾಡಿದ ಅವಿಸ್ಮರಣೀಯ ಕೆಲಸ ಎಂದರೆ ಬಡವರಿಗೆ, ದಲಿತರಿಗೆ ತಮ್ಮ ಹಕ್ಕುಗಳ ಬಗ್ಗೆ ಹಾಗೂ ಕರ್ತವ್ಯಗಳ ಬಗ್ಗೆ ಅರಿವು ಮೂಡಿಸಿದ್ದು. ಹಾಗಾಗಿ "ಹಕ್ಕು ಯಾರದು?" ಎಂಬ ಆಂದೋಲನವನ್ನೇ ಆರಂಭಿಸಿದರು.

1953ರಲ್ಲಿ ಭಾರತದ ಪ್ರಥಮ ಸಂಸತ್ತಿನ ಸದಸ್ಯನಾಗಿ ಆಯ್ಕೆಯಾದ ಇವರು ಪಾರ್ಲಿಮೆಂಟಿನ ಕಾರ್ಯಕಾರಿ ಸಮಿತಿಗೆ ಆಯ್ಕೆಯಾದರು. ಇದು ಭಾರತದ ಪ್ರಧಾನಮಂತ್ರಿ ಪಂಡಿತ್ ಜವಾಹರಲಾಲ್ ನೆಹರು ಅವರೊಂದಿಗೆ ಕಾರ್ಯನಿರ್ವಹಿಸುವ ಅವಕಾಶವನ್ನು ಕಲ್ಪಿಸಿತು.

ಕೇಂದ್ರ ಸರಕಾರದಲ್ಲಿ ತಮ್ಮದೇ ಆದ ಪ್ರಭಾವವನ್ನು ಹೊಂದಿದ್ದ ಶ್ರೀ ಎನ್. ರಾಚಯ್ಯ ಅವರ ದೃಢ ನಿಲುವು, ಬಿಗಿಯಾದ ಧೋರಣೆ ಹಾಗೂ ಅಪಾರ ಸಾಮಾಜಿಕ ಅನುಭವವು ಅವರನ್ನು ಮುಂದಿನ ಅನೇಕ ಜವಾಬ್ದಾರಿ ಹುದ್ದೆಗಳಿಗೆ ಆಯ್ಕೆ ಆಗುವಂತೆ ಮಾಡಿತು. ಸಂಸತ್ತಿನ ನಿಯೋಗದ ಸದಸ್ಯರಾಗಿ ಇಂಗ್ಲೆಂಡ್, ಜರ್ಮನಿ, ಸ್ವಿಟ್ಸರ್‌ಲೆಂಡ್ ಹಾಗೂ ಐರೋಪ್ಯ ರಾಷ್ಟ್ರಗಳಲ್ಲಿ ಪ್ರವಾಸ ಮಾಡಿದ್ದ ಶ್ರೀ ಎನ್. ರಾಚಯ್ಯ ಅವರ ಪ್ರಭಾವವು ದಿನದಿಂದ ದಿನಕ್ಕೆ ಹೆಚ್ಚುತ್ತಾ ಹೋಯಿತು.

ಡಾ. ಬಾಬಾ ಸಾಹೇಬ್ ಅಂಬೇಡ್ಕರ್ ಅವರೊಂದಿಗೆ ನಿಕಟ ಸಂಪರ್ಕವನ್ನು ಹೊಂದಿದ ಎನ್. ರಾಚಯ್ಯ ಅವರು ಅಂಬೇಡ್ಕರ್ ಅವರ ಆದರ್ಶ ಮತ್ತು ತತ್ವಗಳಲ್ಲಿ ನಂಬಿಕೆಯನ್ನಿಟ್ಟು ಕೊಂಡಿದ್ದಲ್ಲದೇ, ಬಾಬು ಜಗಜೀವನರಾಂ ಅವರೊಂದಿಗಿನ ಒಡನಾಟವು ರಾಚಯ್ಯ ಅವರ ಜೀವನದ ಮೇಲೆ ತುಂಬು ಪ್ರಭಾವವನ್ನು ಬೀರಿತು.

ಈ ಇಬ್ಬರು ಮಹಾನ್ ನಾಯಕರ ಆದರ್ಶ ಮತ್ತು ತತ್ವಗಳನ್ನು ಪರಿಪಾಲಿಸಿಕೊಂಡು ಬಂದಿದ್ದ ಎನ್. ರಾಚಯ್ಯ ಅವರು 1952ರಲ್ಲಿ ಮೈಸೂರು ಜಿಲ್ಲೆಯಲ್ಲಿ "ದಲಿತ ಕಲ್ಯಾಣ ಸಂಘ"ವನ್ನು ಸ್ಥಾಪಿಸಿದರು. ಈ ಸಂಘವು ಬಡವರ ಬಾಳಿನಲ್ಲಿ ಒಂದು ಆಶಾಜ್ಯೋತಿಯಾಗಿ ಅವರಿಗೆ ಸ್ಫೂರ್ತಿ[illegible] ತಾಣವಾಯಿತು.

ಅದೇ ರೀತಿ ಮೈಸೂರು ನಗರದಲ್ಲಿ 'ದಲಿತ ವಿದ್ಯಾರ್ಥಿ ನಿಲಯ'ವನ್ನು ಸ್ಥಾಪಿಸಿದ ಇವರು ಅನೇಕ ಬಡ ದಲಿತ ವಿದ್ಯಾರ್ಥಿಗಳ ಬದುಕನ್ನು ಸ್ವಾವಲಂಬಿ ಬದುಕನ್ನಾಗಿಸುವಂತೆ ಮಾಡಿದರು. ಈ ದಲಿತ ವಿದ್ಯಾರ್ಥಿ ನಿಲಯವು ವಿದ್ಯಾಭ್ಯಾಸ ಮತ್ತು ಉದ್ಯೋಗವಕಾಶಗಳ ಮಧ್ಯೆ ಒಂದು ಸಮರ್ಪಕವಾದ ಸೇತುವೆಯನ್ನು ಏರ್ಪಡಿಸಿತು.

1957–58ರ ಮಹಾ[illegible]ಚುನಾವಣೆಯಲ್ಲಿ ಹೆಗ್ಗಡದೇವನಕೋಟೆ ಮೀಸಲು ಕ್ಷೇತ್ರದಿಂದ ಕರ್ನಾಟಕ ರಾಜ್ಯ ವಿಧಾನಸಭೆಗೆ ಆಯ್ಕೆಯಾಗಿ ಮೈಸೂರು ರಾಜ್ಯದ ರಾಜಕೀಯ ಕ್ಷೇತ್ರವನ್ನು ಪ್ರವೇಶ ಮಾಡಿದರು. ಅಂದಿನ ಮುಖ್ಯಮಂತ್ರಿ ಶ್ರೀ ಬಿ.ಡಿ. ಜತ್ತಿ ಅವರು ಮಂತ್ರಿಮಂಡಲದಲ್ಲಿ ಶ್ರೀ ಎನ್. ರಾಚಯ್ಯ ಅವರಿಗೆ ಸಮಾಜ ಕಲ್ಯಾಣ ಇಲಾಖೆ, ಅಬ್ಕಾರಿ ಖಾತೆ ಹಾಗೂ ಕೃಷಿ ಖಾತೆಗಳನ್ನು

ನೀಡಿ ಅವರ ಸಾಮಾಜಿಕ ಜವಾಬ್ದಾರಿಯನ್ನು ಮತ್ತಷ್ಟು ವೃದ್ಧಿ ಆಗುವಂತೆ ಮಾಡಿದರು. ಸಂಪುಟ ಸಚಿವರಾಗಿ ಮಂತ್ರಿಮಂಡಲದಲ್ಲಿ ಕಾರ್ಯನಿರ್ವಹಿಸುತ್ತಿದ್ದ ಶ್ರೀ ಎನ್. ರಾಚಯ್ಯ ಅವರು ವ್ಯವಸಾಯ ಕ್ಷೇತ್ರದಲ್ಲಿ ಕ್ರಾಂತಿಕಾರಕ ಬದಲಾವಣೆಗಳನ್ನು ತಂದರು. ದಲಿತರು ಕೃಷಿ ಮಾಡಲು ಅನುಕೂಲವಾಗುವಂತಹ ವಾತಾವರಣವನ್ನು ಕಲ್ಪಿಸಿಕೊಟ್ಟಿದ್ದ ಇವರು, ಭವಿಷ್ಯದಲ್ಲಿ ಕೃಷಿಯ ಮಹತ್ವವನ್ನು ಅರಿತುಕೊಂಡು ಇಂದು ಹೆಬ್ಬಾಳದ ಬಳಿ ಇರುವ ಕೃಷಿ ಕಾಲೇಜು ಹಾಗೂ ಸಂಶೋಧನಾ ಕೇಂದ್ರವನ್ನು ಅಂದು ಪ್ರಾರಂಭಿಸಿದರು.

ಇಂದು ಸಾವಿರಾರು ಕೃಷಿ ತಜ್ಞರನ್ನು ದೇಶ ಸೇವೆಗೆ ನೀಡಿರುವ ಇಂತಹ ಉತ್ತಮ ಕಾಲೇಜನ್ನು ಸ್ಥಾಪಿಸಿದ ಕೀರ್ತಿ ಶ್ರೀ ಎನ್. ರಾಚಯ್ಯ ಅವರದು. ತಾವು ಕೃಷಿ ಮಂತ್ರಿ ಆಗಿದ್ದ ಕಾಲದಲ್ಲಿ 1960ರಲ್ಲಿ ರಷ್ಯಾ ದೇಶದ ಉಜ್ಬೇಕಿಸ್ಥಾನ, ಕಜಾಕ್‌ಸ್ಥಾನ್ ಮುಂತಾದ ಪ್ರದೇಶಗಳಿಗೆ ಪ್ರವಾಸ ಕೈಗೊಂಡು ಅಲ್ಲಿನ ವ್ಯವಸಾಯ ಪದ್ಧತಿಗಳನ್ನು ಕೂಲಂಕಷವಾಗಿ ಅಧ್ಯಯನ ನಡೆಸಿದರು. ಕರ್ನಾಟಕ ರಾಜ್ಯವು ನೂತನವಾಗಿ ವಿದೇಶಿ ವ್ಯವಸಾಯ ಪದ್ಧತಿಯನ್ನು ಅಳವಡಿಸಿಕೊಂಡ ಭಾರತದ ಪ್ರಥಮ ರಾಜ್ಯವಾಯಿತು.

- **ಮಹಿಳೆ, ಮಕ್ಕಳು ಮತ್ತು ದಲಿತರ ಆಶಾಕಿರಣ :**

ಸಮಾಜ ಕಲ್ಯಾಣ ಖಾತೆಯನ್ನು ಹೊಂದಿದ್ದ ಸಂದರ್ಭದಲ್ಲಿ ದಲಿತ ವಿದ್ಯಾರ್ಥಿಗಳ ವಿದ್ಯಾಭ್ಯಾಸವನ್ನು ಮುಂದುವರೆಸಲು ಅನುಕೂಲವಾಗುವಂತೆ ಸುಮಾರು 200 ವಿದ್ಯಾರ್ಥಿ ನಿಲಯಗಳನ್ನು ತೆರೆದರು. ಇವುಗಳಲ್ಲಿ ವಿದ್ಯಾರ್ಥಿನಿಯರ ವಿದ್ಯಾಭ್ಯಾಸಕ್ಕೆ ವಿಶೇಷ ಪ್ರೋತ್ಸಾಹ ನೀಡಿದ ಇವರು ಸುಮಾರು 35 ಮಹಿಳಾ ವಿದ್ಯಾರ್ಥಿನಿಯರ ನಿಲಯಗಳನ್ನು ತೆರೆದು, ಮಹಿಳೆಯರಿಗೆ ಸ್ವಂತಿಕೆ ಮತ್ತು ಸ್ವಾಭಿಮಾನದ ಪಾಠವನ್ನು ಕಲಿಸಿಕೊಡುವ ಮೂಲಕ ತಾವು ಹೊಂದಿದ್ದ ಕೀಳರಿಮೆಯನ್ನು ತೊಡೆದು ಹಾಕಲು ಮುಂದಾದರು. ಜಿಲ್ಲಾ ಕೇಂದ್ರ, ತಾಲ್ಲೂಕು ಕೇಂದ್ರಗಳಲ್ಲಿ ವಿದ್ಯಾರ್ಥಿನಿಲಯಗಳನ್ನು ಯಥೇಚ್ಛವಾಗಿ ತೆರೆದ ಕೀರ್ತಿ ಎನ್. ರಾಚಯ್ಯ ಅವರದು.

ಎನ್. ರಾಚಯ್ಯ ಅವರ ಕಾರ್ಯಾವಧಿಯಲ್ಲಿ ಕಲ್ಯಾಣ ಕೇಂದ್ರಗಳು ಹಾಗೂ ಶಿಶುವಿಹಾರಗಳು ಅನೇಕ ಕಡೆ ಸ್ಥಾಪನೆಯಾದವು. ಗ್ರಾಮೀಣ ಪ್ರದೇಶಗಳಲ್ಲಿ

ಭೂಮಾಲೀಕರ ಮನೆಯ ಜೀತದಾಳಾಗಿ ದುಡಿಯುವ ದಲಿತ ಯುವಕರು ಕಷ್ಟಪಟ್ಟು ದುಡಿದು ಹೊಟ್ಟೆ ತುಂಬಾ ಒಂದೊತ್ತಿನ ಊಟವನ್ನು ಮಾಡದ ಪರಿಸ್ಥಿತಿಯಲ್ಲಿ ನಿರ್ಲಕ್ಷ್ಯಕ್ಕೆ ಒಳಗಾಗಿದ್ದ ಹೆಣ್ಣು ಅದರಲ್ಲೂ ದಲಿತ ಹೆಣ್ಣು ಮಕ್ಕಳ ಸ್ಥಿತಿಯಂತೂ ಅತ್ಯಂತ ಶೋಚನೀಯವಾಗಿತ್ತು. ಗ್ರಾಮೀಣ ಬಡಜನರ ನಡುವೆ ಹುಟ್ಟಿ ಬಂದ ಎನ್. ರಾಚಯ್ಯ ಅವರು ಮಹಿಳೆಯರಲ್ಲಿ ಸಾಮಾಜಿಕ ಪ್ರಜ್ಞೆ ಬೆಳೆಸುವ ಜೊತೆಗೆ ಅವರಿಗೆ ಸಾಮಾಜಿಕ ಅರಿವು ಮೂಡಿಸಲು ಮಹಿಳಾ ಕಲ್ಯಾಣ ಕೇಂದ್ರಗಳು ಹಾಗೂ ಶಿಶುವಿಹಾರಗಳನ್ನು ತೆರೆಯಲು ಮುಂದಾದರು. ಈ ಕೇಂದ್ರಗಳು ಅನೇಕ ದಲಿತ ಮಹಿಳೆಯರ ಹಾಗೂ ಮಕ್ಕಳ ಅಭ್ಯುದಯಕ್ಕೆ ಹಾಗೂ ಪ್ರಗತಿಗೆ ಪೂರಕವಾದವು.

ಮಕ್ಕಳನ್ನು ಶಾಲೆಗೆ ಸೇರಿಸುವ ಮುನ್ನ ಅವರಿಗೆ ನಿಶ್ಚಿತವಾದಂತಹ ಸಿದ್ಧತೆ ಮತ್ತು ವಾತಾವರಣವನ್ನು ಕಲ್ಪಿಸಿ ಕೊಡುವ ಉದ್ದೇಶ ಈ ಶಿಶುವಿಹಾರಗಳಿಗೆ ಇತ್ತು. ಇದೇ ರೀತಿ ಹೆಣ್ಣು ಮಕ್ಕಳಿಗೆ ಉದ್ಯೋಗದ ಭರವಸೆಯನ್ನು ನೀಡುವ ಮೂಲಕ ಸಮಾಜದಲ್ಲಿ ಮಹಿಳೆಯು ಸರ್ವ ಸಮಾನಳು ತೊಟ್ಟಿಲನ್ನು ತೂಗುವ ಕೈ ಜಗತ್ತನ್ನೇ ಆಳಬಲ್ಲದು ಎಂದು ನಿರ್ಧರಿಸಿ, ಹೆಣ್ಣು ಮಕ್ಕಳಿಗೆ ಹೊಲಿಗೆ, ಕಸೂತಿ, ಹೆಣಿಗೆ, ನೂಲುವ ಕಲೆಗಳನ್ನು ಪರಿಚಯಿಸುವುದು ತನ್ಮೂಲಕ ಮಹಿಳೆಯರನ್ನು ಸ್ವಾವಲಂಬಿಗಳಾಗಿ ತಯಾರು ಮಾಡುವ ಕೆಲಸವೂ ಉದ್ದೇಶವು ಇವರ ಕಾರ್ಯಾವಧಿಯಲ್ಲಿ ನಡೆಯಿತು.

ಇದೇ ರೀತಿ ಸಮಾಜ ಕಲ್ಯಾಣ ಖಾತೆ ವಹಿಸಿಕೊಂಡಿದ್ದ ಸಂದರ್ಭದಲ್ಲಿ ಇವರು ಸಮಾಜದ ಅನಿಷ್ಟ ಪದ್ಧತಿಗಳಾದ ಜಾತಿ ಪದ್ಧತಿ, ಮದ್ಯಪಾನ ಹಾಗೂ ಮೂಢನಂಬಿಕೆಗಳನ್ನು ಹೊಡೆದೋಡಿಸುವ ಹೊಸ ಹೊಸ ಆಲೋಚನೆಗಳನ್ನು ತುಂಬಲು ಸಿದ್ಧರಾದರು.

ಮಹಾತ್ಮ ಗಾಂಧೀಜಿಯವರ ಹಾದಿಯಲ್ಲಿ ನಡೆಯುತ್ತಿದ್ದ ಅನೇಕರಿಗಿಂತ ಭಿನ್ನವಾಗಿ ಗಾಂಧೀಜಿಯವರು ಹಾಕಿಕೊಟ್ಟ ಕಾರ್ಯಗಳನ್ನು ಪಾಲಿಸುವುದಲ್ಲದೇ ಕಾರ್ಯರೂಪಕ್ಕೆ ತರುವ ಪ್ರಯತ್ನವಾಗಿ ದೇಶದಲ್ಲಿಯೇ ವಿನೂತನವಾದ 'ಪಾನನಿರೋಧ'ವನ್ನು ಕರ್ನಾಟಕದಲ್ಲಿ ಆಗ್ರಹಪೂರ್ವಕವಾಗಿ ಜಾರಿಗೆ ತಂದ ಶ್ರೀ ಎನ್. ರಾಚಯ್ಯ ಅವರು 1958 ರಿಂದ 1968ರ ಒಂದು ದಶಕದ ಕಾಲ

ಮದ್ಯಪಾನ ನಿಷೇಧವನ್ನು ಸಂಪೂರ್ಣವಾಗಿ ಕರ್ನಾಟಕದಲ್ಲಿ ಜಾರಿಗೆ ತಂದ ಕೀರ್ತಿ ಮತ್ತು ಸಾಧನೆಗೆ ಪಾತ್ರರಾಗಿದ್ದಾರೆ.

♦ **ದಲಿತ ಶಿಷ್ಯನಿಗೆ ಗುರು ಸಿಕ್ಕಿದ ಸಂದರ್ಭ :**

ರಾಜ – ಮಹಾರಾಜರ ಕಾಲದಿಂದಲೂ ಗುರು – ಶಿಷ್ಯ ಸಂದರ್ಭಕ್ಕೆ ವಿಶೇಷ ಇತಿಹಾಸವಿದೆ. ಏಕಲವ್ಯ – ದ್ರೋಣರನ್ನು ಗುರುವಾಗಿ ಸ್ವೀಕರಿಸಿದ್ದು, ರಾಮಕೃಷ್ಣ ಪರಮಹಂಸ ಹಾಗೂ ವಿವೇಕಾನಂದರ ಗುರು – ಶಿಷ್ಯರ ಸಂಬಂಧ ಹೀಗೆ ದೊಡ್ಡ ಚರಿತ್ರೆಯೇ ಇದೆ. ಹಿರಿಯ ರಾಜಕಾರಣಿ, ರಾಜಕೀಯ ಮುತ್ಸದ್ದಿ ಹಾಗೂ ನಜರಾಬಾದ್‌ನ ನವಾಬನಾಗಿ ಮೈಸೂರು ಮಹಾರಾಜರೊಡನೆ ನಿಕಟ ಸಂಪರ್ಕವನ್ನು ಹೊಂದಿದ್ದಂತಹ ಮೇಧಾವಿ ಸಾಹುಕಾರ್ ಚನ್ನಯ್ಯ ಮತ್ತು ಶ್ರೀ ಎನ್. ರಾಚಯ್ಯ ಅವರ ನಡುವಿನ ಗುರು – ಶಿಷ್ಯ ಸಂಬಂಧ ಈ ನೆಲೆಯಲ್ಲಿ ವಿಶೇಷವೆಂದು ಕಂಡುಬರುತ್ತದೆ.

ಗುರುವನ್ನು ಅರಸುತ್ತಾ ರಾಮಕೃಷ್ಣ ಪರಮಹಂಸರ ಬಳಿಗೆ ಬಂದು ಅನೇಕ ಶಿಷ್ಯರು ಅವರ ಕೋಪಕ್ಕೆ ತಾಳಲಾರದೆ ದಿಕ್ಕು ಪಾಲಾದರೆ, ವಿವೇಕಾನಂದರು ಈ ಕೋಪೋದ್ರಿಕ್ತ ಗುರುವಿನ ಮುಂದೆ ನಿಂತಾಗ, ಗರುಡನನ್ನು ಕಂಡು ಸರ್ಪ ಭೀತಿಗೊಳ್ಳುವಂತೆ ರಾಮಕೃಷ್ಣ ಪರಮಹಂಸರೇ ವಿವೇಕಾನಂದರ ಕಾಲಿಗೆರಗಿದರೆಂದು ಹೇಳುತ್ತಾರೆ.

ಇದೇ ರೀತಿಯಲ್ಲಿ ಮೊದಲು ಶತೃವಾಗಿ ಕಂಡಿದ್ದ ಸಾಹುಕಾರ ಚನ್ನಯ್ಯ ಅವರು ಕೊನೆಗೆ ತಾವೇ ಶಿಷ್ಯನನ್ನಾಗಿ ಸ್ವೀಕರಿಸಿದ್ದನ್ನು ಗ್ರಹಿಸಿಕೊಂಡರೆ ಎನ್. ರಾಚಯ್ಯ ಅವರ ದಿಟ್ಟತನ, ನಿರ್ಭೀತಿಯ ನಡೆ – ನುಡಿ ಹಾಗೂ ಹರಳು ಹುರಿದಂತೆ ಮಾತನಾಡುವ ಗುಣಗಳು ಎಂತಹವರನ್ನಾದರೂ ಆಕರ್ಷಿಸಬಲ್ಲವು ಎಂಬುದಕ್ಕೆ ಸಾಕ್ಷಿ.

♦ **ನ್ಯಾಯಕ್ಕಾಗಿ ಕಾನೂನು ಸಮರ :**

1940 – 50 ರ ಸಮಯದಲ್ಲಿ ಭಾರತದಲ್ಲಿ ಸ್ವಾತಂತ್ರ್ಯಾ ನಂತರದಲ್ಲಿ ಚುನಾವಣೆಗಳು ನಡೆಯುತ್ತಿದ್ದವು. ಅಂದಿನ ಚುನಾವಣೆಗಳಲ್ಲಿ ಸಾಮಾನ್ಯ ಜನರೆಲ್ಲಾ ಭಾಗವಹಿಸುವಂತಿರಲಿಲ್ಲ. ಯಾರಿಗೆ ಕಂದಾಯ ಕಟ್ಟುವ ಹಕ್ಕಿದೆಯೋ ಅಂತಹವರು

ಮಾತ್ರ ಮತ ಚಲಾಯಿಸುವ ಹಕ್ಕನ್ನು ಪಡೆದಿದ್ದರು. ಈ ಮತ ಚಲಾವಣೆಗಳು ಬಹಿರಂಗವಾಗಿ ನಡೆಯುತ್ತಿದ್ದರಿಂದ ಫಲಿತಾಂಶವು ತಾಸಿನ ನಂತರ ನಿರ್ದಿಷ್ಟವಾಗಿ ಗೊತ್ತಾಗುತ್ತಿತ್ತು. ಪ್ರತ್ಯಕ್ಷ ಚುನಾವಣೆಗಳು ಶೀಘ್ರವಾಗಿ ಫಲಿತಾಂಶವನ್ನು ಹೇಳುತ್ತಿದ್ದವು.

1940–50ರಲ್ಲಿ ಮೈಸೂರು ಜಿಲ್ಲಾ ಬೋರ್ಡ್ ಚುನಾವಣೆಗಳು ನಡೆಯುತ್ತಿದ್ದು ನಜರಾಬಾದ್ ನವಾಬನೆನಿಸಿಕೊಂಡಿದ್ದ ಹಿರಿಯ ರಾಜಕೀಯ ಮುತ್ಸದ್ದಿ ಹಾಗೂ ಕಾಂಗ್ರೆಸ್‌ನ ಅಧ್ಯಕ್ಷರಾದ ಸಾಹುಕಾರ್ ಚನ್ನಯ್ಯ ಮತ್ತು ಕಬ್ಬಳ್ಳಿ ಸಾಹುಕಾರ್ ಅವರ ನಡುವೆ ಸ್ಪರ್ಧಾಕಣ ಏರ್ಪಟ್ಟಿತ್ತು.

ಚುನಾವಣಾ ಕಣದಲ್ಲಿದ್ದ ರಾಜಕೀಯದಲ್ಲಿ ಸಾಕಷ್ಟು ಹೆಸರು ಪಡೆದಿದ್ದ ಸಾಹುಕಾರ್ ಚನ್ನಯ್ಯ ಅವರು ತಮಗೆ ಬರಬಹುದಾದ ಮತದಾರರ ಮತಗಳನ್ನು ಗಣನೆಗೆ ತೆಗೆದುಕೊಂಡಾಗ ಈರ್ವರಿಗೂ ಸಮನಾದ ಮತಗಳು ಲಭ್ಯವಿದ್ದು ಜಯಶಾಲಿಗಳಾಗಲು ಕೇವಲ ಒಂದು ಮತದ ಅಗತ್ಯವಿತ್ತು. ಇಂತಹ ಅಮೂಲ್ಯವಾದ ಮತವನ್ನು ವಾಟಾಳ ಬಸವರಾಜ್ ಎಂಬುವರ ನಿರ್ಣಾಯಕ ಮತವು ಯಾರಿಗೆ ಹಾಕಿದರೆ ಅವರ ಕೊರಳಿಗೆ ವಿಜಯದ ಮಾಲೆ ಹಾಕುವಂತಹ ಪರಿಸ್ಥಿತಿ ಬಂದೊದಗಿದಾಗ ವಾಟಾಳ್ ಬಸವರಾಜ್ ಅವರು ಕಬ್ಬಳ್ಳಿ ಸಾಹುಕಾರ್ ಅವರಿಗೆ ಮತ ಹಾಕುತ್ತಾರೆಂದು ತಿಳಿದ ಸಾಹುಕಾರ್ ಚನ್ನಯ್ಯ ಅವರು ಬಸವರಾಜ್ ಅವರನ್ನು ಅಪಹರಿಸಿದರು.

ಇಂತಹ ಸಮಯದಲ್ಲಿ ಕಾನೂನು ವ್ಯಾಸಂಗ ಮಾಡುತ್ತಿದ್ದ ಎನ್. ರಾಚಯ್ಯ ಅವರು ತನ್ನ ಸ್ವಜಾತಿಯ ಅಂದಿನ ಗಣ್ಯ ವ್ಯಕ್ತಿ ವಾಟಾಳ್ ಬಸವರಾಜ್ ಅವರನ್ನು ಅಪಹರಿಸಿದ ವ್ಯಕ್ತಿಯ ವಿರುದ್ಧ ಸಿಟ್ಟಿಗೆದ್ದರು. ಯಾವುದೇ ಮುಲಾಜು ಮತ್ತು ತೊಂದರೆಗಳಿಗೆ ಹೆದರದೆ ನೇರವಾಗಿ ಸಾಹುಕಾರ್ ಚನ್ನಯ್ಯ ಅವರ ವಿರುದ್ಧ ಮೈಸೂರಿನ ಕಲೆಕ್ಟರ್ ಸಾಹೇಬರಿಗೆ ದೂರನ್ನು ಸಲ್ಲಿಸಿ ಈ ಅಪಹರಣದ ಬಗ್ಗೆ ನ್ಯಾಯಾಲಯಕ್ಕೆ ಹೋಗಲು ಅನುಮತಿ ಪಡೆದರು. ಅಲ್ಲದೆ ನ್ಯಾಯಾಲಯದಲ್ಲಿ ಚನ್ನಯ್ಯ ಅವರ ವಿರುದ್ಧ ಅಪಹರಣದ ದಾವೆಯನ್ನು ಹಾಕಿ ವಾಟಾಳ್ ಬಸವರಾಜ್ ಅವರನ್ನು ಬಂಧನದಿಂದ ಬಿಡಿಸಿಕೊಂಡು ಬಂದರು. ನ್ಯಾಯಾಲಯವು ಸಾಹುಕಾರ್ ಚನ್ನಯ್ಯ ಅವರು ತಪ್ಪಿತಸ್ಥರೆಂದು ತೀರ್ಮಾನ

ನೀಡಿತು. ನಂತರ ಚನ್ನಯ್ಯ ಅವರು ಬೆಂಗಳೂರು ಉಚ್ಚನ್ಯಾಯಾಲಯದಲ್ಲಿ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸಿದರು. ಇದರಿಂದ ಕಾನೂನು ಸಮರ ನಡೆಯುವುದೆ ನಿಶ್ಚಯವೆಂದು ತಿಳಿದು ಅನೇಕ ಜನ ಅಭಿಮಾನಿಗಳು ಕಾಂಗ್ರೆಸ್ ಪಕ್ಷದ ಹಿತದೃಷ್ಟಿಯಿಂದ ಸಂಧಾನ ಮಾಡಿಸಿ ಕೇಸನ್ನು ಹಿಂತೆಗೆದುಕೊಳ್ಳುವಂತೆ ಮಾಡಿದರು. ಈ ರೀತಿ ತನಗೆ ಸರಿಯಾದದ್ದನ್ನು ನೇರವಾಗಿ ಹೇಳಿ ಬಿಡುವ, ತನ್ನವರಿಗೆ ತೊಂದರೆಯುಂಟು ಮಾಡುವವರ ಅಂತಸ್ತು – ಅಧಿಕಾರಗಳನ್ನು ಪರಿಗಣನೆಗೆ ತೆಗೆದುಕೊಳ್ಳದೇ ನಿಷ್ಠುರವಾಗಿ ತನ್ನ ಜನರ ಕಷ್ಟಸುಖಗಳಲ್ಲಿ ಪಾಲ್ಗೊಳ್ಳುತ್ತಾ ಬರುತ್ತಿದ್ದ ಎನ್. ರಾಚಯ್ಯ ಅವರು ರಾಜಕೀಯ ಕ್ಷೇತ್ರಕ್ಕೆ ಅತ್ಯಂತ ಸೂಕ್ತವಾದ ವ್ಯಕ್ತಿಯಾಗಿ ಕಾಣಿಸಿದರು.

1952ರಲ್ಲಿ ಭಾರತದಲ್ಲಿ ಪ್ರಪ್ರಥಮ ಮಹಾಚುನಾವಣೆಗಳು ನಡೆಯುವ ಪ್ರಕ್ರಿಯೆಗಳು ಪ್ರಾರಂಭವಾದವು. ಕಾಂಗ್ರೆಸ್ ಪಕ್ಷದ ಅಧ್ಯಕ್ಷನಾಗಿದ್ದ ಶ್ರೀ ಸಾಹುಕಾರ್ ಚನ್ನಯ್ಯ ಅವರು ತಮ್ಮ ಪಕ್ಷದ ದಲಿತ ಅಭ್ಯರ್ಥಿಯನ್ನಾಗಿ ನಿಲ್ಲಿಸಲು ಸೂಕ್ತವಾದ ವ್ಯಕ್ತಿಯ ಆಯ್ಕೆ ನಡೆಸಿದ್ದರು. ಅವರ ಕಣ್ಣಿಗೆ ಕಂಡದ್ದು, ತಾವು ಮಾಡಿದ ಅನ್ಯಾಯದ ವಿರುದ್ಧ ಕಾನೂನು ಸಮರವನ್ನೇ ಸಾರಿ ಅನ್ಯಾಯವನ್ನು ಪ್ರತಿಭಟಿಸಿದ್ದ ತಮ್ಮ ಮೇಲೆಯೇ ಹೋರಾಟ ಮಾಡಿದ್ದ ಎನ್ ರಾಚಯ್ಯ. ರಾಚಯ್ಯನವರನ್ನು ದ್ವೇಷಿಸದೇ, ಪ್ರಶಂಸಿಸಿ, ತಾವೇ ಖುದ್ದಾಗಿ ಕರೆಸಿಕೊಂಡು ನಿಮ್ಮ ವರ್ಗದ ಪರವಾಗಿ ಶ್ರೀ ಎನ್. ರಾಚಯ್ಯ ಅವರನ್ನು ಅಭ್ಯರ್ಥಿಯನ್ನಾಗಿ ನಿಲ್ಲಿಸಿದ್ದಲ್ಲದೇ ನಿನ್ನ ಧೈರ್ಯ, ಸ್ಥೈರ್ಯ, ಸೇವಾಮನೋಭಾವಗಳಿಗೆ ನನ್ನ ಮನೆ ಬಾಗಿಲು ಸದಾ ತೆರೆದಿದೆ ಎಂದು ಆಶೀರ್ವದಿಸಿ ಮತ್ತಷ್ಟು ಹುರುಪು ಉತ್ಸಾಹಗಳನ್ನು ತುಂಬಿದರು.

ಈ ರೀತಿ ಪ್ರಥಮ ಲೋಕಸಭೆಗೆ ಉತ್ತಮವಾದ ವ್ಯಕ್ತಿಯನ್ನು ಆರಿಸಿದ ಕೀರ್ತಿ ಸಾಹುಕಾರ್ ಚನ್ನಯ್ಯನವರಾದರೆ ತನ್ನ ಮೇಲೆ ಕಾನೂನು ಸಮರ ಹೂಡಿದ ವ್ಯಕ್ತಿಯ ಬದುಕಿನಲ್ಲಿ ಬಂಗಾರದ ಬೆಳ್ಳಿಕಿರಣ ಮೂಡಿಸಿ ದ್ವೇಷ – ಅಸೂಯೆಯನ್ನು ದೂರ ತಳ್ಳಿದ ಸಾಹುಕಾರ್ ಚನ್ನಯ್ಯ ಅವರ ಹೃದಯ ಶ್ರೀಮಂತಿಕೆ ಮತ್ತು ಹೃದಯ ವೈಶಾಲ್ಯತೆ ಇಂದಿನ ರಾಜಕಾರಣಿಗಳಿಗೆ ಅನುಕರಣೀಯವಾದದ್ದು. ಗುರುವಿಗೆ ತಕ್ಕ ಶಿಷ್ಯನಾದ ಶ್ರೀ ಎನ್. ರಾಚಯ್ಯ ಅವರು ಪ್ರಥಮ ಲೋಕಸಭಾ ಚುನಾವಣೆಯಲ್ಲಿ ರಾಷ್ಟ್ರದಲ್ಲಿಯೇ ಅತಿ ಹೆಚ್ಚು

ಮತಗಳನ್ನು ಪಡೆದವರಲ್ಲಿ ಎರಡನೆಯವರಾದರು. ಲೋಕಸಭೆಯನ್ನು ಆನಂದದಾಯಕವಾಗಿ ಸಾಮಾಜಿಕ ನ್ಯಾಯವನ್ನು ದೀನ – ದಲಿತರ ಆಶೋತ್ತರಗಳನ್ನು ಈಡೇರಿಸುವ ಭರವಸೆಯನ್ನೊತ್ತು ಲೋಕಸಭೆ ಪ್ರವೇಶಿಸಿದರು.

◆ **ಸಮಾಜ ಸೇವಾ ಕಟ್ಟಾಳು :**

ಜನತೆಯ ನಿರೀಕ್ಷೆಯನ್ನು ಮೀರಿ ತನ್ನ ವ್ಯಕ್ತಿತ್ವವನ್ನು ಬೆಳೆಸಿಕೊಂಡು ಮೇರುಪರ್ವತವಾದ ಎನ್. ರಾಚಯ್ಯ ಅವರು ಊಹೆಗೂ ನಿಲುಕದಂತೆ ಬೆಳೆದರು. ಇಂತಹ ದಲಿತ ಧ್ವನಿಯನ್ನು ತಮ್ಮ ಪ್ರತಿನಿಧಿಯನ್ನಾಗಿ ಲೋಕಸಭೆಗೆ ಕಳುಹಿಸಿದ ಭಾಗ್ಯ ಜನತೆಯದಾಯಿತು. ಬಡತನದ ಬೇಗುದಿಯಲ್ಲಿ ಬೆಳೆದ ಎನ್. ರಾಚಯ್ಯ ಅವರು ತಮ್ಮ ಜನಾಂಗದ ಉದ್ಧಾರದ ಕಡೆ ಸಂಪೂರ್ಣ ಗಮನ ಕೊಡುವ ಮೊದಲು ತನ್ನ ಕಾಲ ಮೇಲೆ ತಾನು ನಿಂತು ನಂತರ ಮೂಢನಂಬಿಕೆ, ಅನಕ್ಷರತೆ, ಅಜ್ಞಾನ ಮತ್ತು ದಾಸ್ಯಗಳ ಕಂದಕದಲ್ಲಿ ಬಿದ್ದಿರುವ ದೀನದಲಿತರ ಮುಕ್ತಿ ಮಾಡಬೇಕೆಂದು ಹಂಬಲಿಸಿದರು. 18 ವರ್ಷಕ್ಕೆ ಮದುವೆಯಾಗಿ ಸರ್ಕಾರಿ ಉದ್ಯೋಗದಲ್ಲಿ ಸೇರಿಕೊಂಡರೂ ತೃಪ್ತರಾಗದೆ ಹೆಚ್ಚಿನ ವಿದ್ಯಾಭ್ಯಾಸ ಪಡೆಯಬೇಕೆಂದು ತಮ್ಮ ಪತ್ನಿಯ ಒಪ್ಪಿಗೆ ಪಡೆದು ಪತ್ನಿಯ ಅಕ್ಕನವರ ಪೋಷಣೆಯಲ್ಲಿ ಸಂಸಾರವನ್ನು ಬಿಟ್ಟು ಕಾಲೇಜ್ ವಿದ್ಯಾಭ್ಯಾಸಕ್ಕೆ ಸೇರಿಕೊಂಡರು. ಎನ್. ರಾಚಯ್ಯ ಅವರು ಕೇವಲ ಪುಸ್ತಕದ ಹುಳುವಾಗದೆ ಸಾಮಾಜಿಕ ಕ್ಷೇತ್ರದಲ್ಲಿ (ತನ್ನನ್ನು ತೊಡಗಿಸಿಕೊಂಡು) ಬಡ ದಲಿತ ವ್ಯಕ್ತಿಗಳಿಗೆ ಅರ್ಜಿಗಳನ್ನು ಬರೆದುಕೊಡುವ ಹವ್ಯಾಸವನ್ನು ಬೆಳೆಸಿಕೊಂಡು ಮೈಸೂರಿನಲ್ಲಿ ವಿದ್ಯಾಭ್ಯಾಸ ಮಾಡುತ್ತಿದ್ದಾಗಲೇ ಸಾರ್ವಜನಿಕರಿಂದ ಪ್ರಶಂಸಿಸಲ್ಪಟ್ಟಿದ್ದರು. ಈ ಕಾರ್ಯಗಳ ಜೊತೆಗೆ ವಿದ್ಯಾರ್ಥಿ ಆಂದೋಲನಗಳಲ್ಲಿ ಪ್ರಮುಖವಾಗಿ ಭಾಗವಹಿಸುತ್ತಾ ಸ್ವಾತಂತ್ರ್ಯ ಸಂಗ್ರಾಮಗಳ ಹೋರಾಟಗಳಲ್ಲಿ ತನ್ನನ್ನು ಸಕ್ರಿಯವಾಗಿ ತೊಡಗಿಸಿಕೊಂಡು, ಗ್ರಾಮೀಣ ಪ್ರದೇಶದ ದಲಿತರಿಗೆ ಸಾರ್ವಜನಿಕ ಹೋಟೆಲ್‌ಗಳಲ್ಲಿ ಪ್ರವೇಶ ನೀಡದೇ ಹೊರಗುಳಿಸಿ ತೆಂಗಿನ ಚಿಪ್ಪಿನಲ್ಲಿ ಕಾಫಿ, ಟೀ ಕೊಡುವುದನ್ನು ಕಣ್ಣಾರೆ ಕಂಡು ಉಗ್ರವಾಗಿ ಪ್ರತಿಭಟಿಸುತ್ತಿದ್ದರು. ಸಾಮಾಜಿಕ ಅನಿಷ್ಟಪದ್ಧತಿಗಳಾದ ಗುಲಾಮಗಿರಿ, ಅನಕ್ಷರತೆ, ಬಡತನ ಮುಂತಾದವುಗಳ ವಿರುದ್ಧ ತೀವ್ರವಾದ ಚಳುವಳಿಯನ್ನೇ ಆರಂಭಿಸಿದ್ದರು.

ಪ್ರಥಮ ಬಾರಿಗೆ ಸಾರ್ವಜನಿಕ ಸೇವೆ ಮಾಡುವ ಅವಕಾಶವು ಮೈಸೂರು ಕಾರ್ಪೋರೇಷನ್‌ನ ಕೌನ್ಸಿಲರ್ ಆಗಿ ಒದಗಿ ಬಂತು. ಕಾಯಾ ವಾಚಾ ಮನಸಾ, ತನ್ನ ತನು – ಮನ ಅರ್ಪಿಸಿ ದುಡಿದ ಪರಿಣಾಮವಾಗಿ ಮೈಸೂರು ನಗರ ಸಭೆಯ ಇತಿಹಾಸದಲ್ಲಿಯೇ ಮೊಟ್ಟ ಮೊದಲ ಹರಿಜನ ನಾಯಕರಾದ ಇವರು ಉಪಾಧ್ಯಕ್ಷರಾಗುವ ಸದಾವಕಾಶ ಒದಗಿ ಬಂದಿತು. ಇವರ ರಾಜಕೀಯ ತೀಕ್ಷ್ಣತೆಯನ್ನು ಗಮನಿಸಿದ ಸಾಹುಕಾರ್ ಚನ್ನಯ್ಯ ಅವರು ಕೇಂದ್ರ ಸರಕಾರದಲ್ಲಿ ಸಂಸತ್ ಸದಸ್ಯರಾಗುವ ಅವಕಾಶ ಕಲ್ಪಿಸಿ ಅವರಿಗೆ ಮತ್ತಷ್ಟು ಸಾಮಾಜಿಕ ಜವಾಬ್ದಾರಿಯನ್ನು ಹೊರಿಸಿದರು. ಇವರು ಸಂಸತ್ತಿನಲ್ಲಿ ಮಂಡಿಸುತ್ತಿದ್ದ ಮೊದಲ ವಿಷಯಗಳು ಬಡತನ, ಅನಕ್ಷರತೆ, ಮೂಢನಂಬಿಕೆ ಮುಂತಾದ ಅನಿಷ್ಟ ಪದ್ಧತಿಗಳನ್ನು ಸಾಕಷ್ಟು ಚರ್ಚೆಗೆ ಒಳಪಡಿಸುತ್ತಾ ಇಡೀ ಕೇಂದ್ರ ಸರಕಾರದ ಗಮನವನ್ನು ಸೆಳೆಯುತ್ತಿದ್ದರು. ಇವರ ನಿರ್ಭೀತಿಯ ನಡೆನುಡಿಗಳು ಎಂತಹವರನ್ನೂ ಬೆಚ್ಚಿ ಬೀಳಿಸುತ್ತಿದ್ದವು.

**♦ ಬಾಬು ಜಗಜೀವನರಾಂ ಮತ್ತು ಅಂಬೇಡ್ಕರ್ ಅವರ ಪ್ರೀತಿ ಪಾತ್ರರು :**

ಶ್ರೀ ಎನ್. ರಾಚಯ್ಯ ಅವರು ಸಂವಿಧಾನ ಶಿಲ್ಪಿ ಬಾಬಾ ಸಾಹೇಬ್ ಅಂಬೇಡ್ಕರ್ ಅವರ ಸಾಂವಿಧಾನಿಕ ವಿಷಯಗಳ ಬಗ್ಗೆ ಹಾಗೂ ಹರಿಜನ – ಗಿರಿಜನರ ಬಗ್ಗೆ ಡಾ. ಅಂಬೇಡ್ಕರ್ ಅವರ ಬಗ್ಗೆ ಸುದೀರ್ಘವಾಗಿ ಚರ್ಚೆ ಮಾಡುತ್ತಿದ್ದರು. ಸಂವಿಧಾನ ಶಿಲ್ಪಿಯೊಂದಿಗಿನ ವಿಚಾರ ವಿಮರ್ಶೆಗಳಿಂದ ದೀನ ದಲಿತರ ಉದ್ಧಾರಕ್ಕೆ ತಮ್ಮನ್ನು ತಾವೇ ಅರ್ಪಿಸಿಕೊಂಡು ಅಸ್ಪೃಶ್ಯರ ಉದ್ಧಾರಕ್ಕಾಗಿ ಸೂಚಿಸಿರುವ ಅನೇಕ ಕ್ರಮಗಳ ಜಾರಿಗೆ ಒತ್ತಾಯಿಸುತ್ತಿದ್ದರು. ತಮ್ಮ ಕ್ರಿಯಾ ವ್ಯಾಪ್ತಿಯಲ್ಲಿ ಬರುವಂತಹವನ್ನು ಕಾರ್ಯರೂಪಕ್ಕೆ ಇಳಿಸುತ್ತಾ ಡಾ. ಬಿ.ಆರ್. ಅಂಬೇಡ್ಕರ್ ಅವರ ಮೆಚ್ಚುಗೆ ಗಳಿಸುತ್ತಿದ್ದರು.

1954ರ ಸಂದರ್ಭದಲ್ಲಿ ಬಾಬು ಜಗಜೀವನರಾಂ ಅವರ ಒಡನಾಟದ ಸೌಭಾಗ್ಯವನ್ನು ಕಂಡಿದ್ದ ಶ್ರೀ ಎನ್. ರಾಚಯ್ಯ ಅವರು ಬಾಬೂಜಿಯವರ ಸಮರ್ಥ ನಾಯಕತ್ವದ ಗುಣಗಳು, ರಾಜಕೀಯದಲ್ಲಿ ದಿಟ್ಟ ನಿಲುವು ಮತ್ತು ದೂರದರ್ಶಿತ್ವದ ಗುಣಗಳನ್ನು ಬೆಳೆಸಿಕೊಂಡು ಬಾಬೂಜಿಯವರ ಗಮನವನ್ನು ಸೆಳೆದರು.

ಕೇಂದ್ರದಲ್ಲಿ ಶ್ರೀ ಎನ್. ರಾಚಯ್ಯ ಅವರ ಶೀಘ್ರ ಬೆಳವಣಿಗೆಯನ್ನು ಸಹಿಸದೆ ಇವರನ್ನು ರಾಜಕೀಯವಾಗಿ ಮೂಲೆಗುಂಪು ಮಾಡುವ ಹುನ್ನಾರಗಳು ತೆರೆಮರೆಯಲ್ಲಿ ಬಿರುಸಾಗಿ ನಡೆಯಿತು.

ರಾಚಯ್ಯನವರ ರಾಜಕೀಯ ಬದುಕಿಗೆ ಬಾಬು ಜಗಜೀವನರಾಂರವರ ಸಹಕಾರ ಶೇ. 100ರಷ್ಟಿತ್ತು. ಪಾರ್ಲಿಮೆಂಟ್ ಮೆಂಬರ್ ಆಗಿದ್ದಾಗ ಅಂಬೇಡ್ಕರ್‌ರವರ ಸಹಕಾರ ಇತ್ತು. ನಂತರ ಕಾಂಗ್ರೆಸ್ ಪಕ್ಷದಲ್ಲಿ 1976 ರಲ್ಲಿ ಎಂಎಲ್‌ಸಿ ಟಿಕೆಟ್‌ನ್ನು ತಪ್ಪಿಸಲಾಗಿದ್ದು ಮಂತ್ರಿಗಿರಿಗೆ ತಕ್ಷಣವೇ ರಾಜೀನಾಮೆ ಕೊಟ್ಟು ಹೊರಬರುತ್ತಾರೆ. ಇಂದಿರಾಗಾಂಧಿಯವರು ತುರ್ತುಪರಿಸ್ಥಿತಿಯನ್ನು ಘೋಷಿಸಿದಾಗ ಇಡೀ ದೇಶದಲ್ಲಿ ವಿರೋಧಿಸಿದವರು ಬಾಬು ಜಗಜೀವನರಾಂ ಒಬ್ಬರೇ. ಯಾರೋ ದೆಹಲಿಯಲ್ಲಿ ಅವನೊಬ್ಬ ದಲಿತ ಚಮ್ಮಾರ ಏನು ಮಾಡುತ್ತಾನೆ ಎಂಬ ಮಾತಿಗೆ ಪ್ರತಿಯಾಗಿ ಕಾಂಗ್ರೆಸ್ ಬಿಟ್ಟು ಹೊರಬರುತ್ತಾರೆ. ಬಾಬು ಜಗಜೀವನರಾಂ ದಲಿತ ಶಕ್ತಿ ಪ್ರದರ್ಶನ ಮಾಡಬೇಕೆಂಬ ಸಂಕಲ್ಪ ಮಾಡುತ್ತಾರೆ. ನಂತರ "ಕಾಂಗ್ರೆಸ್ ಆಫ್ ಡೆಮಾಕ್ರಸಿ' ಎಂಬ ಪಕ್ಷವನ್ನು ಕಟ್ಟುತ್ತಾರೆ. ಆ ಪಕ್ಷಕ್ಕೆ ಕರ್ನಾಟಕ ರಾಜ್ಯದ ಅಧ್ಯಕ್ಷರಾಗಿ ರಾಚಯ್ಯನವರು ಆಯ್ಕೆ ಆಗುತ್ತಾರೆ ತುಂಬಾ ಪ್ರಬುದ್ಧಮಾನವಾಗಿ ಪಕ್ಷ ಬೆಳೆಯಿತು. ಯಾರೋ ಕುತಂತ್ರಿಗಳು ಕರ್ನಾಟಕದಲ್ಲಿ 17 ಜನ ಎಂಎಲ್‌ಎಗಳು ಬೇಕಾದರೆ ರಾಚಯ್ಯನವರನ್ನು ತೆಗೆಯಿರಿ ಎಂದು ಬಾಬೂಜಿಯವರನ್ನು ಪ್ರೇರೇಪಿಸುತ್ತಾರೆ. ರಾಚಯ್ಯನವರು ಸತ್ಯವೇನೆಂದು ಹೇಳಿದರೂ ಬಾಬುಜಗಜೀವನರಾಂ ಅವರು ಏನೋ ಒಂದು ಆಸೆಯಿಂದ ರಾಚಯ್ಯನವರನ್ನು ಆ ಸ್ಥಾನದಿಂದ ತೆಗೆಯುತ್ತಾರೆ. ಬಹುಗುಣ ಎಲ್ಲರೂ ಜಗಜೀವನರಾಂ ಜೊತೆ ನಿಲ್ಲುತ್ತಾರೆ. ನಂತರ ಕಪಾಲಿ ಟಾಕೀಸ್‌ನ ಡಿ. ರಾಜಗೋಪಾಲ್ ಅವರನ್ನು ರಾಚಯ್ಯನವರ ಜಾಗದಲ್ಲಿ ಅಧ್ಯಕ್ಷರನ್ನಾಗಿ ಮಾಡುತ್ತಾರೆ. ಆದರೆ ಯಾವ ಶಾಸಕರೂ ಜಗಜೀವನರಾಂ ಅವರ ಜೊತೆ ಹೋಗೋದಿಲ್ಲ. ಅದಾದ ನಂತರ ಈ ನೋವಿನಿಂದ ರಾಚಯ್ಯನವರು 'ಜನತಾ ಕಾಂಗ್ರೆಸ್' ಎಂಬ ಹೊಸ ಪಕ್ಷವನ್ನು ಕಟ್ಟುತ್ತಾರೆ. ಆ ಪಕ್ಷದ ಮೂಲಕ ಸಾಕಷ್ಟು ಅಭ್ಯರ್ಥಿಗಳನ್ನು ಹಾಕುತ್ತಾರೆ. ಆ ಸಂದರ್ಭದಲ್ಲಿ ದೇವರಾಜ ಅರಸು ವಿರುದ್ಧದ ಮೇಲೆ ಇಂದು ಶಾಸಕರಾದ ಚಿಕ್ಕಮಾದು ಅವರನ್ನು ಜನತಾ ಕಾಂಗ್ರೆಸ್‌ನಿಂದ ನಿಲ್ಲಿಸುತ್ತಾರೆ. ರಾಚಯ್ಯನವರು ಕೂಡ ಜನತಾ ಕಾಂಗ್ರೆಸ್‌ನಿಂದಲೇ ಟಿ. ನರಸೀಪುರ

ಅಭ್ಯರ್ಥಿಯಾಗುತ್ತಾರೆ. ಮೈಸೂರು ಜಿಲ್ಲೆಯ ಎಲ್ಲಾ ಕಡೆ ಅಭ್ಯರ್ಥಿಗಳನ್ನು ಹಾಕುತ್ತಾರೆ ಎಲ್ಲರೂ ಸೋಲುತ್ತಾರೆ. ಆದರೆ ಹಟವಾಗಿ ಒಂದು ಹೊಸ ಪಕ್ಷ ಕಟ್ಟಿದ್ದು ವಿಶೇಷವಾದುದು. ನಂತರ ಬಾಬು ಜಗಜೀವನರಾಂ ಅವರು ಉಪಪ್ರಧಾನಮಂತ್ರಿಯಾದ ನಂತರ ರಾಚಯ್ಯನವರನ್ನು ಕರೆತನ್ನಿ, ನಾನು ಯಾರದೋ ಮಾತು ಕೇಳಿ ತಪ್ಪು ಮಾಡಿದೆ. ಅವರನ್ನು ರಾಜ್ಯಪಾಲರನ್ನಾಗಿ ಮಾಡುತ್ತೇನೆ, ಎಲ್ಲಾದರೂ ಜಾಗ ಮಾಡುವೆ ಎಂದು ಮುಖಂಡರ ಮೂಲಕ ಹೇಳಿ ಕಳುಹಿಸಿದರು. ಆದರೆ ರಾಚಯ್ಯನವರು ಹೋಗುವುದಿಲ್ಲ.

ಅದಾದ ನಂತರ ಬಾಬು ಜಗಜೀವನರಾಂ ಅವರು ಜನತಾ ಪಾರ್ಟಿಗೆ ಹೋಗುತ್ತಾರೆ. ನಂತರ ರಾಚಯ್ಯನವರು ಅವರ ಜೊತೆ ಹೋಗುತ್ತಾರೆ. ಬಳ್ಳಾರಿಯಲ್ಲಿ ಎಂ. ವೈ. ಘೋರ್ಪಡೆ ಮತ್ತು ಆರ್.ವೈ ಘೋರ್ಪಡೆ ವಿರುದ್ಧವಾಗಿ ಜನತಾ ಪಕ್ಷದ ಅಭ್ಯರ್ಥಿಯಾಗಿ 1980ರಲ್ಲಿ ನಿಂತು ಸೋಲುತ್ತಾರೆ. ಅದಾದ ನಂತರ ಜಗಜೀವನರಾಂ ಅವರು ಎಲ್ಲೂ ಬೆಂಬಲ ಸಿಗದೆ 'ಜಯ ಕಾಂಗ್ರೆಸ್' ಎಂದು ಪಕ್ಷ ಕಟ್ಟುತ್ತಾರೆ. ಅವರ ಜೊತೆ ಇಡೀ ದೇಶದಲ್ಲಿ ಯಾರೂ ಹೋಗುವುದಿಲ್ಲ. ರಾಚಯ್ಯನವರು ಬಾಬೂಜಿ ಜೊತೆ ನಿಲ್ಲುತ್ತಾರೆ. ಅದರ ನಂತರ ಜಯ ಕಾಂಗ್ರೆಸ್‌ಗೆ ಮಾನ್ಯತೆ ಸಿಗೋದಿಲ್ಲ. ನಂತರ 1986ರಲ್ಲಿ ಬಾಬೂಜಿಯವರು ನಿಧನರಾಗುತ್ತಾರೆ. ಅದಾದ ನಂತರ ದೇವರಾಜ ಅರಸು 'ಕ್ರಾಂತಿರಂಗ' ಪಕ್ಷ ಕಟ್ಟುತ್ತಾರೆ. ರಾಚಯ್ಯನವರನ್ನು ಅಧ್ಯಕ್ಷರಾಗಿ ಮಾಡಲು ಕರೆಯುತ್ತಾರೆ. ಸ್ವಾಭಿಮಾನಿ ರಾಚಯ್ಯನವರು ಹೋಗೋದಿಲ್ಲ. ನನಗೆ ಎಂಎಲ್‌ಸಿ ಸ್ಥಾನ ತಪ್ಪಿಸಿ ಮಂತ್ರಿಗಿರಿ ತಪ್ಪಿಸಿರುವುದು ನನಗೆ ಮಾಡಿದ ಅವಮಾನವಲ್ಲ. ಇಡೀ ದಲಿತ ಜನಾಂಗಕ್ಕೆ ಮಾಡಿದ ಅವಮಾನ ಎಂದು ಅರಸು ಜೊತೆ ಹೋಗುವುದಿಲ್ಲ. ಇದು ರಾಚಯ್ಯನವರ ತತ್ತ್ವ ಬದ್ಧತೆಗೆ ಸಾಕ್ಷಿಯಾಗಿದೆ.

### ♦ ಯಶಸ್ವಿ ರಾಜಕಾರಣಿ :

1957ರಲ್ಲಿ ವಿಧಾನಸಭಾ ಸಾರ್ವತ್ರಿಕ ಚುನಾವಣೆಯಲ್ಲಿ ಮೈಸೂರು ಜಿಲ್ಲೆ ಹೆಗ್ಗಡದೇವನ ಕೋಟೆಯಲ್ಲಿ ಕಾಂಗ್ರೆಸ್ ಅಭ್ಯರ್ಥಿಯಾಗಿ ಸ್ಪರ್ಧಿಸಿ ಪ್ರಚಂಡ ವಿಜಯವನ್ನು ಪಡೆದ ರಾಚಯ್ಯ ಅವರು 1959ರಲ್ಲಿ ಶ್ರೀಮಾನ್ ಬಿ.ಡಿ. ಜತ್ತಿಯವರ ಮಂತ್ರಿಮಂಡಲದಲ್ಲಿ ಸಂಪುಟ ದರ್ಜೆ ಸಚಿವರಾದರು. ಸಾಮಾಜಿಕ ಪರಿವರ್ತನೆಯ

ಕನಸನ್ನು ಹೊಂದಿದ್ದ ಮತ್ತು ದೂರದರ್ಶಿತ್ವದ ಗುಣಗಳುಳ್ಳ ಬಿ.ಡಿ. ಜತ್ತಿಯವರು ಜವಾಬ್ದಾರಿಯುತವಾದ ಕೃಷಿ, ಸಮಾಜಕಲ್ಯಾಣ ಮತ್ತು ಅಬಕಾರಿ ಖಾತೆಗಳ ಹೊಣೆಗಾರಿಕೆಯನ್ನು ನೀಡಿದರು.

ತನ್ಮೂಲಕ ಸಮಾಜದಲ್ಲಿ ಶತಮಾನಗಳಿಂದ ಶೋಷಣೆಗೆ ಒಳಪಟ್ಟು ನಿರಂತರ ದಾಸ್ಯದ ಜೀವನವನ್ನು ನಡೆಸುತ್ತಾ ಬಂದಿದ್ದ ಜನರಿಗೆ ಒಂದಿಷ್ಟು ಕೆಲಸ (ಸಹಾಯ) ಮಾಡುವ ಅವಕಾಶ ಶ್ರೀ ಎನ್. ರಾಚಯ್ಯ ಅವರಿಗೆ ಒದಗಿತು.

◆ **ರೈತಪರ ಮಂತ್ರಿ :**

ಕೃಷಿ ಮತ್ತು ಸಮಾಜಕಲ್ಯಾಣ ಖಾತೆಗಳಲ್ಲಿ ಕ್ರಾಂತಿಕಾರಕ ಬದಲಾವಣೆಗಳನ್ನು ತಂದಂತೆ ಅಬಕಾರಿ ಖಾತೆಯಲ್ಲಿಯೂ ಸಹ ಅಂತಹುದೇ ಕ್ರಾಂತಿಕಾರಕ ಬದಲಾವಣೆ ತರುವ ನಿಟ್ಟಿನಲ್ಲಿ ಯಾವುದೇ ಸಂಘಾನಗಳಿಗೆ ಮತ್ತು ಹಣ ಅಧಿಕಾರಿಗಳಿಗೆ ಜಗ್ಗದೆ ನಿರ್ಭೀತಿಯಿಂದ ಬಡವರ ಪಾಲಿಗೆ ಮಾರಕವಾಗುವ ಮದ್ಯಪಾನ ನಿರೋಧವನ್ನು ಜಾರಿಗೆ ತಂದು ರಾಜ್ಯದ ಇತಿಹಾಸದಲ್ಲಿ 1958 ರಿಂದ 68ರವರೆಗೆ ಪಾನನಿರೋಧ ಕಾಯ್ದೆಯನ್ನು ಜಾರಿಗೆ ತಂದ ಎನ್. ರಾಚಯ್ಯ ಅವರನ್ನು ಸೋಲಿಸುವ 'ಪಣ ತೊಟ್ಟ ಅಬಕಾರಿ ಕಂಟ್ರಾಕ್ಟರುಗಳು ಮತ್ತು ಜಾತೀವಾದಿಗಳು 1962ರ ಸಾರ್ವತ್ರಿಕ ಚುನಾವಣೆಯಲ್ಲಿ ಸೋಲುವಂತೆ ಮಾಡಿ ಯಶಸ್ವಿಯಾದರು.

ನಂತರ ಇವರು ಎದೆಗುಂದದೆ ತಮ್ಮ ಶಕ್ತಿಯನ್ನು ಕೃಷಿಯಲ್ಲಿ ತೊಡಗಿಸಿ ರೈತನಾಗಿ, ಮಣ್ಣಿನ ಮಗನಾಗಿ ದುಡಿಯತೊಡಗಿದರು. ಎನ್. ರಾಚಯ್ಯ ಅವರಿಗೆ ಇನ್ನು ರಾಜಕೀಯ ಸನ್ಯಾಸವೆಂದು ಅವರ ಏಳಿಗೆಯನ್ನು ಸಹಿಸದ ಅನೇಕರು ಸಂತೋಷಪಟ್ಟರು. ಆದರೆ ಈ ಸಂತೋಷ ಕ್ಷಣಿಕವಾದುದೆಂದು ಕೆಲವೇ ವರ್ಷದಲ್ಲಿ ಗೊತ್ತಾಯಿತು. ಕರ್ನಾಟಕದ ರಾಜಕಾರಣವು ಸುಮಾರು 8 ವರ್ಷಗಳಿಂದ ಮೇಧಾವಿ ರಾಜಕಾರಣಿಯೊಬ್ಬರನ್ನು ಹೊಂದದೇ ಬಡವಾಗಿದ್ದ ಕರ್ನಾಟಕದ ಪರಿಸ್ಥಿತಿಗೆ ಅಗತ್ಯವಾದ ಹಾಗೂ ಸೂಕ್ತವಾದ ವ್ಯಕ್ತಿಯೊಬ್ಬರನ್ನು ಯಾವುದೇ ಪಕ್ಷ ಆರಿಸುವ ಪ್ರಯತ್ನ ಮಾಡದೇ ಇದ್ದರೂ ಸಮಾಜವಾದಿ ಪಕ್ಷದ ನಾಯಕರಾದ ಶ್ರೀ ಶಾಂತವೇರಿ ಗೋಪಾಲಗೌಡರು ಮಾಡಿದರು. ಎನ್. ರಾಚಯ್ಯ ಅವರ ಅಗಾಧ ರಾಜಕೀಯ ನೈಪುಣ್ಯತೆ, ದಿಟ್ಟತನ ಮತ್ತು ತನಗೆ ಸರಿಯಾದುದ್ದನ್ನು

ನಿರ್ದಾಕ್ಷಿಣ್ಯವಾಗಿ ಹೇಳಿಬಿಡುವ ಮನಸ್ಸುಳ್ಳ ಗುಣಗಳನ್ನು ಮೆಚ್ಚಿ ತಮ್ಮ ಪಕ್ಷದಿಂದ ಸ್ಪರ್ಧಿಸುವ ಅವಕಾಶ ನೀಡಿದರು. ಇವರ ನಿರೀಕ್ಷೆಯಂತೆ ಶ್ರೀ ಎನ್. ರಾಚಯ್ಯ ಅವರಿಗೆ ಜಯ ಲಭಿಸಿತು.

ಆಗ ಕೇಂದ್ರದಲ್ಲಿದ್ದ ಕಾಂಗ್ರೆಸ್‌ನ ಪ್ರಧಾನಮಂತ್ರಿ ಶ್ರೀಮತಿ ಇಂದಿರಾಗಾಂಧಿ ಅವರು ಕರ್ನಾಟಕದಲ್ಲಿ ಹೊಸ ಪಕ್ಷದ ಮೂಲಕ ಗೆದ್ದು ಬಂದ ರಾಚಯ್ಯ ಅವರನ್ನು ಕೇಂದ್ರಕ್ಕೆ ಬರಮಾಡಿಸಿಕೊಂಡರು, ಇದಕ್ಕಿಂತ ಮುಂಚಿತವಾಗಿ ಕಾಂಗ್ರೆಸ್‌ನ ಗುಂಡೂರಾವ್, ಮತ್ತಿತರರು ಪ್ರಧಾನಿಯವರು ಭೇಟಿಗೆ ಕಾದಿದ್ದಾಗ, ರಾಚಯ್ಯ ಅವರು ಬಂದಿರುವ ವಿಷಯ ತಿಳಿದ ಶ್ರೀಮತಿ ಇಂದಿರಾ ಅವರು ಮೊದಲು ಅವರನ್ನು ಬರಮಾಡಿಕೊಂಡು ಕರ್ನಾಟಕದಲ್ಲಿ ತಮ್ಮ ಜನಪ್ರಿಯತೆ ಕಂಡು ನನಗೆ ತುಂಬಾ ಸಂತೋಷವಾಗಿದೆ, ಕಾಂಗ್ರೆಸ್‌ನಲ್ಲಿ ಅವಕಾಶವಿಲ್ಲದಿದ್ದಕ್ಕಾಗಿ ಕ್ಷಮಿಸಿ ಎಂದು ತಮ್ಮ ಪಕ್ಷದಲ್ಲಿ ಸೇರಿಕೊಳ್ಳುವಂತೆ, ತಿಳಿಸಿ ಕರ್ನಾಟಕದ ಮಂತ್ರಿಮಂಡಲದಲ್ಲಿ ಸಚಿವಸ್ಥಾನ ನೀಡಿದರು. 1973ರಲ್ಲಿ ಮುಖ್ಯಮಂತ್ರಿ ದೇವರಾಜ ಅರಸು ಅವರ ಮಂತ್ರಿಮಂಡಲದಲ್ಲಿ ಶ್ರೀ ಎನ್. ರಾಚಯ್ಯ ಅವರಿಗೆ ಅತ್ಯಂತ ಪ್ರೀತಿ – ಪಾತ್ರವಾಗಿದ್ದ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಖಾತೆಯನ್ನು ಕೊಟ್ಟು ಮತ್ತೊಮ್ಮೆ ನಾಡಿನ ದೀನ – ದಲಿತರ ಮತ್ತು ಹಿಂದುಳಿದ ವರ್ಗದವರ ಕಲ್ಯಾಣದಲ್ಲಿ ತಮ್ಮನ್ನು ತೊಡಗಿಸಿಕೊಳ್ಳುವಂತೆ ಮಾಡಿದರು.

### ♦ ಅಭಿವೃದ್ಧಿಯ ಹರಿಕಾರ :

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಖಾತೆಯ ಜವಾಬ್ದಾರಿಯನ್ನು ಹೊರಿಸಿದ ಕರ್ನಾಟಕದ ಮುಖ್ಯಮಂತ್ರಿಗಳಲ್ಲಿ ಶ್ರೀ ದೇವರಾಜ ಅರಸುರವರೇ ನಿಜವಾಗಿಯೂ ದೀನ ದಲಿತರ ಬಗ್ಗೆ ಕಾಳಜಿ ಹೊಂದಿದ್ದವರೆಂದು ನಿಸ್ಸಂದೇಹವಾಗಿ ಹೇಳಬಹುದಾಗಿದೆ. ಇಂತಹ ಉತ್ತಮ ನಾಯಕತ್ವದಲ್ಲಿ ಹೊಸ ಹುರುಪು ಮತ್ತು ಉತ್ಸಾಹಗಳಿಂದ ಕಾರ್ಯ ನಿರ್ವಹಿಸತೊಡಗಿದ ಶ್ರೀ ಎನ್. ರಾಚಯ್ಯ ಅವರು ದೀನ ದಲಿತರ ಮತ್ತು ಹಿಂದುಳಿದ ವರ್ಗಗಳ ಅಭಿವೃದ್ಧಿಗಾಗಿ ಹಲವಾರು ಕಾರ್ಯಕ್ರಮಗಳನ್ನು ಜಾರಿಗೆ ತಂದರು. ಅವುಗಳಲ್ಲಿ ಅತ್ಯಂತ ಮುಖ್ಯವಾದವುಗಳೆಂದರೆ,

1. ವಿದ್ಯಾಭ್ಯಾಸ ಮಾಡುತ್ತಿದ್ದ ಪ್ರತಿಯೊಬ್ಬ ಪರಿಶಿಷ್ಟ ಜಾತಿ ಮತ್ತು ವರ್ಗಗಳ ಮಿಡ್ಲ್‌ಸ್ಕೂಲ್ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನ ನೀಡಲಾಯಿತು.
2. ಮೆಟ್ರಿಕ್ ಮತ್ತು ಮೆಟ್ರಿಕ್ ನಂತರದ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನ
3. ಸರ್ಕಾರದಿಂದ ಉಚಿತ ಸಮವಸ್ತ್ರ ಹಾಗೂ ವೈದ್ಯಕೀಯ ಸೌಲಭ್ಯದ ಜೊತೆಗೆ ನಿಯಂತ್ರಿತ ದರದಲ್ಲಿ ಆಹಾರ ಸಾಮಾಗ್ರಿಗಳ ಪೂರೈಕೆ
4. ಪರಿಶಿಷ್ಟ ಜಾತಿ ಮತ್ತು ವರ್ಗದವರು ವಾಸಿಸುವ ಕಾಡು ಮತ್ತು ದುರ್ಗಮ ಪ್ರದೇಶಗಳಲ್ಲಿ ಶಾಲೆಗಳ ಸ್ಥಾಪನೆ.
5. ಸಮುದಾಯ ಭವನಗಳ ನಿರ್ಮಾಣ
6. ಕೈಗಾರಿಕೆಗಳಲ್ಲಿ ಕಾರ್ಯನಿರ್ವಹಿಸಲು ಬೇಕಾದ ತರಬೇತಿ ಮತ್ತು ಪಾಲಿಟೆಕ್ನಿಕ್‌ಗಳಲ್ಲಿ ಪ್ರವೇಶ ಪಡೆಯಲು ತರಬೇತಿ ಕೇಂದ್ರಗಳ ಸ್ಥಾಪನೆ
7. ಸರ್ಕಾರಿ ಉದ್ಯೋಗಗಳಲ್ಲಿ ಮೀಸಲಾತಿಯನ್ನು ತುಂಬಲು ಪ್ರತ್ಯೇಕವಾದ ಉದ್ಯೋಗ ವಿನಿಮಯ ಕೇಂದ್ರಗಳ ಸ್ಥಾಪನೆ
8. ದಲಿತ ಹರಿಜನ ಗಿರಿಜನರ ಮನೆಗಳಿಗೆ ವಿದ್ಯುತ್ ದೀಪಗಳ ಸೌಲಭ್ಯ
9. ಪರಿಶಿಷ್ಟ ಜಾತಿ ಮತ್ತು ವರ್ಗದವರ ಮೇಲೆ ನಡೆಯುವ ದೌರ್ಜನ್ಯಗಳನ್ನು ತಡೆಯಲು ಪ್ರತ್ಯೇಕವಾದ ವಿಶೇಷ ದಳ ರಚನೆ.
10. ಪರಿಶಿಷ್ಟ ಜಾತಿ ಮತ್ತು ಗಿರಿಜನರಿಗೆ ಉಚಿತವಾಗಿ ಜಿಲ್ಲಾ ಮಟ್ಟದಲ್ಲಿ ಕಾನೂನು ನೆರವು ಒದಗಿಸಲು ಕಾನೂನು ಸಲಹೆಗಾರರ ನೇಮಕ.
11. ಜೀತಪದ್ಧತಿಯ ನಿರ್ಮೂಲನೆ ಹಾಗೂ ಪರಿಶಿಷ್ಟ ಜಾತಿ ಮತ್ತು ವರ್ಗಗಳ ಅಭಿವೃದ್ಧಿಗಾಗಿ ಪ್ರತ್ಯೇಕವಾದ ನಿಗಮ ಸ್ಥಾಪನೆ

ಇಂತಹ ಅನೇಕ ವಿಶಿಷ್ಠ ಯೋಜನೆಯುನ್ನು ರೂಪಿಸಿ ಜಾರಿಗೆ ತಂದ ದೂರದರ್ಶಿತ್ವದ ಗುಣವುಳ್ಳ ಶ್ರೀ ಎನ್. ರಾಚಯ್ಯ ಅವರು ಕೇವಲ ಪರಿಶಿಷ್ಟ ಜಾತಿ ಮತ್ತು ವರ್ಗದವರ ಅಭಿವೃದ್ಧಿಗೆಂದು ತಮ್ಮ ಜೀವವನ್ನು ಕಳೆಯದೆ ಸಮಾಜದ ಕೃಷಿ – ಕಾರ್ಮಿಕರಿಗಾಗಿ, ಮಹಿಳೆಯರ ಮತ್ತು ರೈತರ ಸ್ಥಿತಿಗತಿಗಳ ಬಗ್ಗೆ ಅರಿತುಕೊಂಡು ಅವರ ಅಭಿವೃದ್ಧಿಗಾಗಿ ಅನೇಕ ಕಾರ್ಯಕ್ರಮುಗಳನ್ನು ಹಾಕಿಕೊಂಡರು. ಅಂತಹವುಗಳಲ್ಲಿ ಅತ್ಯಂತ ಪ್ರಮುಖವಾದವುಗಳೆಂದರೆ,

1. ಮಹಿಳೆಯರ ಸ್ಥಿತಿಗತಿಗಳ ಅಧ್ಯಯನ ಮತ್ತು ಮಹಿಳಾ ಕಲ್ಯಾಣ ಕೇಂದ್ರಗಳ ಸ್ಥಾಪನೆ.
2. ಸಮುದಾಯ ಭವನಗಳ ಸ್ಥಾಪನೆ
3. ಸಹಕಾರಿ ಭೂ ಅಭಿವೃದ್ಧಿಗೆ ಬ್ಯಾಂಕ್‌ನಿಂದ ಆರ್ಥಿಕ ನೆರವು
4. ಅಸಂಘಟಿತ ಅತ್ಯಂತ ಸಣ್ಣ ಕೃಷಿ ಕಾರ್ಮಿಕ ಸಂಘಗಳ ಸ್ಥಾಪನೆ
5. ಸಹಕಾರಿ ಸಂಘಗಳಲ್ಲಿ ದಾಖಲಾತಿಗಾಗಿ ಅನುವು ಮಾಡಿಕೊಡುವುದು
6. ಸಣ್ಣ ರೈತರ ಅಭಿವೃದ್ಧಿ ಸಂಘದ ಸ್ಥಾಪನೆ

ಇಂತಹ ಅನೇಕ ವಿನೂತನವಾದ ಕಾರ್ಯಕ್ರಮಗಳನ್ನು ತಮ್ಮ ಅಧಿಕಾರದ ಅವಧಿಯಲ್ಲಿ ಜಾರಿಗೆ ತಂದ ಶ್ರೀ ಎನ್. ರಾಚಯ್ಯ ಅವರು ಕನ್ನಡ ನಾಡಿನ ಜನರ ಮನದಲ್ಲಿ ಚಿರಸ್ಥಾಯಿ ಆದರು.

◆ **ಬಡವರ ಬಂಧು :**

ಎನ್.ರಾಚಯ್ಯ ಅವರ ಸಮಾಜೋದ್ಧಾರ ಕೆಲಸ ಹಾಗೂ ಶ್ರಮದಿಂದ ಕರ್ನಾಟಕದ ಹೆಸರಾಂತ ಮುಖ್ಯಮಂತ್ರಿಯಾದ ದೇವರಾಜ ಅರಸು ಅವರ ಸಹಕಾರದಿಂದ ಅಂದು ಸ್ಥಾಪಿತವಾದ ಕರ್ನಾಟಕ ಪರಿಶಿಷ್ಟ ಜಾತಿ ಮತ್ತು ವರ್ಗಗಳ ನಿಗಮವು ನೂರಾರು ಜನರಿಗೆ ಉದ್ಯೋಗವಕಾಶಗಳನ್ನು ಕಲ್ಪಿಸಿದ್ದಲ್ಲದೇ ಕರ್ನಾಟಕದ ದೀನ ದಲಿತರ ಬದುಕಿನಲ್ಲಿ ಭರವಸೆಯನ್ನು ಮೂಡಿಸುತ್ತಾ ಅವರು ಸ್ವಾಭಿಮಾನಿಗಳಾಗಿ ಬದುಕುವಂತೆ ಮಾಡಿದ ಕೀರ್ತಿ ಈ ಮಹಾನ್ ನಾಯಕರದಾಗಿದೆ.

1973ರಲ್ಲಿ ಕೇಂದ್ರ ಮಂತ್ರಿಗಳು ಹಾಗೂ ಹಿಂದುಳಿದ ಜಾತಿ – ವರ್ಗಗಳ ರಾಷ್ಟ್ರೀಯ ನಾಯಕರಾದ ಶ್ರೀ ಬಾಬು ಜಗಜೀವನರಾಂ ಮತ್ತು ಶ್ರೀ ಬಿ. ಶಂಕರಾನಂದವರನ್ನು ಶ್ರೀ ಎನ್. ರಾಚಯ್ಯ ಅವರು, ಡಿ. ದೇವರಾಜ್ ಅರಸು ಅವರ ಮಂತ್ರಿಮಂಡಲದಲ್ಲಿ ಸಮಾಜ ಕಲ್ಯಾಣ ಸಚಿವರಾಗಿದ್ದ ರಾಜ್ಯಕ್ಕೆ ಆಮಂತ್ರಣವನ್ನಿತ್ತು ಕರ್ನಾಟಕ ರಾಜ್ಯದ ಹರಿಜನ – ಗಿರಿಜನ ಮತ್ತು ಪರಿಶಿಷ್ಟ ವರ್ಗಗಳ ಆರ್ಥಿಕ ಸುಧಾರಣೆಗಾಗಿ ಕರ್ನಾಟಕ ಪರಿಶಿಷ್ಟ ಜಾತಿ ಮತ್ತು ವರ್ಗಗಳ ಅಭಿವೃದ್ಧಿ ನಿಗಮವು ಸ್ಥಾಪಿತಗೊಂಡಿತು.

ಈ ನಿಗಮದ ಮೂಲಕ ರಾಜ್ಯದ ಲಕ್ಷೋಪಲಕ್ಷ ಹರಿಜನ ಕುಟುಂಬಗಳು ಧನ ಸಹಾಯವನ್ನು ಪಡೆದು ಬಡತನದ ರೇಖೆಯಿಂದ ಮೇಲೆ ಬರಲು ಪ್ರಯತ್ನ ಮಾಡುತ್ತಿವೆ. ಹರಿಜನರ ಕುಲಕಸುಬುಗಳಲ್ಲಿ ಹೆಚ್ಚಿನ ದಕ್ಷತೆ ಮತ್ತು ಉತ್ಪಾದನಾ ಸಾಮರ್ಥ್ಯವನ್ನು ಹೆಚ್ಚಿಸಿಕೊಂಡು ಸಮೃದ್ಧ ಬದುಕನ್ನು ನಡೆಸಲು ಅನುವಾಗುವಂತಹ ಇಂತಹ ಮಹತ್ವ ಪೂರ್ಣ ಯೋಜನೆಯನ್ನು ಶ್ರೀ ರಾಚಯ್ಯ ಅವರು ಮಾಡಿ 'ಬಡವರ ಬಂಧು' ಎಂಬ ಕೀರ್ತಿಗೆ ಒಳಗಾದರು.

**♦ ನಾಗರಿಕ ಹಕ್ಕು ಒತ್ತಾಯ ಸಮಿತಿಯ ಸ್ಥಾಪನೆ :**

1974ರಲ್ಲಿ ಮತ್ತೊಂದು ಮಹತ್ವದ ಹೆಜ್ಜೆಯಾಗಿ ರಾಜ್ಯದಲ್ಲಿ ದಲಿತರ ಮೇಲೆ ನಡೆಯುತ್ತಿದ್ದ ದೌರ್ಜನ್ಯ ಮತ್ತು ದಬ್ಬಾಳಿಕೆಯನ್ನು ತಡೆಯಲು ವ್ಯವಸ್ಥಿತವಾದ ಯೋಜನೆಯನ್ನು ರೂಪಿಸಿ ಬಡವರ ಮೇಲೆ ನಡೆಯುವ ದೌರ್ಜನ್ಯ ಮತ್ತು ದಬ್ಬಾಳಿಕೆಗಳಿಂದ ಉಂಟಾಗುವ ಘರ್ಷಣೆ, ಕಲಹಗಳನ್ನು ತಡೆಯುವ ಸಲುವಾಗಿ ಎಂದು "ನಾಗರಿಕ ಹಕ್ಕು ಒತ್ತಾಯ ಸಮಿತಿಯನ್ನು" ಸ್ಥಾಪಿಸಿದರು.

ಸ್ವತಂತ್ರವಾಗಿ ಜೀವಿಸುವ ಪ್ರತಿಯೊಬ್ಬ ವ್ಯಕ್ತಿಯೂ ತನ್ನದೇ ಆದಂತಹ ಹಕ್ಕುಗಳನ್ನು ಹೊಂದಿರುತ್ತಾನೆ. ಇಂತಹ ಹಕ್ಕನ್ನು ದಲಿತರು ಹೊಂದುವಾಗ ಇದನ್ನು ಸಹಿಸದ ಮೇಲ್ಜಾತಿಯವರು ಅವರ ಮೇಲೆ ಹಲ್ಲೆ ನಡೆಸುತ್ತಾರೆ.

ಪ್ರಮುಖವಾಗಿ ಇಂತಹ ಹಲ್ಲೆ ಮತ್ತು ದೌರ್ಜನ್ಯಗಳ ತಡೆಗೆಂದು ಸ್ಥಾಪಿಸಿದ ಈ ಸಮಿತಿಯು ಬಡವರ ಬದುಕಿನಲ್ಲಿ ಭರವಸೆಯ ಜೀವನವನ್ನು ಸ್ಥಾಪಿಸಿತು.

ಇದರ ಸ್ಥಾಪನೆಯ ನಂತರ ಹರಿಜನರ ಮೇಲೆ ನಡೆಯುವ ದೌರ್ಜನ್ಯ ಕಡಿಮೆಯಾಗದಿದ್ದರೂ ದಲಿತರು ಭೀತಿ ಇಲ್ಲದೇ ಧೈರ್ಯದಿಂದ ಜೀವನ ನಡೆಸುವ ಪ್ರಯತ್ನ ಮಾಡಲು ಅನುವಾಯಿತು. ಭಾರತದ ಇತಿಹಾಸದಲ್ಲಿ ಬೇರೆ ರಾಜ್ಯಗಳಲ್ಲಿ ಇಲ್ಲದ ಈ ಯೋಜನೆಯು ಶ್ರೀ ಎನ್. ರಾಚಯ್ಯನವರಿಗಿದ್ದ ದಲಿತರ ಮೇಲಿನ ಪ್ರೀತಿ – ಅಭಿಮಾನ ಮತ್ತು ವಿಶ್ವಾಸಗಳಿಗೆ ಹಿಡಿದ ಕನ್ನಡಿಯಾಗಿದೆ.

ತಮ್ಮ ಜೀವಿತಾವಧಿಯಲ್ಲಿ ದಲಿತ – ಬಡ ಜನರ ನಡುವೆ ವಾಸಮಾಡುತ್ತಾ ಸದಾ ಅವರ ಸಮಸ್ಯೆಗಳಿಗೆ ಪರಿಹಾರಗಳನ್ನು ಕಂಡುಕೊಳ್ಳುತ್ತಿದ್ದ ಎನ್. ರಾಚಯ್ಯ ಅವರು. ಸಮಯವನ್ನು ವ್ಯರ್ಥವಾಗಿ ಕಳೆದವರಲ್ಲ. ಹಳ್ಳಿಗಾಡಿನ ಜನ ಸಾಮಾನ್ಯರ

ಸಮಸ್ಯೆಗಳನ್ನು ಅರಿತುಕೊಳ್ಳಲು ತಾವು ಸ್ವತಃ ಹಳ್ಳಿಹಳ್ಳಿಗೂ ಭೇಟಿ ನೀಡಿ ಅವರ ಜ್ವಲಂತ ಸಮಸ್ಯೆಗಳಿಗೆ ಪರಿಹಾರವನ್ನು ದೊರಕಿಸಿ ಕೊಡುತ್ತಿದ್ದ ಇವರು ಯಾವುದೇ ಕಾರ್ಯಕ್ಷೇತ್ರದಲ್ಲಿ ಇರಲಿ ಅಲ್ಲಿ ನವ ಆಲೋಚನೆಯ ಬಿರುಗಾಳಿಯನ್ನು ಎಬ್ಬಿಸುತ್ತಿದ್ದರು.

ಸದಾ ದಲಿತ ಜನಾಂಗದವರ ಹಿತಚಿಂತಕರಾಗಿದ್ದ ಎನ್. ರಾಚಯ್ಯ ಅವರು ಸಮಾಜವಾದಿ ಸಿದ್ಧಾಂತಗಳಲ್ಲಿ ನಂಬಿಕೆಯನ್ನಿಟ್ಟಿದ್ದರು. ರಾಮ ಮನೋಹರ ಲೋಹಿಯಾ ಅವರ ತತ್ವ - ಸಿದ್ಧಾಂತಗಳಲ್ಲಿ ನಂಬಿಕೆಯನ್ನಿಟ್ಟಿದ್ದ ಇವರು ಸಮಾಜವಾದಿ ಪಕ್ಷದಲ್ಲಿ ಸ್ಪರ್ಧಿಸಿ ವಿಜಯಶಾಲಿಯಾಗಿದ್ದರು.

1975-76ರ ಇಂದಿರಾ ಗಾಂಧಿಯವರ 20 ಅಂಶಗಳ ಕಾರ್ಯಕ್ರಮವನ್ನು ಕರ್ನಾಟಕದಲ್ಲಿ ಕಾಂಗ್ರೆಸ್‌ನ ಜನಪ್ರಿಯ ಮುಖ್ಯಮಂತ್ರಿ ಶ್ರೀ ದೇವರಾಜು ಅರಸು ಅವರ ಮಂತ್ರಿಮಂಡಲದಲ್ಲಿ ಮಂತ್ರಿಯಾಗಿದ್ದಾಗ ಇನ್ನೂ ಅನೇಕ ಬಡತನ ನಿವಾರಣಾ ಕಾರ್ಯಕ್ರಮಗಳನ್ನು ಸೇರಿಸಿ ಹರಿಜನ - ಗಿರಿಜನರ ಬದುಕಿನಲ್ಲಿ ಹೊಸ ಚೈತನ್ಯವನ್ನು ತುಂಬಿದರು.

ಈ ವೇಳೆಗೆ (1976) ಅವರ ಮೇಲ್ಮನೆ ಸದಸ್ಯತ್ವದ ಅವಧಿ ಮುಗಿದಿದ್ದು, ಇವರ ದಕ್ಷ, ನಿರ್ಭೀತ, ನಿಷ್ಪಕ್ಷಪಾತ ಆಡಳಿತವನ್ನು ಕಂಡಿದ್ದ ಅನೇಕರು ಇವರ ಬಗ್ಗೆ ಹೊಟ್ಟೆಕಿಚ್ಚು ಪಟ್ಟಿದ್ದು ಮತ್ತೆ ಇವರು ಅಧಿಕಾರಕ್ಕೆ ಬಂದರೆ ಕರ್ನಾಟಕದ ದಲಿತರು ಸಾಕಷ್ಟು ಪ್ರಜ್ಞಾವಂತರಾಗುತ್ತಾರೆಂದು ತಿಳಿದು, ಇವರ ಹಿಂದಿನ ಯೋಜನೆಗಳ ಅಪೂರ್ವ ಯಶಸ್ಸನ್ನು ಮುರಿಯಲೆಂದು ಪುನಃ ಇವರನ್ನು ಮೇಲ್ಮನೆ ಸದಸ್ಯರನ್ನಾಗಿ ಮಾಡಲು ರಾಜಕೀಯ ವಲಯದಲ್ಲಿ ಅಸಮ್ಮತಿಯ ಹೊಗೆಯನ್ನು ಹೊರಡಿಸಿದರು.

ಇವರು ಮಂತ್ರಿ ಸ್ಥಾನದಲ್ಲಿದ್ದಾಗ ಮಾಡಿದ ಅನೇಕ ಮಹತ್ತರ ಯೋಜನೆಗಳು ಎಲ್ಲಾ ವರ್ಗದ ಜನರ ಮನದಲ್ಲಿ ಚಿರಸ್ಥಾಯಿಯಾಗಿ ಶಾಶ್ವತವಾಗಿ ಉಳಿಯುವಂತಾಯಿತು. ಇವರ ಅಧಿಕಾರಾವಧಿ ಮುಗಿದ ನಂತರ ಇವರ ಬಳಿಗೆ ಅನೇಕ ಮುಖಂಡರು ಧಾವಿಸಿ ಅವರ ಘನಕಾರ್ಯಗಳ ಬಗ್ಗೆ ಕೊಂಡಾಡಿ ಶ್ಲಾಘನೆ ಮಾಡಿದರು.

ನಂತರ ಇವರ ರಾಜಕೀಯ ಅನುಪಸ್ಥಿತಿ ಹಾಗೂ ಕರ್ನಾಟಕದಲ್ಲಿ ಇವರ ಮಹತ್ತರ ಯೋಜನೆಗಳನ್ನು ಕೇಳಿ ಕಣ್ಣಾರೆ ಕಂಡಿದ್ದ ರಾಷ್ಟ್ರ ನಾಯಕ ಬಾಬು ಜನಜೀವನರಾಂ ಅವರು ಇಂತಹ ಮೇಧಾವಿ ಪುರುಷನನ್ನು ಸುಮ್ಮನಿರಿಸದೇ ದಲಿತ ಜನಾಂಗದ ಅಭಿವೃದ್ಧಿಗೆ ಮತ್ತು ಕರ್ನಾಟಕದ ಏಳಿಗೆಗಾಗಿ ಮತ್ತೆ ಅಣಿಗೊಳಿಸಲು ಸಿದ್ಧರಾದರು.

ಬಾಬೂಜಿ ಅವರು ಶ್ರೀ ಎನ್. ರಾಚಯ್ಯ ಅವರನ್ನು ಭೇಟಿ ಮಾಡಿ (ಕಾಂಗ್ರೆಸ್ ಫಾರ್ ಡೆಮಾಕ್ರಸಿ) 'ಪ್ರಜಾಪ್ರಭುತ್ವಕ್ಕಾಗಿ ಕಾಂಗ್ರೆಸ್' ಎಂಬ ಪಕ್ಷಕ್ಕೆ ರಾಜ್ಯ ಘಟಕದ ಕಾರ್ಯಕಾರಿ ಸಮಿತಿಯ ಸದಸ್ಯ ಮತ್ತು ರಾಜ್ಯ ಘಟಕದ ಅಧ್ಯಕ್ಷರನ್ನಾಗಿ ನೇಮಿಸಿದರು.

♦ **ಪತ್ರಿಕೋದ್ಯಮಿಯಾಗಿ ಎನ್. ರಾಚಯ್ಯ :**

ಎನ್.ರಾಚಯ್ಯನವರು ದಲಿತರ ನೋವಿಗೆ ಸ್ಪಂದಿಸುವ 'ಅಸ್ಪೃಶ್ಯತಾ ವಿರೋಧಿ ವೇದಿಕೆ' ಎಂಬ ಪಾಕ್ಷಿಕ ಪತ್ರಿಕೆಯನ್ನು ಪ್ರಾರಂಭಿಸಿ ರಾಜ್ಯಾಂಗದತ್ತವಾಗಿ ಹರಿಜನ – ಗಿರಿಜನರಿಗೆ ಸಿಗುವ ಸೌಲಭ್ಯಗಳನ್ನು ಸರ್ಕಾರದ ಮತ್ತು ಸಾರ್ವಜನಿಕರ ಗಮನಕ್ಕೆ ಪತ್ರಿಕೆಯ ಮೂಲಕ ತರುತ್ತಿದ್ದರು. ತನ್ಮೂಲಕ ದಲಿತ ವರ್ಗದಲ್ಲಿ ಜನರು ತಮ್ಮ ತಮ್ಮ ಹಕ್ಕುಗಳ ರಕ್ಷಣೆಗಾಗಿ ಹೋರಾಡಬೇಕೆಂಬ ಮನೋಭಾವನೆಯನ್ನು ಜನರಲ್ಲಿ ಬೆಳೆಸಿದರು.

ನಂತರ ಸ್ಪೃಶ್ಯರನ್ನು – ಅಸ್ಪೃಶ್ಯರ ಪಟ್ಟಿಯಿಂದ ತೆಗೆದು ಹಾಕಬೇಕೆಂದು ಪ್ರಜಾಪ್ರಭುತ್ವದ ಪ್ರತಿಭಟನಾ ವಿಧಾನಗಳಾದ ಕಪ್ಪು ಬಾವುಟ ಪ್ರದರ್ಶನ, ಪ್ರತಿಭಟನೆ, ಧರಣಿ, ಸತ್ಯಾಗ್ರಹಗಳ ಮೂಲಕ ಕರ್ನಾಟಕ ವಿಧಾನಸೌಧದ ಮುಂದೆ ಸತ್ಯಾಗ್ರಹವನ್ನು ನಡೆಸಿದರು. ಇಂತಹ ಮಾನವೀಯ ಸಾಮಾಜಿಕ [illegible]ತೆಯ ಹೋರಾಟಕ್ಕೆ ಯಾವುದೇ ದಲಿತ ಸಂಘಟನೆಗಳು ಮತ್ತು ದಲಿತ ಮುಖಂಡರು [illegible]ಂಬಲ ವ್ಯಕ್ತಪಡಿಸದಿದ್ದರೂ ಒಂಟಿಯಾಗಿ ಧೈರ್ಯದಿಂದ ಹೋರಾಟ ನಡೆಸಿದ ಕೆಚ್ಚೆದೆಯ ಎನ್. ರಾಚಯ್ಯ ಅವರು ಸರ್ಕಾರದ ಪೋಲೀಸರಿಂದ ದಸ್ತಗಿರಿಯಾದರು.

ಇವೆಲ್ಲದರ ಶ್ರಮದಿಂದಾಗಿ ಅವರು ರೂಪಿಸಿದ ಯೋಜನೆಗಳು ಮತ್ತು ಹಾಕಿಕೊಟ್ಟ ಕಾರ್ಯಕ್ರಮಗಳು ಭೂತ, ಭವಿಷ್ಯತ್ ಮತ್ತು ವರ್ತಮಾನಗಳಿಗೂ

ಅತ್ಯಂತ ಪ್ರಸ್ತುತವಾಗಿದ್ದು ಯುವ ಪೀಳಿಗೆಯ ಉದ್ಧಾರಕ್ಕೆ ಸಹಾಯಕವಾಗಿದೆ. 15 – 16 ವರ್ಷಗಳ ದೀರ್ಘಕಾಲ ರಾಷ್ಟ್ರ ಮತ್ತು ರಾಜ್ಯ ರಾಜಕಾರಣದಲ್ಲಿ ತನ್ನನ್ನು ತೊಡಗಿಸಿಕೊಂಡು ತನ್ನ ಜೀವನವನ್ನು ಬಡವರು ದಲಿತರು ಹಿಂದುಳಿದ ವರ್ಗಗಳ ಜೀವನೋದ್ಧಾರಕ್ಕೆ ಮುಡಿಪಾಗಿಟ್ಟ ಎನ್. ರಾಚಯ್ಯ ಅವರು ಕರ್ನಾಟಕದ ಹೆಮ್ಮೆಯ ಪುತ್ರ.

ರಾಷ್ಟ್ರ ರಾಜಕಾರಣದಲ್ಲಿ ಸಕ್ರಿಯವಾಗಿ ಪಾಲ್ಗೊಂಡು ನಂತರ ರಾಜ್ಯದ ರಾಜಕೀಯಕ್ಕೆ ಕಾಲಿರಿಸಿದ ಶ್ರೀ ಎನ . ರಾಚಯ್ಯ ಅವರು ತಮ್ಮ ದಿಟ್ಟ ನಿಲುವಿನ ಆಕರ್ಷಕ ವ್ಯಕ್ತಿತ್ವ, ದೂರದರ್ಶಿತತ್ವ, ಮಾನವತಾಗುಣ, ಅನ್ಯಾಯವನ್ನು ಕಂಡು ಮೆಟ್ಟಿನಿಲ್ಲುವ ಗುಣಗಳಿಂದ ಅನೇಕರನ್ನು ತಮ್ಮೆಡೆಗೆ ಆಕರ್ಷಿಸಿಕೊಂಡು ಸುಮಾರು 17 ವರ್ಷಗಳ ದೀರ್ಘ ಸೇವೆಯಲ್ಲಿ ಎಂದೂ ಎಚ್ಚರ ತಪ್ಪಿ ನಡೆಯದೇ ತಮ್ಮ ನಾಡಿನವರ ಏಳಿಗೆಗಾಗಿ ಶೋಷಿತ ಜನರ ಸಮಾನ ಬದುಕಿಗಾಗಿ ಜೀವನ ನಡೆಸಿದ ಧೀಮಂತ ವ್ಯಕ್ತಿಯಾಗಿದ್ದರು.

ಬಡತನದ ಬೇಗೆಯಲ್ಲಿ ಬೆಳೆದು ಬಂದ ಎನ್. ರಾಚಯ್ಯ ಅವರು ತನ್ನ ಪತ್ನಿ ಕೊಟ್ಟ ಮಾತಿನಂತೆ ಜೀವನದಲ್ಲಿ ಅಸಾಧ್ಯ ಎಂಬುದನ್ನು ಸಾಧಿಸಿ ತೋರಿಸಿದ ಛಲವಾದಿ ಮತ್ತು ಪಟ್ಟು ಬಿಡದ ವ್ಯಕ್ತಿ. ದೀನ ದಲಿತರ ಸೇವೆಗಾಗಿ ತಮ್ಮ ತನು – ಮನ – ಧನವನ್ನೇ ಅರ್ಪಣೆ ಮಾಡಿಕೊಂಡಿದ್ದ ಶ್ರೀ ಎನ್. ರಾಚಯ್ಯ ಅವರು ಸಕ್ರೀಯ ರಾಜಕೀಯದಿಂದ ದೂರವಾಗಿ ತಮ್ಮ ವಿಶ್ರಾಂತಿ ಜೀವನವನ್ನು ತಮ್ಮ ಹುಟ್ಟೂರಾದ ಟಿ. ನರಸೀಪುರದಲ್ಲಿ ನಡೆಸತೊಡಗಿದರು.

♦ **ಅಂತಿಮ ಬದುಕು :**

ಅವಿರತವಾದ ಸಮಾಜ ಸೇವೆಯಲ್ಲಿ ಸಾಕಷ್ಟು ದಣಿದಿದ್ದ ಶ್ರೀ ಎನ್. ರಾಚಯ್ಯ ಅವರು ಅನಾರೋಗ್ಯಕ್ಕೆ ತುತ್ತಾದರು. ಇವರನ್ನು ಬೆಂಗಳೂರಿನ ಮಣಿಪಾಲ ಆಸ್ಪತ್ರೆಗೆ ಚಿಕಿತ್ಸೆಗಾಗಿ ಸೇರಿಸಲಾಯಿತು. ಇಂತಹ ಸಂದರ್ಭದಲ್ಲಿಯೂ ಸಹ ತಮ್ಮನ್ನು ಭೇಟಿ ಮಾಡಲು ಬರುತ್ತಿದ್ದವರಲ್ಲಿ ದಲಿತರ ಬಗ್ಗೆ ಅನುಕಂಪ ಪ್ರೀತಿಯನ್ನು ತೋರಬೇಕೆಂದು ಬೇಡಿಕೊಳ್ಳುತ್ತಿದ್ದರು. ನಿದ್ರಾವಸ್ಥೆಯಲ್ಲಿರುವ ಜನರಿಗೆ ತಿಳುವಳಿಕೆ ನೀಡಲು ಪ್ರಯತ್ನಿಸಬೇಕೆಂದು ಸಲಹೆ ನೀಡಿದರು.

ಇವರ ಅನಾರೋಗ್ಯದ ವಿಷಯ ತಿಳಿದ ರಾಷ್ಟ್ರೀಯ, ರಾಜ್ಯ ನಾಯಕರಾದಿಯಾಗಿ ಅಸಂಖ್ಯಾತ ಅಭಿಮಾನಿಗಳು ಆಗಮಿಸತೊಡಗಿದರು.

ಕೊನೆಗೆ ದಲಿತರ ಧ್ವನಿಯಾಗಿದ್ದ ಶ್ರೀ ಎನ್. ರಾಚಯ್ಯ ಅವರು ದಿನಾಂಕ 22 ಏಪ್ರಿಲ್ 1989ರಲ್ಲಿ ಅಸ್ತಂಗತರಾದರು. ಆದರೆ ಅವರ ಆಶಯಗಳು ಇಂದಿಗೂ ಧ್ವನಿಸುತ್ತಿವೆ.

**ಎನ್. ರಾಚಯ್ಯನವರ ಕುಟುಂಬದ ರಾಜಕೀಯ ನಡೆ:**

ಬಡತನದಲ್ಲಿ ಬೆಳೆದು ಕುಗ್ರಾಮದಿಂದ ಬಂದ ರಾಚಯ್ಯನವರ ಇಡೀ ಕುಟುಂಬ ರಾಜಕೀಯಕ್ಕೆ ಮುಡಿಪಾದ ಸಂಸಾರ. ಇವರ ತಮ್ಮ ಟಿ.ಎನ್. ನರಸಿಂಹಮೂರ್ತಿಯವರು 1970 ರಿಂದ 2000ರವರೆಗೆ 30 ವರ್ಷಗಳ ಕಾಲ ಸತತವಾಗಿ ವಿಧಾನಪರಿಷತ್ ಸದಸ್ಯರಾಗಿ ಸೇವೆ ಸಲ್ಲಿಸಿದರು. ನಂತರ "ವೈ. ರಾಮಕೃಷ್ಣರವರು 24 ವರ್ಷ ಎಂ.ಎಲ್.ಎ. ಮತ್ತು 2 ವರ್ಷ ಎಂ.ಪಿ. ಆಗಿದ್ದರು. ಚಿಕ್ಕಸಿದ್ದಯ್ಯ ಅವರ ಮಗ ಸಿ. ರಮೇಶ್ ಅವರು ಎಂ.ಎಲ್.ಸಿ. ಹಾಗೂ ಬೋರ್ಡ್ ಕಾರ್ಪೋರೇಷನ್‌ನ ಛೇರ್ಮನ್ ಆಗಿದ್ದರು. ಮಂಜುನಾಥ್‌ರವರೂ ಸಹ ಎಂ.ಎಲ್.ಸಿ. ಆಗಿ ಸೇವೆ ಸಲ್ಲಿಸಿದ್ದಾರೆ. ವಿವಿಧ ರಾಜಕೀಯ ಪಕ್ಷಗಳಲ್ಲಿ ತೊಡಗಿಸಿಕೊಂಡಿರುವುದನ್ನು ಗಮನಿಸಿದರೆ ಈ ಕುಟುಂಬವು ವಿವಿಧತೆಯಲ್ಲಿ ಏಕತೆಯ ಪ್ರತೀಕ ಎನಿಸುತ್ತಿದೆ.

ಈಗ ರಾಚಯ್ಯನವರ ಮಗನಾದ ಆರ್. ಧರ್ಮಸೇನರವರು ಜಿಲ್ಲಾ ಕಾಂಗ್ರೆಸ್ ಅಧ್ಯಕ್ಷರಾಗಿ 12 ವರ್ಷ, ಪ್ರಸ್ತುತ ಒಂದು ವರ್ಷದಿಂದ ಎಂ.ಎಲ್.ಸಿ ಆಗಿ ಸೇವೆ ಸಲ್ಲಿಸುತ್ತಿದ್ದಾರೆ. ಒಂದೇ ಕುಟುಂಬದ, ಒಂದೇ ರಕ್ತವನ್ನು ಹಂಚಿಕೊಂಡು ಜನಿಸಿದ ಎನ್. ನರಸಿಂಹಯ್ಯನವರ ಮಕ್ಕಳು ಹಾಗೂ ಮೊಮ್ಮಕ್ಕಳು 50 ವರ್ಷಗಳಿಂದ ರಾಜಕೀಯ ಶಕ್ತಿ ಕೇಂದ್ರವಾದ ವಿಧಾನಪರಿಷತ್‌ನಲ್ಲಿ ಮತ್ತು ಕಾಂಗ್ರೆಸ್ ಪಕ್ಷಕ್ಕಾಗಿ ನಿರಂತರ ಸೇವೆಯನ್ನು ಸಲ್ಲಿಸಿಕೊಂಡು ಬಂದಿದ್ದಾರೆ. ಈ ಕುಟುಂಬದ ಮತ್ತೊಂದು ವಿಶೇಷವೆಂದರೆ 50 ವರ್ಷದಲ್ಲಿ ಯಾವ ಆಪಾದನೆಗಳಿಲ್ಲದೆ ಸ್ವಚ್ಛ – ಸತ್ಯದ ಹಾದಿಯಲ್ಲಿ ಜನಸೇವೆಯಲ್ಲಿ ನಿರತರಾಗಿದ್ದಾರೆ. ಈ ವಿಶಾಲ ಮನೋಭಾವವೇ ಇಂದಿಗೂ ರಾಜಕೀಯದಲ್ಲಿ ಉಳಿಯಲು ಸಾಧ್ಯವಾಗಿರುವುದು! ಅದೇ ಈ ಕುಟುಂಬದ ಯಶಸ್ಸು.

ವಿಭಾಗ – ಎರಡು

# ಎನ್. ರಾಚಯ್ಯ ಅವರ ವಿಧಾನಸಭೆಯ ವಾಗ್ವಾದಗಳು

- ಹರಿಜನ ಅಭ್ಯುದಯಕ್ಕಾಗಿ ನಡೆದ ವಾಗ್ವಾದಗಳು
- ಸಮಾಜ ಕಲ್ಯಾಣ ಇಲಾಖೆ ಬೇಡಿಕೆ ಮೇಲಿನ ಸಂವಾದಗಳು
- ಭೂಸ್ವಾಧೀನ ಪ್ರಕ್ರಿಯೆಗೆ ಸಂಬಂಧಿಸಿದ ಚಿಂತನೆಗಳು
- ಆಡಳಿತದಲ್ಲಿ ಮೀಸಲಾತಿ ಕುರಿತ ಚರ್ಚೆಗಳು
- ಮೀನುಗಾರಿಕೆ ಅಭಿವೃದ್ಧಿ ಬೇಡಿಕೆ ಮೇಲಿನ ಸಂವಾದಗಳು
- ವ್ಯವಸಾಯ ಪ್ರಗತಿ ಕುರಿತಾದ ನಿಲುವುಗಳು
- ಸಾರ್ವಜನಿಕ ಅಭಿವೃದ್ಧಿಗಳು
- ಬೀಳು ಭೂಮಿಯನ್ನು ಉಳುಮೆಗೆ ತಂದಿಲ್ಲವೆಂಬ ವಿವಾದಗಳು
- ರೈತ ಕಾರ್ಮಿಕ ಮಸೂದೆ ಜಾರಿ ಕುರಿತಾದ ಚರ್ಚೆಗಳು
- ವ್ಯವಸಾಯಬಾಬಿನಲ್ಲಿ ರೈತರಿಗೆ ಅನುಕೂಲತೆ ಮೇಲಿನ ಚಿಂತನೆಗಳು
- ಕೃಷಿ ಕಾಲೇಜು ಸ್ಥಾಪನೆ ಮೇಲಿನ ಪರ ವಿರೋಧ ನಿಲುವುಗಳು
- ಪಂಚವಾರ್ಷಿಕ ಯೋಜನೆಯಲ್ಲಿ ಕೃಷಿ ಮತ್ತು ಆಹಾರ ಉತ್ಪಾದನೆಯಲ್ಲಿ ಗಣನೀಯ ಪ್ರಗತಿ ಕುರಿತು ಚರ್ಚೆಗಳು
- ಅಸ್ಪೃಶ್ಯತೆಯ ಮಸೂದೆ : ಎನ್.ರಾಚಯ್ಯನವರ ಕಾಳಜಿ

## ಎನ್. ರಾಚಯ್ಯ ಅವರ ವಿಧಾನಸಭೆಯ ವಾಗ್ವಾದಗಳು

ಭಾರತದ ಸಂವಿಧಾನದಡಿಯಲ್ಲಿ ಕೆಲಸ ನಿರ್ವಹಿಸುತ್ತಿರುವ ರಾಜ್ಯ ಸರ್ಕಾರಗಳು ವಿಧಾನಸಭೆ ಮತ್ತು ವಿಧಾನ ಪರಿಷತ್ ಮೂಲಕ ಅಧಿವೇಶನಗಳನ್ನು ನಡೆಸಿ ರಾಜ್ಯದ ಹಿತವನ್ನು ಕಾಪಾಡುವುದು ಮೂಲಭೂತ ಕರ್ತವ್ಯವಾಗಿದೆ. ಅಧಿವೇಶನದ ಸಂದರ್ಭದಲ್ಲಿ ಪ್ರಶ್ನೆಗಳ ಮೂಲಕ, ಗೊತ್ತುವಳಿ ಹಾಗೂ ಇತರ ಸಾಧನೆಗಳ ಮೂಲಕ ಸರ್ಕಾರದ ಆಗು – ಹೋಗುಗಳನ್ನು ಚರ್ಚಿಸುವ ಹಾಗೂ ಪರಿಹಾರ ಕಂಡುಕೊಳ್ಳುವುದು ಅಧಿವೇಶನಗಳ ಮೂಲ ಆಶಯ.

ಮಸೂದೆಗಳ ಕರಡುಗಳನ್ನು ರೂಪಿಸುವ, ಮಂಡಿಸುವ, ಒಪ್ಪಿಗೆ ಪಡೆಯುವ ಅಂಗೀಕಾರಗೊಳಿಸುವ ನೆಲೆಯಲ್ಲಿ ಕಲಾಪಗಳು, ವಾಗ್ವಾದಗಳ ವೇದಿಕೆಗಳಾಗಿರುತ್ತವೆ. ರಾಜ್ಯದ ಹಿತದೃಷ್ಟಿಯಿಂದ ಶಾಸಕರು ಈ ವಾಗ್ವಾದಗಳಲ್ಲಿ ಸಕ್ರಿಯವಾಗಿ ಭಾಗವಹಿಸಿ ಪ್ರಜೆಗಳ ಅನುಕೂಲಕ್ಕಾಗಿ ಕಾನೂನು ರೂಪಿಸಬೇಕಾಗಿರುವುದರಿಂದ ಸದನದ ಚರ್ಚೆಗಳು ಬಹುಮುಖ್ಯ ಭಾಗಗಳು. ಎನ್. ರಾಚಯ್ಯನವರು ಈ ವಾಗ್ವಾದಗಳಲ್ಲಿ ಸಕ್ರಿಯ ರಾಜಕಾರಣಿಯಾಗಿ ಭಾಗವಹಿಸಿ ಪ್ರಜೆಗಳ ಹಿತಕ್ಕಾಗಿ, ಶೋಷಿತರ, ಬಡವರ, ರೈತರ ಪರವಾಗಿ, ರಾಜ್ಯದ ಅಭಿವೃದ್ಧಿಗಾಗಿ ತಮ್ಮ ನಿಲುವುಗಳನ್ನು ವ್ಯಕ್ತಪಡಿಸಿರುವುದನ್ನು ಈ ಭಾಗದಲ್ಲಿ ಗಮನಿಸಿಕೊಳ್ಳಬಹುದು.

## ♦ ಹರಿಜನ ಅಭ್ಯುದಯಕ್ಕಾಗಿ ನಡೆದ ವಾಗ್ವಾದಗಳು

**ಎನ್. ರಾಚಯ್ಯನವರು ಸದನದಲ್ಲಿ ಸದ್ದು ಮಾಡುತ್ತಾ ಸಂಸತ್ ಪಟು ಎನಿಸಿಕೊಂಡವರು. ದಲಿತರ ಸಮಸ್ಯೆಗಳನ್ನು ಗಮನಿಸಿ ಪರಿಹಾರ ಮಾಡುವತ್ತ ಸದನದಲ್ಲಿ ಚರ್ಚೆಯಲ್ಲಿ ಪಾಲ್ಗೊಂಡು ಯು.ಎಂ. ಮಾದಪ್ಪ, ಜಿ.ಎಸ್. ಪುಟ್ಟಣ್ಣ, ರೇವಣ ಸಿದ್ದಪ್ಪ, ಸಿ.ಕೆ. ರಾಜಯ್ಯ ಶೆಟ್ಟಿ, ಎ. ಮುನಿಯಪ್ಪ, ಕಡಿದಾಳ್ ಮಂಜಪ್ಪ, ಸುಬ್ಬಯ್ಯ ನಾಯಕ್, ಇವರುಗಳೊಂದಿಗೆ ನಡೆಸಿದ ವಿಚಾರಪೂರಿತ ಸಂವಾದ ಇದು.**

**ಶ್ರೀ ಯು.ಎಂ. ಮಾದಪ್ಪ :** ಎಷ್ಟು ಸಂಸಾರಗಳಿಗೆ ಆರ್ಥಿಕ ಸಹಾಯವನ್ನು ಕೊಡಬೇಕೆಂದು ಯೋಚನೆ ಮಾಡಿದ್ದೀರಿ?

**ಶ್ರೀ ಎನ್.ರಾಚಯ್ಯ :** 32 ಸಂಸಾರಗಳಿಗೆ

**ಶ್ರೀ ಯು.ಎಂ ಮಾದಪ್ಪ :** ಎಷ್ಟು ಸಂಸಾರಗಳಿಗೆ ಈ ಕಾಲೋನಿಯನ್ನು ಮಾಡಲಾಗಿದೆ?

**ಶ್ರೀ ಎನ್.ರಾಚಯ್ಯ :** 33 ಸಂಸಾರಗಳಿಗೆ

**ಶ್ರೀ ಯು.ಎಂ. ಮಾದಪ್ಪ :** ಈವರೆವಿಗೂ ಅವರು ಆ ಕಾಲೋನಿಗೆ ಹೋಗದಿರಲು ಕಾರಣಗಳೇನು?

**ಶ್ರೀ ಎನ್.ರಾಚಯ್ಯ :** ಅವರಿಗೆ ಜಾಗವನ್ನು ಇನ್ನೂ ಖಾಯಂ ಮಾಡಿಲ್ಲ. ಆದ್ದರಿಂದ ಇನ್ನೂ ಅವರು ಹೋಗಿಲ್ಲ.

**ಶ್ರೀ ಜಿ.ಎಸ್. ಪುಟ್ಟಣ್ಣ :** ಹಾಗಾದರೆ ಈಗ ಪ್ರತಿಯೊಂದು ಕುಟುಂಬಕ್ಕೂ ಆರ್ಥಿಕ ಸಹಾಯವನ್ನು ಏತಕ್ಕೋಸ್ಕರ ಕೊಟಿದ್ದೀರಿ?

**ಶ್ರೀ ಎನ್.ರಾಚಯ್ಯ :** 1947–48ರಲ್ಲಿ ಅಧಿಕ ಆಹಾರ ಬೆಳೆಯಿರಿ ಯೋಜನೆ ಪ್ರಕಾರವಾಗಿ ಅವರಿಗೆ ಜಮೀನು ಕೊಟ್ಟಿತು. ಅದನ್ನೀಗ ಅವರಿಗೆ ಇನ್ನೂ ಖಾಯಂ ಮಾಡಲಿಲ್ಲ. ಖಾಯಂ ಮಾಡಿದ ಮೇಲೆ ಅವರು ಅಲ್ಲಿಗೆ ಹೋಗುತ್ತಾರೆ.

**ಶ್ರೀ ಜಿ.ಎಸ್.ಪುಟ್ಟಣ್ಣ** : ಹೋಗಬೇಕು ಎಂದು ನೀವೆ ಹೇಳುತ್ತಿರುವಾಗ ಬೇರೆ ಜನಗಳನ್ನು ಅಲ್ಲಿ ಏಕೆ ಸೇರಿಸುವುದಿಲ್ಲ?

**ಶ್ರೀ ಎನ್.ರಾಚಯ್ಯ** : ಹರಿಜನರು ಎಲ್ಲೆಲ್ಲಿ ಇದ್ದಾರೋ ಅಲ್ಲಿ ನಾನ್‌ಹರಿಜನ್ಸ್ ಸೇರಿಸಬೇಕಾದುದೇ ನಮ್ಮ ಪಾಲಿಸಿ. ಅನ್‌ಟಚಬಿಲಿಟಿಯೂ ಹೋಗಬೇಕು, ಟಚಬಿಲಿಟಿ ಬರಬೇಕು. ಅವರೊಡನೆ ಎಲ್ಲಾ ಜನಗಳು ಸೇರಿರಬೇಕೆಂದು ಅವರೇ ಒಪ್ಪಿಕೊಂಡಿದ್ದಾರೆ.

**ಶ್ರೀ ಜಿ.ಎಸ್.ಪುಟ್ಟಣ್ಣ** : ಏತಕ್ಕೋಸ್ಕರ ಅದನ್ನು ಇನ್ನೂ ಅಲ್ಲಿ ಜಾರಿ ಮಾಡಲಿಲ್ಲ? ಈಗ ರಾಜ್ಯದಲ್ಲಿ ಕೊರಚರು, ಕೊರಮರು, ಬುಡುಬುಡುಕೆಯವರು ಇತ್ಯಾದಿ ಜನಗಳು ಎಲ್ಲರೂ ಇದ್ದಾರೆ. ಅವರನ್ನು ಏಕೆ ಸೇರಿಸುವುದಿಲ್ಲ?

**ಶ್ರೀ ಎನ್.ರಾಚಯ್ಯ** : ಇದು ಕೇಂದ್ರ ಸರ್ಕಾರದವರ ಯೋಜನೆ. ಷೆಡ್ಯೂಲ್ಡ್‌ಕಾಸ್ಟ್ ಮತ್ತು ಷೆಡ್ಯೂಲ್ಡ್ ಟ್ರೈಬ್ಸ್ ಅವರ ಅಭಿವೃದ್ಧಿಗಾಗಿ ಬೇಕಾದಷ್ಟು ಹಣವನ್ನು ಕೊಡುತ್ತಿದ್ದಾರೆ. ಪ್ರತಿಯೊಂದು ರಾಜ್ಯದಲ್ಲೂ ಈ ಸ್ಕೀಂ ಮಾಡಬೇಕೆಂದಿದ್ದಾರೆ. ಈ ಸರ್ಕಾರ ಆ ಬಗ್ಗೆ ಇನ್ನೂ ಯಾವ ಸ್ಕೀಮನ್ನು ಮಾಡಿಲ್ಲ. ಮುಂದೆ ಮಾಡಬೇಕೆಂಬ ಯೋಚನೆಯನ್ನು ಮಾಡುತ್ತಿದ್ದೇವೆ.

**ಶ್ರೀ ಜಿ.ಎಸ್.ಪುಟ್ಟಣ್ಣ** : ಕೇಂದ್ರದವರು ಏನಾದರೂ ಬೇರೆ ಜನಗಳನ್ನು ಇವರೊಂದಿಗೆ ಸೇರಿಸಬೇಡಿ ಎಂದು ಹೇಳಿದ್ದಾರೋ?

**ಶ್ರೀ ಎನ್.ರಾಚಯ್ಯ** : ಅವರು ಸೇರಿಸಬೇಡಿ ಎಂದೂ ಹೇಳಲಿಲ್ಲ. ನಾವೂ ಸೇರಿಸುವುದಿಲ್ಲವೆಂದು ಹೇಳಲಿಲ್ಲ. ಅವರು ನನಗೆ ಯಾವ ರೀತಿ ಆದೇಶವನ್ನು ಕಳುಹಿಸಿದ್ದಾರೋ ಆ ರೀತಿ ನಾವು ಮಾಡುತ್ತಿದ್ದೇವೆ.

**ಶ್ರೀ ಕೆ.ಪಿ ರೇವಣ ಸಿದ್ದಪ್ಪ** : ಜಮೀನು ಇಲ್ಲದೆ ಕಾಲೋನಿ ಮಾಡುವುದು ಅಂದರೆ ಏನರ್ಥ ಮತ್ತು ಜಮೀನನ್ನು ಯಾರಿಗೆ ಕೊಡಬೇಕೊ ಅವರಿಗೆ ಕೊಡದೆ ಇರತಕ್ಕಂಥ ಕಾಲೋನಿಯನ್ನು ಮಾಡುವ ಉದ್ದೇಶವೇನು?

**ಶ್ರೀ ಎನ್.ರಾಚಯ್ಯ** : ಉದ್ದೇಶವೇನೆಂದರೆ, 1947-48ರಲ್ಲಿ ಹೆಚ್ಚಿಗೆ ಆಹಾರ ಪದಾರ್ಥಗಳನ್ನು ಬೆಳೆಯಬೇಕೆಂಬ ಅಭಿಪ್ರಾಯದಿಂದ ಅವರಿಗೆ ಆ ಜಮೀನುಗಳನ್ನು ಹಂಗಾಮಿಯಾಗಿ ಕೊಟ್ಟಿದೆ. ಈಗ ಆ ಜಮೀನುಗಳನ್ನು

ಖಾಯಂ ಮಾಡುವುದು ಒಂದು. ಎರಡನೆಯದು ಅಲ್ಲಿ ಮನೆಗಳು, ಬಾವಿ ಕಮ್ಯೂನಿಟಿ ಹಾಲ್, ಇವೆಲ್ಲಾ ಕಟ್ಟಿದ ಮೇಲೆ ಅವರೆಲ್ಲರೂ ಅಲ್ಲಿಗೆ ಹೋಗಬೇಕು ಎಂಬುದು ಆ ಸೌಕರ್ಯಗಳು ಆದ ಕೂಡಲೇ ಬಹು ಜಾಗ್ರತೆಯಾಗಿ ಅವರೆಲ್ಲರೂ ಅಲ್ಲಿ ಹೋಗಿ ನೆಲೆಸುವಂತೆ ಮಾಡಿ ಆ ಕಾಲೋನಿಯನ್ನು ಸಂಪೂರ್ಣವಾಗಿ ಸ್ಥಾಪನೆ ಮಾಡುತ್ತೇವೆ.

**ಶ್ರೀ ಸಿ.ಕೆ.ರಾಜಯ್ಯ ಶೆಟ್ಟಿ** : ಸಂಸ್ಥಾನದ ಅನೇಕ ಭಾಗಗಳಲ್ಲಿ ಜಮೀನು ಖಾಯಂ ಮಾಡುವ ಕ್ರಮದಲ್ಲಿ ನಿಧಾನವಾಗಿ ಬಹಳ ತೊಂದರೆಯಾಗಿರುವುದರಿಂದ, ಬೇಗ ಖಾಯಂ ಮಾಡುತ್ತೀರಾ.

**ಶ್ರೀ ಎನ್.ರಾಚಯ್ಯ** : ಮಾಡುತ್ತೇವೆ.

**ಶ್ರೀ ಸಿ.ಕೆ.ರಾಜಯ್ಯ ಶೆಟ್ಟಿ**: 1947ರಿಂದ 1961ರವರೆಗೂ ಮಾಡಿಲ್ಲ. 14 ವರ್ಷಗಳಾದರೂ ಮಾಡಿಲ್ಲವೆಂದು ಹೇಳಿದರೆ, ಜನರಿಗೆ ನಿರಾಶೆ ಉಂಟಾಗುವುದಿಲ್ಲವೇ?

**ಶ್ರೀ ಎನ್.ರಾಚಯ್ಯ** : ಜಾಗ್ರತೆಯಾಗಿ ಜಮೀನನ್ನು ಹಂಗಾಮಿಯಾಗಿ ಕೊಟ್ಟಿದೆಯೆಂದು ತಿಳಿಸಿದ್ದೀರಿ. ಅಂದರೆ ಇನ್ನೂ ಡಾಟಾರಿಸರ್ವ್ ರಿಲೀಸ್ ಆಗದೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ?

**ಶ್ರೀ ಎನ್.ರಾಚಯ್ಯ** : ರಿಲೀಸ್ ಆಗಬೇಕು ಎಂದು ಜ್ಞಾಪಕವಿದೆ. Subject to verification.

**ಶ್ರೀ ಬಿ ರಾಚಯ್ಯ** : ಜನ ಅಲ್ಲಿ ವಾಸ ಮಾಡುವುದಕ್ಕೆ ಹೋಗದೆ ನಿಂತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ?

**ಶ್ರೀ ಎನ್.ರಾಚಯ್ಯ** : ಅದು ವಾಸ್ತವವಾದದ ವಿಚಾರ.

**ಶ್ರೀ ಎ.ಮುನಿಯಪ್ಪ** : ಸರ್ಕಾರದವರ ರೂಲ್ಸ್ ಪ್ರಕಾರ ಎಲ್ಲೆಲ್ಲಿ ಜಮೀನುಗಳನ್ನು ಹಂಗಾಮಿಯಾಗಿ ಕೊಟ್ಟಿದ್ದೀರೋ, ಅಲ್ಲಿ ಅವುಗಳನ್ನು ಖಾಯಂ ಮಾಡಬೇಕೆಂದು ಸರ್ಕಾರದವರು ಆರ್ಡರ್ ಹೊರಡಿಸಿರುವುದು ನಿಜವೇ?

**ಶ್ರೀ ಕಡಿದಾಳ್ ಮಂಜಪ್ಪ (ರೆವಿನ್ಯೂ ಮಂತ್ರಿಗಳು)** : ಲಿಬರಲ್ ಆಗಿ ಗವರ್ನಮೆಂಟ್ ಆರ್ಡರ್ ಹೊರಡಿಸಿದ್ದೇವೆ.

**ಶ್ರೀ ಎ.ಮುನಿಯಪ್ಪ** : ಗವರ್ನಮೆಂಟ್ ಆರ್ಡರ್ ಅನುಸರಿಸಿ ಕಾಲೋನಿಗಳನ್ನು ಮಾಡಿರುವ ಕಡೆ ಜಮೀನು ಖಾಯಂ ಮಾಡಿಕೊಡುತ್ತೀರಾ?

**ಶ್ರೀ ಕಡಿದಾಳ್ ಮಂಜಪ್ಪ** : ಯಾವ ಸಂದರ್ಭದಲ್ಲಿ ಕಾಲೋನಿ ಮಾಡಿ ಜಾಗ ಕೊಟ್ಟಿದ್ದಾರೆನ್ನುವುದು ಗೊತ್ತಿಲ್ಲ. ಸರ್ಕಾರ ಪರಿಶೀಲನೆ ಮಾಡಬೇಕು.

**ಶ್ರೀ ಎಸ್.ಸುಬ್ಬಯ್ಯ ನಾಯಕ್** : ಅನಚವಾಡಿ ಹರಿಜನರ ಕಾಲೋನಿಯಲ್ಲಿ ಯಾವ ಕುಟುಂಬವು ಹೋಗಿ ನೆಲೆಸಿಲ್ಲವೆಂದು ಹೇಳಿದ್ದೀರಿ. ಯಾವಾಗ ಹೋಗುತ್ತಾರೆ? ಸಬ್ಸಿಡಿ ಕೊಟ್ಟಿಲ್ಲವೇ?

**ಶ್ರೀ ಕಡಿದಾಳ್ ಮಂಜಪ್ಪ** : ಜಾಗ ಇದೆ. ಮನೆ ಕಟ್ಟಿದ ಮೇಲೆ ಜಮೀನು ಖಾಯಂ ಮಾಡಿ ಸಂಸಾರ ಕಳುಹಿಸಿಕೊಡುತ್ತಾರೆ.

## ♦ ಸಮಾಜ ಕಲ್ಯಾಣ ಇಲಾಖೆ ಬೇಡಿಕೆ ಮೇಲಿನ ಸಂವಾದಗಳು :

**ಸದನದಲ್ಲಿ ಮಾತನಾಡುವುದೆಂದರೆ ಆ ರಾಜಕಾರಣಿ ಸಾಮಾಜಿಕ, ರಾಜಕೀಯ, ಎಚ್ಚರ ಮತ್ತು ಅರಿವು ಹೊಂದಿರುವುದರ ಸಂಕೇತ. ಎನ್. ರಾಚಯ್ಯ ಅವರು ಸಮಾಜ ಕಲ್ಯಾಣ ಇಲಾಖೆಯ ಸಚಿವರಾಗಿ, ಆ ಕ್ಷೇತ್ರದ ಅಭಿವೃದ್ಧಿಗಾಗಿ, ಮಂಡಿಸಿದ ಚಿಂತನೆಗಳು ಇಲ್ಲಿವೆ. ಶ್ರೀ ಎಂ. ಮಲ್ಲಿಕಾರ್ಜುನಸ್ವಾಮಿಯವರ, ಅಭಿಪ್ರಾಯಗಳಿಗೆ ಸಹಸ್ಪಂದನೆ, ಸ್ವಅಭಿಪ್ರಾಯಗಳನ್ನು ಸಮಾಜದ ಹಿತದೃಷ್ಟಿಯಿಂದ ಇಲ್ಲಿ ಮಾಡಿಸಿದ್ದಾರೆ. ಇದು ಅರ್ಥಪೂರ್ಣ ಸಂವಾದವಾಗಿದೆ.**

ಶ್ರೀ.ಎನ್.ರಾಚಯ್ಯ : (ವ್ಯವಸಾಯ ಅಬ್ಕಾರಿ ಮತ್ತು ಸಮಾಜ ಕಲ್ಯಾಣ ಇಲಾಖೆಯ ಮಂತ್ರಿಗಳು): ಸ್ವಾಮಿ, ಸಮಾಜ ಕಲ್ಯಾಣ ಇಲಾಖೆಯ (Social Welfare Department) ಬೇಡಿಕೆಯ ಮೇಲೆ ಭಾಗವಹಿಸಿದಂಥ ಮಾನ್ಯ ಸದಸ್ಯರಲ್ಲಿ ಕೆಲವರು ಈ ಇಲಾಖೆ ಸಾಧಿಸಿರತಕ್ಕ ಪ್ರಗತಿಯ ವಿಚಾರವನ್ನು ಕುರಿತು ಕೆಲವು ಒಳ್ಳೆಯ ಮಾತುಗಳನ್ನು ಆಡಿದ್ದಾರೆ. ಕೆಲವರು ರಚನಾತ್ಮಕ ಸಲಹೆಗಳನ್ನು ಕೊಟ್ಟಿದ್ದಾರೆ. ಅದಕ್ಕಾಗಿ ಆ ಮಾನ್ಯ ಸದಸ್ಯರುಗಳಿಗೆ ನಾನು ವಂದಿಸುತ್ತೇನೆ.

ಮೊದಲನೆಯದಾಗಿ ಮಾನ್ಯ ಸದಸ್ಯರಾದ ಶಾಮಸುಂದರ್‌ರವರು. ಈ ಡಿಮ್ಯಾಂಡನ್ನು 40(a) ರೂರಲ್ ಡೆವಲಪ್‌ಮೆಂಟ್ ಎಂದು ಕರೆಯುವುದು ಸರಿಯಲ್ಲವೆಂದು ಆಕ್ಷೇಪಣೆ ಇದೇನಿದ್ದರೂ ಬಜೆಟ್ಟಿನ ಅನುಕೂಲತೆಗಾಗಿ ಮಾತ್ರ ಮಾಡಿರುವುದು (b) ಎಂದು classify ಮಾಡಿ, ಪ್ರತಿಯೊಂದಕ್ಕೂ ಪ್ರತ್ಯೇಕವಾಗಿ ಸೋಷಿಯಲ್ ಡೈರೆಕ್ಟರರಾಗಿ ಒಬ್ಬರನ್ನು ನೇಮಿಸಿದ್ದೇವೆ. ಜಿಲ್ಲಾ ಮಟ್ಟದಲ್ಲೂ ಕೂಡ, ಗೆಜೆಟ್ ಅಧಿಕಾರಿಗಳನ್ನು ನೇಮಿಸಿದ್ದೇವೆ. ಇನ್ನು ಒಂದೆರಡು ತಿಂಗಳಿನಲ್ಲಿ ಹಿಂದಿನ ಮೈಸೂರಿನಲ್ಲಿ ಸ್ಪೆಷಲ್ ಆಫೀಸರುಗಳೆಂದು ಇದ್ದವರನ್ನೆಲ್ಲಾ ಇದೇ ಚೌಕಟ್ಟಿಗೆ ತರುವಂತೆ ಡಿಸ್ಟ್ರಿಕ್ ಸೋಷಿಯಲ್ ವೆಲ್‌ಫೇರ್ ಆಫೀಸರುಗಳೆಂದು

ಮಾಡಿ, ಅವರನ್ನು ಗೆಜೆಟೆಡ್ ಹುದ್ದೆಗೆ ಏರಿಸಿ, ಅವರಿಗೆ ಸೂಕ್ತ ಅಧಿಕಾರಗಳನ್ನು ಕೊಡತಕ್ಕ ತೀರ್ಮಾನ ಮಾಡಿದ್ದೇವೆ. ಇದೇ ರೀತಿ ತಾಲ್ಲೂಕು ಮಟ್ಟದಲ್ಲಿಯೂ ಈಗಾಗಲೇ ಹಳೆಯ ಮೈಸೂರಿನಲ್ಲಿ ಸ್ಪೆಷಲ್ ರೆವಿನ್ಯೂ ಇನ್ಸ್‌ಪೆಕ್ಟರ್‌ಗಳೆಂದು ಇರುವುದನ್ನು ರದ್ದುಮಾಡಿ ಸೋಷಿಯಲ್ ವೆಲ್‌ಫೇರ್ ಇನ್ಸ್‌ಪೆಕ್ಟರ್‌ಗಳೆಂದು ನೇಮಿಸಿ ಹರಿಜನರ ಮತ್ತು ಗಿರಿಜನರ ಪುರೋಭಿವೃದ್ಧಿಯನ್ನು ತಾಲ್ಲೂಕು ಮಟ್ಟದಲ್ಲಿಯೂ ಸಾಧಿಸುವ ವ್ಯವಸ್ಥೆ ಮಾಡಬೇಕೆಂದಿದ್ದೇವೆ. ಆದರೆ ಪ್ರತ್ಯೇಕ ಇಲಾಖೆಯೊಂದು ಜಿಲ್ಲಾ ಮಟ್ಟದಲ್ಲಿ ಇದ್ದರೆ, ಎಲ್ಲಾ ಇಲಾಖೆಗಳಿಗೂ ಕೈ ಹಾಕುವುದಕ್ಕೆ ಕಷ್ಟವಾಗುತ್ತದೆಂದು ಹೇಳಿ, ಜಿಲ್ಲಾಧಿಕಾರಿ ಮೂಲಕವೂ, ತಹಶೀಲ್ದಾರರುಗಳ ಮೂಲಕವೂ ಈ ಅಧಿಕಾರಿಗಳು ತಮ್ಮ ಕೆಲಸವನ್ನು ನಿರ್ವಹಿಸಬೇಕೆಂದು ಗೊತ್ತು ಮಾಡಿದ್ದೇವೆ. ಆದ್ದರಿಂದ ಮಾನ್ಯ ಸದಸ್ಯರ ಟೀಕೆ ಸಾಧುವಾದದ್ದಲ್ಲವೆಂದು ನಾನು ತಿಳಿಯಬಯಸುತ್ತೇನೆ.

ಮಾನ್ಯ ಸದಸ್ಯರು ಬಜೆಟ್‌ನಲ್ಲಿ ಒದಗಿಸಿರುವ ಹಣದ ಸಂಬಂಧವಾಗಿ ಕೆಲವು ಟೀಕೆಗಳನ್ನು ಮಾಡಿದ್ದಾರೆ. ವಾಸ್ತವಿಕವಾಗಿ ನೋಡಿದರೆ, ಈ ಸಾಲಿನಲ್ಲಿಯೂ ಮತ್ತು ಕಳೆದ ಸಾಲಿನಲ್ಲಿಯೂ ನಾವು ಹೆಚ್ಚಿನ ಹಣವನ್ನು ಒದಗಿಸುತ್ತಿದ್ದೇವೆ. 1958–59ರಲ್ಲಿ 79 ಲಕ್ಷ 24 ಸಾವಿರ ರೂಪಾಯಿಗಳನ್ನು ಒದಗಿಸಿತ್ತು. 1959–60ರಲ್ಲಿ 9 ಲಕ್ಷ ರೂಪಾಯಿಗಳನ್ನು ಒದಗಿಸಿದ್ದನ್ನು ರಿವೈಸ್ ಮಾಡಿ 1 ಕೋಟಿ 23 ಲಕ್ಷ ರೂಪಾಯಿಗಳನ್ನು ಕೊಟ್ಟಿದ್ದಾಯಿತು. ಈ ಸಾಲಿಗೂ 1 ಕೋಟಿ 31 ಲಕ್ಷ ರೂಪಾಯಿಗಳನ್ನು ಕೊಟ್ಟಿದ್ದೇವೆ. ಅಂದ ಮಾತ್ರಕ್ಕೆ ಇಷ್ಟರಿಂದಲೇ ನಾವು ಹರಿಜನರ ಮತ್ತು ಗಿರಿಜನರ ಪ್ರಗತಿಯನ್ನು ಸಾಧಿಸುತ್ತೇವೆಂದು ನಾನು ಕೂಡ ಒಪ್ಪುವುದಿಲ್ಲ. ಆದರೂ, ಕೇಂದ್ರ ಸರ್ಕಾರದ ತೀರ್ಮಾನದ ಪ್ರಕಾರ ಸಂಸ್ಥಾನಕ್ಕೆ ಬಂದಿರುವ ಎಲ್ಲಾ ಪ್ರಗತಿದಾಯಕವಾದ ಯೋಜನೆಗಳ ಪ್ರಕಾರವು ವ್ಯಕ್ತಿಗಳಿಗೆ ಮತ್ತು ಸಂಸ್ಥೆಗಳಿಗೆ ನೇರವಾಗಿ ಎಲ್ಲಿ ಸಹಾಯ ಮಾಡಬಹುದು ಅಲ್ಲೆಲ್ಲಾ ಈ ವರ್ಗದ ಜನರಿಗೂ ಸಾಕಷ್ಟು ಹೆಚ್ಚಿನ ಪ್ರಮಾಣದಲ್ಲಿ ಸಹಾಯ ಮಾಡಿ ಅವರ ಕೈಗಾರಿಕೆಗಳನ್ನು ಅಭಿವೃದ್ಧಿ ಮಾಡುವುದು, ಮನೆಕಟ್ಟುವುದು, ಬಾವಿ ವ್ಯವಸ್ಥೆ ಮುಂತಾದವುಗಳನ್ನು ಏರ್ಪಡಿಸುವುದಕ್ಕೆ ಸಹಾಯ ಮಾಡುವುದು ಇತ್ಯಾದಿ ರೀತಿಯಲ್ಲಿ ಅನುಕೂಲ

ಮಾಡಿಕೊಡುತ್ತಿದ್ದೇವೆ. ಕೇಂದ್ರ ಸರ್ಕಾರದವರೂ ಕೂಡ ಇದಕ್ಕೆ ಒಪ್ಪಿದ್ದಾರೆ. ಈ ಕಾರಣ, ಇಷ್ಟು ಮಾತ್ರ ಹಣ ಒದಗಿಸಿದೆಯೆಂದು ಭಾವಿಸುವುದು ಸರಿಯಲ್ಲ. ಜನಸಂಖ್ಯೆಗೆ ಅನುಗುಣವಾಗಿ ಹಣವನ್ನು ಒದಗಿಸಬೇಕೆಂದು ಬಂದ ಮೇಲೆ ಎಲ್ಲವೂ ಸರಿಹೋಗುತ್ತದೆ.

**Sri M. Mallikarjunaswamy:** Sir they should be provided with working capital also. Otherwise it will become unproductive and an waste.

**ಶ್ರೀ ಎನ್.ರಾಚಯ್ಯ :** ಮಾನ್ಯ ಸದಸ್ಯರು ಹೇಳುವುದಕ್ಕೆ ಸರ್ಕಾರದ ಒಪ್ಪಿಗೆಯಿದೆ. ನಾವು ಯಾರು ಹೆಚ್ಚಿಗೆ ಆಸಕ್ತಿ ವಹಿಸಿ ಸಣ್ಣಪುಟ್ಟ ಕೈಗಾರಿಕೆಗಳನ್ನು ದಕ್ಷತೆಯಿಂದ ಮುಂದುವರೆಸಿಕೊಂಡು ಹೋಗುವುದಕ್ಕೆ ಸಮರ್ಥರಾಗಿದ್ದಾರೋ ಅಂತಹವರಿಗೆ ವ್ಯಕ್ತಿಗತವಾಗಿಯೂ, ಸಂಸ್ಥೆಗಳ ಮೂಲಕವೂ ಸಹಾಯ ಮಾಡುವ ವ್ಯವಸ್ಥೆ ಮಾಡಿದ್ದೇವೆ.

ಇಷ್ಟೆಲ್ಲಾ ಮಾಡಿದ್ದರೂ, ಹೆಚ್ಚಿನ ಪ್ರಗತಿಯ ಸಾಧನೆಯಾಗಿಲ್ಲವೆಂದು ಹೇಳುತ್ತಿದ್ದಾರೆ. ವಿದ್ಯಾಭ್ಯಾಸದ ವಿಚಾರ ತೆಗೆದುಕೊಂಡರೆ, ಕಳೆದ 1959–60ರ ಸಾಲಿನಲ್ಲಿ ನಾವು 45 ವಿದ್ಯಾರ್ಥಿನಿಲಯಗಳನ್ನು ಕೊಟ್ಟಿದ್ದೇವೆ. ಇವುಗಳಲ್ಲಿ 30 ಹಾಸ್ಟೆಲ್‌ಗಳು ಗಂಡು ಮಕ್ಕಳಿಗೂ, 15 ಹಾಸ್ಟೆಲ್‌ಗಳನ್ನು ಹೆಣ್ಣು ಮಕ್ಕಳಿಗೂ ಕೊಟ್ಟಿದ್ದಾಗಿದೆ. ಇದರ ಜೊತೆಗೆ ಖಾಸಗಿಯಾಗಿ ಎರಡು ಹಾಸ್ಟೆಲ್‌ಗಳನ್ನೂ, ಗಂಡು ಮಕ್ಕಳಿಗಾಗಿ 2 ಹಾಸ್ಟೆಲ್‌ಗಳನ್ನು ಪ್ರಾರಂಭ ಮಾಡಿದ್ದು ಅವು ಸರ್ಕಾರದಿಂದ ಪರಿಷ್ಕೃತವಾಗಿವೆ. ಸರ್ಕಾರದವರು ಅದಕ್ಕೆ ಹಣ ಸಹಾಯ ಮಾಡುತ್ತಿದ್ದಾರೆ. ಹೀಗೆ ಒಟ್ಟು 69 ಹಾಸ್ಟೆಲ್‌ಗಳು ಖಾಸಗಿ ಮತ್ತು ಸರ್ಕಾರದ ಹಣದಿಂದ ನಡೆಯುತ್ತಿದೆ. ಸಂಸ್ಥಾನದ ಆಡಳಿತದ ಚರಿತ್ರೆಯಲ್ಲಿಯೇ ಯಾವ ವರ್ಷದಲ್ಲಿಯೂ ಇಷ್ಟು ಪ್ರಮಾಣದಲ್ಲಿ ಹಣವನ್ನು ಒದಗಿಸಿಕೊಂಡು ಸಹಾಯ ಮಾಡಿರುವುದಿಲ್ಲ. ಕಳೆದ ವರ್ಷದಲ್ಲಿ ಬಹಳ ಅಗಾಧವಾದ ನಿರೀತಿಯಲ್ಲೇ ಈ ವರ್ಗದ ಮಕ್ಕಳ ವಿದ್ಯಾಭ್ಯಾಸ ಪ್ರಗತಿಯನ್ನು ಸಾಧಿಸಿದ್ದೇವೆಂದರೆ ತಪ್ಪಾಗಲಾರದು.

ಸಾಮಾನ್ಯವಾಗಿ ಸಮುದಾಯದ ಹಾಸ್ಟೆಲ್‌ಗಳನ್ನು ನಾವೇನೂ ಮಾಡಿಲ್ಲ. ಕಾರಣಾಂತರದಿಂದ ಸುಮಾರು 50 ವರ್ಷಗಳ ಹಿಂದಿನಿಂದಲೂ ಹರಿಜನರಿಗೆ

ಅವುಗಳಲ್ಲಿ ಸಾಕಷ್ಟು ಪ್ರವೇಶ ಸಿಕ್ಕಲಿಲ್ಲ. ಈ ಕಾರಣದಿಂದಲೇ, ಇವರ ವಿದ್ಯಾಭ್ಯಾಸ ಪ್ರಗತಿಗಾಗಿ ಮೈಸೂರಿನಲ್ಲಿ ಇನ್‌ಸ್ಟಿಟ್ಯೂಟ್ ಮತ್ತು ನರಸಿಂಹರಾಜ ಹಾಸ್ಟಲ್‌ಗಳು ಸ್ಥಾಪನೆಯಾದವು. ನಾವು ಕೂಡ ಅಲ್ಲಿಯೇ ಓದಿದವರಾಗಿದ್ದೇವೆ.

ಅದೇ ರೀತಿಯಲ್ಲಿ ಕೂಡ ಹರಿಜನರ ಮಕ್ಕಳಿಗೋಸ್ಕರ ಕೆಲವು ಕಡೆಗಳಲ್ಲಿ ಬಹಳ ಹೆಚ್ಚಿನ ಪ್ರಮಾಣದಲ್ಲಿ ವಿದ್ಯೆಯನ್ನು ಪಡೆಯುವ ಸಲುವಾಗಿ ಸೌಕರ್ಯಗಳನ್ನು ಮಾಡಿದ್ದೇವೆ. ತಾವು ಹೇಳತಕ್ಕ ಏನು ಸಲಹೆ ಇದೆ, ಅದರ ಬಗ್ಗೆ ಸರ್ಕಾರ ತೀರ್ಮಾನ ತೆಗೆದುಕೊಳ್ಳುತ್ತಿದೆ. ಯಾವುದೇ ವಿದ್ಯಾರ್ಥಿ ನಿಲಯವಿದ್ದರೂ ಅವುಗಳಲ್ಲಿ ಹರಿಜನರನ್ನು, ನೂರಕ್ಕೆ ಹತ್ತರಷ್ಟು ಜನರನ್ನು ಹರಿಜನರಿಗೆ ಅವಕಾಶವಿಲ್ಲದಿರುವ ಹಾಸ್ಟಲ್ಲುಗಳಲ್ಲಿ ಸೇರಿಸುವುದಕ್ಕಾಗಿ ಪ್ರತ್ಯೇಕವಾಗಿ ಹಣವನ್ನು ತೆಗೆದುಕೊಂಡಿದ್ದೇವೆ.

ಇದು ಸಾಮಾನ್ಯವಾಗಿ ವಿದ್ಯಾಭ್ಯಾಸದ ಇಲಾಖೆಯವರಿಗೆ ಸಂಬಂಧಪಟ್ಟದ್ದು, ಈ ವಿಚಾರದಲ್ಲೂ ಸರಕಾರದವರು ಪರ್ಯಾಲೋಚನೆ ಮಾಡುತ್ತಾರೆ. ಸಮಾಜ ಕಲ್ಯಾಣದ ವಿಚಾರವಾಗಿ ನಾನು ಹೇಳುವುದಾದರೆ ಹರಿಜನರಿಗಾಗಿ ಇಲ್ಲದೇ ಇರುವ ಹಾಸ್ಟಲ್‌ಗಳಲ್ಲಿ ಹರಿಜನರನ್ನು ಶೇಕಡಾ ಹತ್ತರಷ್ಟನ್ನಾದರೂ ಸೇರಿಸಬೇಕೆಂದು ಈಗಾಗಲೇ ಪ್ರತಿಯೊಂದು ಹಾಸ್ಟೆಲ್‌ನಲ್ಲಿಯೂ ನೂರಕ್ಕೆ ಹತ್ತು ಜನ ಹರಿಜನರ ಮಕ್ಕಳನ್ನು ಸೇರಿಸಿಕೊಳ್ಳಬೇಕೆಂದು ಸರಕಾರಿ ಆಜ್ಞೆಯನ್ನು ಹೊರಡಿಸಿದ್ದೇವೆ ಮತ್ತು ಈಗಾಗಲೇ ಅದು ಜಾರಿಯಲ್ಲಿಯೂ ಇದೆ. ಕಮ್ಯೂನಲ್ ಹಾಸ್ಟಲುಗಳು ಉದ್ಭವಿಸುವುದಕ್ಕೆ ಸರಕಾರ ಅವಕಾಶ ಕೊಟ್ಟಿಲ್ಲ. ಮಾನ್ಯ ಸದಸ್ಯರು ಹೇಳಿದಂತೆ ಹರಿಜನರಲ್ಲಿ ಪಂಗಡಗಳು ಬೇರೆ ಬೇರೆಯಾಗಿರದೆ ಒಂದಾಗಿರಬೇಕೆನ್ನುವ ಭಾವನೆಯಿಂದ ಈ ರೀತಿ ಮಾಡಲು ಪ್ರಯತ್ನ ಮಾಡುತ್ತಿದ್ದೇವೆ.

ಒಂದು ಕಡೆ ಮಾನ್ಯ ಸದಸ್ಯರು ತಿಳಿಸಿದ ಹಾಗೆ ಕೇಂದ್ರ ಸರಕಾರದಿಂದ ಕಳೆದ ವರ್ಷ ಕಾಲೇಜುಗಳಲ್ಲಿ ಮತ್ತು ಟೆಕ್ನಿಕಲ್ ಸ್ಕೂಲುಗಳಲ್ಲಿ ವಿದ್ಯಾಭ್ಯಾಸ ಮಾಡತಕ್ಕ ಎಲ್ಲಾ ಹರಿಜನರ ಮತ್ತು ಗಿರಿಜನರ ಮಕ್ಕಳಿಗೆ ಕಡ್ಡಾಯವಾಗಿ ವಿದ್ಯಾಭ್ಯಾಸ ಮಾಡಿಸುವ ಸಲುವಾಗಿ ಸಹಾಯಕ್ಕಾಗಿ ಎಲ್ಲಾ ಹೆಣ್ಣು ಮತ್ತು ಗಂಡು ವಿದ್ಯಾರ್ಥಿಗಳೆಲ್ಲರಿಗೂ ವಿದ್ಯಾರ್ಥಿ ವೇತನವನ್ನು ಕೊಟ್ಟಿದ್ದಾರೆ. ಹಾಗೆ

ಕೊಡುವಾಗ ಸಾಮಾನ್ಯವಾಗಿ ತೊಂದರೆಯಾಗಿರಬಹುದು. ಇದಕ್ಕಾಗಿ ಈ ವರ್ಷದಿಂದ ಮೇ ತಿಂಗಳಲ್ಲೇ ಕೇಂದ್ರ ಸರಕಾರದಿಂದ ಸಹಾಯವು ಬರುವಂತೆ ಏರ್ಪಾಡು ಮಾಡಲಾಗಿದೆ. ಮೊದಲನೆಯ ಇನ್‌ಸ್ಟಾಲ್‌ಮೆಂಟ್ ಮೇ ತಿಂಗಳಲ್ಲಿ. ಎರಡನೆಯ ಇನ್‌ಸ್ಟಾಲ್‌ಮೆಂಟ್ ಅಕ್ಟೋಬರ್ ತಿಂಗಳಲ್ಲಿ ಬರಬೇಕೆಂದು ಈಚೆಗೆ ದೆಹಲಿಯಲ್ಲಿ ನಡೆದ ಸ್ಟೇಟ್ ಮಿನಿಸ್ಟರುಗಳ ಕಾನ್ಫರೆನ್ಸ್‌ನಲ್ಲಿ ತೀರ್ಮಾನ ತೆಗೆದುಕೊಳ್ಳಲಾಯಿತು. ಅದರಂತೆ ಏರ್ಪಾಡು ಮಾಡುವ ಭರವಸೆಯನ್ನು ಕೇಂದ್ರದಲ್ಲಿರುವ ಗೃಹ ಮಂತ್ರಿಗಳು ಒಪ್ಪಿಕೊಂಡಿರುವುದನ್ನು ಇನ್ನು ಮುಂದೆ ಈ ಬಗ್ಗೆ ಯಾವ ತೊಂದರೆಯೂ ಆಗದ ಹಾಗೆ ವ್ಯವಸ್ಥೆಯನ್ನು ಮಾಡಬೇಕೆಂದು ಸರಕಾರ ತೀವ್ರವಾಗಿ ಆಲೋಚನೆ ಮಾಡಿದೆ. ಯಾರಾದರೂ ವಿದ್ಯಾರ್ಥಿಗಳು ಜನರಲ್ ಹಾಸ್ಟೆಲ್‌ಗೆ ಹೋಗಿ ಅಲ್ಲಿ ವಿದ್ಯೆಯನ್ನು ಕಲಿಯಲು ಸ್ಕಾಲರ್‌ಷಿಪ್‌ಬೇಕೆಂದು ಹೆಚ್ಚಿನ ಹಣ ಕೇಳಿದರೂ ಅದನ್ನು ಕೊಡಲು ಪರ್ಯಾಲೋಚನೆ ಮಾಡುತ್ತೇವೆಂದು ಹೇಳುತ್ತೇನೆ. ಮತ್ತು ಇದೇ ರೀತಿಯಲ್ಲಿ Amelioration of backward classesಗಾಗಿ 70,00,300 ರೂಪಾಯಿಗಳನ್ನು ಒದಗಿಸಿ ಕಾಲೇಜುಗಳಲ್ಲಿ ವಿದ್ಯಾರ್ಥಿ ವೇತನವನ್ನು ಒದಗಿಸುವುದಕ್ಕೆ ಏರ್ಪಾಡು ಮಾಡಲಾಗಿದೆ. ಮತ್ತು ಈವರೆಗೆ ವಿದ್ಯಾರ್ಥಿಗಳಿಗೆ ಯಾವ ವಿಧವಾದ ತೊಂದರೆಯೂ ಆಗಿಲ್ಲ, ಅನ್ಯಾಯವಾಗಿಲ್ಲ, ಇದು ಸಾಕಾಗುತ್ತಿಲ್ಲ. ಇದರ ಮಟ್ಟವನ್ನು ಇನ್ನೂ ಹೆಚ್ಚಿಗೆ ಮಾಡುವ ಅಪೇಕ್ಷೆ ಇದ್ದರೆ ಅದಕ್ಕೆ ನನ್ನ ಭಿನ್ನಾಭಿಪ್ರಾಯವೇನಿಲ್ಲ.

ಮಾನ್ಯ ಸದಸ್ಯರಿಗೆ ಸರಿಯಾಗಿ ವ್ಯವಹಾರಗಳು ಮತ್ತು ಸ್ಥಿತಿಗಳು ಗೊತ್ತಿಲ್ಲವೆಂದು ಕಾಣುತ್ತಿದೆ. ಸಾಮಾನ್ಯವಾಗಿ ನಾವು ಹೆಚ್ಚಿನ ಹಣವನ್ನು ಇದಕ್ಕಾಗಿ ಖರ್ಚು ಮಾಡುತ್ತಿಲ್ಲ. ಈ ವರ್ಷ ಒಂದು ಸ್ಥಳದಲ್ಲಿ ಕೇವಲ ಐದು ಲಕ್ಷ ರೂಪಾಯಿಗಳನ್ನು ಮಾತ್ರ ಉಪಯೋಗಿಸಲಾಯಿತು. ಆದರೆ ನಾವು ಒದಗಿಸಿರುವಂತೆ ಕೆಲವು ಕಡೆಗಳಲ್ಲಿ ಹಣ ಉಪಯೋಗಿಸಲು ಆಗಲಿಲ್ಲ ಮತ್ತು ತಕ್ಕಷ್ಟು ವಿದ್ಯಾರ್ಥಿಗಳು ಸಿಕ್ಕಲಿಲ್ಲ. ವಿಶೇಷವಾಗಿ ಇಂತಹ ಮಕ್ಕಳಿಗೆ ವಿದ್ಯೆಯನ್ನು ಕೊಡುವಾಗ ನಾವು ಅವರಿಗೆ ಸರಿಯಾದ ಸೌಕರ್ಯಗಳನ್ನು ಮಾಡಲು ಈ ಹಣವನ್ನು ಬಳಸಬೇಕಾಗುತ್ತದೆ. ಆದುದರಿಂದ ಈ ಎಲ್ಲಾ ಸೌಕರ್ಯವಿಲ್ಲದೇ ಸಾಕಾದಷ್ಟು ಜನ ವಿದ್ಯಾರ್ಥಿಗಳು ಸಿಗಲಿಲ್ಲವೋ ಅಂತಹ ಕಡೆ ಇಂತಹ ವ್ಯವಸ್ಥೆಯನ್ನು ಮಾಡುವುದು ಒಳ್ಳೆಯದು. ಮಾನ್ಯ ಸದಸ್ಯರು ಮತ್ತು ನಾನು, ಒಂದೇ ಜಿಲ್ಲೆಗೆ

ಸೇರಿದವರು, ಆದಾಗ್ಯೂ ತಿಳಿದ ಹಾಗೆ ಮೈಸೂರಿನಲ್ಲಿ, ನಂಜನಗೂಡಿನಲ್ಲಿ ಮತ್ತು ಚಾಮರಾಜನಗರದಲ್ಲಿ ಎರಡೂ ಕಡೆ ಚೆನ್ನಾಗಿ ವಿದ್ಯಾಭ್ಯಾಸ ಮಾಡುತ್ತಿದ್ದಾರೆ. ಇದಕ್ಕಾಗಿ ಹೆಚ್ಚಿನ ಹಣವನ್ನೇನೂ ಖರ್ಚು ಮಾಡುತ್ತಿಲ್ಲ. ಹಿಂದಿನ ಸರ್ಕಾರ ಏನು ಮಾಡಿತ್ತೋ ಅದನ್ನೇ ಈಗಲೂ ಮುಂದುವರೆಸಿಕೊಂಡು ಹೋಗುತ್ತಿದ್ದೇವೆ.

ಆದುದರಿಂದಲೇ ಈ ವಿಚಾರ ಹರಿಜನರ ಅಭಿವೃದ್ಧಿಯ ವಿಚಾರವಾಗಿರುವುದರಿಂದ, ಮಾನ್ಯ ಸದಸ್ಯರು ಹರಿಜನ ಅಭಿವೃದ್ಧಿ ಸಲಹಾ ಸಮಿತಿಯಲ್ಲಿ ಸದಸ್ಯರಾಗಿರುವುದರಿಂದ ಈ ಸಲಹೆಯನ್ನು ಆ ಸಮಿತಿಯ ಮುಂದೆ ಇಡಬಹುದು. ಆಗ ಬೇಕಾದರೆ ಇದನ್ನು ಪರ್ಯಾಲೋಚನೆಗೆ ತೆಗೆದುಕೊಳ್ಳೋಣ. ತಾವೆಲ್ಲರೂ ಅಲ್ಲಿ ಒಪ್ಪಿದ ಪಕ್ಷದಲ್ಲಿ ಆಗ ಇದನ್ನು ಪರ್ಯಾಲೋಚನೆ ಮಾಡಿ ಅವಶ್ಯಕತೆಯಿದ್ದರೆ ಆ ನೀತಿಯನ್ನು ಮುಂದುವರೆಸಬೇಕೆ, ಬೇಡವೇ ಎನ್ನುವುದನ್ನು ಯೋಚಿಸಬಹುದು.

ಇನ್ನು Women and child welfare centersಬಗ್ಗೆ ಹೇಳುವುದಾದರೆ ಎರಡು ಮೂರು ವರ್ಷಗಳಿಂದೀಚೆಗೆ ಹೆಚ್ಚು ಹೆಚ್ಚಾಗಿ ಕೇಂದ್ರಗಳನ್ನು ತೆರೆದಿದ್ದೇವೆ. ಕಳೆದ ವರ್ಷ ಸುಮಾರು 48–50 ಕೇಂದ್ರಗಳನ್ನು ತೆರೆದಿದ್ದೇವೆ. ಈ ವರ್ಷ ಕನಿಷ್ಟ ಪಕ್ಷ 50–60 ಶಿಶುವಿಹಾರಗಳ ಕೇಂದ್ರಗಳನ್ನು ಹೆಚ್ಚಾಗಿ ತೆರೆದು ಆಯಾ ಪ್ರದೇಶದಲ್ಲಿರುವ ಹರಿಜನರ ಮಕ್ಕಳು ಸ್ಕೂಲುಗಳಲ್ಲಿ ವಿದ್ಯಾಭ್ಯಾಸ ಮಾಡುವುದಕ್ಕಾಗಿ ಸಹಾಯವನ್ನು ಮಾಡಲಾಗಿದೆ. ಇಂತಹ ಕೇಂದ್ರಗಳಲ್ಲಿ ವಿದ್ಯಾಭ್ಯಾಸ ಮಾಡುವ ಮಕ್ಕಳಿಗೆ ಉಪಹಾರ ಕೊಡುವುದಕ್ಕಾಗಿ ಹಣವನ್ನು ಒದಗಿಸಲಾಗಿದೆ. ಗಂಡು ಮಕ್ಕಳಿಗೆ ವಿದ್ಯಾಭ್ಯಾಸ ಕೊಟ್ಟು ಹೆಣ್ಣು ಮಕ್ಕಳಿಗೆ ವಿದ್ಯಾಭ್ಯಾಸಕೊಟ್ಟು ಅವರಿಗೆ ಕಸೂತಿ ಕೆಲಸ, ಹೊಲಿಗೆ ಕೆಲಸಗಳನ್ನು ಕಲಿಸುವ ಏರ್ಪಾಡನ್ನೂ ಮಾಡಿದ್ದೇವೆ ಇದನ್ನೂ ಕೂಡ ಮುಂದುವರೆಸುತ್ತೇವೆ. ಈ ವರ್ಷ ಸುಮಾರು 453 ಕಾಲೋನಿಗಳನ್ನು ಹರಿಜನರಿಗಾಗಿ ಮಾಡಿದ್ದೇವೆ, ಮುಂದಿನ ವರ್ಷ ಇನ್ನೂ ಹೆಚ್ಚಿನ ರೀತಿಯಲ್ಲಿ ನಾವು ಏರ್ಪಾಡು ಮಾಡಬೇಕೆಂದಿದ್ದೇವೆ.

## ♦ ಭೂಸ್ವಾಧೀನ ಪ್ರಕ್ರಿಯೆಗೆ ಸಂಬಂಧಿಸಿದ ಚಿಂತನೆಗಳು :

ಇಲಾಖೆಯ ಗ್ರಾಮೀಣ ಅಭಿವೃದ್ಧಿಗಾಗಿ ನಿಗದಿಪಡಿಸಿರುವ ಹಣವನ್ನು ಖರ್ಚುಮಾಡುವ ಬಗೆಗಿನ ದೀರ್ಘ ಸಮಾಲೋಚನೆ ಈ ಚರ್ಚೆಯಲ್ಲಿದೆ. ಗ್ರಾಮೀಣ ಪ್ರದೇಶಗಳಲ್ಲಿನ ನೀರಿನ ಸಮಸ್ಯೆಗೆ ಪರಿಹಾರ ಕಂಡುಕೊಳ್ಳುವ ನಿಟ್ಟಿನಲ್ಲಿ ಶ್ರೀ ಎಂ. ಮಲ್ಲಿಕಾರ್ಜುನಸ್ವಾಮಿ ಅವರೊಂದಿಗೆ ಪ್ರಶ್ನೋತ್ತರ ಗಮನಾರ್ಹವಾದುದು. ಪರಿಶಿಷ್ಟ ಜಾತಿ ಮತ್ತು ವರ್ಗದವರಿಗೆ ಉಂಟಾಗಿರುವ ಗ್ರಾಮೀಣ ಮಟ್ಟದ ನೀರು ಮುಟ್ಟಲು ಅವಕಾಶವಿಲ್ಲದ ಸ್ಥಿತಿಗತಿಗಳನ್ನು ಇಲ್ಲಿ ಚರ್ಚಿಸಲಾಗಿದೆ. ಆ ಸಮಸ್ಯೆಗೆ ಪರಿಹಾರವಾಗಿ ಇನ್ನು ಹೆಚ್ಚಿನ ಬಾವಿ ತೊಡಿಸುವ ಆ ವರ್ಗದವರನ್ನು ಇಲಾಖೆಗೆ ನಿಯಮಿಸಿಕೊಳ್ಳುವ ಬಗೆಗಿನ ಮಾಹಿತಿ ಪ್ರಧಾನ ಸಂವಾದವಿದು.

ಶ್ರೀ ಎನ್.ರಾಚಯ್ಯ : ಈ ವಿಚಾರದಲ್ಲಿ ನಾವು ಹಣವನ್ನು ಲ್ಯಾಪ್ಸ್ ಮಾಡಲು ಅವಕಾಶ ಕೊಟ್ಟಿಲ್ಲ. ಇದು ಕೇಂದ್ರ ಸರ್ಕಾರದಿಂದ ಏರ್ಪಾಡು ಮಾಡಿ ಅವರೇ ಇಟ್ಟಿರತಕ್ಕ ಯೋಜನೆಗಳು, ರಾಜ್ಯ ಸರ್ಕಾರವೂ ಕೂಡ ಕೆಲವು ಕಾಲೋನಿಗಳನ್ನು ಮಾಡಿದೆ. ಹಾಗೇ ಅವರು ಎರಡನೆಯ ಪಂಚವಾರ್ಷಿಕ ಯೋಜನೆಯಲ್ಲಿ ವರ್ಷ ಪೂರ್ತಿಯಾಗುವಾಗ ಹೆಚ್ಚಿನ ಹಣವಿದ್ದರೂ ಇನ್ನೂ ಉಳಿತಾಯ ಮಾಡಲು ಅನೇಕ ಕಾರಣಗಳಿಂದ ಸಾವಕಾಶವಾಗಬಹುದು. ಕಳೆದ ಎರಡು ವರ್ಷಗಳಿಂದ ಲ್ಯಾಪ್ಸ್ ಮಾಡಲು ಅವಕಾಶಕೊಟ್ಟಿಲ್ಲ. ಕೆಲವು ಸಂದರ್ಭಗಳಲ್ಲಿ ಹೀಗಾಗಲು ಜಮೀನನ್ನು ಸ್ವಾಧೀನಕ್ಕೆ ತೆಗೆದುಕೊಳ್ಳುವಾಗ ಅಥವಾ ಮಂಜೂರಾತಿ ಬರುವುದು ನಿಧಾನವಾಗಿರುವುದರಿಂದಾಗಿ ಇಲಾಖೆಗೆ ಹೋಗಬೇಕಾಗಿ ಬರುತ್ತದೆ. ಮತ್ತು ಇವರಿಂದಾಗಿ ಲ್ಯಾಪ್ಸ್ ಆಗಿರಬಹುದು. ಸಾಮಾನ್ಯವಾಗಿ ನಾವು ಒದಗಿಸಿರತಕ್ಕ ಹಣ ಲ್ಯಾಪ್ಸ್ ಆಗದಂತೆ ಎಲ್ಲಾ ಪ್ರಯತ್ನವನ್ನೂ ನಾವು ಮಾಡುತ್ತಿದ್ದೇವೆ.

ಮನೆಗೆ ಗ್ರ್ಯಾಂಟ್‌ನ್ನು ಕೊಡತಕ್ಕ ವಿಚಾರ ಸರ್ಕಾರದ ತೀವ್ರ ಪರ್ಯಾಲೋಚನೆಯಲ್ಲಿರುವ ನೀತಿ ಏನೆಂದರೆ ಪ್ರತಿಯೊಬ್ಬರಿಗೂ ವಾಸ ಮಾಡಲು

ಅನುಕೂಲವಾಗುವಂತಹ ಮನೆಗಳನ್ನು ಕಟ್ಟಿಕೊಳ್ಳುವುದಕ್ಕಾಗಿ ಸರಕಾರದವರು 1,000 ದಿಂದ 4,000 ರೂಪಾಯಿಗಳವರೆಗೆ ಸಾಲವನ್ನು ಕೊಡಬಹುದು ಮತ್ತು ಕೊಡುವ ಸಾಲವನ್ನು 15–20 ವರ್ಷಗಳ ಕಂತುಗಳಲ್ಲಿ ವಾಪಸ್ಸು ಕೊಡುವ ವ್ಯವಸ್ಥೆ ಇರಬೇಕೆಂದು ಒಂದು ತೀವ್ರವಾದ ಆಲೋಚನೆ ಸರ್ಕಾರಕ್ಕಿರುವ ಕಾರಣ. ಮನೆಗಳಿಗಾಗಿ ಕೊಡುವ ಹಣ ಹರಿಜನರಿಗೆ ಹೆಚ್ಚಾಗಿ ಕೊಡಬೇಕೆಂದು ಪ್ರಯತ್ನ ಮಾಡಲಾಗುತ್ತಿದೆ ಮತ್ತು ಸರಿಯಾಗಿ ಇದು ಅವರ ಕೈಗೆ ಸಿಗುವ ರೀತಿಯಲ್ಲಿ ಒಂದು ಮಾರ್ಪಾಡನ್ನು ಮಾಡಿ ಸರಿಪಡಿಸಬೇಕೆಂಬ ಉದ್ದೇಶದಿಂದ ಈ ಒಂದು ಯೋಜನೆಯನ್ನು ಇಡೀ ಸಂಸ್ಥಾನದಲ್ಲಿ ಈ ವರ್ಷದಿಂದ ಜಾರಿಗೆ ತರಬೇಕೆನ್ನುವ ಯೋಚನೆಯನ್ನು ಇಟ್ಟುಕೊಂಡಿದ್ದೇವೆ.

ಈಗ ಮಾನ್ಯ ಸದಸ್ಯರು ಏನು ಟೀಕೆ ಮಾಡಿದ್ದಾರೆ, ಈ ಒಂದು ಕೊರತೆಯನ್ನು ಸರಿಪಡಿಸತಕ್ಕ ಉದ್ದೇಶದಿಂದ ಇಡೀ ಸಂಸ್ಥಾನದಲ್ಲೇ ಅದನ್ನು ನಾವು ಕೊಡಬೇಕು ಎನ್ನುವ ಯೋಜನೆಯನ್ನು ಇಟ್ಟುಕೊಂಡಿದ್ದೇವೆ. ಆಗ ತಮ್ಮ ಸಲಹೆ ಜಾರಿಗೆ ಬಂದ ಹಾಗಾಗುತ್ತದೆ. ಹರಿಜನರಾಗಲೀ ಅಥವಾ ಬೇರೆಯವರಾಗಲೀ ಅವರು ವ್ಯವಸಾಯುಗಾರರಾಗಿದ್ದು ಅವರಿಗೆ ವ್ಯವಸಾಯದ ಕಾಲೋನಿಗಳನ್ನು ಮಾಡಿಕೊಡುತ್ತೇವೆ. ಬೇರೆ ಕಡೆ ಹೋಗಿ ಜಮೀನು ಮಾಡಿ ಎಂದರೆ, ಅಲ್ಲಿ 100 ಎಕರೆಗಿಂತ ಹೆಚ್ಚಿಗೆ ಇದ್ದ ಪಕ್ಷದಲ್ಲಿ ಅಂತಹ ಕಡೆ ಸಹಕಾರ ಸಂಘಗಳನ್ನು ಏರ್ಪಾಡು ಮಾಡಿ, ಎಲ್ಲಾ ತರಹದ ಅನುಕೂಲಗಳನ್ನು ಮಾಡಿಕೊಡುತ್ತೇವೆ. ಮನೆ ಕಟ್ಟುವುದಕ್ಕೆ, ಬಾವಿ ಮತ್ತು ಮೊದಲ್ಗೊಂಡು ಎಲ್ಲಾ ವ್ಯವಸ್ಥೆಯನ್ನು ಮಾಡಿಕೊಡುತ್ತೇವೆ.

**ಶ್ರೀ ಎಂ. ಮಲ್ಲಿಕಾರ್ಜುನಸ್ವಾಮಿ** : ಒಂದೊಂದು ಊರಿನಲ್ಲಿ ಜಾತಿಗೂ ಒಂದೊಂದು ಬಾವಿ ತೆಗೆಯುವ ಬದಲು ಒಂದೊಂದು ಊರಿಗೆ ಬಾವಿ ಕೊಟ್ಟರೆ, 3–4 ಬಾವಿಗಳನ್ನು ತೆಗೆಯುವುದು ಉಳಿಯುತ್ತದೆ.

**ಶ್ರೀ ಎನ್. ರಾಚಯ್ಯ** : ಬಾವಿ ತೆಗೆಯುವ ವಿಚಾರದಲ್ಲಿ ಮಾನ್ಯ ಸದಸ್ಯರಿಗೆ ಗೊತ್ತಿದೆ. ನಮ್ಮಂಥವರ ಮನೆಯಲ್ಲಿ 5–6 ನಲ್ಲಿಗಳು ಇರುತ್ತದೆ. 10–20 ಬಾವಿಗಳು ಇದ್ದರೆ ನೀರನ್ನು ಕುಡಿಯುವ ದೃಷ್ಟಿಯಿಂದ ಅಥವಾ ಬೇರೆ ಅನುಕೂಲಗಳ ದೃಷ್ಟಿಯಿಂದ ಬಾವಿಯನ್ನು ಕೊಟ್ಟರೆ ಕೋಮುವಾರು ಭಾವನೆಗೆ ಸಪೋರ್ಟ್

ಆಗುತ್ತದೆ ಎನಿಸಿಕೊಳ್ಳುವುದಿಲ್ಲ. ಎಲ್ಲಾ ಬಾವಿಗಳಿಗೂ ಹೋಗುವ ಕಾನೂನು ಇರುವುದರಿಂದ ಅವಕಾಶವಿದ್ದ ಕಡೆ ಕೊಡುತ್ತೇವೆ. ಹರಿಜನರದ್ದೇ ಆಗಲೀ ಅಥವಾ ಬೇರೆಯವರದ್ದೇ ಆಗಲೀ ಆ ಬಾವಿ ಕಡೆಗೆ ಹೋಗತಕ್ಕ ಅಧಿಕಾರ ಎಲ್ಲರಿಗೂ ಇದೆ. ಅನ್ಯ ಸದಸ್ಯರಿಗೆ ಗೊತ್ತಿರುವ ಹಾಗೆಯೇ ತಡೆಯುತ್ತೇವೆ. ಸಾಮಾಜಿಕ ನ್ಯೂನತೆಗಳನ್ನು ಸರಿಪಡಿಸುವುದಕ್ಕೆ ಮಾನ್ಯ ಸದಸ್ಯರ ಸಹಕಾರ ಬೇಕು. ಈ ಒಂದು ಸಹಕಾರ ಇದ್ದರೆ ಅದನ್ನು ಯಶಸ್ವಿಯಾಗಿ ಮಾಡುತ್ತೇವೆ ಎಂಬ ಭರವಸೆ ಸರ್ಕಾರಕ್ಕೆ ಇದೆ ಎಂದು ಮಾತ್ರ ಹೇಳುತ್ತೇನೆ.

ಷೆಡ್ಯೂಲ್ಡ್ ಕ್ಯಾಸ್ಟಿನವರನ್ನು ಅಧಿಕಾರಿಗಳಾಗಿ ಸರ್ಕಾರಿ ನೌಕರಿಗಳಲ್ಲಿ, ಸರ್ಕಾರಿ ಆಡಳಿತದಲ್ಲಿ ನೇಮಿಸಲಿಲ್ಲ ಎಂದು ಮಾನ್ಯ ಸದಸ್ಯರಾದ ಆರುಮುಗಂರವರು ಆಕ್ಷೇಪಣೆ ಮಾಡಿದರು. ಅವರಿಗೆ ನಾನು ಹೇಳುತ್ತೇನೆ, ಕಳೆದ ಎರಡು ವರ್ಷಗಳಲ್ಲಿ ಅಧಿಕಾರಿಗಳನ್ನು ನೇಮಿಸಿರತಕ್ಕ ಸಂಖ್ಯೆಯನ್ನು ಹೇಳುವುದಾದರೆ ಕಳೆದ ಹತ್ತು ವರ್ಷಗಳಲ್ಲಿ ಹರಿಜನರಿಗೆ ಎಲ್ಲಾ ಕ್ಷೇತ್ರಗಳಲ್ಲೂ ಎಷ್ಟು ಸ್ಥಾನ ಸಿಗಬೇಕಾಗಿತ್ತೋ, ಅದಕ್ಕಿಂತಲೂ ಕೆಲವು ಇಲಾಖೆಗಳಲ್ಲಿ ಹೆಚ್ಚಿನ ಪ್ರಮಾಣದಲ್ಲಿ ನಾವು ಒದಗಿಸಿದ್ದೇವೆ. ಉದಾಹರಣೆಗೆ ನಾನು ಮಂತ್ರಿಯಾಗಿ ಈ ಶಾಖೆಯನ್ನು ವಹಿಸಿಕೊಂಡ ಮೇಲೆ 18 ಜನರನ್ನು ಷೆಡ್ಯೂಲ್ಡ್ ಕ್ಯಾಸ್ಟ್ ಮತ್ತು ಷೆಡ್ಯೂಲ್ಡ್ ಟ್ರೈಬಿನವರನ್ನು ನೇಮಿಸಿದ್ದೇವೆ. ಸ್ಪೆಷಲ್ ಆಫೀಸರನ್ನಾಗಿ 14 ಜನರನ್ನು ನೇಮಿಸಿದ್ದೇವೆ. ಎಲ್ಲಾ ಬ್ರಾಂಚ್ ಆಫೀಸರ್ ಸ್ಟೇಟಸ್‌ನಲ್ಲಿಯೂ ತಂದಿದ್ದೇವೆ. ಕನಿಷ್ಟ ಪಕ್ಷ ಈಗಾಗಲೇ 32 ಜನಗಳಿಗಿಂತಲೂ ಹೆಚ್ಚು ಜನರನ್ನು ತಹಸೀಲ್ದಾರರಾಗಿ ಡೈರೆಕ್ಟ್ ರಿಕ್ರೂಟ್‌ಮೆಂಟ್ ಮಾಡಿದ್ದೇವೆ. ಪ್ರಮೋಷನ್ಸ್ ಕೊಟ್ಟಿರುವುದಲ್ಲದೆ, ಎರಡು ವರ್ಷಗಳ ಅವಧಿಯಲ್ಲಿ ಇಡಿಯ ಮೈಸೂರು ರಾಜ್ಯದಲ್ಲಿ ಯಾವುದೇ ಎರಡು ವರ್ಷಗಳನ್ನು ತೆಗೆದುಕೊಂಡರೂ ಸಹ, ಇಷ್ಟು ಸಂಖ್ಯೆಯಲ್ಲಿ ನೇಮಿಸಿಲ್ಲ. ಈಗ 32 ಜನ ಪದವೀಧರರು ಇದ್ದಾರೆಂದು ಶ್ರೀ ಆರುಮುಗಂರವರು ನನ್ನ ಗಮನಕ್ಕೆ ತಂದಿದ್ದಾರೆ. ತಮಗೆ ಗೊತ್ತಿರುವ ಹಾಗೆ 22 ಜನ ಕಮರ್ಷಿಯಲ್ ಟ್ಯಾಕ್ಸ್ ಇನ್‌ಸ್ಪೆಕ್ಟರ್‌ಗಳನ್ನು ಕಳೆದ ಐದು ಆರು ತಿಂಗಳುಗಳಲ್ಲಿ ನೇಮಿಸಿದ್ದೇವೆ ಅವರೂ ಕೂಡ ಪದವೀಧರರಾಗಿದ್ದಾರೆ. ಮತ್ತೊಂದು ವಿಷಯವನ್ನು ಮಾನ್ಯ ಸಭೆಯ ಮುಂದೆ ಹೇಳಬೇಕಾಗುತ್ತದೆ. ತಹಸೀಲ್ದಾರ್ ಮತ್ತು ಪೋಲೀಸ್ ಸಬ್‌ಇನ್‌ಸ್ಪೆಕ್ಟರುಗಳ ನೇಮಕದ ಅಧಿಕಾರ ಇಲ್ಲಿಯ ತನಕ ಪಬ್ಲಿಕ್ ಸರ್ವಿಸ್ ಕಮಿಷನಿಗಿತ್ತು. ಈಗ ಅದನ್ನು ಬದಲಾವಣೆ ಮಾಡಿ ಪಬ್ಲಿಕ್ ಸರ್ವಿಸ್ ಕಮಿಷನ್ ಚೇರ್‌ಮನ್ ಜೊತೆಗೆ ಇನ್ನಿಬ್ಬರು ಬೇರೆ ಅಧಿಕಾರಿಗಳನ್ನು

ನೇಮಿಸಿ, ಆ ಸಮಿತಿಯ ಮೂಲಕ ಆಡಳಿತದ ಅವಶ್ಯಕತೆಗನುಗುಣವಾಗಿ ಸಾಕಾದಷ್ಟು ಪ್ರಮಾಣದಲ್ಲಿ, ಸರ್ಕಾರದವರು ತಹಸೀಲ್ದಾರ್ ಮತ್ತು ಸಬ್‌ಇನ್‌ಸ್ಪೆಕ್ಟರ್‌ಗಳನ್ನು ನೇಮಿಸತಕ್ಕ ವ್ಯವಸ್ಥೆಯನ್ನು ಮಾಡಿದ್ದಾರೆ. ಈ ಎರಡೂ ತರಹ ನೌಕರಿಗಳಿಗೂ ನೇಮಿಸತಕ್ಕ ಕಾಲದಲ್ಲಿ ಬಹು ಜಾಗ್ರತೆಯಾಗಿ 18 ಪರ್ಸೆಂಟ್‌ನ್ನು ಒದಗಿಸುವ ದೃಷ್ಟಿಯನ್ನಿಟ್ಟುಕೊಳ್ಳಲಾಗುವುದು. ಮುಖ್ಯಮಂತ್ರಿಗಳು ಹೇಳಿದ ಹಾಗೆ ಕಳೆದ 1-11-1956 ರಿಂದ ವರ್ಗದಲ್ಲಿಯೂ ಕೂಡ ಎಂದರೆ ಕ್ಲಾಸ್ ಒಂದು, ಎರಡು, ಮೂರು ಮತ್ತು ನಾಲ್ಕನೆಯ ತರಗತಿಗಳಲ್ಲಿಯೂ ಅಧಿಕಾರಕ್ಕೆ ನೇಮಿಸುವಾಗ ಅವರಿಗೆ ಡೈರೆಕ್ಟ್ ರಿಕ್ರೂಟ್‌ಮೆಂಟ್ ಮಾಡಿದ್ದಾರೆ. ಎಷ್ಟು ಕೊಡಬೇಕಾಗಿತ್ತೋ ಆ ಒಂದು ಪ್ರಮಾಣದಲ್ಲಿ ಈ ಮೂರು ವರ್ಷಗಳ ಅವಧಿಯೊಳಗೆ ಅವರಿಗೆ ಕೊಡಬೇಕು ಎನ್ನುವ ವ್ಯವಸ್ಥೆಯನ್ನು, ತೀರ್ಮಾನವನ್ನು ಕ್ಯಾಬಿನೆಟ್‌ನವರು ಮಾಡಿರುತ್ತಾರೆ. ಈ ಒಂದು ವರ್ಷದಲ್ಲಿ ಮತ್ತು ಮುಂದಿನ ಎರಡು ವರ್ಷಗಳಲ್ಲಿ ಅಧಿಕ ಪ್ರಮಾಣದಲ್ಲಿ ಕೂಡ ಸಾಕಾದಷ್ಟು ನೌಕರಿಗಳನ್ನು ಕೊಡುವುದಕ್ಕೆ ತೀರ್ಮಾನವನ್ನು ತೆಗೆದುಕೊಂಡಿರುವ ಕೇಡರ್‌ಗಳಲ್ಲಿಯೂ ಕೂಡ ಸಾಕಾದಷ್ಟು ನೌಕರಿಗಳನ್ನು ಕೊಡುವುದಕ್ಕೆ ತೀರ್ಮಾನವನ್ನು ತೆಗೆದುಕೊಂಡಿರುವ ಕಾರಣ 32 ಜನ ಪದವೀಧರರಲ್ಲಿ 62 ಜನ ಇದ್ದರೂ ಕೇವಲ ಒಂದೆರಡು ವರ್ಷಗಳಲ್ಲಿ ಅವರೆಲ್ಲರಿಗೂ ಒಳ್ಳೆಯ ಕೆಲಸಗಳನ್ನು ಕೊಡತಕ್ಕ ವ್ಯವಸ್ಥೆಯನ್ನು ಮಾಡಿದ್ದೇವೆ. ಇನ್ನು ಎಸ್.ಎಸ್.ಎಲ್.ಸಿ ಮತ್ತು ಲೋಯರ್ ಸೆಕೆಂಡರಿ ಓದಿರತಕ್ಕವರು ಯಾರೇ ವೆಲ್‌ಫೇರ್ ಆಫಿಸರ್ ಇರಲಿ ಅವರನ್ನೇ ಎನ್‌ಲೀಸ್ಟ್ ಮಾಡಬೇಕೆಂದು ಈಗಾಗಲೇ ಆಜ್ಞೆ ಮಾಡಿದ್ದೇವೆ. ಸೋಷಿಯಲ್ ವೆಲ್‌ಫೇರ್ ಆಫೀಸರುಗಳನ್ನೆಲ್ಲಾ ಆಯಾ ಜಿಲ್ಲೆಗಳಲ್ಲಿಯೇ ರಿಜಿಸ್ಟರ್ ಮಾಡಿಕೊಳ್ಳಬೇಕು ಎಂಬ ಆಜ್ಞೆ ಮಾಡಿದ್ದೇವೆ. ಈಗಾಗಲೇ ಸಾವಿರಾರು ಜನ ಅಭ್ಯರ್ಥಿಗಳನ್ನು ರಿಕ್ರೂಟ್ ಮಾಡಿದ್ದಾರೆ. ನನ್ನ ಗಮನಕ್ಕೆ ಬಂದ ಹಾಗೆ ಎಸ್.ಎಸ್.ಎಲ್.ಸಿ ಮತ್ತು ಲೋಯರ್ ಸೆಕೆಂಡರಿ ಪಾಸಾಗಿ ಕೆಲಸವಿಲ್ಲ ಎಂದು ಹೇಳುವವರಿಲ್ಲ. ಹಿಂದೆ ನೂರಾರು ಜನ ಸಾವಿರಾರು ಜನ ಬಂದಿದ್ದರು. ಈಗ ಎಲ್ಲೋ ಒಂದೆರಡು ಜನ ಮಾತ್ರ ಬರುತ್ತಿದ್ದಾರೆ. ಅವರೆಲ್ಲರಿಗೂ ಕೂಡ ಕೆಲಸವನ್ನು ಕೊಡತಕ್ಕ ವ್ಯವಸ್ಥೆಯನ್ನು ಮಾಡಿದ್ದೇವೆ. ಈಗ ಆ ಆಕ್ಷೇಪಣೆ ಏನೂ ಇಲ್ಲ. ಅದರಲ್ಲಿ ಏನೂ ತಿರುಳು ಇಲ್ಲ ಎಂದು ಮಾತ್ರ ಹೇಳುತ್ತೇನೆ.

## ♦ ಆಡಳಿತದಲ್ಲಿ ಮೀಸಲಾತಿ ಕುರಿತ ಚರ್ಚೆಗಳು :

**ಎನ್. ರಾಚಯ್ಯನವರು ಸದನದಲ್ಲಿ ಮಾತನಾಡುತ್ತಾರೆಂದರೆ ಅದು ಶೋಷಿತರ ಪರವಾದ ಗುಡುಗು – ಸಿಡಿಲಿನಂತೆ ಸಮಾಜಕಲ್ಯಾಣದಂತಹ ಖಾತೆಯಲ್ಲಿ ಸಾಮಾಜಿಕ ನ್ಯಾಯ ಸ್ಥಾಪನೆಯ ನೆಲೆಯಲ್ಲಿ ಕರ್ತವ್ಯನಿರ್ವಹಿಸಿದವರು. ಆಡಳಿತದಲ್ಲಿ ಸಮ ಸಮಾಜದ ನಿರ್ಮಾಣಕ್ಕಾಗಿ ಇರಲೇಬೇಕಾದ ಮೀಸಲಾತಿಯನ್ನು ಕುರಿತ ದೀರ್ಘ ಚಿಂತನೆಗಳು ಇಲ್ಲಿ ದಾಖಲಾಗಿವೆ.**

ಶ್ರೀ ಎನ್.ರಾಚಯ್ಯ : ಈಗಾಗಲೇ ಸರ್ಕಾರದವರು ಒಂದು ಆಜ್ಞೆಯನ್ನು ಹೊರಡಿಸಿದ್ದಾರೆ. ಎಲ್ಲೆಲ್ಲಿ ಸರ್ಕಾರದ ಒಂದು ಇಂಟರೆಸ್ಟ್ ಇದೆಯೋ, ಸರ್ಕಾರದ ಒಂದು ಆಡಳಿತ ಕಂಟ್ರೋಲ್ ಏನಿದೆಯೋ ಅಂತಹ ಎಲ್ಲಾ ಸಂಸ್ಥೆಗಳಲ್ಲಿಯೂ, ಸ್ಥಳೀಯ ಸಂಸ್ಥೆಗಳಲ್ಲೂ ಮತ್ತು ಸರ್ಕಾರದಿಂದ ನೇಮಿತವಾಗಿರತಕ್ಕಂತಹ ಬೋರ್ಡುಗಳು, ಕಮಿಷನ್ ಕಮಿಟಿಗಳು ಎಲ್ಲೆಲ್ಲಿ ಇದೆಯೋ ಅಲ್ಲೆಲ್ಲಾ ಕೂಡ, ಮುನಿಸಿಪಲ್ ಹೈಸ್ಕೂಲ್ ಮೊದಲ್ಗೊಂಡು ಎಲ್ಲಾ ಕಡೆಗಳಲ್ಲೂ ಕೂಡ ರಿಜರ್ವೇಷನ್ ಆರ್ಡರ್ ಮಾಡಿದ್ದೇವೆ. ಷೆಡ್ಯೂಲ್ಡ್ ಕಾಸ್ಟ್ ಮತ್ತು ಷೆಡ್ಯೂಲ್ಡ್ ಟ್ರೈಬಿನವರಿಗೆ ಕೊಡಬೇಕು ಎಂದು ಅಲ್ಲಿಯೂ ಕೂಡ ವ್ಯವಸ್ಥೆಯನ್ನು ಮಾಡಿದ್ದೇವೆ. ಮಾನ್ಯ ಸದಸ್ಯರಿಗೆ ಇಂತಹ ವಿಚಾರಗಳಲ್ಲಿ ಏನಾದರು ಗೊತ್ತಾದರೆ ಅದನ್ನು ನನ್ನ ಗಮನಕ್ಕೆ ತಂದರೆ ಅದನ್ನು ಸರಿಪಡಿಸತಕ್ಕ ವ್ಯವಸ್ಥೆಯನ್ನು ಮಾಡುತ್ತೇನೆ. ಮಾನ್ಯ ಸದಸ್ಯರಿಗೆ ಗೊತ್ತಿರುವ ರೀತಿಯಲ್ಲಿ 10 ವರ್ಷಗಳಲ್ಲಿ ಸಾಧಿಸದೆ ಇರುವ ಕೆಲಸಗಳನ್ನು ಎರಡು ವರ್ಷಗಳಲ್ಲಿ ಮಾಡಿದ್ದೇವೆ, ಜನಸಂಖ್ಯೆ ಹೆಚ್ಚು ಇದೆ, ಸಮಸ್ಯೆ ದೊಡ್ಡದು, ಅಲ್ಲದೆ ದಿನಕ್ಕೆ ಜನಸಂಖ್ಯೆ ಬೆಳೆಯುತ್ತಿದೆ, ಈಗ ಮಾಡಿರತಕ್ಕದ್ದು ಸಾಕಾಗುತ್ತಾ ಇಲ್ಲ, ಈ ವಿಷಯ ಸರ್ಕಾರಕ್ಕೂ ಗೊತ್ತಿದೆ. ಇನ್ನೂ ಹೆಚ್ಚಿನ ಪ್ರಮಾಣದಲ್ಲಿ ರಾಜ್ಯಾಂಗದ ರೀತಿ ಸರ್ಕಾರದ ನೀತಿಯ ಪ್ರಕಾರವಾಗಿ, ಖಂಡಿತವಾಗಿಯೂ ಇನ್ನು ಹೆಚ್ಚಿನ ಪ್ರಮಾಣದಲ್ಲಿ ಇವರ ಪ್ರಗತಿಯನ್ನು ಸಾಧಿಸಬೇಕಾದ್ದು ಅತ್ಯಗತ್ಯ. ಅದನ್ನು ತಮ್ಮ ಸಹಕಾರದಿಂದ ಮಾಡುತ್ತೇವೆಂಬ ಧೈರ್ಯ ನಂಬಿಕೆ ಸರ್ಕಾರಕ್ಕೆ ಇದೆ. ಅದಕ್ಕೋಸ್ಕರ ತಾವು ಸಹಕರಿಸಬೇಕು ಎಂದು ಮಾತ್ರ ವಿಚಾರದಲ್ಲಿ

ಹೇಳುತ್ತೇನೆ. ಅದು ಏನಿದ್ದರೂ ಕೂಡ ಸರಿಪಡಿಸಿ ಕೆಲಸ ಮಾಡೋಣ. ಮಾನ್ಯ ಸದಸ್ಯರಿಗೆ ಗೊತ್ತಿದೆ. ಅವರಿಗೆ ಒಂದು ಪ್ರಯೋಜನ ಸಿಕ್ಕಬೇಕಾದರೆ ಸಮಾಜದ ವ್ಯವಸ್ಥೆಯಿಂದ ಕಷ್ಟ ಇದೆ. ಅವರ ಪರವಾಗಿ ಕೆಲಸ ಮಾಡುವವರು ಕಾನೂನು ಪ್ರಕಾರವಾಗಿ ಕೆಲಸ ಮಾಡಿದರೂ ನಾನಾ ತರಹ ಅಪಪ್ರಚಾರಗಳು ತೊಂದರೆಗಳು ಆಗತಕ್ಕದ್ದು ಸಹಜ. ದೇಶದ ಹಿತದೃಷ್ಟಿಯಿಂದಲೂ ಮತ್ತು ಬಡವರ ಹಿತ ದೃಷ್ಟಿಯಿಂದಲೂ ಕೆಲಸ ಮಾಡುವುದಕ್ಕೆ ಪ್ರಯತ್ನ ಮಾಡುತ್ತೇವೆ ಎಂದು ಮಾತ್ರ ನಾನು ಹೇಳುತ್ತೇನೆ. ಬಹಳ ಜವಾಬ್ದಾರರಾದಂಥ ಮಾನ್ಯ ಸದಸ್ಯರೊಬ್ಬರು ಜನರಲ್ ಅಡ್ಮಿನಿಸ್ಟ್ರೇಷನ್ ವಿಚಾರದಲ್ಲಿ ಮಾತನಾಡುವಾಗ ಮಂತ್ರಿಗಳು ಇಂಥವರು ಎಂದು ಹೆಸರು ಹೇಳದೆ ಅವರು ಹೇಳಿದರು, ಮಂತ್ರಿಗಳು ಇರಿಟೇಷನ್ ಆಗುವ ತರಹ ಭಾಷಣವನ್ನು ಮಾಡುತ್ತಾರೆ ಎಂದು ಈ ಸಂದರ್ಭದಲ್ಲಿ ನಾನು ತಮ್ಮಲ್ಲಿ ವಿನಯದಿಂದ ಮನವಿ ಮಾಡಿಕೊಳ್ಳುತ್ತೇನೆ. ತಮಗಾಗಲಿ ಅಥವಾ ಬೇರೆ ಯಾರಿಗೇ ಆಗಲೀ ಅಗೌರವ ಮಾಡುವ ಉದ್ದೇಶವಿಲ್ಲ. ತಾವು ಏನು ಕಾನೂನು ಮಾಡುತ್ತೀರೋ ಅದನ್ನು ಅಕ್ಷರಶಃ ನಿಷ್ಠೆಯಿಂದ ಜಾರಿಗೆ ತರಬೇಕು ಎನ್ನುವ ಉದ್ದೇಶ ಇದೆಯೇ ಹೊರತು ಇನ್ನೊಬ್ಬರ ಮನಸ್ಸನ್ನು ನೋಯಿಸಿ ಮಂತ್ರಿಗಳಾಗಿರತಕ್ಕದ್ದು ಎಂಬುದನ್ನು ತೋರಿಸಿ ಕೊಟ್ಟರೆ ಒಂದು ಘಳಿಗೆಯಲ್ಲಿ ಮಂತ್ರಿ ಸ್ಥಾನವನ್ನು ಬಿಡುವುದಕ್ಕೆ ತಯಾರು ಇದ್ದೇನೆ. ಅಂತಹುದ್ದೇನನ್ನೂ ನಾವು ಮಾಡಿಲ್ಲ. ಎಲ್ಲೋ ನೂರಕ್ಕೋ ಸಾವಿರಕ್ಕೋ ಒಬ್ಬಿಬ್ಬರು ಹರಿಜನ ಮುಖಂಡರುಗಳ ಅಥವಾ ಸದಸ್ಯರುಗಳ ವಿಚಾರದಲ್ಲಿ ಏನೋ ಪ್ರಸಂಗವಶಾತ್ ಒಂದೆರಡು ಅಸಹನೀಯ ಮಾತುಗಳನ್ನಾಡಬಹುದು. ಆದರೆ ಇಂತಹ ಮಂತ್ರಿಗಳು ಹೀಗೆ ಮಾತನಾಡಿದ್ದಾರೆಂದು ಅವರ ಹೆಸರನ್ನು ಹಿಡಿದು ಹೇಳದೆ ಮುಗಮ್ಮಾಗಿ ಕೆಲವು ಮಾನ್ಯ ಸದಸ್ಯರು ಏನು ಕೆಲವು ಮಾತುಗಳನ್ನಾಡಿದ್ದಾರೋ ಅದು ಕೇವಲ ಅವರಿಗೆ ಹರಿಜನ ಮಂತ್ರಿಗಳ ಮೇಲೂ, ಹರಿಜನ ಮುಖಂಡರುಗಳ ಮೇಲೂ ಇರತಕ್ಕ ಒಂದು ಅಸಹನೆ ಮತ್ತು ಅಸೂಯೆಯಿಂದಲೇ ಅವರು ಹಾಗೆ ಮಾತನಾಡಿದ್ದಾರೆಂದು ಇಷ್ಟು ಮಾತ್ರ ಹೇಳಿ ನಾನು ಇನ್ನು ಈ ವಿಚಾರವನ್ನು ಹೆಚ್ಚು ಪ್ರಸ್ತಾಪ ಮಾಡುವುದಕ್ಕೆ ಹೋಗುವುದಿಲ್ಲ.

ಇನ್ನು ನನ್ನ ಈ ಸಮಾಜಕಲ್ಯಾಣ ಶಾಖೆ ವಿಚಾರದಲ್ಲಿ ಕೆಲವರು ಒಳ್ಳೆಯ ಮಾತುಗಳನ್ನಾಡಿದ್ದಾರೆ. ಕೆಲವು ಒಳ್ಳೆಯ ಸಲಹೆಗಳನ್ನಿತ್ತಿದ್ದಾರೆ. ಮತ್ತೆ ಕೆಲವರು

ಏನೋ ಒಂದು ಮನಸ್ಸಿನಲ್ಲಿಟ್ಟುಕೊಂಡು ಟೀಕೆಗಳನ್ನು ಮಾಡಿದ್ದಾರೆ. ಆದರೆ ಈ ಬಾಬ್ತಿನಲ್ಲಿ ಒದಗಿಸಿರುವ ಹಣವು ನೇರವಾಗಿ ಜನರಿಗೆ ಸಲ್ಲುವಂತೆ ಈಗಾಗಲೇ ಈ ಬಗ್ಗೆ ಯೋಜನೆಗಳನ್ನು ಮಾಡಿದ್ದೇವೆ. ಆ ಯೋಜನೆ ಎಂದರೆ ಹಿಂದುಳಿದ ವರ್ಗದವರಿಗೋ, ಬಡವರ್ಗದವರಿಗೋ, ಹರಿಜನರಿಗೋ, ಗಿರಿಜನರಿಗೋ ಸಾಕಷ್ಟು ಸ್ಕಾಲರ್‌ಷಿಪ್‌ಗಳನ್ನು, ನರ್ಸರಿ ಸೆಂಟರ್‌ಗಳನ್ನು, ವಿದ್ಯಾರ್ಥಿ ನಿಲಯಗಳನ್ನು, ಹತ್ತನೇ ಕ್ಲಾಸಿನವರೆಗೆ ಓದತಕ್ಕ ಮಕ್ಕಳುಗಳಿಗೆಲ್ಲಾ ಪಠ್ಯಪುಸ್ತಕಗಳನ್ನು, ವ್ಯವಸಾಯಗಾರರಿಗೆ ವ್ಯವಸಾಯದ ಕಾಲೋನಿಗಳನ್ನು ಮತ್ತು ಈ ಜನರಿಗೆ ಸಣ್ಣ ಪುಟ್ಟ ಕೈಗಾರಿಕೆಗಳಲ್ಲೂ, ಸರ್ಕಾರಿ ಕೈಗಾರಿಕೆಗಳಲ್ಲೂ ಸಾಕಷ್ಟು ಸ್ಥಾನಮಾನಗಳು ದೊರೆಯುವ ಏರ್ಪಾಡನ್ನು ಮಾಡಲಾಗಿದೆ. ಹೀಗೆ ವಿದ್ಯೆ ಮತ್ತು ಎಕನಾಮಿ ಕಂಡೀಷನ್‌ಗಳು ಹೆಚ್ಚುತ್ತಾ ಬಂದರೆ ಆಗ ತಾನೇ ತಾನಾಗಿ ಇವರಿಗೆ ಎಲ್ಲರ ಹಾಗೆ ಸಮಾಜದಲ್ಲೂ ಸ್ಥಾನಮಾನಗಳು ದೊರತೇ ದೊರೆಯುತ್ತವೆ. ವೆಲ್‌ಫೇರ್ ಸ್ಟೇಟ್ ಎಂದರೆ ಏನೇನು ಧ್ಯೇಯಗಳನ್ನು ಸಾಧನೆ ಮಾಡಬೇಕೋ ಯಾರ್‍ಯಾರ ಅಭಿವೃದ್ಧಿಯನ್ನು ಮುಂದುವರೆಸಬೇಕೋ ಆ ಕಾಳಜಿ ಈ ಮಾನ್ಯ ಸಭೆಗೂ ಇದೆ. ಸರ್ಕಾರಕ್ಕೂ ಇದೆ. ಆದರೆ ಕೆಲವರು ಇದು ವೆಲ್‌ಫೇರ್ ಇಲಾಖೆ ಅಲ್ಲ. ಇದು ಇಲ್‌ಫೇರ್ ಇಲಾಖೆ ಎಂದು ಹೇಳಿದ್ದಾರೆ. ಹಾಗೆ ಅವರ ಮನಸ್ಸಿನಲ್ಲಿರತಕ್ಕ ಇಲ್‌ಫೇರ್ ಭಾವನೆಗಳನ್ನು ನಿವಾರಣೆ ಮಾಡುವುದಕ್ಕೆ ಈಗ ಈ ವೆಲ್‌ಫೇರ್ ಇಲಾಖೆಯನ್ನು ನೇಮಿಸಲಾಗಿದೆ. ಆದರೆ ಇದರಲ್ಲಿ ಮುಖ್ಯವಾದ ಒಂದು ಅಂಶವೇನೆಂದರೆ ಪ್ರತಿಯೊಬ್ಬರೂ ತಾವು ಮೊದಲು ಭಾರತೀಯರು ನಂತರ ಕರ್ನಾಟಕ ರಾಜ್ಯದವರು ಎಂಬ ಭಾವನೆಯಲ್ಲಿರಬೇಕಾದದ್ದು ಮುಖ್ಯ.

## ◆ ಮೀನುಗಾರಿಕೆ ಅಭಿವೃದ್ಧಿ ಬೇಡಿಕೆ ಮೇಲಿನ ಚರ್ಚೆಗಳು :

**ವ್ಯವಸಾಯ ಮತ್ತು ಮೀನುಗಾರಿಕೆಯನ್ನು ಕುರಿತ ಹಾಗೆ ನಡೆದಿರುವ ಈ ಚರ್ಚೆಯು ಎನ್. ರಾಚಯ್ಯ ಅವರ ರೈತರ – ಮೀನುಗಾರರ ಬಗೆಗಿನ ಕಾಳಜಿಯ ಸಂಕೇತವಾಗಿದೆ. ಎರಡನೆಯ ಪಂಚವಾರ್ಷಿಕ ಯೋಜನೆಯಲ್ಲಿ ಹಮ್ಮಿಕೊಂಡ ಗುರಿಯನ್ನು ಯಶಸ್ವಿಯಾಗಿ ಪೂರೈಸುವ ನಿಟ್ಟಿನಲ್ಲಿ ಅವರು ತೆಗೆದುಕೊಂಡ ಕ್ರಮಗಳ ಔಚಿತ್ಯಪೂರ್ಣ ಚಿಂತನೆ ಇಲ್ಲಿ ದಾಖಲಾಗಿದೆ.**

**ಶ್ರೀ ಎನ್.ರಾಚಯ್ಯ:** 23 ಮತ್ತು 25 ಈ ಎರಡು ಬೇಡಿಕೆಗಳ ಮೇಲಿನ ಚರ್ಚೆಯಲ್ಲಿ ಸಾಮಾನ್ಯ ಸದಸ್ಯರು ಭಾಗವಹಿಸಿದ್ದಾರೆ. ಅದಕ್ಕಾಗಿ ನಾನು ಅವರನ್ನು ವಂದಿಸುತ್ತೇನೆ. ಮಾನ್ಯ ಸದಸ್ಯರು ಭಾಷಣ ಮಾಡತಕ್ಕ ಕಾಲದಲ್ಲಿ ಕೆಲವಾರು ರಚನಾತ್ಮಕ ಸಲಹೆಗಳನ್ನು ಕೊಟ್ಟಿದ್ದಾರೆ. ಹಾಗೆಯೇ ಕೆಲವು ಟೀಕೆಗಳನ್ನು ಮಾಡಿದ್ದಾರೆ.

23ನೆಯ ಬೇಡಿಕೆಯಲ್ಲಿ ವ್ಯವಸಾಯ ಮತ್ತು ಮೀನುಗಾರಿಕೆ ಎರಡೂ ಇರುವ ಕಾರಣ ಮೊದಲು ಮೀನುಗಾರಿಕೆಯ ವಿಚಾರದಲ್ಲಿ ಮಾತನಾಡುತ್ತಾನೆ. ಕೆಲವು ಸದಸ್ಯರು ಅದರಲ್ಲೂ ಶ್ರೀಮಾನ್ ಹಜಾನನ್ ಪಂಡಿತರು ಮೀನು ಅಭಿವೃದ್ಧಿಯ ಬಗ್ಗೆ ತೀವ್ರವಾದ ಆಸಕ್ತಿಯನ್ನು ವಹಿಸಿದ್ದಾರೆ. ದೇಶದ ಆಹಾರ ಕೊರತೆಯನ್ನು ನಿವಾರಿಸುವ ಮೂಲ ದೃಷ್ಟಿಯಿಂದ ಹೆಚ್ಚಿನ ಶ್ರದ್ಧೆಯನ್ನು ವಹಿಸಿ ಈ ವಿಚಾರದತ್ತ ಗಮನಕೊಟ್ಟಿದ್ದಾರೆ. ಹೊಸ ಮೈಸೂರು ರಾಜ್ಯವಾದ ಮೇಲೆ 200 ಮೈಲಿಯಷ್ಟು ಕರಾವಳಿ ಪ್ರದೇಶ ನಮಗೆ ಸೇರಿತ್ತು. ಇದರಿಂದ ಇಡಿಯ ಭಾರತದಲ್ಲಿ ಹದಿನೈದರಲ್ಲಿ ಒಂದು ಭಾಗದಷ್ಟು ಕರಾವಳಿ ಪ್ರದೇಶ ಸೇರಿರುವುದರಿಂದ ಮೀನುಗಾರಿಕೆಯನ್ನು ಹೆಚ್ಚಿನ ರೀತಿಯಲ್ಲಿ ಅಭಿವೃದ್ಧಿ ಮಾಡಬೇಕೆನ್ನುವುದೇ ಸರ್ಕಾರದ ಉದ್ದೇಶ.

ಎರಡನೆಯ ಪಂಚವಾರ್ಷಿಕ ಯೋಜನೆಯ ಪ್ರಕಾರ ಒಂದು ಲಕ್ಷ ಟನ್ ಅಷ್ಟನ್ನು ನಾವು ಉತ್ಪಾದನೆ ಮಾಡಿ ಹಂಚಬೇಕು ಎಂದು ಇದ್ದೇವೆ. ಇದನ್ನು 1 ಲಕ್ಷ 33 ಸಾವಿರ ಟನ್ನಿಗೆ ಹೆಚ್ಚಿಸಬೇಕೆಂಬ ನಿರ್ದಿಷ್ಟವಾದ ಮಟ್ಟವನ್ನು

ಇಟ್ಟುಕೊಂಡಿದ್ದೇವೆ. ಆದುದರಿಂದ ಈ ಒಂದು ಗುರಿಯನ್ನು ಮುಟ್ಟಬೇಕಾದರೆ ಏನೇನು ಅನುಕೂಲತೆಗಳನ್ನು ಕಳೆದ ವರ್ಷದಲ್ಲಿ ಮಾಡಿದ್ದೇವೆಂದು ಹೇಳುತ್ತೇನೆ. Staff for development of fisheries inland area ಸಾಕಾದಷ್ಟು ಮಾಡಿದ್ದೇವೆ. ಕಳೆದ ವರ್ಷ ಹೊಳೆನರಸೀಪುರ, ಚಿಕ್ಕಮಗಳೂರು, ಗುಬ್ಬಿ ಮುಂತಾದೆಡೆ ಖಾಯಂ ಆಗಿ ನೀರಿನ ವಸತಿ 'ಇರುವ ಕಡೆ 14 ಡಿವಿಷನ್‌ಗಳನ್ನು ಸ್ಥಾಪನೆ ಮಾಡಿದ್ದೇವೆ. ಚಾಲ್ತಿ ಸಾಲಿನಲ್ಲಿ ಮೀನುಗಾರಿಕೆಯನ್ನು ಅಭಿವೃದ್ಧಿ ಮಾಡುವ ದೃಷ್ಟಿಯಿಂದ ಮೈಸೂರು, ಹಾಸನ, ಚನ್ನರಾಯಪಟ್ಟಣ, ಚಿಕ್ಕಬಳ್ಳಾಪುರ, ರಾಯಚೂರು, ಬಿಜಾಪುರಗಳಲ್ಲಿ ಆರು ಡಿವಿಷನ್‌ಗಳನ್ನು ಸ್ಥಾಪನೆ ಮಾಡಬೇಕೆಂಬ ಯೋಜನೆಯನ್ನಿಟ್ಟುಕೊಂಡಿದ್ದೇವೆ. ಅಂಕಿ ಅಂಶಗಳ ಸಂಗ್ರಹಣಕ್ಕಾಗಿ ಈಗಾಗಲೇ ಎರಡು statistical unitsನ್ನು ಕಳೆದ ವರ್ಷ ಏರ್ಪಾಡು ಮಾಡಿದ್ದೇವೆ. ಈ ವರ್ಷವೂ ಕೂಡ ಎರಡು ಯೂನಿಟ್‌ಗಳನ್ನು ಪ್ರಾರಂಭ ಮಾಡಬೇಕೆಂದಿದ್ದೇವೆ. ಅದೇ ರೀತಿಯಲ್ಲಿ research laboratoryಹೆಸರುಘಟ್ಟದಲ್ಲಿ ಈಗಾಗಲೇ ಪ್ರಾರಂಭ ಮಾಡಿದ್ದೇವೆ. ಮುಂದಿನ ವರ್ಷ ಮಂಗಳೂರು ಮತ್ತು ಕಾರವಾರಗಳಲ್ಲಿ boat building yards ಸ್ಥಾಪನೆ ಮಾಡುತ್ತೇವೆ. ಈ ಕಾರ್ಯಾಚರಣೆಯನ್ನು ಮುಂದಿನ ವರ್ಷ ಹೆಚ್ಚಿನ ರೀತಿಯಲ್ಲಿ ಮುಂದುವರೆಸಬೇಕೆಂದಿದ್ದೇವೆ. ಇದಕ್ಕಾಗಿ ಮೀನುಗಾರಿಕೆಯನ್ನು ಅವಲಂಬಿಸಿರತಕ್ಕ fisherman communityಯವರಿಗೆ ನೈಲಾನ್ ನೆಟ್ಸ್ ಮತ್ತು ಬೇಕಾದಂತಹ ಎಲ್ಲಾ ವಸ್ತುಗಳನ್ನು ಕೂಡ 1,70,000 ರೂಪಾಯಿ ಬೆಲೆ ಬಾಳುವ ಸಾಮಾನನ್ನು ಒದಗಿಸಿದ್ದೇವೆ. ಮುಂದಿನ ವರ್ಷ 50 ಸಾವಿರ ರೂಪಾಯಿ ಬೆಲೆಬಾಳುವ ವಸ್ತುಗಳನ್ನು ಎರಡನೆಯ ಪಂಚವಾರ್ಷಿಕ ಯೋಜನೆಯಲ್ಲಿ ಒದಗಿಸಬೇಕೆಂದು ಅಂದಾಜು ಮಾಡಿಕೊಂಡಿದ್ದೇವೆ. ಈಗಾಗಲೇ ಮಂಗಳೂರಿನಲ್ಲಿ ಟ್ರೈನಿಂಗ್ ಸೆಂಟರ್ ಮಾಡಿ 57 ಜನ ಮೀನುಗಾರರನ್ನು ತರಬೇತು ಮಾಡಿದ್ದೇವೆ. ಮತ್ತು ಈ ವರ್ಷ 40 ಜನರನ್ನು ತರಬೇತಿ ಮಾಡಬೇಕೆಂದುಕೊಂಡಿದ್ದೇವೆ. ಹಾಗೆಯೇ 240 ಲಕ್ಷ ಮಣ ಉಪ್ಪನ್ನು ಮೀನುಗಾರರಿಗೋಸ್ಕರ ಒದಗಿಸಿದ್ದೇವೆ. ಮುಂದಿನ ವರ್ಷ ಒಂದು ಲಕ್ಷ ಮಣವನ್ನು ಒದಗಿಸುತ್ತೇವೆ. ಕಾರವಾರ, ಭಟ್ಕಳ, ಕುಂದಾಪುರ, ಹಾಸನ ಇಂತಹ ಕಡೆಗಳಲ್ಲಿ Ice plant ಮತ್ತು cold storageಗಳನ್ನು ಕಳೆದ ವರ್ಷ ಸ್ಥಾಪನೆ ಮಾಡಿದ್ದೇವೆ. ಮುಂದಿನ ಸಾಲಿನಲ್ಲಿ ಮುಲ್ಕಿ ಮತ್ತು ದಕ್ಷಿಣ ಕನ್ನಡದ ಮತ್ತೊಂದು ಭಾಗದಲ್ಲಿ

ಇವುಗಳನ್ನು ಸ್ಥಾಪನೆ ಮಾಡಬೇಕೆಂದುಕೊಂಡಿದ್ದೇವೆ. ಕಳೆದ ವರ್ಷ ಮೂರು ಟ್ರಕ್ಸ್ ಒದಗಿಸಿದ್ದೇವೆ. ಈ ವರ್ಷ ಒಂದು ಟ್ರಕ್ಸ್ ಒದಗಿಸಬೇಕೆಂದುಕೊಂಡಿದ್ದೇವೆ. Fisheries Technological Research ಈಗಾಗಲೇ ಸ್ಥಾಪನೆ ಮಾಡಿದ್ದೇವೆ ಮತ್ತು Prawn Cultivation Center ಅನ್ನು ಈಗಾಗಲೇ ಮಂಗಳೂರಿನಲ್ಲಿ ಸ್ಥಾಪನೆ ಮಾಡಿದ್ದೇವೆ. ಈ ರೀತಿಯಲ್ಲಿ ಬಹು ಹೆಚ್ಚಿನ ಶ್ರದ್ಧೆಯಿಂದ ಮೀನುಗಾರಿಕೆಯ ವಿಚಾರದಲ್ಲಿ ಹೆಚ್ಚಿನ ಅನುಕೂಲಗಳನ್ನು ಕೊಟ್ಟಿದ್ದೇವೆ.

ಮೀನುಗಾರಿಕೆಯ ವಿಚಾರದಲ್ಲಿ ಹೇಳುವುದಾದರೆ ಸಮುದ್ರದಲ್ಲಿ ಮತ್ತು ಒಳ ಪ್ರದೇಶಗಳಲ್ಲಿರುವ ನೀರಿನಲ್ಲಿ ಉತ್ಪಾದನೆ ಮಾಡುತ್ತಿದ್ದೇವೆ. ಸಮುದ್ರದಲ್ಲಿರುವ ಮೀನನ್ನು ಉತ್ಪಾದನೆ ಮಾಡಬೇಕಾಗಿಲ್ಲ, ಹಿಡಿಯಬೇಕಾಗಿದೆ. ಸಮುದ್ರದಲ್ಲಿರುವ ಮೀನನ್ನು ಶೇಖರಣೆ ಮಾಡಬೇಕಾದರೆ ತರಬೇತಿಯಾಗಿರತಕ್ಕ ಜನ ಬೇಕು. ಆದುದ್ದರಿಂದಲೇ ಕಳೆದ ಮೂರು ವರ್ಷಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಮೀನುಗಾರಿಕೆಯ ವಿಚಾರದಲ್ಲಿ ವಿದ್ಯಾವಂತರನ್ನು ತರಬೇತಿ ಮಾಡಿದ್ದೇವೆ. ಮತ್ತು ಈಗಲೂ ಕೂಡ ತರಬೇತಿ ಮಾಡುತ್ತಿದ್ದೇವೆ. ಇದೇ ರೀತಿಯಲ್ಲಿ Inland fisherie ಅಭಿವೃದ್ಧಿ ಮಾಡಬೇಕಾದರೆ ಆ ಕಸುಬಿನಲ್ಲಿ ತರಬೇತಿದಾರರಾಗಿರತಕ್ಕ ಜನಬೇಕಾಗಿದೆ. ಆ ಒಂದು ಕಾರಣದಿಂದ ನಾವು ಹೆಚ್ಚಿನ ರೀತಿಯಲ್ಲಿ ಸುಮಾರು 27 ಶಾಲೆಗಳನ್ನು ತೆರೆದು Fisherman community ಯವರ ಮಕ್ಕಳಿಗೆ ತರಬೇತಿಕೊಟ್ಟಿದ್ದೇವೆ. ಪ್ರಾಥಮಿಕ, ಮಾಧ್ಯಮಿಕ ಹಾಗೂ ಪ್ರೌಢಶಾಲೆಗಳಲ್ಲಿ ಸಾಮಾನ್ಯವಾಗಿ ವಿದ್ಯಾಭ್ಯಾಸವನ್ನು ಕೊಡುವುದರ ಜೊತೆಗೆ ಮಿನುಗಾರಿಕೆಯಲ್ಲಿ ವಿಶೇಷವಾದ ತರಬೇತಿಯನ್ನು ಕೊಟ್ಟಿದ್ದೇವೆ. ಇವರಿಗೆ ಬೇಕಾದಂತಹ ಎಲ್ಲಾ ಸಾಮಾನುಗಳನ್ನು ನಮ್ಮ ಶಾಲೆಯಿಂದಲೇ ನೀಡುತ್ತಿರುವುದರಿಂದ, ಈ ವಿಚಾರಕ್ಕೆ ನಾವು ಎಷ್ಟು ನಿಗಾ ಕೊಡಬೇಕಾಗಿತ್ತೋ ಅದಕ್ಕಿಂತಲೂ ಹೆಚ್ಚಿನ ನಿಗಾ ಕೊಟ್ಟಿದ್ದೇವೆ; ಇನ್ನು ಹೆಚ್ಚಿನ ರೀತಿಯಲ್ಲಿ ಕೊಡುತ್ತೇವೆ.

Deep sea fishing ಮಾಡಬೇಕಾದರೆ mechanised boat ಕೊಡಬೇಕಾಗುತ್ತದೆ. ಕಳೆದ ಎರಡು ವರ್ಷಗಳಲ್ಲಿ 25ಕ್ಕಿಂತಲೂ ಹೆಚ್ಚು mechanised boats ಕೊಟ್ಟಿದ್ದೇವೆ. ಆಗಲೇ ಹೇಳಿದಂತೆ ಮಂಗಳೂರು ಮತ್ತು ಕಾರವಾರಗಳಲ್ಲಿರುವ ದೋಣಿಗಳನ್ನು ಕಟ್ಟತಕ್ಕ boat building yards ಚೆನ್ನಾಗಿ

ಕೆಲಸ ಮಾಡುತ್ತಿದೆ. ತರಬೇತಿಗಾಗಿ ಕಳುಹಿಸಿದ್ದೇವೆ. ಇದಕ್ಕೆ ಸಂಬಂಧಪಟ್ಟ ಡೈರೆಕ್ಟರನ್ನು ಜಪಾನ್ ದೇಶಕ್ಕೆ ಕಳುಹಿಸಬೇಕಾಗಿತ್ತು. ಆಧುನಿಕ ರೀತಿಯ ಮೀನುಗಾರಿಕೆಯ ವಿಚಾರದಲ್ಲಿ ಹೆಚ್ಚಿನ ಪರಿಶ್ರಮವನ್ನು ಹೊಂದಿ ಅವರು ಹಿಂತಿರುಗಿದ್ದಾರೆ. ಈ ರೀತಿಯಾಗಿ ಮೀನುಗಾರಿಕೆಯಲ್ಲಿ ಇಲಾಖೆಯವರು ಹೆಚ್ಚಿನ ಗಮನವನ್ನು ಕೊಟ್ಟಿದ್ದಾರೆ. ಇಷ್ಟು ಮಾತ್ರ ಹೇಳಿ ಚಾಲ್ತಿ ಸಾಲಿನಲ್ಲಿ ಮತ್ತು ಮೂರನೆಯ ಪಂಚವಾರ್ಷಿಕ ಯೋಜನೆಯಲ್ಲಿ ಇನ್ನು ಹೆಚ್ಚಿನ ಗಮನ ಕೊಡುತ್ತೇವೆಂದು ಮಾತ್ರ ತಿಳಿಸುತ್ತೇನೆ. ಆದುದ್ದರಿಂದಲೇ ಈ ಇಲಾಖೆಯ ವಿಚಾರದಲ್ಲಿ ಮಾನ್ಯ ಸದಸ್ಯರು ಏನು ಅನುಮಾನವನ್ನು ವ್ಯಕ್ತಪಡಿಸಿದರೋ ಅದು ಸರಿಸಮಾನವಾದುದ್ದಲ್ಲವೆಂದು ಮಾತ್ರ ಈ ಸಂದರ್ಭದಲ್ಲಿ ಹೇಳುತ್ತೇನೆ.

**ಶ್ರೀ ಎಸ್.ಡಿ.ಕೊತಾವಳೆ (ಚಿಕ್ಕೋಡಿ)** : ಏನು ಕ್ರಮ ತೆಗೆದುಕೊಂಡಿದ್ದೀರಿ?

**ಶ್ರೀ ಎನ್.ರಾಚಯ್ಯ** : ಈಗಾಗಲೇ, ಒದಗಿಸುತ್ತಿದ್ದೇವೆ. ಈ ವರ್ಷವೂ ಹೆಚ್ಚಿನ ಪ್ರಮಾಣದಲ್ಲಿ ಒದಗಿಸುವುದಕ್ಕೆ ಪ್ರಯತ್ನ ಮಾಡಿದ್ದೇವೆ. ಮಾನ್ಯ ಸದಸ್ಯರಿಗೆ ಯಾವುದಾದರೂ ಸಂದರ್ಭ ಗೊತ್ತಿದ್ದ ಪಕ್ಷದಲ್ಲಿ ತಿಳಿಸಿದರೆ ಕೂಡಲೇ ಕಳುಹಿಸಿಕೊಡುತ್ತೇವೆಂಬ ಭರವಸೆಯನ್ನು ಕೊಡುತ್ತೇನೆ.

ಶ್ರೀಮತಿ ಚಂಪಾಬಾಯಿಯವರು ಸಹಕಾರ ಸಂಘಗಳಿಗೆ ಏನೂ ಅನುಮತಿಯನ್ನು ಕೊಡುವುದಿಲ್ಲವೆಂದು ಹೇಳಿದರು. ಮುಂಬೈ ಸರಕಾರದಲ್ಲಿದ್ದಾಗ ಸಹಕಾರ ಸಂಘಕ್ಕೆ ಏನು ರಿಯಾಯಿತಿಯನ್ನು ಕೊಟ್ಟಿದ್ದರೋ ಅದೇ ರಿಯಾಯಿತಿಯನ್ನು ಹರಾಜು ಹಾಕದೆ ಹರಿಜನ ಕೋ ಆಪರೇಟಿವ್ ಸೊಸೈಟಿಗಳಿಗೆ ಕೊಡತಕ್ಕ ರಿಯಾಯಿತಿಯನ್ನು ತೋರಿಸಬೇಕೆಂದು ಆಜ್ಞೆ ಮಾಡಿದ್ದೇವೆ. ಅವರು ಹೇಳಿದ ರೀತಿಯಲ್ಲಿ ಯಾವ ವಿಧವಾದ ಅನುಮಾನಕ್ಕಾಗಲೀ, ಅನ್ಯಾಯಕ್ಕಾಗಲೀ ಅವಕಾಶಕೊಟ್ಟಿಲ್ಲ. ಅವರು ಹೇಳಿದ್ದರಲ್ಲಿ ಅಷ್ಟೇನು ತಿರುಳಿಲ್ಲವೆಂದು ಮಾತ್ರ ಹೇಳುತ್ತೇನೆ.

ವ್ಯವಸಾಯದ ಇಲಾಖೆಯ ವಿಚಾರದಲ್ಲಿ ಬಹು ಮುಖ್ಯವಾಗಿ ನಾನು ಸರ್ಕಾರದ ಧ್ಯೇಯ ಧೋರಣೆಗಳು ಏನು ಎನ್ನುವುದನ್ನು ವಿವರಣೆ ಮಾಡಲು ಇಚ್ಚಿಸುತ್ತೇನೆ. ಮಾನ್ಯ ಸದಸ್ಯರು ಭಾಷಣ ಮಾಡುವಾಗ ಸರ್ಕಾರ ಈ ರೀತಿ ತನ್ನ ಪ್ರಯತ್ನದಲ್ಲಿ ನಿಜವಾಗಿಯೂ ಯಶಸ್ವಿಯಾಗಿಲ್ಲ ಎಂದು ಹೇಳುವಾಗ

ಯಾರಾದರೂ ಅಂಕಿಅಂಶಗಳನ್ನು ಕೊಟ್ಟು ಹೇಳಿದ್ದರೆ ಚೆನ್ನಾಗಿತ್ತು. ಉದಾಹರಣೆಗೆ ನಮ್ಮ ದೇಶದಲ್ಲಿ ಆಹಾರದ ಪರಿಸ್ಥಿತಿಯನ್ನು ಸುಧಾರಿಸಬೇಕು ಎನ್ನುವುದನ್ನು ಕೇಂದ್ರ ಸರ್ಕಾರ ಮತ್ತು ರಾಜ್ಯ ಸರ್ಕಾರ ಎರಡೂ ತಿಳಿದುಕೊಂಡಿವೆ. ಎರಡನೆಯ ಪಂಚವಾರ್ಷಿಕ ಯೋಜನೆಯಲ್ಲಿ ಎಷ್ಟು ಟಾರ್ಗೆಟ್ ಪಡೆಯಬೇಕಾಗಿತ್ತು ಎಂದರೆ 5.1 ಲಕ್ಷ ಟನ್ ಆಹಾರೋತ್ಪಾದನೆಯನ್ನು ಮಾಡಬೇಕಾಗಿತ್ತು. ನಾವು ಈಗಾಗಲೇ ಆರು ಲಕ್ಷ ಟನ್‌ಗಿಂತಲೂ ಹೆಚ್ಚಿಗೆ ಆಹಾರೋತ್ಪಾದನೆಯನ್ನು ನಾಲ್ಕು ವರ್ಷಗಳಲ್ಲಿ ಮಾಡಿದ್ದೇವೆ. ಸಾಕಾದಷ್ಟು ರೀತಿಯಲ್ಲಿ ರೈತರಿಗೆ ಬೇಕಾದಂಥ ಹಣ ಸಹಾಯ, ನೀರಿನ ಸರಬರಾಜು, ಮತ್ತು ವ್ಯವಸಾಯಕ್ಕೆ ಬೇಕಾದಂಥ ಗೊಬ್ಬರ, ಕಬ್ಬಿಣ ಮುಂತಾದವುಗಳನ್ನು ಒದಗಿಸುವ ವಿಚಾರದಲ್ಲಿಯೂ, ಹಾಗೆಯೇ ಟ್ರ್ಯಾಕ್ಟರುಗಳನ್ನು ಮತ್ತು ಬುಲ್ಡೋಜರುಗಳನ್ನು ಸಾಕಷ್ಟು ರೀತಿಯಲ್ಲಿ ಒದಗಿಸದಿದ್ದರೆ ನಾಲ್ಕು ವರ್ಷಗಳಲ್ಲೇ ನಾವು ಇಷ್ಟು ಪ್ರಮಾಣದಲ್ಲಿ ಪ್ರಗತಿಯನ್ನು ಸಾಧಿಸಲು ಸಾಧ್ಯವಾಗುತ್ತಿರಲಿಲ್ಲ. ಸತ್ಯಾಂಶ ಹೀಗಿರುವಲ್ಲಿ ಸರ್ಕಾರ ಏನೂ ಪ್ರಯತ್ನದಲ್ಲಿ ವಿಫಲರಾಗಿದ್ದಾರೆ, ಇದು ನಾಚಿಕೆಗೇಡು ಎಂದು ಶ್ರೀ ಚಾ[illegible]ಯ್ಯನವರು ಹೇಳಿದರು. ಇದಕ್ಕೆ ನಾನು ಏನು ಉತ್ತರ ಕೊಡುವುದು?

## ♦ ವ್ಯವಸಾಯ ಪ್ರಗತಿ ಕುರಿತಾದ ನಿಲುವುಗಳು :

**ಸಮಾಜದ ಬಹುದೊಡ್ಡ ಸಮಸ್ಯೆ ಹಸಿವು. ಬಡಜನ – ಬಡತನ ಈ ದೇಶದ ಸಂಪತ್ತು. ಬಡತನದ ನಿರ್ಮೂಲನೆಗೆ ಕೃಷಿಯನ್ನು ಪ್ರೋತ್ಸಾಹಿಸುವತ್ತ ಗಮನ ಹರಿಸಿರುವುದನ್ನು ಇಲ್ಲಿ ಮುಖ್ಯವಾಗಿ ಗ್ರಹಿಸಿಕೊಳ್ಳಬಹುದು. ಶ್ರೀ ಜಿ.ಎನ್. ಬೊಮ್ಮೇಗೌಡ, ಶ್ರೀ ಸಿ.ಜೆ. ಮಲ್ಲಿಕಾರ್ಜುನಪ್ಪ, ಶ್ರೀ ವಿ. ಶ್ರೀನಿವಾಸಶೆಟ್ಟಿ, ಶ್ರೀ ಸಿ.ಜೆ. ಮುಕ್ಕಣಪ್ಪ, ಬಿ.ಎಲ್. ನಾರಾಯಣಸ್ವಾಮಿ, ಕೆ.ಎಲ್. ನರಸಿಂಹಯ್ಯ, ಎ.ಆರ್. ಕರಿಸಿದ್ಧಪ್ಪ ಇವರುಗಳೊಂದಿಗಿನ ರಾಚಯ್ಯನವರ ಕಾಳಜಿಪೂರ್ಣ ಸಂವಾದ ಇದು.**

ಶ್ರೀ ಎನ್.ರಾಚಯ್ಯ : ಹಣವನ್ನು ಒದಗಿಸುವಾಗ ವಿತರಣೆ ಮಾಡಿ ಆ ಒಂದು ಬಾಬಿಗೆ ಎಷ್ಟು ನಾವು ಖರ್ಚು ಮಾಡಬೇಕೋ ಅಷ್ಟು ಮಾತ್ರ ಖರ್ಚು ಮಾಡಿರುವುದರಿಂದ ನಮಗೆ ಈ ಟಾರ್ಗೆಟ್ಟಿನ ಬೆಲೆ ಸಿಕ್ಕುತ್ತದೆ. ವ್ಯವಸಾಯದ ಕ್ಷೇತ್ರದಲ್ಲಿ ಅಭಿವೃದ್ಧಿಯನ್ನು ಹೆಚ್ಚಿಗೆ ಮಾಡಿ ಆಹಾರದ ಉತ್ಪಾದನೆಯನ್ನು ಮಾಡಬೇಕಾದರೆ ಬಜೆಟ್ಟಿನಲ್ಲಿ ಒದಗಿಸಿರುವ ಹಣಕ್ಕಿಂತಲೂ ಹೆಚ್ಚಿಗೆ ಹಣ ಬೇಕಾಗಿದ್ದರೆ ಸಪ್ಲಿಮೆಂಟರಿ ಗ್ರಾಂಟ್ ಎಷ್ಟೋ ಸಂದರ್ಭದಲ್ಲಿ ತೆಗೆದುಕೊಂಡಿದ್ದೇವೆ. ಹಣಕಾಸಿನ ಮಂತ್ರಿಗಳಿಗಾಗಲೀ, ನನಗಾಗಲೀ ಈ ವಿಚಾರದಲ್ಲಿ ಭಿನ್ನಾಭಿಪ್ರಾಯವಿಲ್ಲ. ಇದಕ್ಕೆ ಬೇಕಾದಷ್ಟು ಹಣವನ್ನು ಒದಗಿಸಿ ಖರ್ಚು ಮಾಡುತ್ತಿದ್ದೇವೆ. ಕೆಲವು ಬಾಬ್ತಿನಲ್ಲಿ ಹಣ ಉಳಿತಾಯ ಕಾಣುವುದಕ್ಕೆ ಕಾರಣ ಇದೆ. ಕೆಲವು ಸೀಡ್ ಫಾರಮ್ಸ್ ಸ್ಥಾಪನೆ ಮಾಡುವುದರಲ್ಲಿ ಹಣ ನಿಗದಿ ಮಾಡಿರುತ್ತೇವೆ. ಆದರೆ ಜಾಗ ಆಕ್ವೈರ್ ಆಗಬೇಕಾದ ಸಂದರ್ಭದಲ್ಲಿ ತಡವಾಗಿ ಹಣ ಉಳಿತಾಯವಾಗುತ್ತದೆ.

ಸಿ.ಜೆ. ಮುಕ್ಕಣ್ಣಪ್ಪ : ಬಹಳ ಬುದ್ಧಿವಂತಿಕೆಯಿಂದ ಹಣವನ್ನು ಖರ್ಚು ಮಾಡಿದ್ದೇವೆ. ಐದು ವರ್ಷಗಳಲ್ಲಿ ನಾವು ಏನು ಸಾಧನೆ ಮಾಡಬೇಕಾಗಿತ್ತೋ ಅದಕ್ಕಿಂತಲೂ ಇನ್ನು ಹೆಚ್ಚಿಗೆ ನಾಲ್ಕು ವರ್ಷಗಳಲ್ಲಿ ಸಾಧನೆ ಮಾಡಿದ್ದೇವೆ

ಎಂದು ಹೇಳಿದಿರಿ, ಹಾಗಾದರೆ ನೀವು ಎಷ್ಟು ಟನ್ ಆಹಾರವನ್ನು ಹೊರಗಡೆಯಿಂದ ಆಮದು ಮಾಡಿದ್ದೀರಿ?

**ಶ್ರೀ ಎನ್.ರಾಚಯ್ಯ :** ಒಬ್ಬರಿಗೆ 16 ಔನ್ಸ್ ಆಹಾರವನ್ನು ಒದಗಿಸಬೇಕಾದರೆ, ಬೇಕಾಗುವ ಧಾನ್ಯ ಈಗಾಗಲೇ ಸಾಕಾದಷ್ಟು ನಮ್ಮ ರಾಜ್ಯದಲ್ಲಿ ರಾಗಿ, ಜೋಳ ಮುಂತಾದವುಗಳನ್ನು ಬೆಳೆಯುತ್ತಿದ್ದಾರೆ. ಅವುಗಳ ಸ್ವಾವಲಂಬನೆ ನಮಗೆ ಇದೆ. ಆದರೆ ಭತ್ತ ಬೆಳೆಯತಕ್ಕದ್ದು ಸ್ವಲ್ಪ ಮಾತ್ರ ಡಿಫಿಷಿಟ್ ಇದೆ. ಮಾನ್ಯ ಸದಸ್ಯರಿಗೆ ಗೊತ್ತಿರುವ ಹಾಗೆ ತುಂಗಭದ್ರಾ ಪ್ರಾಜೆಕ್ಟ್, ತುಂಗಾಜಲಾಶಯ ಮುಂತಾದವುಗಳನ್ನು ಕಟ್ಟಿದ್ದೇವೆ ಮತ್ತು ತಮಗೆಲ್ಲರಿಗೂ ತಿಳಿದ ಹಾಗೆ ತುಂಗಭದ್ರಾ ಪ್ರದೇಶದಲ್ಲಿ ರೈತರು ಯಾರಾದರೂ ವ್ಯವಸಾಯ ಮಾಡುತ್ತೇವೆಂದು ಮುಂದೆ ಬಂದರೆ ಅವರಿಗೆ ಬೇಕಾದ, ಸಕಲ ಸೌಕರ್ಯಗಳನ್ನು ಸರ್ಕಾರದವರು ಒದಗಿಸಿಕೊಡುತ್ತಾರೆ. ಆಹಾರವನ್ನು ಬೆಳೆಯಿರಿ ಎಂದು ಹೇಳುತ್ತಿದ್ದೇವೆ. ಆದರೆ ರೈತರು ಯಾರೂ ಮುಂದೆ ಬರುತ್ತಿಲ್ಲ. ಸುಮ್ಮನೆ ಸರ್ಕಾರವನ್ನು ಆಕ್ಷೇಪಣೆ ಮಾಡತಕ್ಕದ್ದು ಸರಿಯಲ್ಲ. ನಮ್ಮ ದೇಶ, ರಷ್ಯಾ, ಚೈನಾ ದೇಶ ಇದ್ದ ಹಾಗೆ ಇಲ್ಲ. ಅವರಿಗೆ ಬೇಕಾದಂತಹ ಹಣವನ್ನು ಸಾಲದ ರೂಪದಲ್ಲಿ ಕೊಡುವುದು. ಕೋ-ಆಪರೇಟಿವ್ ಸೊಸೈಟಿಗಳಲ್ಲಿ ರಿಜರ್ವ್‌ಬ್ಯಾಂಕ್‌ಗಳಲ್ಲಿ ಮತ್ತು ಮೈಸೂರು ಬ್ಯಾಂಕ್‌ಗಳಲ್ಲಿ ರೈತರಿಗೆ ಹಣವನ್ನು ಸಾಲದ ರೂಪದಲ್ಲಿ ಕೊಡಲು ವ್ಯವಸ್ಥೆಯನ್ನು ಮಾಡಿದ್ದೇವೆ. ನಾನು ಈಗ 9-10 ತಿಂಗಳುಗಳಿಂದ ಈ ವ್ಯವಸಾಯ ಕ್ಷೇತ್ರದಲ್ಲಿ ರೈತರಿಗೆ ಏನೇನು ಅನಾನುಕೂಲಗಳು ಇವೆಯೋ ಅಂತಹವನ್ನು ಸರಿಪಡಿಸುವುದಕ್ಕೆ ತಕ್ಕ ಕ್ರಮವನ್ನು ತೆಗೆದುಕೊಳ್ಳುತ್ತೇವೆ. ಆಹಾರದ ಉತ್ಪಾದನೆಯನ್ನು ಹೆಚ್ಚಾಗಿ ಮಾಡಬೇಕು ಎಂದು ಮನಸ್ಸಿನಲ್ಲಿ ಇಟ್ಟುಕೊಂಡು ರೈತರಿಗೆ ಹಣವನ್ನು ಸಾಲದ ರೂಪದಲ್ಲಿ ಒದಗಿಸುವ ಏರ್ಪಾಡನ್ನು ಮಾಡಿದ್ದೇವೆ. ನೀರಾವರಿಗಾಗಿ ನಮ್ಮ ಬಜೆಟ್ಟಿನಲ್ಲಿ ಎಲ್ಲಾ ಶಾಖೆಗಳಿಗಿಂತಲೂ ಹೆಚ್ಚು ಹಣವನ್ನು ಒದಗಿಸಿದ್ದೇವೆ. ಆಹಾರದ ಉತ್ಪಾದನೆಗೋಸ್ಕರ ರೈತರ ಅಭಿವೃದ್ಧಿಯನ್ನು ಸಾಧಿಸಿದರೆ ಸಾಕು ಎಂದು, ಒಂದು ಹೆಚ್ಚಿನ ನೀರಾವರಿ ಸೌಕರ್ಯವನ್ನು ಅವರಿಗೆ ಒದಗಿಸುವುದು ಅತ್ಯಗತ್ಯ ಎಂದು ಈ ವಿಷಯವನ್ನು ಮನಸ್ಸಿನಲ್ಲಿ ಇಟ್ಟುಕೊಂಡು ಸರ್ಕಾರದವರು ಬಜೆಟ್ಟಿನಲ್ಲಿ ಎಲ್ಲಾ ಶಾಖೆಗಳಿಗಿಂತಲೂ ನೀರಾವರಿ ಶಾಖೆಗೆ ಬಹು ಹೆಚ್ಚಿನ ಹಣವನ್ನು ಒದಗಿಸಿ ತಮ್ಮ ಮಂಜೂರಾತಿಯನ್ನು ಪಡೆಯುವುದಕ್ಕೋಸ್ಕರ ಈಗ ತಾನೇ

ತಮ್ಮ ಮುಂದೆ ಇಟ್ಟಿದ್ದೇವೆ. ನೀರಾವರಿ ಸೌಕರ್ಯ ಒದಗಿಸುವುದು ಅಷ್ಟೇ ಅಲ್ಲದೆ, ಹಣ ಸಹಾಯ, ವ್ಯವಸಾಯಕ್ಕೆ ಬೇಕಾದ ಗೊಬ್ಬರ, ಕಬ್ಬಿಣ ಇವೆಲ್ಲವನ್ನೂ ಒದಗಿಸುವ ಏರ್ಪಾಡು ಮಾಡುತ್ತಿದ್ದೇವೆ.

**Sri C.J.Mukkannappa:** What is the extent of loan under food crops what is the acreage under area gardens, suger cane, and other commercial corps and what is the extent of land under ragi paddy?

**ಶ್ರೀ ಎನ್. ರಾಚಯ್ಯ :** ಸ್ವಾಮಿ, ಸಂಸ್ಥಾನದಲ್ಲಿ 200 ಲಕ್ಷ ಎಕರೆ ಜಮೀನು ಉಳುಮೆ ಆಗುವುದು ಇದೆ. ಈಗ 119 ಲಕ್ಷ ಎಕರೆ ಜಮೀನನ್ನು ಮಾತ್ರ ಉಳುಮೆ ಮಾಡಿರುವುದು. ಇನ್ನು ಉಳಿತಾಯದ ಜಮೀನನ್ನು ಉಳುಮೆಗೆ ತರಬೇಕಾಗಿದೆ. ಪ್ರತಿ ವರ್ಷವೂ ಕೂಡ ಲಕ್ಷಾಂತರ ಎಕರೆ ಜಮೀನನ್ನು ಉಳುಮೆಗೆ ತರುತ್ತಿದ್ದೇವೆ. ಈಗ ನಮಗೆ ಬೇಕಾಗಿರತಕ್ಕಂತಹ ಆಹಾರ ಪದಾರ್ಥಗಳ ವಿಷಯದಲ್ಲಿ ಇನ್ನು ಎರಡು ಮೂರು ವರ್ಷಗಳಲ್ಲಿ ಸ್ವಾವಲಂಬಿಗಳಾಗುವುದಕ್ಕೆ ಅವಕಾಶವಿದೆ ಎಂದು ಮಾತ್ರ ನಾನು ಹೇಳುತ್ತೇನೆ. ಇನ್ನು ವ್ಯವಸಾಯಕ್ಕೆ ಸಂಬಂಧಪಟ್ಟ ಕಾಫಿಸೀಡ್ಸ್, ಹೊಗೆಸೊಪ್ಪು ಇತ್ಯಾದಿಗಳೆಲ್ಲವೂ ಪಟ್ಟಿಯಲ್ಲಿವೆ. ಅದರ ವಿವರಣೆಯನ್ನು ಹೇಳಬೇಕಾದರೆ ಬಹಳ ಕಾಲ ಬೇಕಾಗುತ್ತದೆ.

**ಶ್ರೀ ಎನ್. ರಾಚಯ್ಯ :** ಮಾನ್ಯ, ಸದಸ್ಯರು ಕೊಟ್ಟಿರತಕ್ಕ ಸಲಹೆಯನ್ನು ಈಗಾಗಲೇ ಸರ್ಕಾರದವರು ಯೋಜನೆ ಮಾಡಿದ್ದಾರೆ ಮತ್ತು ವ್ಯವಸಾಯದ ಅಭಿವೃದ್ಧಿಗಾಗಿ ಸಂಸ್ಥಾನದ ಮಟ್ಟದಲ್ಲಿ ಒಂದು ಅಗ್ರಿಕಲ್ಚರ್ ಅಡ್‌ವೈಸರಿ ಬೋರ್ಡ್ ಎಂದು ಮಾಡಲಾಗಿದೆ. ಈ ಬೋರ್ಡಿನವರು ಇವೆಲ್ಲವನ್ನೂ ಕೂಲಂಕಷವಾಗಿ ಪರಿಶೀಲನೆ ಮಾಡಿ ಸಾಧ್ಯವಾದರೆ ಅದನ್ನು ಎರಡು ಮೂರು ತಿಂಗಳುಗಳೊಳಗಾಗಿ ಒಂದು ವರದಿಯನ್ನು ಕಳುಹಿಸಬೇಕೆಂದು ಕೇಳಿದ್ದೇವೆ. ಅದು ಆದ ಮೇಲೆ ಯಾವ ರೀತಿಯಲ್ಲಿ ಮಾಡಬಹುದು ಎಂಬುದನ್ನು ಕೂಲಂಕಷವಾಗಿ ಮಾಡಬಹುದು ಎಂಬುವನ್ನೆಲ್ಲಾ ಉದ್ದೇಶಿಸಿದ್ದಾರೆ ಎಂದು ಈ ಸಂದರ್ಭದಲ್ಲಿ ಹೇಳುತ್ತೇನೆ.

ಮೀನುಗಾರಿಕೆಯ ವಿಚಾರದಲ್ಲಿ ಒಂದು ವಿಷಯವನ್ನು ತಿಳಿಸಬೇಕಾಗಿದೆ. ಕೇಂದ್ರ ಸರ್ಕಾರದವರ ಆದೇಶದ ಪ್ರಕಾರ ಈಗಾಗಲೇ ಸಂಸ್ಥಾನದಲ್ಲಿ ಫಿಷರಿ ಬೋರ್ಡ್ ಒಂದನ್ನು ಮಾಡಬೇಕೆಂದು ಯೋಚನೆ ಮಾಡಿದ್ದೇವೆ. ಆದ್ದರಿಂದ ಈ ಮೀನುಗಾರಿಕೆಯ ವಿಚಾರದಲ್ಲಿ ಹೆಚ್ಚಿನ ಗಮನವನ್ನು ಕೊಡಲು ಅನುಕೂಲವಾಗುತ್ತದೆ ಮತ್ತು ಮುಕ್ತವಾದ ಕಾರ್ಯಕ್ರಮವನ್ನು ಕೈಗೊಳ್ಳಲು ಅನುಕೂಲವಾಗುತ್ತದೆ. ಈ ಬೋರ್ಡಿನಲ್ಲಿ 27 ಜನ ಸದಸ್ಯತ್ವ ಬೇಕೆಂದು ಮತ್ತು ಈ ರೀತಿಯಾದ ಅಡ್ವೈಸರ್ ಬೋರ್ಡ್ ಇರಬೇಕೆಂದು ಈಗಾಗಲೇ ಆಜ್ಞೆ ಮಾಡಿದ್ದೇವೆ. ಇದು ಇವತ್ತೋ ನಾಳೆಯೋ ಹೊರಬೀಳಬಹುದು.

ವ್ಯವಸಾಯದ ವಿಚಾರದಲ್ಲಿ ಮಾನ್ಯ ಸದಸ್ಯರಾದ ಶ್ರೀಮಾನ್ ಮುಕ್ಕಣ್ಣಪ್ಪನವರು ತಿಳಿದ ಹಾಗೆ ವಿವರವಾದ ಕ್ಯಾಷು ಕ್ರಾಫುಗಳ ಬಗ್ಗೆ ಮತ್ತು ಇನ್ನಿತರ ಬೆಳೆಗಳ ಬಗ್ಗೆ ತಮ್ಮ ಮುಂದೆ ಇಟ್ಟಿದ್ದೇವೆ. ಮತ್ತು ಈಗಾಗಲೇ ವರದಿಗಳ ಮೂಲಕ ಇವೆಲ್ಲವನ್ನೂ ಉಪಯೋಗಿಸಲಾಗಿದೆ. ವ್ಯವಸಾಯದ ಇಲಾಖೆಯನ್ನು ನೋಡಿದರೆ ಬಹಳ ಮಂದಗಾಮಿಯಾಗಿ ಕೆಲಸ ಮಾಡತಕ್ಕ ಇಲಾಖೆಯಾಗಿದೆ ಎಂದು ಕೆಲವು ಮಾನ್ಯ ಸದಸ್ಯರು ಹೇಳಿದರು. ನಮ್ಮ ದೇಶದಲ್ಲಿ ಇಲ್ಲಿಯ ವ್ಯವಸಾಯಕ್ಕಾಗಿ ಯಾವ ರೀತಿಯಾದ ಉತ್ತೇಜನ ಇದೆ. ಅದನ್ನೇ ಮುಂದುವರೆಸಿಕೊಂಡು ಇನ್ನು ಹೆಚ್ಚಿನ ಉತ್ತೇಜನ ಕೊಟ್ಟು ವ್ಯವಸಾಯವನ್ನು ಅಭಿವೃದ್ಧಿ ಮಾಡಲು ತಕ್ಕ ಕಾರ್ಯಕ್ರಮವನ್ನು ಕೈಗೊಂಡು ಹೆಚ್ಚಿನ ಪರಿಶ್ರಮ ಹೊಂದಲು ತರಬೇತಿಗಾಗಿ ಪರದೇಶಗಳಿಗೆ ಕಳುಹಿಸಿ ಅದರಿಂದ ವ್ಯವಸಾಯವನ್ನು ಇನ್ನೂ ಅಭಿವೃದ್ಧಿಗೆ ತರಬೇಕೆಂದು ಯೋಚಿಸಲಾಗಿದೆ. ಮತ್ತು ಈ ವಿಚಾರದಲ್ಲಿ ರೈತರು ಕೂಡ ಹೆಚ್ಚಿನ ಆಸಕ್ತಿಯನ್ನು ವಹಿಸುತ್ತಿದ್ದಾರೆ. ರಾಷ್ಟ್ರೀಯ ವಿಸ್ತರಣಾ ಯೋಜನೆಯ ಪ್ರಕಾರ ನೂರಕ್ಕೆ 80 ಭಾಗ ವ್ಯವಸಾಯದಲ್ಲಿ ಅಭಿವೃದ್ಧಿ ಹೊಂದಬೇಕಾದರೆ Culture and Anim[illegible] [illegible]standry Development ಬಗ್ಗೆ ನಾವು ಗಮನ ಕೊಡಬೇಕು. ಕೇಂದ್ರ [illegible]ರವು ಇದೇ ಅಭಿಪ್ರಾಯವನ್ನು ಹೊಂದಿದೆ. ಈ ಒಂದು ಕಾರಣದಿಂದ ರಾಷ್ಟ್ರೀಯ ವಿಸ್ತರಣಾ ಯೋಜನೆ ಯಶಸ್ವಿಯಾದ ಹಾಗೆಲ್ಲಾ ವ್ಯವಸಾಯವನ್ನು ಅಭಿವೃದ್ಧಿ ಮಾಡಲು ಇದರಿಂದ ಹೆಚ್ಚಿನ ಕೆಲಸವನ್ನು ಹೆಚ್ಚು ಹೆಚ್ಚಾಗಿ ಸಾಧಿಸಲು ಅವಕಾಶ ಇರುವುದರಿಂದ ಇವೊತ್ತಿನ ದಿವಸ ಗ್ರಾಮಗಳಲ್ಲಿರುವ ರೈತರಿಗೆ ಜ್ಞಾನೋದಯವಾಗಿದೆ ಮತ್ತು ಉತ್ತೇಜನವಿದೆ ಎಂದು ಅವರು ಬಹಳ

ಆಸಕ್ತಿಯಿಂದ ಕೆಲಸ ಮಾಡುತ್ತಿದ್ದಾರೆ. ಹೀಗೆ ಕೆಲಸ ಮಾಡಲು ಸಾಕಷ್ಟು ಉತ್ತೇಜನವನ್ನು ಸರ್ಕಾರದ ಇಲಾಖೆಯವರು ಕೊಡುತ್ತಿದ್ದಾರೆ. ಇದನ್ನು ಉಪಯೋಗಿಸಿಕೊಂಡು ನಮ್ಮ ರೈತಬಾಂಧವರು ಬಹಳ ಮುಂದೆ ಬಂದಿದ್ದಾರೆ ಮತ್ತು ಇದಕ್ಕಾಗಿ ಇಲ್ಲಾ ಉತ್ತೇಜನವನ್ನು ಕೊಡುತ್ತಿದ್ದೇವೆ.

ಶ್ರೀಮಾನ್ ವೀರೇಗೌಡರು ಒಂದು ವಿಚಾರವನ್ನು ಹೇಳಿದರು. ವ್ಯವಸಾಯದಲ್ಲಿ ಪರಿಶ್ರಮದಲ್ಲಿರುವ Young Farmers Association ಯುವಕ ರೈತರ ಸಂಘ ಮತ್ತು Farmers association ಎಂಬ ಹೆಸರಿನ ಎರಡು ಸಂಸ್ಥೆಗಳಿವೆ. ಇವೆರಡೂ ಸಂಸ್ಥೆಗಳಿಗೂ ನಾನೇ ಅಧ್ಯಕ್ಷನಾಗಿದ್ದೇನೆ. ಸಾಮಾನ್ಯವಾಗಿ ಈ ಎರಡೂ ಸಂಸ್ಥೆಗಳು ಹೊಂದಿಕೊಂಡು ಕೆಲಸ ಮಾಡುತ್ತದೆ. ಮತ್ತು ಇವುಗಳಿಂದ ಬರುವ ಸಲಹೆಯನ್ನು ಕಾರ್ಯಾಚರಣೆಗೆ ತರಲು ಸರ್ಕಾರ ಪ್ರಯತ್ನಪಡುತ್ತಿದೆ. ಕಳೆದ ಒಂದು ವರ್ಷದಿಂದ ಈ ಸಂಸ್ಥೆಯ ಸಹಾಯದಿಂದ ಬಹಳ ಹೆಚ್ಚಿನ ಕೆಲಸವನ್ನು ಮಾಡಲು ಸಹಾಯವಾಗಿದೆ. ಕೇಂದ್ರದಲ್ಲಿರುವ ವ್ಯವಸಾಯ ಖಾತೆಯ ಮಂತ್ರಿಗಳಾದ ಶ್ರೀ ಪಂಜಾಬರಾವ್ ದೇಶ್‌ಮುಖ್‌ರವರು ಇಲ್ಲಿಗೆ ಬಂದಿದ್ದಾಗ ಈ ಸಂಸ್ಥೆಗಳ ಕೆಲಸಗಳನ್ನು ನೋಡಿ ಇದರಿಂದ ವ್ಯವಸಾಯ ಅಭಿವೃದ್ಧಿಗೆ ಸಂಸ್ಥಾನದಲ್ಲಿ ಅನುಕೂಲವಾಗುತ್ತದೆ ಎಂದು ಮೆಚ್ಚಿಗೆಯನ್ನೂ ಸೂಚಿಸಿದ್ದಾರೆ. ಅಮೇರಿಕಾ, ಇಂಗ್ಲೆಂಡ್ ಇಂತಹ ದೇಶಗಳಲ್ಲಿ ಈ ರೀತಿಯಾದ ಸಂಸ್ಥೆಗಳಿರುವುದರಿಂದ ಹೆಚ್ಚಿನ ಬೆಳೆಯನ್ನು ಬೆಳೆಯಲು ಅನುಕೂಲವಾಗಿದೆ. ಈ ವ್ಯವಸಾಯದ ಕ್ಷೇತ್ರದಲ್ಲಿ ಹೆಚ್ಚಿನ ಅಭಿಮಾನವಿರತಕ್ಕವರು ಈ ಕ್ಷೇತ್ರದಲ್ಲಿ ಪರಿಶೋಧನೆಯನ್ನು ನಡೆಸುವ ರೈತ ಬಾಂಧವರು ಮಾತ್ರ ಸಂಸ್ಥೆಯಲ್ಲಿರಲು ಅವಕಾಶಕೊಡಲಾಗಿದೆ.

ಶ್ರೀಮಾನ್ ಬೊಮ್ಮೇಗೌಡರು ಈ ಸಂಘದಲ್ಲಿ ವರ್ತಕರು ಇರುತ್ತಾರೆ ಎಂದು ಹೇಳಿದರು. ಕೆಲವು ಸಂದರ್ಭಗಳಲ್ಲಿ ಒಬ್ಬಿಬ್ಬರು ಇದ್ದಿರಬಹುದು ಇದರಿಂದಾಗಿ ವ್ಯವಸಾಯಕ್ಕೆ ಬೇಕಾದ ಸಾಮಗ್ರಿಗಳು ಸರಿಯಾಗಿ ಸಂಬಂಧಪಟ್ಟ ಇಲಾಖೆಯಿಂದ ಸರಬರಾಜಾಗುತ್ತಿಲ್ಲ ಎಂದು ಹೇಳಿದರು. ಹೀಗೆ ಕೆಲವು ಸಂದರ್ಭಗಳಲ್ಲಿ ಆಗಿದೆ ಎನ್ನುವುದು ಸರ್ಕಾರದ ಗಮನಕ್ಕೆ ಬಂದಿದೆ. ಇದು ವಾಸ್ತವದ ವಿಚಾರ. ಇದಕ್ಕಾಗಿ ಈ ರೈತ ಸಂಘದಲ್ಲಿ ಮತ್ತು ಯುವಕ ರೈತರ ಸಂಘದಲ್ಲಿ ಈಚೆಗೆ ಒಂದು

ನಿರ್ಣಯವನ್ನು ಮಾಡಿದೆ. ಅದರಂತೆ ಸಂಸ್ಥಾನದ ಮಟ್ಟದಲ್ಲಿ, ಜಿಲ್ಲಾ ಮಟ್ಟದಲ್ಲಿ ಸಾಧ್ಯವಾದರೆ ಹೋಬಳಿ ಮಟ್ಟದಲ್ಲಿ ಬರಿಯ ರೈತರಿರುವ ಸಹಕಾರ ಸಂಘಗಳನ್ನು ಮಾಡಿ ಆ ರೈತರ ಸಹಕಾರದ ಮೂಲಕ ವ್ಯವಸಾಯಾಭಿವೃದ್ಧಿಗಾಗಿ ಏನೇನು ಸಾಮಗ್ರಿಗಳು ಬೇಕಾಗುತ್ತದೆಯೋ ಎಂದರೆ ಕಬ್ಬಿಣ, ಗೊಬ್ಬರ ಮುಂತಾದವು ಇವುಗಳನ್ನು ಕೊಡುವ ವ್ಯವಸ್ಥೆ ಮಾಡಬೇಕು ಮತ್ತು ಇದಕ್ಕೆ ಪರ್ಮಿಷನ್ನನ್ನು ಸರಕಾರ ಕೊಡಬೇಕು ಎಂದು ಮೇಲ್ಮನೆಯಲ್ಲಿ ಒಂದು ನಿರ್ಣಯವನ್ನು ಮಾನ್ಯ ಸದಸ್ಯರು ಕಳುಹಿಸಿದಾಗ ಸರಕಾರದ ಪರವಾಗಿ ಆಯಾ ಪ್ರದೇಶಗಳಿಗೆ ಬೇಕಾಗುವ ಗೊಬ್ಬರ, ಕಬ್ಬಿಣ ಮತ್ತು ಇತರ ವ್ಯವಸಾಯಕ್ಕೆ ಉಪಯೋಗವಾಗುವ ಸಾಮಾನುಗಳನ್ನೆಲ್ಲಾ ಸಹಕಾರ ಸಂಘಗಳ ಮೂಲಕವೇ ಹಂಚುವ ವ್ಯವಸ್ಥೆ ಮಾಡಬೇಕೆನ್ನುವ ನಿರ್ಣಯವನ್ನು ಪರಿಶೀಲನೆ ಮಾಡುತ್ತೇವೆಂದು ಹೇಳಿದ್ದೆ. ಆ ಭರವಸೆಯ ಪ್ರಕಾರ ವ್ಯವಸಾಯಕ್ಕೆ ಬೇಕಾಗುವ ಸಾಮಾನುಗಳನ್ನು ಅದರಲ್ಲೂ ಕಬ್ಬಿಣ ಮತ್ತು ಗೊಬ್ಬರಗಳನ್ನು ಇನ್ನು ಮುಂದೆ ಸಹಕಾರ ಸಂಘಗಳ ಮೂಲಕವೇ ಕೊಡಬೇಕೆಂದು ಸಂಸ್ಥಾನದ ಮಟ್ಟದಲ್ಲಿರುವ ಎಲ್ಲ ಸಹಕಾರ ಸಂಘಗಳೂ ಕೊಡಬೇಕೆಂದು ಅವರಿಗೆ ವಹಿಸಲಾಗಿದೆ; ಇದಕ್ಕಾಗಿ ಕೇಂದ್ರ ಸರಕಾರದಿಂದ ನಮಗೆ ಬೇಕಾಗುವಂತಹ ಕಬ್ಬಿಣ ಮತ್ತು ಗೊಬ್ಬರವನ್ನು ಹೆಚ್ಚಿನ ಪ್ರಮಾಣದಲ್ಲಿ ತರಿಸಿಕೊಟ್ಟು ಹಂಚತಕ್ಕ ಎಲ್ಲ ವ್ಯವಸ್ಥೆಯನ್ನು ಸಹಕಾರ ಸಂಘಗಳೇ ಈಗಾಗಲೇ ಮಾಡುತ್ತಿವೆ ಎಂದು ಮಾನ್ಯ ಸದಸ್ಯರ ಗಮನಕ್ಕೆ ತರಲು ಸಂತೋಷವಾಗುತ್ತದೆ.

ಶ್ರೀಮಾನ್ ವೀರೇಗೌಡರು ಮತ್ತು ಶ್ರೀಮಾನ್ ಬೊಮ್ಮೇಗೌಡರ ಈ ಬಗ್ಗೆ ಕೆಲವು ಆರೋಪಗಳನ್ನು ಮಾಡಿದರು. ಲೈಸೆನ್ಸ್ ಕೊಡುವಾಗ ಎಲ್ಲರಿಗೂ ಕೊಡುತ್ತಾರೆ ಎಂದು ಹೇಳಿದರು. ಈ ವಿಚಾರ ನನ್ನ ಗಮನಕ್ಕೆ ಬಂದ ತಕ್ಷಣ ಖಾಸಗಿಯವರಿಗೆ ಇನ್ನು ಮುಂದೆ ಲೈಸೆನ್ಸ್ ಕೂಡದು ಎಂದು ಆಜ್ಞೆ ಮಾಡಿದ್ದೇನೆ. ಇದನ್ನು ಅವರು ತಿಳಿದುಕೊಂಡಿಲ್ಲ ಎಂದು ತೋರುತ್ತದೆ.

**ಶ್ರೀ ಜಿ.ಎಸ್. ಬೊಮ್ಮೇಗೌಡ (ಮಂಡ್ಯ) :** ತಾವು ಈಗಾಗಲೇ ಲೈಸೆನ್ಸನ್ನು ಕೊಟ್ಟಿಲ್ಲವೆಂದು ಹೇಳುತ್ತೀರಿ. ಅಮೋನಿಯಂ ಸಲ್ಫೇಟನ್ನು ಬೇರೆ ಕಡೆಯಿಂದ ತಂದು ಕೆಲವರು ಮಾರುತ್ತಿದ್ದಾರೆ. ಸಹಕಾರ ಸಂಘಗಳ ಮೂಲಕವೆ ಕೊಡಬೇಕೆಂದು

ಏರ್ಪಾಡು ಮಾಡಿರುವಾಗ ಇನ್ನು ಮುಂದೆ ಖಾಸಗಿಯವರು ಯಾರೂ ಇದನ್ನು ಮಾರಕೂಡದು ಎಂದು ಆಜ್ಞೆ ಕೊಡಬೇಕು ಎಂದು ನಾನು ಹೇಳಿದೆ.

**ಶ್ರೀ ಎನ್. ರಾಚಯ್ಯ :** ಈ ವಿಷಯದಲ್ಲಿ ಸ್ವಂತವಾಗಿ ವ್ಯವಹಾರ ಮಾಡತಕ್ಕವರಿಗೆ ನಾವು ಲೈಸೆನ್ಸ್‌ಗಳನ್ನು ಹೊಸದಾಗಿ ಕೊಡಬಾರದು ಎಂದು ಈಗಾಗಲೇ ಆಜ್ಞೆ ಮಾಡಲಾಗಿದೆ. ಅದರಂತೆ ಜಾರಿಗೆ ತರಬಹುದು ಮತ್ತು ವ್ಯವಸಾಯಾಭಿವೃದ್ಧಿಗೆ ಬೇಕಾದ ಎಲ್ಲ ಅನುಕೂಲಗಳನ್ನು ಮಾಡುತ್ತಿದ್ದೇವೆಂದು ಈ ಸಂದರ್ಭದಲ್ಲಿ ತಮಗೆ ಹೇಳುತ್ತೇನೆ. ಮತ್ತೆ ಲೈಸೆನ್ಸ್‌ಗಳನ್ನು ರಿನ್ಯೂ ಮಾಡಬೇಕು ಮಾಡಬಾರದು ಎನ್ನುವುದೆಲ್ಲ ಸರಕಾರ ಪರಿಶೀಲನೆ ಮಾಡುತ್ತಿದೆ. ಮಾನ್ಯ ಸದಸ್ಯರು ಹೇಳಿದ ಕಬ್ಬಿಣ ಮತ್ತು ಗೊಬ್ಬರಗಳ ಕೊರತೆಯನ್ನು ತಪ್ಪಿಸಲು ರೈತರ ಹಿತದೃಷ್ಟಿಯಿಂದ ಸಹಕಾರ ಸಂಘಗಳ ಮೂಲಕವೇ ಹಂಚಬೇಕೆನ್ನುವ ತೀರ್ಮಾನವನ್ನು ಈಗಾಗಲೇ ತೆಗೆದುಕೊಂಡಿದ್ದೇವೆ ಮತ್ತು ನಾನು ಆಗಲೇ ಹೇಳಿದಂತೆ ಅಡ್ವೈಸರಿ ಬೋರ್ಡನ್ನು ಮಾಡಿರುವುದರಿಂದ ಅವರು ವರದಿಯನ್ನು ತಿಂಗಳ ಕೊನೆಯ ಭಾಗದಲ್ಲಿ ಕಳುಹಿಸುವ ಸಂಭವವಿದೆ. ಜಾಗ್ರತೆಯಾಗಿ ಅವರ ವರದಿ ಬರುತ್ತದೆ. ಅದು ಬಂದ ಮೇಲೆ ಅನುಭವವಿರತಕ್ಕ ಅಧಿಕಾರಿಗಳು ಮತ್ತು ಎಕ್ಸ್‌ಪರ್ಟ್‌ಗಳು, ತಜ್ಞರು ಇರತಕ್ಕ ಖಾಸಗೀ ಜನಗಳಿರುವ ಒಂದು ಸಣ್ಣ ಕಮಿಟಿಯನ್ನು ಮಾಡಿ ಈ ವರದಿಯನ್ನು ಕೂಲಂಕುಷವಾಗಿ ಪರಿಶೀಲನೆ ಮಾಡಬೇಕೆಂದಿದ್ದೇವೆ. ಇದರಂತೆ ವ್ಯವಸಾಯದ ಇಲಾಖೆಯನ್ನು ಹೆಚ್ಚಿನ ರೀತಿಯಿಂದ ಮಾಡಿದಂತಾಗುತ್ತದೆ ಮತ್ತು ಇದರಿಂದಾಗಿ ಸರಕಾರದ ಕೆಲಸ ಚೆನ್ನಾಗಿ ನಡೆಯುತ್ತದೆ ಎಂದು ಈಗಾಗಲೇ ಕಾರ್ಯಕ್ರಮವನ್ನು ತೆಗೆದುಕೊಂಡಿದ್ದೇವೆ.

ಅದನ್ನು ತಮ್ಮ ಗಮನಕ್ಕೆ ತರುವುದಕ್ಕೆ ಬಹಳ ಸಂತೋಷವಾಗುತ್ತದೆ. ವ್ಯವಸಾಯದ ಇಲಾಖೆಯನ್ನು ಇನ್ನೂ ಹೆಚ್ಚಿನ ಒಂದು ರೀತಿಯಲ್ಲಿ ಮುಂದುವರಿಸಬೇಕು. ಈ ಇಲಾಖೆಯನ್ನು ರೈತರಿಗೆ ಜಾಸ್ತಿ ಅನುಕೂಲವಾಗಲಿ ಎಂದು 1954ನೆಯ ಇಸವಿಯಲ್ಲಿ ಒಬ್ಬ ಅಪಾಯಿಂಟ್ ಡೈರೆಕ್ಟರನ್ನು ನೇಮಿಸಿದೆವು. ಮೊದಲು ಒಬ್ಬರೇ ಡೈರೆಕ್ಟರ್ ಇದ್ದರು. ಕಳೆದ ವರ್ಷ, 1959ರಲ್ಲಿ ಮತ್ತೊಬ್ಬರು ಅಪಾಯಿಂಟ್ ಡೈರೆಕ್ಟರಾಗಿ ಮಾಡಿದ್ದೇವೆ. ಕಳೆದ ಎರಡು ವರ್ಷಗಳಲ್ಲಿ ವ್ಯವಸಾಯದ

ಕ್ಷೇತ್ರವನ್ನು ಹೆಚ್ಚಿನ ಗಮನದಿಂದ ಮುಂದುವರಿಸಬೇಕು ಎಂದು ಆಹಾರದ ದೃಷ್ಟಿಯಿಂದ ಮತ್ತು ಹೆಚ್ಚಿನ ಆಹಾರವನ್ನು ಉತ್ಪಾದನೆ ಮಾಡಬೇಕೆನ್ನುವ ದೃಷ್ಟಿಯಿಂದ, ಎರಡು ವರ್ಷಗಳಲ್ಲಿ ಇಬ್ಬರು ಜಾಯಿಂಟ್ ಡೈರೆಕ್ಟರ್‌ಗಳನ್ನು ಮಾಡಿದ್ದೇವೆ. ಇತರ ಸಂಸ್ಥಾನಗಳಲ್ಲಿರುವಂತೆ ಹೆಚ್ಚಿನ ಸಿಬ್ಬಂದಿಯನ್ನು ಡೈರೆಕ್ಟರ್‌ಗಳಲ್ಲಿರುವಂತೆ ಹೆಚ್ಚಿನ ಸಿಬ್ಬಂದಿಯನ್ನು ಡೈರೆಕ್ಟರ್ ಮಟ್ಟದಲ್ಲಿ ಮಾಡಿದ್ದೇವೆ. ಒಬ್ಬರು ಡೈರೆಕ್ಟರ್ ಆಫ್ ಅಗ್ರಿಕಲ್ಚರಲ್, ಇನ್‌ಚಾರ್ಜ್ ಆಫ್ ಅಗ್ರಿಕಲ್ಚರಲ್ ಈ ಸಭೆ ಮತ್ತು ಎಜುಕೇಶನ್ ಎಂದು ಹೇಳಿ ಮಹಾ ಡೈರೆಕ್ಟರುಗಳನ್ನು ಈಗಾಗಲೇ ಮಾಡಿದ್ದೇವೆ.

**ಶ್ರೀ ವಿ. ಶ್ರೀನಿವಾಸ ಶೆಟ್ಟಿ (ಕುಂದಾಪುರ) :** ವೇಗವಾಗಿ ಮಾಡುತ್ತೇವೆಂದು ಹೇಳಿದಿರಿ. ಬಹಳ ವೇಗವಾಗಿ ಮಾಡಬೇಕಾದರೆ ವರ್ಷ ಎಷ್ಟು ಮಾಡುತ್ತೀರಿ?

**ಶ್ರೀ ಎನ್. ರಾಚಯ್ಯ :** ಅದರ ಅವಶ್ಯಕತೆಗೆ ಇಲ್ಲಿ ಅಭಿಪ್ರಾಯಪಟ್ಟರೆ, ಮಾಡೋಣ. ಈ ವಿಚಾರದಲ್ಲಿ ಇತರ ಸಂಸ್ಥಾನಗಳಿರುವುದನ್ನು ತಮ್ಮ ಗಮನಕ್ಕೆ ತರುವುದಾದರೆ, 4–5 ಜನ ಜಾಯಿಂಟ್ ಡೈರೆಕ್ಟರ್‌ಗಳಿದ್ದಾರೆ. ನಮ್ಮಲ್ಲಿಯೇ ಕಡಿಮೆ ಇರತಕ್ಕವರು ಬಹಳ ಹೆಚ್ಚಿನ ಕೆಲಸವಿದೆ, ಬಹಳ ಕಷ್ಟವಾಗುತ್ತಿದೆ ಎಂದು ಒಪ್ಪಿದ್ದರಿಂದ ಇಬ್ಬರು ಜಾಯಿಂಟ್ ಡೈರೆಕ್ಟರ್‌ಗಳನ್ನು ನೇಮಕ ಮಾಡಲಾಯಿತು.

**ಶ್ರೀ ಸಿ.ಜೆ. ಮುಕ್ಕಣ್ಣಪ್ಪ :** ಅಧಿಕಾರಿಗಳನ್ನೇನೋ ಜಾಸ್ತಿ ಮಾಡಿದಿರಿ, ಆದರೆ ಜಾಯಿಂಟ್ ಡೈರೆಕ್ಟರಲ್ಲಿ, ಒಬ್ಬ ಜಾಯಿಂಟ್ ಡೈರೆಕ್ಟರ್ ಬಂದು Politics ಮೇಲೆ ಮಾಡುತ್ತಿದ್ದಾರೆನ್ನುವುದು ತಮ್ಮ ಗಮನಕ್ಕೆ ಬಂದಿದೆಯೇ?

**ಶ್ರೀ ಎನ್. ರಾಚಯ್ಯ :** ನಾನು ಅದನ್ನು ಒಪ್ಪಿಕೊಳ್ಳುವುದಿಲ್ಲ. ಮಾನ್ಯ ಸದಸ್ಯರು remarks ಮಾಡಿದ್ದಾರೆ. ನಮ್ಮ ಇಲಾಖೆಯಲ್ಲಿ ಯಾವ ಅಧಿಕಾರಿಗಳೂ ರಾಜಕೀಯಕ್ಕೆ ಹೋಗುವುದಿಲ್ಲ. ಬಹಳ ಚೆನ್ನಾಗಿ ಕೆಲಸ ಮಾಡಿಕೊಂಡು ಹೋಗುತ್ತಿದ್ದಾರೆ ಮತ್ತು ಇನ್ನೂ ಹೆಚ್ಚಿನ ಕೆಲಸ ಮಾಡುವ ಶಕ್ತಿ, ದಕ್ಷತೆ ಅವರಿಗಿದೆ. ಅವರ ವಿಚಾರದಲ್ಲಿ ಅಂಥ ಅನುಮಾನವಿದ್ದರೆ ಅದನ್ನು ಬಿಡಬೇಕು. ಎಲ್ಲ ರೀತಿಯಲ್ಲಿಯೂ ಈ ಇಲಾಖೆಯ ಸುವ್ಯವಸ್ಥೆ ಮಾಡುತ್ತೇವೆ.

**ಶ್ರೀ ಸಿ.ಕೆ. ರಾಜಯ್ಯ ಶೆಟ್ಟಿ** : The Director in Charge of Exteria ಇನ್ನೊಬ್ಬರು in charge of Research in Educationಮುಂತಾದ routine administration ವಿಚಾರವನ್ನು ಹೇಳಿದ್ದೀರ.

**ಶ್ರೀ ಎನ್. ರಾಚಯ್ಯ** : Horticulture ವಿಚಾರದಲ್ಲಿಯೂ ಕಾರ್ಯಕ್ರಮವನ್ನು ತೆಗೆದುಕೊಂಡಿದ್ದೇನೆ. ಅದಕ್ಕೂ ಪ್ರತ್ಯೇಕವಾಗಿ Superintendent of Government Gardensಎಂದು ಹೆಸರಿಸತಕ್ಕ ಒಬ್ಬ ಆಫೀಸರನ್ನು ಇಟ್ಟಿದ್ದೇವೆ. ಅವರ ಸ್ಟೇಟಸ್ಸನ್ನು ಡೈರೆಕ್ಟ್ ಸ್ಟೇಟಸ್ಸಿಗೆ ತರಬೇಕೆನ್ನುವುದು ಸರ್ಕಾರದ ಆಲೋಚನೆಯಲ್ಲಿದೆ, ಇನ್ನೂ ತೀರ್ಮಾನ ತೆಗೆದುಕೊಂಡಿಲ್ಲ. ಈ ವ್ಯವಸಾಯ ಇಲಾಖೆಯಲ್ಲಿಯೇ ಡೈರೆಕ್ಟರು, ಜಾಯಿಂಟ್ ಡೈರೆಕ್ಟರುಗಳು ಹೆಚ್ಚಿನ ರೀತಿಯಲ್ಲಿ ತರಕಾರಿ, ಹಣ್ಣು ಹಂಪಲುಗಳು ಬೆಳೆಸುವುದಕ್ಕೆ ವ್ಯವಸ್ಥೆ ಮಾಡಿದ್ದೇವೆ.

**ಶ್ರೀ ಬಿ.ಎಲ್. ನಾರಾಯಣಸ್ವಾಮಿ (ಮುಳಬಾಗಿಲು)** : ಈ Garden Superintendent ಸಹಕಾರ ಹುದ್ದೆಯನ್ನು Director ಹುದ್ದೆಗೆ ಏರಿಸಬೇಕೆನ್ನುವ ವಿಷಯ ಎಷ್ಟೋ ವರ್ಷಗಳಿಂದ ಸರ್ಕಾರದ ಮುಂದಿದೆ.

**ಶ್ರೀ ಎನ್. ರಾಚಯ್ಯ** : ಇರಬಹುದು. ಈಗ ಹೊಸದಾಗಿ ಸಂಸ್ಥಾನ ವಿಸ್ತಾರವಾಗಿರುವುದರಿಂದ, ಸರ್ಕಾರದವರು ತೀವ್ರವಾಗಿ ಪರಿಶೀಲನೆ ಮಾಡುತ್ತಿದ್ದಾರೆ.

**ಶ್ರೀ ಸಿ.ಕೆ. ರಾಜಯ್ಯ ಶೆಟ್ಟಿ** : ಈಗ ಎರಡು ವರ್ಷಗಳಿಂದಲೂ ಪರಿಶೀಲನೆಯಲ್ಲಿ ಇದೆ ಎಂದು ಹೇಳುತ್ತಿದ್ದೀರಿ, ಅಗ್ರಿಕಲ್ಚರ್ ಇಲಾಖೆಯಲ್ಲಿ ಡೈರೆಕ್ಟರ್ ಹುದ್ದೆಗಳನ್ನು ಏಕ್‌ದಂ ಜಾಸ್ತಿ ಮಾಡಿ, ಹಾರ್ಟಿಕಲ್ಚರಿಗೆ ಡೈರೆಕ್ಟರ್‌ನ್ನು ನೇಮಿಸುವುದಕ್ಕೆ ಏಕೆ ಗಮನಕೊಟ್ಟಿಲ್ಲ? ಇದನ್ನು ಮಾಡುವುದಕ್ಕೆ ಆತಂಕ ಏನು?

**ಶ್ರೀ ಎನ್. ರಾಚಯ್ಯ** : ಇದನ್ನು ಪರಿಶೀಲನೆ ಮಾಡುತ್ತೇನೆ.

**ಶ್ರೀ ಕೆ.ಎಲ್. ನರಸಿಂಹಯ್ಯ (ಹೆಬ್ಬೂರು)** : ಡೆಪ್ಯೂಟಿ ಡೈರೆಕ್ಟರುಗಳನ್ನು ಕೂಡಲೆ ನೇಮಕ ಮಾಡುತ್ತೀರ. ಹೋದ ಅಸೆಂಬ್ಲಿಯಲ್ಲಿಯೇ ಹಾಗೆಯೇ ಯಾರಿಗೂ ಕೊಡದೆ ಇಟ್ಟಿದ್ದೀರಿ, ಕಾರಣವೇನು?

**ಶ್ರೀ ಎನ್. ರಾಚಯ್ಯ** : ಎಲ್ಲಾ ಕಡೆಯಲ್ಲಿಯೂ ನೇಮಿಸಿದ್ದೇನೆ. ಪರ್ಸನಲ್ ಪೋಸ್ಟ್ ಮಾಡಿ, ಡೆಪ್ಯುಟಿ ಡೈರೆಕ್ಟರು ಕೆಲಸ ಮಾಡುತ್ತಿದ್ದಾರೆ. ಯಾವ ಸ್ಥಾನವೂ ಖಾಲಿ ಇಲ್ಲ. ಇನ್ನೊಬ್ಬರನ್ನು ನೇಮಿಸಬೇಕಾಗುತ್ತದೆ. ಮೊನ್ನೆ ತಾನೇ ತೀರ್ಮಾನ ತೆಗೆದುಕೊಂಡಿದೆ. ಗೊಬ್ಬರ ಹಂಚುವುದಕ್ಕೆ ವ್ಯವಸಾಯ ಇಲಾಖೆಗೆ ಒಬ್ಬ ಡೆಪ್ಯೂಟಿ ಡೈರೆಕ್ಟರನ್ನು ಕೊಡಬೇಕಾಗುತ್ತದೆ. ಅದನ್ನು ಕೂಡ ಸ್ವಲ್ಪ ದಿವಸಗಳಲ್ಲಿಯೇ ಮಾಡುತ್ತೇವೆ. ಬೇರೆ ಯಾವ ಡೆಪ್ಯುಟಿ ಡೈರೆಕ್ಟರ್ ಸ್ಥಾನವೂ ಖಾಲಿ ಇಲ್ಲ.

ಈಗ ತಾನೇ ಹೇಳಿದೆ, ಈ ಒಂದು ಇಲಾಖೆಯನ್ನು ಪುನರ್ರಚನೆ ಮಾಡತಕ್ಕಂಥ ಕ್ರಮವನ್ನು ತೆಗೆದುಕೊಂಡಿದ್ದೇವೆಂದು, ಒಬ್ಬ Special Officer ನೇಮಿಸಿದೆ, ಅವರು ಈ ತಿಂಗಳಿನಲ್ಲಿ ಬರುವ ಭರವಸೆ ಇದೆ. ಬಂದ ಮೇಲೆ ಕೂಲಂಕಷವಾಗಿ ಯೋಚನೆ ಮಾಡಿ ಪುನರ್‌ವ್ಯವಸ್ಥೆ ಮಾಡುತ್ತೇವೆಂದು ಮೊದಲೇ ಹೇಳಿದ್ದೇನೆ.

**Sri A.R. Karisiddappa (Arasikere)** : The Hon'ble Minister said that the reoganising the Agricultural Department to make it work efficiently and now he says that he is going to increase the number of Joint Agricultural Directors. Sri Veere Gowda in the course of his speech said that it would not be possible for one agricultural Inspector to go and keep in touch with a number of villages; therefore he has suggested the increase at the Taluk level. Will the Government consider the suggestion of increasing while reorganising the Agricultral Department?

**ಶ್ರೀ ಎನ್. ರಾಚಯ್ಯ** : ನಾನು ಮೊದಲೇ ಉತ್ತರ ಕೊಟ್ಟಿದ್ದೇನೆ. ಮಾನ್ಯ ಸದಸ್ಯರು ಫಾಲೋ ಮಾಡಲಿಲ್ಲವೆಂದು ತಿಳಿದುಕೊಂಡಿದ್ದೇನೆ. ರಾಷ್ಟ್ರೀಯ ವಿಸ್ತರಣಾ ಯೋಜನೆಯ ಪ್ರಕಾರ ಗ್ರಾಮ ಸೇವಕರು ಸಾಮಾನ್ಯವಾಗಿ 100 ಕ್ಕೆ 80ರಷ್ಟು ಭಾಗ ಕಾಲವನ್ನು ವ್ಯವಸಾಯ ಮತ್ತು ಪ್ರಾಣಿ ಸಂಪತ್ತನ್ನು ಅಭಿವೃದ್ಧಿ ಮಾಡುವುದಕ್ಕೆ ಕೊಡಬೇಕೆಂದು ನಿರ್ಧರಿಸಿದೆ. ಈ ದೃಷ್ಟಿಯಿಂದ ನಾವು ಹೆಚ್ಚಿಗೆ ಫೀಲ್ಡ್ ವರ್ಕರ್ಸ್ ಅನ್ನು ನೇಮಿಸಬೇಕೆಂದಿದ್ದೇವೆ; ನೇಮಿಸುತ್ತಲೂ ಇದ್ದೇವೆ, ರಾಷ್ಟ್ರೀಯ ವಿಸ್ತರಣಾ

ಯೋಜನೆಯ ಒಂದೆರಡು ವರ್ಷಗಳಲ್ಲಿ ಇಡಿಯ ನಮ್ಮ ರಾಜ್ಯದ ಎಲ್ಲಾ ಕಡೆಗಳಲ್ಲಿಯೂ ಈ ಯೋಜನೆ ಬರುತ್ತದೆ; ಆಗ ಈ ಅಗ್ರಿಕಲ್ಚರ್ ಡೆಮಾನ್‌ಸ್ಟ್ರೇಟರ್, ಎಕ್ಸ್‌ಟೆನ್‌ಷನ್ ಆಫೀಸರು ಇದ್ದಾರೆ; ಜಿಲ್ಲಾ ಮಟ್ಟದಲ್ಲಿ ಡಿಸ್ಟ್ರಿಕ್ಟ್ ಅಗ್ರಿಕಲ್ಚರ್ ಆಫೀಸರು ಇದ್ದಾರೆ, ಡಿವಿಜನ್ ಮಟ್ಟದಲ್ಲಿ ಡೆಪ್ಯೂಟಿ ಡೈರೆಕ್ಟರ್ ಇದ್ದಾರೆ, ಸಂಸ್ಥಾನದ ಲೆವೆಲ್ಲಿನಲ್ಲಿ ಡೈರೆಕ್ಟರ್ ಇದ್ದಾರೆ, ಎಲ್ಲಿ ರಾಷ್ಟ್ರೀಯ ವಿಸ್ತರಣಾ ಯೋಜನೆ ಇರುವ ಕಡೆ, ಒಬ್ಬರಿಗೆ ಬದಲು ಒಂದೊಂದು ತಾಲ್ಲೂಕಿನಲ್ಲಿ 3–4 ಜನ ಗ್ರಾಮ ಸೇವಕರು ಇರುವ ಕಾರಣ ಅವರು ಈ ಕೆಲಸವನ್ನು ನೋಡಿಕೊಳ್ಳುತ್ತಿರುವ ಕಾರಣ, ಅಂಥ ಕೊರತೆ, ತೊಂದರೆ ಇಲ್ಲ. ಇದು ಸರಿಹೋಗಿದೆ ಎಂದು ಹೇಳುತ್ತೇನೆ.

## ● ಬೀಳು ಭೂಮಿಯನ್ನು ಉಳುಮೆಗೆ ತಂದಿಲ್ಲವೆಂಬ ವಿವಾದಗಳು :

**'ಭೂಮಿ'ಯು ಹೊಂದಿರುವಷ್ಟು ವಿವಾದಗಳನ್ನು ಬೇರೆ ಯಾವ ಪಂಚಭೂತವೂ ಹೊಂದಿಲ್ಲ. ಶತಮಾನಗಳಿಂದಲೂ ಭೂಮಿ ಯುದ್ಧ – ಗಲಾಟೆಯ ಕಾರಣ. ಹಾಗೇ ಅನ್ನದ, ಉಸಿರಿನ ಅಂಶವೂ ಹೌದು. ಅಂತಹ 'ಭೂಮಿ' ಮೇಲಿನ ಚರ್ಚೆಯಲ್ಲಿ ರಾಚಯ್ಯನವರು ಮಂಡಿಸಿರುವ ದೀರ್ಘ ವಿಚಾರಗಳು ಅವರಿಗಿರುವ 'ಭೂಮಿಕಾಳಜಿ'ಯು ಧ್ಯೋತಕವಾಗಿದೆ. ಬಿ.ಎಲ್. ನಾರಾಯಣಸ್ವಾಮಿ, ಆಲೂರು ಹನುಮಂತಪ್ಪ, ಸಿ.ಕೆ. ರಾಚಯ್ಯ ಶೆಟ್ಟಿ, ಎನ್. ಪುಟ್ಟಣ್ಣ, ಸಿ.ಜೆ. ಮುಕ್ಕಣ್ಣಪ್ಪ, ಬಿ. ರಾಚಯ್ಯ, ಎಫ್.ಎಚ್. ಮೊಹಸೀನ್, ಎಂ. ರಾಮಪ್ಪ, ಸುಬ್ಬಯ್ಯ ನಾಯಕ್ ಮುಂತಾದ ಧುರೀಣರೊಂದಿಗಿನ ಸಂವಾದ ಇದು.**

ಶ್ರೀ ಎನ್.ರಾಚಯ್ಯ: ಸರ್ಕಾರ ಯಾವ ಯೋಜನೆಯನ್ನು ಮಾಡಿಲ್ಲವೆಂದು ಕೆಲವು ಮಾನ್ಯ ಸದಸ್ಯರು ಆಕ್ಷೇಪಣೆ ಮಾಡಿದರು. ನಾನು ಸೋಷಿಯಲ್ ವೆಲ್‌ಫೇರ್ ಡಿಪಾರ್ಟ್‌ಮೆಂಟಿನ ಡಿಮ್ಯಾಂಡ್ ಮೇಲೆ ಉತ್ತರ ಕೊಡುತ್ತಾ, ಈ ವಿಚಾರದಲ್ಲಿರುವ ಒಂದು ಯೋಜನೆಯನ್ನು ತಮ್ಮ ಮುಂದೆ ಇಟ್ಟೆ. ಈ ಒಂದು ಯೋಜನೆಯ ಪ್ರಕಾರ, ಎಲ್ಲೆಲ್ಲಿ 100 ಎಕರೆಗಿಂತ ಹೆಚ್ಚಿಗೆ ಜಮೀನು ಕೊಟ್ಟಿದ್ದೇವೋ ಮತ್ತು ಮುಂದೆ ಜಮೀನು ಕೊಡಬೇಕಾಗಿದೆಯೋ ಅಂತಹ ಕಡೆಗಳಲೆಲ್ಲಾ ಸಹಕಾರ ಸಂಘಗಳನ್ನು ಮಾಡಿ, ಆ ಸಹಕಾರ ಸಂಘಗಳ ಮೂಲಕ ಅವರಿಗೆ ಜಮೀನು ಕೊಡತಕ್ಕಂತಾದ್ದು ಮತ್ತು ಆ ಜಮೀನನ್ನು ಉಳುಮೆ ಮಾಡಬೇಕಾದರೆ ಏನೇನು ವ್ಯವಸಾಯಕ್ಕೆ ಬೇಕಾದ ಅನುಕೂಲಗಳು ಬೇಕೋ ಆ ಎಲ್ಲಾ ಅನುಕೂಲಗಳಲ್ಲಿ ಯೋಜನೆಗಳನ್ನು ತಯಾರು ಮಾಡಿದ್ದಾರೆ. ಇನ್ನು ತೀರ್ಮಾನ ತೆಗೆದುಕೊಂಡಿಲ್ಲ. ಈ ಯೋಜನೆಯಿಂದ ಬೀಳು ಬಿದ್ದಿರುವ ಜಮೀನು ಉಳುಮೆಗೆ ಬರಲು ಸಹಾಯವಾಗುವುದಲ್ಲದೆ, ವ್ಯವಸಾಯವನ್ನೇ ಅವಲಂಬಿಸಿರುವ ಬಡ ಜನಗಳಿಗೆ ಅನುಕೂಲವಾಗುತ್ತದೆ ಮತ್ತು ಆಹಾರದ ಪ್ರಶ್ನೆ ಬಹು ಬೇಗ ಬಗೆಹರಿಯುತ್ತದೆ. ಬೀಳು ಬಿದ್ದ ಜಮೀನುಗಳನ್ನು ಉಳುಮೆಗೆ ತರುವುದಕ್ಕೆ

ಸರ್ಕಾರದವರು ಯೋಚನೆ ಮಾಡಿದ್ದಾರೆ. ಈ ವಿಚಾರದಲ್ಲಿ ಬಹು ತೀವ್ರವಾಗಿ ತೀರ್ಮಾನ ತೆಗೆದುಕೊಂಡರೆ ಈ ಶಂಕೆಗೆ ಅವಕಾಶವಿಲ್ಲ. ಆ ಆರೋಪಣೆ ಸರಿ ಅಲ್ಲವೆಂದು ಈ ಸಂದರ್ಭದಲ್ಲಿ ಹೇಳುತ್ತೇನೆ. ಕೇಂದ್ರ ಆ ಸ್ಕೀಮ್ ಏನೆಂದರೆ Scheme for Rehabilitating landless labourers ಎಂದು. ನಮ್ಮ ರಾಜ್ಯದಲ್ಲಿಯೂ ವ್ಯವಸಾಯಗಾರರು ಮತ್ತು ಕೂಲಿಗಾರರು ಯಾರಿಗೆ ಜಮೀನು ಇಲ್ಲವೋ ಅಂತಹವರಿಗೆ ಜಮೀನು ಕೊಟ್ಟರೆ, ಈ ಯೋಜನೆಯ ಪ್ರಕಾರ ವ್ಯವಸಾಯಕ್ಕೆ ಬೇಕಾದಂತಹ ಎಲ್ಲಾ ಸೌಕರ್ಯಗಳನ್ನು ಒದಗಿಸತಕ್ಕಂತಹ ಒಂದು ಸ್ಕೀಂನ್ನು ನಮ್ಮ ರಾಜ್ಯದಲ್ಲಿ ಜಾರಿಗೆ ಕೊಡಬೇಕೆಂದು ಕೇಂದ್ರ ಸರ್ಕಾರವನ್ನು ಇದರಲ್ಲಿ ಬಹುಭಾಗ ಬಡಜನರಿಗೆ ಲ್ಯಾಂಡ್‌ಲೆಸ್ ಲೇಬರರಿಗೆ ಅನುಕೂಲವಾಗುತ್ತದೆ ಮತ್ತು ಜಮೀನು ಕೂಡ ಹೆಚ್ಚಿನ ಪ್ರಮಾಣದಲ್ಲಿ ಉಳುಮೆ ಆಗುವುದಕ್ಕೆ ಅವಕಾಶವಾಗುತ್ತದೆ.

ಇನ್ನು ಸಾಯಿಲ್ ಕನ್‌ಸರ್ವೆಷನ್ ವಿಚಾರವನ್ನು ಕೇಳಿದರು. ಭೂಮಿಯಲ್ಲಿ ನೀರು ಹರಿದು ಹೋಗುವಾಗ ಅದರ ಜೊತೆಗೆ ಭೂಮಿಯಲ್ಲಿ ಮಣ್ಣಿನ ಸಾರಾಂಶವೂ ಹೋಗದಂತೆ ತಡೆಗಟ್ಟಬೇಕಾಗಿದೆ. ಅಗತ್ಯವಾದ ಕ್ರಮವನ್ನು ತೆಗೆದುಕೊಳ್ಳಬೇಕಾಗಿದೆ. ಬೊಂಬಾಯಿ ಕರ್ನಾಟಕ ಏರಿಯಾದಲ್ಲಿ ಈ ಸಂಬಂಧದಲ್ಲಿ ಒಂದು ಕಾನೂನು ಜಾರಿಯಲ್ಲಿದೆ. ಆ ಮಸೂದೆ ತಮ್ಮ ಮುಂದಿದೆ. ಈ ಕಾನೂನನ್ನು ಸಮನ್ವಯ ಮಾಡಿ ಇಡಿಯ ಸಂಸ್ಥಾನಕ್ಕೆ Soil Conservation Actನ್ನು ಜಾರಿಗೆ ಕೊಟ್ಟು ರೈತರಿಗೆ ಹೆಚ್ಚಿಗೆ ಉಪಯೋಗವಾಗುವ ರೀತಿಯಲ್ಲಿ ಅನುಕೂಲ ಕೊಡಬೇಕೆಂದು ಕಾತುರವಾಗಿದ್ದೇನೆ. ಈ ಕಾರಣ ತಮ್ಮ ಮುಂದೆ ಬಂದ ತಕ್ಷಣ ತಾವು ಜಾಗ್ರತೆಯಾಗಿ ಅದನ್ನು ಪಾಸು ಮಾಡುತ್ತೀರೆಂದು ನಂಬಿದ್ದೇನೆ. ನಾನು ಈಗಾಗಲೇ ಈ ಸಾಯಿಲ್ ಕನ್‌ಸರ್‌ವೇಷನ್ ಆಕ್ಟ್ ಪ್ರಕಾರ ಒಂದು ಲಕ್ಷದ ಅರವತ್ತೈದು ಸಾವಿರ ಎಕರೆ ಭೂಮಿಯನ್ನು ಉಳುಮೆ ಮಾಡಿಸಿದ್ದೇವೆ. ನಾವು ಈಗ ರಾಜ್ಯದ ಎಲ್ಲಾ ಭಾಗಗಳಿಗೂ ಏಕಾಧಿಪತ್ಯ ಕಾನೂನನ್ನು ಮಾಡುತ್ತಿರುವ ಕಾರಣ ರೈತರಿಗೆ ಈ ಭಾಗದಲ್ಲಿರತಕ್ಕ ತೊಂದರೆಯನ್ನು ಇನ್ನು ಸ್ವಲ್ಪ ದಿವಸಗಳಲ್ಲೇ ತಪ್ಪಿಸುತ್ತೇವೆಂದು ಹೇಳುತ್ತೇವೆ.

**ಶ್ರೀ ಬಿ.ಎಲ್. ನಾರಾಯಣಸ್ವಾಮಿ:** ಮಿನಿಮಂ ವೇಜಸ್ ಸಮಿತಿಯವರ ಸಲಹೆಗಳಿಗನುಗುಣವಾಗಿ ಸರ್ಕಾರದವರು ಈ ಅಗ್ರಿಕಲ್ಚರ್ ಲೇಬರ್ಸುಗಳಿಗೇನು ಅನುಕೂಲ ಮಾಡಿದ್ದಾರೆ.

**ಶ್ರೀ ಎನ್.ರಾಚಯ್ಯ:** ಈ ಬಗ್ಗೆ ಆಗಲೇ ಸೂಕ್ತ ಕ್ರಮಗಳನ್ನು ಕೈಗೊಳ್ಳಲಾಗಿದೆ. ವ್ಯವಸಾಯ ಇಲಾಖೆಯಲ್ಲಿ ಈ ಬಾಬ್ತಿಗಾಗಿಯೂ ಒಬ್ಬ ಸ್ಪೆಷಲ್ ಅಧಿಕಾರಿಗಳನ್ನು ಇಡಬೇಕಾಗಿ ಬರುತ್ತದೆಯಾದುದ್ದರಿಂದ ವ್ಯವಸಾಯದ ಇಲಾಖೆಯ ಮೂಲಕ ಇದನ್ನು ಜಾರಿಗೆ ಕೊಡಲು ಅವಕಾಶವಿಲ್ಲ.

ಇನ್ನು ಬುಲ್‌ಡೋಜರ್ಸ್ ಮತ್ತು ಟ್ರ್ಯಾಕ್ಟರ್‌ಗಳ ವಿಚಾರದಲ್ಲಿ ಶ್ರೀ ಶಿವಪ್ಪನವರು ಮತ್ತು ಶ್ರೀ ಎನ್.ಪುಟ್ಟಣ್ಣನವರು ಮತ್ತು ಇನ್ನೂ ಕೆಲವು ಸದಸ್ಯರುಗಳು ಮಾತನಾಡಿದ್ದಾರೆ. ಈ ವಿಚಾರದಲ್ಲಿ ಕೇಂದ್ರ ಸರ್ಕಾರಕ್ಕೆ ರಾಜ್ಯ ಸರ್ಕಾರದವರು ಕಾಗದ ಪತ್ರಗಳನ್ನು ಬರೆದು 6 ತಿಂಗಳ ಮೇಲಾಗಿದೆ. ನಮಗೀಗ 50 ಟ್ರ್ಯಾಕ್ಟರ್ ಮತ್ತು 50 ಬುಲ್‌ಡೋಜರ್‌ಗಳು ಬೇಕಾಗಿದೆ. ಅಷ್ಟನ್ನು ಕೊಡಬೇಕೆಂದು ನಾವೀಗ ಕೇಳಿದ್ದೇವೆ. ಆದರೆ ಕೇಂದ್ರ ಸರ್ಕಾರದವರು ಕೂಡ ಏನೋ ಕೆಲವು ಅನಿವಾರ್ಯಗಳ ದೆಸೆಯಲ್ಲಿ ಜಾಗ್ರತೆಯಾಗಿ ನಮಗೆ ಇವುಗಳನ್ನೊದಗಿಸುತ್ತಾರೆಂದು ನಾವು ಆಶಿಸಿದ್ದೇವೆ. ಆದರೆ ಇನ್ನು ರೇಟಿನ ವಿಚಾರದಲ್ಲೂ ಮತ್ತು ಈ ಟ್ರ್ಯಾಕ್ಟರುಗಳನ್ನು ಕೊಡದ ನಿಬಂಧನೆಗಳ ವಿಚಾರದಲ್ಲೂ ಕೆಲವು ತೊಂದರೆಗಳಿರುತ್ತವೆಂದು ಹೇಳಿದ್ದಾರೆ. ಟ್ರ್ಯಾಕ್ಟರುಗಳ ರೇಟ್ ಬಹಳ ಜಾಸ್ತಿಯಾಗಿ ರೈತರಿಗೆ ನಿವಾರಣೆ ಮಾಡಿ ರೈತರಿಗೆ ಸ್ಪೆಷಲ್ ರೀತಿಯಲ್ಲಿ ಅನುಕೂಲ ಕಲ್ಪಿಸತಕ್ಕ ಬಗ್ಗೆ ಸರ್ಕಾರದವರಾಗಲೇ ತೀವ್ರ ಗಮನಕೊಟ್ಟಿದ್ದಾರೆ.

**ಶ್ರೀ ಆಲೂರು ಹನುಮಂತಪ್ಪ:** ಜಿಲ್ಲಾ ಲೆವೆಲ್ಲಿನಲ್ಲಿ ಅಗ್ರಿಕಲ್ಚರ್ ಫೇರ್ ನಡೆಸಲು ಸರ್ಕಾರವು ಕೊಡತಕ್ಕ ಗ್ರ್ಯಾಂಟ್ ವಿಚಾರ ಏನಾಯಿತು?

**ಶ್ರೀ ಎನ್. ರಾಚಯ್ಯ:** ಈ ಪ್ರದರ್ಶನ ಕೇವಲ ಜಿಲ್ಲಾ ಮಟ್ಟದಲ್ಲೆ ಅಲ್ಲ, ಇದನ್ನು ಪ್ರತಿಯೊಂದು ತಾಲ್ಲೂಕು ಹಾಗೂ ಹೋಬಳಿಗಳ ಮಟ್ಟದಲ್ಲಿ ಅಗ್ರಿಕಲ್ಚರ್ ಎಗ್ಸಿಬಿಷನ್, ಸೆಮಿನಾರ್, ಪರಿಷತ್ತು ಇತ್ಯಾದಿಗಳನ್ನೆಲ್ಲಾ ಕರೆಯಬೇಕೆಂದು ಪ್ರಯತ್ನ ಮಾಡಲಾಗುವುದು, ಇವುಗಳಿಂದ ರೈತರಲ್ಲಿ ಒಂದು ಜಾಗೃತಿಯುಂಟಾಗುತ್ತದೆ. ಈ ಬಗ್ಗೆ ಸರ್ಕಾರದವರಾಗಲೇ ಕ್ರಮಗಳನ್ನು ಕೈಗೊಂಡಿದ್ದಾರೆ. ಮೊನ್ನೆ ತಾನೇ ನಾನು ಶಿವಮೊಗ್ಗಕ್ಕೆ ಹೋಗಿದ್ದಾಗ ಒಂದು ವ್ಯವಸಾಯದ ಪರಿಹಾರ ದೊಡ್ಡ ಭವನವನ್ನು ಓಪನ್ ಮಾಡಿ ಬಂದಿರುತ್ತೇನೆ. ಈಗ ಪ್ರತಿಯೊಂದು ಕಡೆಯಲ್ಲೂ ಈ ವ್ಯವಸಾಯೋದ್ಯಮದಲ್ಲಿ ಹೆಚ್ಚಿನ ಆಸಕ್ತಿ ವಹಿಸಿ ಕೆಲಸ ಮಾಡತಕ್ಕ ರೈತ

ಸಂಘ, ಯುವಕ ಸಂಘಗಳಿಗೆ ಭಾರತ ಪರೀಕ್ಷಾ ಸೇವಾ ಸಂಘ ಮತ್ತು ಭಾರತ ಸೇವಾದಳ ಇತ್ಯಾದಿಗಳಿಗೆ ಗ್ರ್ಯಾಂಟ್ ಕೊಡುತ್ತಿರುವಂತೆ, ಗ್ರ್ಯಾಂಟ್ ಕೊಡಬೇಕೆಂಬುದಾಗಿ ಕಳೆದ ವರ್ಷವೇ ತೀರ್ಮಾನ ಕೈಗೊಳ್ಳಲಾಗಿದೆ. ಈ ವಿಚಾರದಲ್ಲಿ ಸರ್ಕಾರದವರು ಯಾರಿಗೂ ತೊಂದರೆ ಮಾಡಿಲ್ಲ.

**ಶ್ರೀ ಆಲೂರು ಹನುಮಂತಪ್ಪ:** ಸರ್ಕಾರದವರು, ಕೊಡತಕ್ಕ 5 ಲಕ್ಷ ರೂಪಾಯಿಗಳ ಸಹಾಯದ ವಿಚಾರವೇನಾಗಿದೆ?

**ಶ್ರೀ ಎನ್.ರಾಚಯ್ಯ:** ಈಗಾಗಲೇ ನಾವು ಒಂದು ಯುವಕ ಸಂಘಕ್ಕೆ ಒಂದು ಕಟ್ಟಡ ಮುಫತ್ತಾಗಿ ಕಟ್ಟಿಸಿಟ್ಟಿದ್ದೇವೆ. ತಾವೀಗ ಎಲ್ಲರೂ ಕೊಟ್ಟಿರುವ ಸಲಹೆ ಏನಿವೆ ಅವುಗಳನ್ನು ಸರ್ಕಾರದವರು ಸಹಾನುಭೂತಿಯಿಂದ ಪರಿಶೀಲಿಸುತ್ತಾರೆಂಬ ಭರವಸೆಯನ್ನು ಮಾತ್ರ ಕೊಡಬಲ್ಲೆ.

**ಶ್ರೀ ಸಿ.ಕೆ.ರಾಜಯ್ಯ ಶೆಟ್ಟಿ:** ಹಾಗಾದರೆ ತುಮಕೂರು ಜಿಲ್ಲೆಗೇಕೆ ಆ ಸಹಾಯವನ್ನು ನೀಡಿಲ್ಲ?

**ಶ್ರೀ ಎನ್.ರಾಚಯ್ಯ:** ಅಲ್ಲಿಗೂ ಕೊಡುತ್ತೇನೆ.

**ಶ್ರೀ ಜಿ ಎಸ್.ಬೊಮ್ಮೇಗೌಡ:** ಜಿಲ್ಲೆಗೆ 50 ಸಾವಿರ ರೂಪಾಯಿಗಳು ಕಟ್ಟಡ ಭವಿಷ್ಯಕ್ಕಾಗಿ ಕೇಳಿದ್ದರಲ್ಲ ಏನಾಯಿತು?

**ಶ್ರೀ ಎನ್. ರಾಚಯ್ಯ:** ಅದು ಯಾವ ಇಲಾಖೆಗೆ ಗೊತ್ತಿಲ್ಲ. ಅದನ್ನು ಪರಿಶೀಲನೆ ಮಾಡುತ್ತೇನೆ. ಅಲ್ಲಿ ಆಗದಿದ್ದರೆ ಬೇರೆ ಕಡೆ ಜಾಗ ಕೊಡುತ್ತೇವೆ.

**ಶ್ರೀ ಎನ್.ಪುಟ್ಟಣ್ಣ (ತುಮಕೂರು):** ಈ ಟ್ರ್ಯಾಕ್ಟರುಗಳ ವಿಚಾರದಲ್ಲಿ ಎಷ್ಟೆಷ್ಟು ಅನ್ಯಾಯಗಳು ನಡೆಯುತ್ತಿವೆ ಎಂಬುದು ಸರ್ಕಾರದವರಿಗೆ ಗೊತ್ತಿದೆ ಏನು! ಕೊಳ್ಳತಕ್ಕ ಟ್ರ್ಯಾಕ್ಟರುಗಳ ಮೇಲೆ ಟ್ಯಾಕ್ಸ್ ಕೊಡಬಾರದೆಂದು ತೀರ್ಮಾನವಾಗಿದೆ. ಆ ವೆಚ್ಚ ಸಮಿತಿಯವರು ಜನರಿಂದ ಈ ಟ್ಯಾಕ್ಸ್‌ನ್ನು ವಸೂಲು ಮಾಡಿ ಮಧ್ಯೆ ಇರತಕ್ಕ ಜನರು ತಿಂದು ಹಾಕುತ್ತಿದ್ದಾರೆಂದು ಕಂಪ್ಲೇಂಟ್ ಮಾಡಿಲ್ಲವೇ? ಹೀಗೆ ಇನ್ನೂ ಅನೇಕ ನಮೂನೆಯ ಬ್ಲಾಕ್ ಮಾರ್ಕೆಟ್, ಮಿಸ್‌ಮ್ಯಾನೇಜ್ ಕೆಲಸಗಳೆಲ್ಲಾ ಈ ದಿವಸ ನಮ್ಮ ರಾಜ್ಯದಲ್ಲಿ ನಡೆಯುತ್ತಿದೆ. ಸರ್ಕಾರದವರನ್ನು ಬಹಳ ತಿರಸ್ಕಾರ ಭಾವನೆಯಿಂದ ನೋಡುತ್ತಿದ್ದಾರೆ. ನನಗೆ 4 ವರ್ಷಗಳಿಂದಲೂ ಒಂದು ಟ್ರ್ಯಾಕ್ಟರ್

ಕೊಳ್ಳಲು ಸಾಧ್ಯವಾಗುತ್ತಿಲ್ಲ. ಕೇಂದ್ರ ಸರ್ಕಾರದವರಿಗೆ ನಮ್ಮ ಸರ್ಕಾರದವರು ಈ 15%ಗಳನ್ನು ಟ್ರ್ಯಾಕ್ಟರುಗಳ ಬಗ್ಗೆ ಹಾಕಬೇಕೆಂದು ಏಕೆ ಹೇಳಬಾರದು?

**ಶ್ರೀ ಎನ್ ರಾಚಯ್ಯ:** ಮಾನ್ಯ ಸದಸ್ಯರೊಬ್ಬರು ಟ್ರ್ಯಾಕ್ಟರ್ ಕೊಳ್ಳಲು ಅರ್ಜಿದಾರರಾಗಿದ್ದು ಅದು ಬಂದಿಲ್ಲವೆಂಬ ಕೋಪದಿಂದ ಹೀಗೆಲ್ಲಾ ಮಾತಾಡುತ್ತಿದ್ದಾರೆ. ಕೇಂದ್ರ ಸರ್ಕಾರ ನಮ್ಮ ಸರ್ಕಾರವನ್ನು ತಿರಸ್ಕಾರ ಭಾವನೆಯಿಂದ ಕಂಡಿಲ್ಲ. ನಾವು ಎಂದಿಗೂ ಈ ವಿಚಾರದಲ್ಲಿ ಹಾಗೆ ಮಂದಗಾಮಿ ವರ್ಗದಂತೆ ವರ್ತಿಸುತ್ತಿಲ್ಲ. ಈ ಟ್ರ್ಯಾಕ್ಟರುಗಳು ಪರದೇಶಗಳಿಂದ ಬರಬೇಕಾಗಿದೆ. ಫಾರಿನ್ ಎಕ್ಸ್‌ಚೇಂಜ್ ಬೇರೆ ಇದೆ. ಯಾವ ಮಿಸ್ ಮ್ಯಾನೇಜ್‌ಮೆಂಟಿಗೂ ಅವಕಾಶವಿಲ್ಲದಂತೆ ನಾವು ಇವುಗಳನ್ನು ಹಂಚಿದ್ದೇವೆ. ಟ್ಯಾಕ್ಸ್ ವಿಚಾರದಲ್ಲಿ ಲೋಪಗಳಾಗಿದ್ದರೆ ಅದನ್ನು ವಿಚಾರ ಮಾಡುತ್ತೇನೆ. ಆದರೆ ನಮ್ಮ ಪ್ರಯತ್ನಗಳೆಲ್ಲಾ ವಿಫಲವಾಗಿರುತ್ತವೆಂದು ಹೇಳಿದ್ದು ಸರಿಯಲ್ಲ. ನಮ್ಮ ಇಲಾಖಾ ಅಧಿಕಾರಿಗಳಿದ್ದರೂ ರಾಜಕೀಯದಲ್ಲಿ ಪ್ರವೇಶವಿಲ್ಲ. ನಮ್ಮ ರಾಜ್ಯ ಈ ಬಾಬ್ತುಗಳಲ್ಲಿ ಹೆಚ್ಚಿನ ಪ್ರಗತಿಯನ್ನು ಸಾಧಿಸಿದೆ. ನಾವು ದಕ್ಷತೆಯಿಂದ, ನಿಷ್ಠೆಯಿಂದ ಕೆಲಸ ಮಾಡಿದ್ದೇವೆ.

**ಶ್ರೀ ಆಲೂರು ಹನುಮಂತಪ್ಪ:** ಪ್ರತಿಯೊಂದು ಜಿಲ್ಲೆಯಲ್ಲಿರತಕ್ಕ ಅಸಿಸ್ಟೆಂಟ್ ಡೈರೆಕ್ಟರ್ ಮುಂತಾದ ಜಿಲ್ಲಾ ಮಟ್ಟದ ಅಧಿಕಾರಿಗಳಿಗೆ ಒಂದೊಂದು ವ್ಯಾನನ್ನೋ ಅಥವಾ ಜೀಪನ್ನೋ ಒದಗಿಸಬೇಕೆಂದು ಮನವಿಗಳು ಬಂದುದಕ್ಕೆ ಸರ್ಕಾರದವರು ಏನು ಕಾರ್ಯಕ್ರಮವನ್ನು ತೆಗೆದುಕೊಂಡಿದ್ದಾರೆ?

**ಶ್ರೀ ಎನ್.ರಾಚಯ್ಯ:** ಈ ವಿಷಯವನ್ನು ಸಹ ಮುಂದೆ ತಿಳಿಸುತ್ತೇನೆ. ರಾಷ್ಟ್ರೀಯ ವಿಸ್ತರಣೆಯ ಯೋಜನೆಯ ಪ್ರಕಾರ ಶೇಕಡ 80 ಭಾಗದಷ್ಟು ವ್ಯವಸಾಯ ಮತ್ತು ಪ್ರಾಣಿ ಸಂಪತ್ತು ಅಭಿವೃದ್ಧಿಗೆ ನಿಗಾ ಕೊಡಬೇಕೆಂದು ಹೇಳಿದ್ದರಿಂದ ಬಿ.ಡಿ.ಒ. ಅವರಿಗೆ ಜೀಪುಗಳನ್ನು ಒದಗಿಸಿದ್ದೆವು. ಅವರು ಅದನ್ನು ವ್ಯವಸಾಯಕ್ಕಾಗಿ ಉಪಯೋಗಿಸುತ್ತಿದ್ದಾರೆ. ಈಗ ಜಿಲ್ಲಾ ಮಟ್ಟದ ಅಧಿಕಾರಿಗಳಿಗೆ ವ್ಯಾನುಗಳ ಸೌಕರ್ಯವಿಲ್ಲವೆಂದು ಸರ್ಕಾರದ ಗಮನಕ್ಕೆ ಬಂದಿದೆ. ಸರ್ಕಾರದವರು ಈಗಾಗಲೇ ಯೋಚನೆ ಮಾಡುತ್ತಿದ್ದಾರೆ ಮತ್ತು ಅದನ್ನು ಪರಿಶೀಲಿಸುತ್ತಿದ್ದಾರೆ. ಅದಕ್ಕಾಗಿ ಲ್ಯಾಂಡ್ ಮತ್ತು ಪ್ರೊಟೆಕ್ಟ್ ಇಲಾಖೆಯವರು ಪ್ರಚಾರ ಕಾರ್ಯಕ್ರಮಗಳನ್ನು ತೆಗೆದುಕೊಂಡಿದ್ದಾರೆಂದು ಹೇಳುತ್ತೇನೆ.

**ಶ್ರೀ ಆಲೂರು ಹನುಮಂತಪ್ಪ:** ಆ ಬಗ್ಗೆ ಏನಾದರೂ ಸೂಕ್ತ ಕ್ರಮವನ್ನು ತೆಗೆದುಕೊಂಡು ಪರಿಶೀಲನೆ ಮಾಡುತ್ತಿದ್ದೀರಾ?

**ಶ್ರೀ ಎನ್.ರಾಚಯ್ಯ:** ಇನ್ನು ವೆಟರ್‌ನರಿ ಮತ್ತು ಅನಿಮಲ್ ಹಾಸ್ಬೆಂಡರಿ ಇಲಾಖೆಗಳ ವಿಚಾರದಲ್ಲಿ ಕೆಲವು ಮಾನ್ಯ ಸದಸ್ಯರು ಸರ್ಕಾರ ಆ ಬಗ್ಗೆ ಏನೂ ಕಾರ್ಯಕ್ರಮ ತೆಗೆದುಕೊಂಡಿಲ್ಲವೆಂದು ಹೇಳಿದರು. ಶ್ರೀಮಾನ್ ಶ್ರೀನಿವಾಸಶೆಟ್ಟರು ಈ ಆರ್ಟಿಫಿಷಿಯಲ್ ಇನ್‌ಸೆಮಿನೇಷನ್ ಅಂದರೆ ಕೃತಕ ಗರ್ಭಧಾರಣೆಯ ವಿಷಯದಲ್ಲಿ ಏನೂ ಕಾರ್ಯಕ್ರಮವನ್ನು ತೆಗೆದುಕೊಂಡಿಲ್ಲವೆಂದು ವಾದಿಸಿದರು. ಈಗಾಗಲೇ ಸುಮಾರು 83 ಆರ್ಟಿಫೆರೂಲ್ ಇನ್‌ಸೆಮಿನೇಷನ್ ಸೆಂಟರ್‌ಗಳನ್ನು ಪ್ರಾರಂಭ ಮಾಡಿದ್ದೇವೆ. ಮತ್ತು ವೆಟರಿನರಿ ಇಲಾಖೆಗಳಿಂದ ಕಳೆದ 3 ವರ್ಷಗಳಲ್ಲಿ ತಮ್ಮ ಜಿಲ್ಲೆಯಲ್ಲಿ ಎಷ್ಟರ ಮಟ್ಟಿಗೆ ಅನುಕೂಲವಾಗಿದೆ ಎಂಬುದನ್ನು ವಿಚಾರ ಮಾಡಿ ನೋಡಬೇಕೆಂದು ಹೇಳುತ್ತೇನೆ. ಅದಕ್ಕೆ ಹಿಂದೆ ಮಾನ್ಯ ಸದಸ್ಯರ ಕ್ಷೇತ್ರದಲ್ಲಿ ಈ ಇಲಾಖೆಯ ಮೂಲಕ ಎಷ್ಟರ ಮಟ್ಟಿಗೆ ಆ ಸೌಕರ್ಯಗಳಿದ್ದು; ಈಗ ಕಳೆದ 3 ವರ್ಷಗಳಲ್ಲಿ ಎಷ್ಟರ ಮಟ್ಟಿಗೆ ಅಲ್ಲಿ ಸೌಲಭ್ಯಗಳಾಗಿವೆ ಎಂಬುದನ್ನು ಮಾನ್ಯ ಸದಸ್ಯರು ಗಮನಿಸಬೇಕು. ಇನ್ನು 20 ವರ್ಷಗಳಲ್ಲಿ ಆಗುತ್ತಿದ್ದಂತಹ ಅನುಕೂಲಗಳನ್ನು ಕಳೆದ 3 ವರ್ಷಗಳಲ್ಲಿಯೇ ಅವರ ಕ್ಷೇತ್ರದಲ್ಲಿ ಒದಗಿಸಿದೆ ಎಂದು ನಾನು ನಿಸ್ಸಂದೇಹವಾಗಿ ಈ ಸಂದರ್ಭದಲ್ಲಿ ಹೇಳಬೇಕಾಗಿದೆ.

ಇನ್ನೊಂದು ವಿಷಯ ಈಗ ಎಲ್ಲಾ ಕಡೆಯಲ್ಲೂ ದನಗಳ ಆಸ್ಪತ್ರೆಗಳನ್ನು ಮಾಡಿದ್ದೇವೆ. ಅವನ್ನು ಇನ್ನೂ ಅಪ್‌ಗ್ರೇಡ್ ಮಾಡಬೇಕೆಂಬ ಮನಸ್ಸು ಸರ್ಕಾರಕ್ಕೆ ಪೂರ್ಣವಾಗಿದೆ. ಆದುದರಿಂದ ಯಾವ ಸಂಸ್ಥಾನದಲ್ಲಿಯೂ ಇಲ್ಲದಷ್ಟು ರೀತಿಯಲ್ಲಿ ಈಗಾಗಲೇ ಈ ಬಗ್ಗೆ ಇಲ್ಲಿ ಕೆಲಸ ಮಾಡಿದೆ. ಈಗ ಸುಮಾರು 475 ಆಸ್ಪತ್ರೆಗಳನ್ನು ನಮ್ಮ ಸಂಸ್ಥಾನದಲ್ಲಿಟ್ಟುಕೊಂಡಿದ್ದೇವೆ. 25 ಸಾವಿರ ದನಗಳಿವೆ. 25 ಸಾವಿರ ಜಾನುವಾರಗಳಿಗೆ ಒಂದು ಆಸ್ಪತ್ರೆಗಳನ್ನು ಕೊಟ್ಟಿದ್ದೇವೆ. ಕಳೆದ ವರ್ಷ ಆಸ್ಪತ್ರೆಗಳನ್ನು ಕೊಟ್ಟಹಾಗೆ ಈ ವರ್ಷದಲ್ಲಿಯೂ 40 ವೆಟರಿನರಿ ಆಸ್ಪತ್ರೆಗಳನ್ನು ಕೊಡಬೇಕೆಂದು ಮಂಜೂರು ಮಾಡಿದ್ದೇವೆ. ಎಲ್ಲೆಲ್ಲಿ ಈ ಆಸ್ಪತ್ರೆಗಳು ಬೇಕು ಎಂಬುದಕ್ಕೆ ನಮಗೆ ಸ್ಥಳೀಯ ಅಧಿಕಾರಿಗಳಿಂದ ಶಿಫಾರಸ್ಸು ಬಂದ ಮೇಲೆ ಅದನ್ನು ಮಾಡುತ್ತಿದ್ದೇವೆ. ಅವರ ಯೋಜನೆಯ ಪ್ರಕಾರ 40 ವೆಟರ್ನರಿ ಆಸ್ಪತ್ರೆಗಳನ್ನು ಈ ವರ್ಷವೂ ಕೊಡಲು ಈಗಾಗಲೇ ಮಂಜೂರು ಮಾಡಿದ್ದೇವೆ.

ಈಗ ಇನ್ನು ಹೆಚ್ಚಿನ ಮುತುವರ್ಜಿಯಿಂದ ವೆಟರ್‌ನರಿ ಇಲಾಖೆ ಕೆಲಸ ಮಾಡಬೇಕಾಗಿದೆ. ಈಗ ವೆಟರ್‌ನರಿ ಕಾಲೇಜಿನಲ್ಲಿ ಈಗಾಗಲೇ ಎರಡು ಮೂರನೆಯ ವರ್ಷದಲ್ಲಿ ವಿದ್ಯಾರ್ಥಿಗಳು ವಿದ್ಯಾಭ್ಯಾಸ ಮಾಡುತ್ತಿದ್ದಾರೆ. 1962ನೆಯ ಇಸವಿಯ ಹೊತ್ತಿಗೆ ಅಲ್ಲಿ ಡಾಕ್ಟರ್ ಪರೀಕ್ಷೆಯಲ್ಲಿ ಉತ್ತೀರ್ಣರಾಗುವವರನ್ನೇ ನೇಮಿಸಬೇಕೆಂಬ ಅಭಿಪ್ರಾಯ ಸರ್ಕಾರಕ್ಕಿದೆ. ನಮಗೆ ಆಗ ಫಸ್ಟ್ ಬ್ಯಾಚ್‌ನವರು ಸಿಕ್ಕುತ್ತಾರೆ.

**ಶ್ರೀ ಸಿ.ಜೆ. ಮುಕ್ಕಣ್ಣಪ್ಪ** : ಈ 40 ಆಸ್ಪತ್ರೆಗಳನ್ನು 60-61ರ ಸಾಲಿನಲ್ಲಿ ಮಾಡಿದ್ದೀರಾ?

**ಶ್ರೀ ಎನ್.ರಾಚಯ್ಯ:** ಸರ್ಕಾರದವರು ಆ ರೀತಿ ಮಂಜೂರು ಮಾಡಬಹುದು. ಹಣ ಮಾತ್ರ ಅಪ್ರೋಪ್ರಿಯೇಷನ್ ಹಣ ಒದಗಿಸುವುದಕ್ಕಾಗುವುದಿಲ್ಲ. ಅಪ್ರೋಪ್ರಿಯೇಷನ್ ಯಾವಾಗ ಆಗುತ್ತದೋ ಆಗ ಹಣ ಮಂಜೂರು ಮಾಡಬಹುದು ಆದರೆ ಹಣವನ್ನು ಆಗ ಕೊಡುವುದಕ್ಕಾಗುವುದಿಲ್ಲ.

**ಶ್ರೀ ಬಿ.ಎಲ್. ನಾರಾಯಣಸ್ವಾಮಿ:** 40 ಆಸ್ಪತ್ರೆಗಳಲ್ಲಿ ಜಿಲ್ಲಾವಾರು ಯಾವುವು?

**ಶ್ರೀ ಎನ್.ರಾಚಯ್ಯ:** ಅದನ್ನೇ ತಪ್ಪಾಗಿ ಕೇಳಿದ್ದಾರೆ. ಎಲ್ಲೆಲ್ಲಿ ಅವಶ್ಯಕ ಇದೆಯೋ ಅಂತಹ ಕಡೆ ಅದನ್ನು ಕೊಡುತ್ತಿದ್ದೇವೆ. ಕಳೆದ ಒಂದು ವಾರದಲ್ಲಿಯೇ ಗಾಡಿಹಳ್ಳಿ, ಮೂಗೂರು ಹುಡಿಗಾಲ್ ಇವುಗಳಿಗೆ ಆಸ್ಪತ್ರೆಗಳನ್ನು ಕೊಟ್ಟಿದ್ದೇವೆ.

ಇನ್ನೊಂದು ವಿಷಯ, ಕೆಲವು ಮಾನ್ಯ ಸದಸ್ಯರು ಒಳ್ಳೆಯ ಹಸುಗಳನ್ನು, ದನಗಳನ್ನು ಗ್ರಾಮಾಂತರದಲ್ಲಿರುವವರಿಗೆ ಒದಗಿಸುವುದಿಲ್ಲವೆಂದು ಹೇಳಿದರು. ಹಸುಗಳನ್ನೊದಗಿಸುವುದು, ದನಗಳನ್ನೊದಗಿಸುವುದು ಸರ್ಕಾರದ ಕೆಲಸವಲ್ಲ. ನಾವು ಹಾಗೆ ಎಂದಿಗೂ ಹೇಳಲಿಲ್ಲ. ಆದರೆ ಇತರೆ ಜಾತಿಯ ಹಸುಗಳನ್ನು ಕೇಂದ್ರ ಸರ್ಕಾರದ ಮಟ್ಟದಲ್ಲಿ ಆಲ್ ಇಂಡಿಯಾ ಕ್ಯಾಪಿಟಲ್‌ಷೋ ವರ್ಗದವರು ಪಂಜಾಬ್ ಮುಂತಾದ ಕಡೆಗಳಲ್ಲಿ ಸ್ಟ್ರೀಕ್ಯಾಟಲ್ ಆಗಿರತಕ್ಕದ್ದನ್ನು ಅದರಂತೆ ಅವರಿಗೆ ಅವು ಯಾವ ಒಂದು ಉಪಯೋಗಕ್ಕೆ ಇರುವಂಥದ್ದನ್ನು ತರಿಸಿಕೊಂಡು ಎಲ್ಲೆಲ್ಲಿ ಬಾಂಧವರು ದನಗಳನ್ನು ಚೆನ್ನಾಗಿ ಸಾಕುತ್ತಾರೋ ಅವನ್ನು ಚೆನ್ನಾಗಿ ಅಭಿವೃದ್ಧಿಪಡಿಸಿಕೊಂಡಿದ್ದಾರೋ ಅಂತಹ ಕಡೆಗಳಲ್ಲಿ ಪ್ರತ್ಯೇಕವಾಗಿ ಸ್ವಂತವಾಗಿ ಹಾಕಿಕೊಂಡ ಮೇಲೆ ಕೇಂದ್ರ ಸರ್ಕಾರದ ಸಂಸ್ಥೆಯವರು ಅವನ್ನು ಕೊಡುತ್ತಿಲ್ಲ.

ಆದ್ದರಿಂದ ಮಾನ್ಯ ಸದಸ್ಯರ ಆರೋಪಣೆ ಸರಿಯಾಗಿಲ್ಲವೆಂದು ನಾನು ಹೇಳುತ್ತೇನೆ.

ಇನ್ನೊಂದು ವಿಚಾರ. ಈಗ ಕೀ ಕ್ಯೂ ಸ್ಕೀಂ ಎಂದು ಮಾಡುತ್ತಿದ್ದೇವೆ. 1960ನೆಯ ವರ್ಷದಲ್ಲಿ ನಾಲ್ಕು ಹೊಸದಾಗಿ ಅವನ್ನು ಪ್ರಾರಂಭ ಮಾಡಬೇಕೆಂದು ಯೋಚನೆ ಇಟ್ಟುಕೊಂಡಿದ್ದೇವೆ. ಇನ್ನು ಪೌಲ್ಟ್ರೀ ಡೆವಲಪ್‌ಮೆಂಟ್ ಸ್ಕೀಂ ಎಂಟು ಎಕ್ಸ್‌ಟೆನ್‌ಷನ್ ಸೆಂಟರ್‌ಗಳನ್ನು ಮಾಡಿದ್ದೇವೆ. ಇದಲ್ಲದೆ ಫ್ರೀ ಬುಲ್ ಸ್ಕೀಂ ಎಂಬುದು ಮಾಡಿದ್ದೇವೆ. ಆ ಸ್ಕೀಂ ಪ್ರಕಾರ ಮುಫತ್ತಾಗಿ ಗೂಳಿಗಳನ್ನು ರೈತ ಬಾಂಧವರಿಗೆ ಹಂಚುತ್ತೇವೆ. ಕಳೆದ ವರ್ಷ 100 ಗೂಳಿಗಳನ್ನು ಹಂಚಿದ್ದೇವೆ. ಈಗಾಗಲೇ 100 ಗೂಳಿಗಳನ್ನು ಹಂಚಬೇಕೆಂದಿದ್ದೇವೆ. ಈಗಾಗಲೇ ಈ ಸ್ಕೀಂನಲ್ಲಿ 75 ಜನ ಟ್ರೈನಿಂಗ್ ಪಡೆಯುತ್ತಿದ್ದಾರೆ. ಪಡೆಯುವವರಾಗಿದ್ದಾರೆ. ಈ ಹೆಚ್ಚಿನ ಜನ ಇದರಲ್ಲಿ ತರಬೇತಿ ಹೊಂದಿ ಅಧ್ಯಾಪಕನಾಗಬೇಕೆಂಬ ಉದ್ದೇಶದಿಂದ ರಾಜ್ಯ ಸರ್ಕಾರದವರು ಲೈವ್‌ಸ್ಟಾಕ್ ಫಾರಮ್ಸ್ ರಿ ಆರ್ಗನೈಸೇಷನ್ ಕಮಿಟಿ ಎಂದು ರಚನೆ ಮಾಡಿದ್ದಾರೆ. ಈಗಾಗಲೇ ಸರ್ಕಾರಕ್ಕೆ ವರದಿ ಬಂದು ಆ ವರದಿಯ ಪ್ರಕಾರ ಇನ್ನೂ ಹೆಚ್ಚಿನ ರೀತಿಯಲ್ಲಿ ವೃದ್ಧಿ ಮಾಡುತ್ತಿದ್ದೇವೆ. ಈ ಅನಿಮಲ್ ಇಲಾಖೆಯ ವಿಚಾರವಾಗಿ ತೃತೀಯ ಪಂಚವಾರ್ಷಿಕ ಯೋಜನೆಯಲ್ಲಿ ಕೇಂದ್ರ ಸರ್ಕಾರದವರು ಏನು ಮಾಡಿದ್ದಾರೋ ಅದನ್ನು ರಾಜ್ಯಸರ್ಕಾರದವರು ಇದಕ್ಕೆ ಮುಂದಿನ ತೃತೀಯ ಪಂಚವಾರ್ಷಿಕ ಯೋಜನೆಯಲ್ಲಿ ಹೈಯಸ್ಟ್ ಪ್ರೈಯಾರಿಟಿಯಲ್ಲಿ ಕೊಟ್ಟಿದೆ. ಆ ಪ್ರಕಾರ ಪ್ರಾಣಿ ಸಂಪತ್ತನ್ನು ಅಭಿವೃದ್ಧಿ ಮಾಡುವ ಕಡೆ ರಾಜ್ಯ ಸರ್ಕಾರ ತನ್ನ ಸಹಾಯವನ್ನು ಕೊಡಬೇಕೆಂದು ಮನಸ್ಸು ಮಾಡಿದೆ. ಶ್ರೀಮಾನ್ ಶ್ರೀನಿವಾಸಶೆಟ್ಟರು ಹೇಳಿದಂತೆ ಈ ಸಿಬ್ಬಂದಿಯ ಕೊರತೆ ಈಗ ಹೆಚ್ಚಾಗಿದೆ. ಈಗ 250 ಕೆಲಸಗಳು ನಮ್ಮ ಇಲಾಖೆಯಲ್ಲಿ ಇವೆ. ವೆಟರ್‌ನರಿ ಕಾಲೇಜಿಗೂ ಒಬ್ಬ ಇಂಡಿಪೆಂಡೆಂಟ್ ಆಫೀಸರನ್ನು ನೇಮಕ ಮಾಡಬೇಕು ಎಂದು ಯೋಚನೆ ಇದೆ. ಬೆಂಗಳೂರಿನಲ್ಲಿ ಒಂದು ರೂಪಾಯಿಗಳ ಖರ್ಚಿನಲ್ಲಿ ಹಾಲನ್ನು ಮಾರುವ ಒಂದು ಸ್ಕೀಂನ್ನು UNICEFನವರು ಮಾಡಿದರು. ಆ ಪ್ರಕಾರದಲ್ಲಿ ಇಲ್ಲಿನ ಮಿಲ್ಕ್ ಬೋರ್ಡನ್ನು ರಚನೆ ಮಾಡಿ ಅದಕ್ಕೆ ತಜ್ಞರಾದಂಥ ಆಫೀಸರನ್ನು ನೇಮಕ ಮಾಡಿ ಒಬ್ಬ ಪ್ರಾಜೆಕ್ಟ್ ಇಂಜಿನಿಯರನ್ನು ನೇಮಿಸಿ ಒಬ್ಬ ಐ.ಎ.ಎಸ್. ಆಫೀಸರನ್ನು ನೇಮಿಸಿ ಸುವ್ಯವಸ್ಥೆ ಮಾಡಬೇಕಾಗಿದೆ. ಹೀಗೆ ಹಾಲಿನ

ಸರಬರಾಜು ಯೋಜನೆಯನ್ನು ಯಶಸ್ವಿಯಾಗಿ UNICEಈ ಮಾಡಬೇಕೆಂದು ಅವರು ಅವರಿಗೆ ತಕ್ಕ ಸಿಬ್ಬಂದಿಯನ್ನು ಸರ್ಕಾರದವರು ಒದಗಿಸಿಕೊಡಬೇಕೆಂದು ಮಾಡಿದ್ದಾರೆ. ಕೇವಲ ಒಂದು ವಾರದಲ್ಲಿ ಈ ಯೋಜನೆಗೆ ಅನುಸಾರವಾಗಿ ಒಬ್ಬ ಪ್ರಾಜೆಕ್ಟ್ ಆಫೀಸರನ್ನು ಪ್ರಾಜೆಕ್ಟ್ ಇಂಜಿನಿಯರನ್ನು ಒಬ್ಬ ಆಡ್ಮಿನಿಸ್ಟ್ರೇಟರನ್ನು ನೇಮಿಸಬೇಕೆಂದು ಸರ್ಕಾರದ ಆಲೋಚನೆ ಇದೆ. ಸುಮಾರು 3 ಲಕ್ಷ ಪೌಂಡು ಹಾಲನ್ನು ಬೆಂಗಳೂರಿನಲ್ಲಿ ಸರಬರಾಜು ಮಾಡುತ್ತಿದ್ದೇವೆ. ನಮ್ಮ ಬೆಂಗಳೂರು ಜನತೆಗೆ ಸುಮಾರು 3 ಲಕ್ಷ ಪೌಂಡುಗಳಷ್ಟು ಹಾಲು ಸರಬರಾಜು ಆಗಬೇಕಾಗಿದೆ. ಇದನ್ನು ಬಹು ಜಾಗೃತಿಯಿಂದ ಮತ್ತು ಬಹು ಜರೂರಾಗಿ ನಡೆಸಬೇಕೆಂದು ಸರ್ಕಾರದವರು ಒಪ್ಪಿಕೊಂಡಿದ್ದಾರೆ.

**ಶ್ರೀ ಆಲೂರು ಹನುಮಂತಪ್ಪ:** ಇದು ಬಹಳ ಮುಖ್ಯವಾದ ಪ್ರಶ್ನೆ, ಇನ್ನೆಷ್ಟು ದಿವಸದೊಳಗೆ ಈ ಯೋಜನೆ ಕಾರ್ಯರೂಪಕ್ಕೆ ಬರುತ್ತದೆ?

**ಶ್ರೀ ಎನ್.ರಾಚಯ್ಯ:** ಆ ವಿಷಯವನ್ನು ಮಾನ್ಯ ಸದಸ್ಯರು ತಿಳಿಯಬೇಕಾದರೆ ನನ್ನ ಚೇಂಬರಿಗೆ ಬಂದರೆ ಆ ಯೋಜನೆಯ ಪ್ರತಿಯನ್ನೇ ಕೊಡುತ್ತೇನೆ, ಆ ಯೋಜನೆಯನ್ನು ನಮ್ಮ ಇಂಜಿನಿಯರ್ ಮತ್ತು UNICEF ಅಥಾರಿಟೀಸ್ ಅವರು ಸೇರಿ ಮಾಡುತ್ತಿದ್ದಾರೆ. ಮತ್ತು ಆ ಒಂದು ಟಾರ್ಗೆಟ್‌ನ್ನು ಯಾವ ಪೀರಿಯಡ್ಡಿನಲ್ಲಿ ಮಾಡಬೇಕೋ ಆ ಪ್ರಕಾರ ಮಾಡುತ್ತಿದ್ದಾರೆ.

ಹಾಗೆ ಮಾಡುವಾಗ ಅದಕ್ಕೆ ಸುಮಾರು 25 ಎಕರೆ ಜಮೀನು ಬೇಕಾಗಿದೆ. ಅಷ್ಟು ಜಮೀನನ್ನು ಕೊಡಬೇಕೆಂದು ಸಂಬಂಧಪಟ್ಟ ಮಂತ್ರಿಗಳಿಗೆ ಬರೆದಿದ್ದೇನೆ. ಕಾರ್ಯಾಚರಣೆ ಜಾಗ್ರತೆ ನಡೆಯುತ್ತಿದೆ. UNICEFನವರು ಈಗಲೇ ಇದರ ಏರ್ಪಾಡು ಮಾಡಬೇಕೆಂದು ಯಾವ ಕಾಲದಲ್ಲಿ ಏನೇನು ಮಾಡಬೇಕೋ ಅದನ್ನೆಲ್ಲಾ ಮಾಡುತ್ತಿದ್ದೇ ಇನ್ನು ಎರಡು ವರ್ಷ ಆಗುತ್ತದೆ.

**ಶ್ರೀ ಆಲೂರು ಹನುಮಂತಪ್ಪ:** ಇಂಡಿಯಾ ದೇಶದ ರಾಜ್ಯಗಳಿಂದ ಒಳ್ಳೆಯ ಹಸುಗಳನ್ನು ತರಿಸಿ ರಾಜ್ಯದ ಎಲ್ಲಾ ಭಾಗಗಳಿಗೂ, ಅದರಲ್ಲಿಯೂ ಬೆಂಗಳೂರು, ತುಮಕೂರು ಜಿಲ್ಲೆಗಳಿಗೆ ಮಾಡುವುದು ಹಾಲನ್ನು ಉತ್ಪತ್ತಿ ಹೆಚ್ಚು ಮಾಡುವುದರಿಂದ ಒಳ್ಳೆಯದಲ್ಲವೆ!

**ಶ್ರೀ ಎನ್.ರಾಚಯ್ಯ :** ಮಾನ್ಯ ಸದಸ್ಯರಿಗೆ ಗೊತ್ತಿದ್ದ ಹಾಗೆ ಈ ಕಾರ್ಯವನ್ನು ಕೇಂದ್ರ ಸಮಿತಿಯವರು ಮಾಡುತ್ತಿದ್ದಾರೆ. ಯಾವ ರೈತರು ಯಾವ ತಳಿ ಬೇಕೆಂದು ಹೇಳುತ್ತಾರೋ ಅವರು ತರಿಸಿಕೊಳ್ಳಬಹುದು. Local breed ಗಳಿಂದ up-grade ಪ್ರಯತ್ನ ಮಾಡುತ್ತೇವೆ ನಮ್ಮ ಡೈರಿಫಾರಂಗಳಲ್ಲಿ ಉತ್ತಮ ತಳಿಗಳಿವೆ. ಅವುಗಳ ವೀರ್ಯವನ್ನು ಸರಬರಾಜು ಮಾಡಿ ಬೆಂಗಳೂರಿನ ಸುತ್ತಮುತ್ತ ನಲವತ್ತು ಮೈಲಿ ರೈತರು ಅದನ್ನು ಉಪಯೋಗ ಮಾಡಿ ತಳಿ ಅಭಿವೃದ್ಧಿಪಡಿಸಿ, ಹೆಚ್ಚು ಹಾಲು ತರುವಂತೆ ಏರ್ಪಾಡು ಮಾಡುವ ಉದ್ದೇಶವಿದೆ. ರೈತರಿಗೆ ಅನುಕೂಲವಾಗುವುದಲ್ಲದೆ ಇಡೀ ಬೆಂಗಳೂರು ನಗರದ ಜನರಿಗೆ ಸುಲಭ ದರದಲ್ಲಿ ಉತ್ತಮ ಹಾಲು ದೊರೆಯುತ್ತದೆ. ಅದರಲ್ಲಿಯೂ ಬಡವರಿಗೆ ರಿಯಾಯಿತಿ ಕೊಡುವ ವಿಚಾರ ಇರುವುದರಿಂದ ಅನುಕೂಲವಾಗುತ್ತದೆ.

**ಶ್ರೀ ಎಫ್.ಎಚ್ ಮೊಹಸೀನ್ (ಹುಬ್ಬಳ್ಳಿ):** ಹುಬ್ಬಳ್ಳಿ, ಧಾರವಾಡ ನಗರಗಳಲ್ಲಿ ಹಾಲು ಸರಬರಾಜು ಚೆನ್ನಾಗಿಲ್ಲ. ಇದನ್ನು ಸರಿಪಡಿಸಲು ಏನು ಮಾಡುತ್ತೀರಿ?

**ಶ್ರೀ ಎನ್.ರಾಚಯ್ಯ:** ಮೂರನೆಯ ಪಂಚವಾರ್ಷಿಕ ಯೋಜನೆಯಲ್ಲಿ ಸರ್ಕಾರ ಪ್ರತಿ ಜಿಲ್ಲೆಯ ಕೇಂದ್ರದಲ್ಲಿಯೂ ಬೆಂಗಳೂರು ಮತ್ತು ಸುತ್ತಮುತ್ತಲೂ ಯಾವ ಏರ್ಪಾಡು ಮಾಡುತ್ತಿದ್ದೇವೋ ಅದೇ ರೀತಿ ಮಾಡಿ ಜಾರಿಗೆ ಕೊಡಬೇಕು ಎಂಬ ಉದ್ದೇಶವಿದೆ. ಹುಬ್ಬಳ್ಳಿ, ಧಾರವಾಡಕ್ಕೆ ಕೂಡ್ಲಿಗಿಯಲ್ಲಿ ಸಣ್ಣ ಹಾಲಿನ ಕೇಂದ್ರವಿದೆ. ಇದನ್ನು ಇನ್ನೂ ವಿಸ್ತರಿಸಬೇಕು. ಇದಕ್ಕಾಗಿ ಹೆಚ್ಚು ಹಣ ಮತ್ತು ಸಿಬ್ಬಂದಿಯನ್ನೊದಗಿಸಬೇಕೆಂಬ ಉದ್ದೇಶವಿದೆ. ಮೂರನೆಯ ಪಂಚವಾರ್ಷಿಕ ಯೋಜನೆಯಲ್ಲಿ ಇದನ್ನು ಖಂಡಿತ ಮಾಡುತ್ತೇವೆ.

ಎರಡನೆಯ ಯೋಜನೆಯ ಪ್ರಕಾರ ಭದ್ರಾವತಿಯಲ್ಲಿ ಹಾಲಿನ ಕೇಂದ್ರವನ್ನು ಮಾಡಲು ಈಗಾಗಲೇ ಸರ್ವೆ ನಡೆಸಿ ಅಂಕಿ ಅಂಶಗಳನ್ನು ತೆಗೆದುಕೊಂಡಿದ್ದಾರೆ. ಈ ವರ್ಷದಲ್ಲಿ ಅಲ್ಲಿ ಹಾಲು ಸರಬರಾಜು ಕೇಂದ್ರವನ್ನು ಏರ್ಪಾಡು ಮಾಡಬೇಕೆಂದಿದೆ. Key Village Scheme ಪ್ರಕಾರ 1960–61 ರಲ್ಲಿನಾವು ಆರು Key Village Schemeಗಳನ್ನು ಮಾಡಬೇಕೆಂದಿದ್ದೇವೆ. ನಾಲ್ಕು Poultry Development Schemes ಮಾಡಬೇಕು ನೂರು ಹೋರಿಗಳನ್ನು ಸರಬರಾಜು ಮಾಡಬೇಕು. ಮತ್ತು ಸಂಸ್ಥಾನದಲ್ಲಿ ಏರ್ಪಾಡು ಮಾಡಬೇಕು ಮತ್ತು

ಸಂಸ್ಥಾನದಲ್ಲಿ Cattle Show ಏರ್ಪಾಡು ಮಾಡಬೇಕು ಎಂದಿದ್ದೇವೆ. ದನಗಳ ರೋಗವನ್ನು ತಡೆಗಟ್ಟುವುದಕ್ಕಾಗಿ ಈಗಾಗಲೇ ಕ್ರಮವನ್ನು ತೆಗೆದುಕೊಂಡಿದ್ದೇವೆ. ಇದಕ್ಕಾಗಿ ಹೆಚ್ಚು ದನಗಳ ಆಸ್ಪತ್ರೆಗಳನ್ನು ಮಾಡಿದ್ದೇವೆ, ಗ್ರಾಮಾಂತರಗಳಲ್ಲಿ 40 ಪಶು ವೈದ್ಯ ಆಸ್ಪತ್ರೆಗಳನ್ನು ಏರ್ಪಾಡು ಮಾಡಬೇಕೆಂದಿದ್ದೇವೆ. ಕಳೆದ ವರ್ಷ 40 ಕುರಿಗಳ ಫಾರಂಗಳನ್ನು ಮಾಡಿದ್ದೇವೆ. ಹೀಗೆಯೇ ಅಭಿವೃದ್ಧಿಯನ್ನು ಮುಂದುವರೆಸಿಕೊಂಡು ಹೋಗಬೇಕೆಂದಿದ್ದೇವೆ. ನಮ್ಮ ರಾಜ್ಯದಲ್ಲಿ ವ್ಯವಸಾಯ ಮತ್ತು ಪಶು ವೈದ್ಯ ಕಾಲೇಜು ಈ ಎರಡೂ ಇರುವ ಕಾರಣ ಇದಕ್ಕೆ ಸಂಬಂಧಪಟ್ಟ ಹಾಗೆ ಒಂದು ರೂರಲ್ ವಿಶ್ವವಿದ್ಯಾನಿಲಯ ಮಾಡಬೇಕೆಂಬ ಉದ್ದೇಶ ಸರ್ಕಾರಕ್ಕಿದೆ, ಇದಕ್ಕಾಗಿ ಅಮೇರಿಕನ್ ಎಂಬೆಸ್ಸಿಯ ತಜ್ಞರು ನಮ್ಮ ಸಂಸ್ಥಾನಕ್ಕೆ ಬಂದಿದ್ದರು. ನೆನ್ನೆಯ ದಿವಸ ಅವರೊಡನೆ ಸಮಾಲೋಚನೆ ಮಾಡಲಾಗಿದೆ. ವೆಟರಿನರಿ ಮತ್ತು ವ್ಯವಸಾಯದ ಕಾಲೇಜಿನ ಜೊತೆಯಲ್ಲಿ ರೂರಲ್ ವಿಶ್ವವಿದ್ಯಾಲಯವನ್ನು ಮಾಡಬೇಕೆಂದು ಪ್ರಸ್ತಾಪ ಮಾಡಿದ್ದೇವೆ. ಇನ್ನು ಅಖೈರು ತೀರ್ಮಾನವಾಗಿಲ್ಲ. ಅನಿಮಲ್ ಹಸ್‌ಬೆಂಡ್ರಿ ಮತ್ತು ವೆಟರ್‌ನರಿ ಇಲಾಖೆಯಲ್ಲಿಯೇ ಕೂಡ ಅಧಿಕಾರಿಗಳು ಒಳ್ಳೆಯ ದಕ್ಷತೆಯಿಂದ, ಕೆಲಸ ಮಾಡಿದ್ದಾರೆ ಮತ್ತು ಇತರ ಸಂಸ್ಥಾನಗಳಿಗಿಂತಲೂ ನಮ್ಮ ಸಂಸ್ಥಾನದಲ್ಲಿ ಹೆಚ್ಚಿನ ಮಟ್ಟದ ಪ್ರಗತಿಯನ್ನು ಈ ಇಲಾಖೆಯಲ್ಲಿ ಸಾಧಿಸಿದ್ದೇವೆ. ನಮಗೆ ಸಿಬ್ಬಂದಿ ಬೇಕಾಗಿದೆ, ವೆಟರ್‌ನರಿ ಕಾಲೇಜಿನಲ್ಲಿ ಸ್ಟಾಕ್‌ಮನ್ ಟ್ರೈನಿಂಗ್ ಕೋರ್ಸಿನಲ್ಲಿಯೂ ಹೆಚ್ಚು ಹೆಚ್ಚು ಸಂಖ್ಯೆಯಲ್ಲಿ ಜನರನ್ನು ತರಬೇತು ಮಾಡಿ, ತರಬೇತಿಯಾದ ಜನರು ಸಿಕ್ಕಿದ ಹಾಗೆಲ್ಲಾ ಇನ್ನೂ ಮುಂದುವರೆಸಲು ಅವಕಾಶವಿದೆ, ಸಾಧ್ಯವಾದರೆ ಈ ಇಲಾಖೆಯನ್ನು ಪುನರ್‌ವ್ಯವಸ್ಥೆ ಮಾಡಿ ಅನಿಮಲ್ ಹಸ್‌ಬೆಂಡ್ರಿ ಮತ್ತು ವೆಟರ್‌ನರಿ ಸಂಶೋಧನೆಯನ್ನೇಕೆ ಅಭಿವೃದ್ಧಿ ಮಾಡಬಾರದು ಎಂಬ ಪ್ರಶ್ನೆಯೂ ಸರ್ಕಾರದ ಯೋಜನೆಯಲ್ಲಿದೆ. ಲೈವ್‌ಸ್ಟಾಕ್ ಫಾರಂಗಳ ಅನ್ವಯ ಇನ್ನೂ ಹೆಚ್ಚು ಲಾಭ ಬರುವಂತೆ ಸುವ್ಯವಸ್ಥೆಗೊಳಿಸಬೇಕು ಮತ್ತು ಹಾಲಿನ ಸರಬರಾಜು ಹೆಚ್ಚಿನ ಪ್ರಮಾಣದಲ್ಲಾಗುವಂತೆ ಮಾಡಬೇಕೆಂಬ ಉದ್ದೇಶವಿದೆ.

**ಶ್ರೀ ಬಿ.ರಾಚಯ್ಯ:** ಪಟ್ಟಣಗಳಲ್ಲದೆ ಹಳ್ಳಿಗಳಲ್ಲಿ ಹಾಲಿನ ಕೇಂದ್ರವನ್ನು ಮಾಡಿದ್ದೀರಾ?

**ಶ್ರೀ ಎಸ್.ರಾಚಯ್ಯ:** ಸರ್ಕಾರದ ಧ್ಯೇಯ ಪ್ರತಿ ಹಳ್ಳಿಯಲ್ಲಿಯೂ ಹಾಲು ಸರಬರಾಜು ಆಗಬೇಕೆಂದು. ಮೊದಲು ಪಟ್ಟಣಗಳ ಅಕ್ಕಪಕ್ಕದಲ್ಲಿರುವ ಹಳ್ಳಿಗಳಿಗೆ

ಸಾಧ್ಯವಾದರೆ ಮಾಡುತ್ತೇನೆ. ಈಗ ಬೆಂಗಳೂರು ನಗರದಲ್ಲಿ ಹೆಚ್ಚು ಮಾಡಿ, ಮೂರನೆಯ ಪಂಚವಾರ್ಷಿಕ ಯೋಜನೆಯಲ್ಲಿ ಪ್ರತಿ ಜಿಲ್ಲಾ ಹೆಡ್ ಕ್ವಾರ್ಟರಿನಲ್ಲಿಯೂ ಮಾಡಿ ಆಮೇಲೆ ತಾಲ್ಲೂಕು ಮತ್ತು ಗ್ರಾಮಗಳಲ್ಲಿಯೂ ವಿಸ್ತರಿಸಬೇಕೆಂದು ಆಸೆ ಇದೆ.

ಶ್ರೀ **ಬಿ.ರಾಚಯ್ಯ:** ಪಾನ ನಿರೋಧವನ್ನು ಎಲ್ಲೆಲ್ಲಿ ಜಾರಿ ಮಾಡಿದ್ದರೋ ಅಲ್ಲಿ ಹಾಲಿನ ಕೇಂದ್ರಗಳನ್ನು ಸ್ಥಾಪಿಸಬಾರದೇಕೆ?

ಶ್ರೀ **ಎನ್.ರಾಚಯ್ಯ:** ಪ್ರತಿ ಗ್ರಾಮದಲ್ಲಿಯೂ ಸಹಕಾರ ಸಂಘಗಳನ್ನು ಏರ್ಪಾಡು ಮಾಡಿಕೊಂಡು ಕೇಂದ್ರ ಸರ್ಕಾರದಿಂದ ಬರುವ ಹಸುಗಳನ್ನು ಉಪಯೋಗ ಮಾಡಿಕೊಂಡು ರಾಜ್ಯ ಸರ್ಕಾರದಿಂದ ಏನಾದರೂ ಸಹಾಯವನ್ನಪೇಕ್ಷೆ ಮಾಡಿದರೆ, ಸಹಾಯ ಕೊಡಲು ಸಿದ್ಧರಾಗಿದ್ದೇವೆ. ಹಾಗಿಲ್ಲದೆ ಎಲ್ಲವನ್ನೂ ಸರ್ಕಾರ ಮಾಡಬೇಕೆಂದರೆ, ತಡವಾಗುತ್ತದೆ. ಒಟ್ಟಿನಲ್ಲಿ ಈ ಮೂರು ಇಲಾಖೆಗಳಲ್ಲಿಯೂ ಕೆಲಸ ಚೆನ್ನಾಗಿಯೂ ವಿತರಣೆಯಿಂದಲೂ ಮುಂದುವರಿದುದರಿಂದ ಈ ಬೇಡಿಕೆಯನ್ನು ಮಾನ್ಯ ಸದಸ್ಯರು ಒಪ್ಪಬೇಕೆಂದು ಸಭೆಯ ಮುಂದಿಟ್ಟಿದ್ದೇವೆ. ಮಾನ್ಯ ಸದಸ್ಯರು ಮಾಡಿರುವ ಟೀಕೆ ಹಾಗೂ ರಚನಾತ್ಮಕ ಸಲಹೆಗಳನ್ನು ಗಮನದಲ್ಲಿಟ್ಟು, ಇನ್ನೂ ಹೆಚ್ಚಿನ ಪ್ರಗತಿಯನ್ನು ಬರುವ ವರ್ಷದಲ್ಲಿ ಸಾಧಿಸುತ್ತೇವೆಂದು ಹೇಳುತ್ತೇನೆ.

**Sri S.T. Kothavale:** Certain concesions are extended in the matter cultivation of cashewnut in south canara and north canara districts. Certain cultivators try to cultivate cashewnut definitely in dharwar district and elsewhere.Will the Government extend the scheme of concessions to these areas?

ಶ್ರೀ **ಎನ್.ರಾಚಯ್ಯ:** ಗೇರುಬೀಜದ ಫಸಲನ್ನು ಬೆಳೆಯಲು ಸಂಸ್ಥಾನದಲ್ಲಿ ಎಲ್ಲ ಕಡೆಯೂ ಅವಕಾಶವಿದೆ. ಇದರನ್ವಯ ಇಡಿಯ ಸಂಸ್ಥಾನದಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಜಾರಿಗೆ ಕೊಡಬೇಕೆಂದು ಯೋಜನೆಯಲ್ಲಿದೆ. ತಾವು ಕೇಳಿರುವ ರಿಯಾಯಿತಿಯನ್ನು ಪರಿಶೀಲನೆ ಮಾಡುತ್ತೇವೆ.

**ಶ್ರೀ ಎಂ.ರಾಮಪ್ಪ (ಹರಿಹರ):** ಕೇಂದ್ರ ಕಾರ್ಯ ಉಪ ಸಚಿವರು ದಾವಣಗೆರೆಯಲ್ಲಿ ಒಂದು ಫಾರಂನ್ನು ತೆರೆಯುವ ಬಗ್ಗೆ ಒಂದು ಹೇಳಿಕೆಯನ್ನು ಕೊಟ್ಟಿದ್ದರು ಆ ಬಗ್ಗೆ ತಾವು ಏನಾದರೂ ಆಲೋಚನೆ ಮಾಡಿದ್ದೀರಾ?

**ಶ್ರೀ ಎನ್.ರಾಚಯ್ಯ:** ನಾನು ಆಗಲೇ ಹೇಳುವ ರೀತಿಯಲ್ಲಿ ಮೂರನೆಯ ಪಂಚವಾರ್ಷಿಕ ಯೋಜನೆಯಲ್ಲಿ ಪ್ರತಿಯೊಂದು ಜಿಲ್ಲಾ ಹೆಡ್‌ಕ್ವಾರ್ಟರಿನಲ್ಲಿಯೇ ಒಂದು ಕೇಂದ್ರವನ್ನು ತೆರೆಯಬೇಕೆಂದಿದೆ.

**ಶ್ರೀ ಎಂ.ರಾಮಪ್ಪ:** ಅದಲ್ಲ ನಾನು ಹೇಳುವುದು, ದಾವಣಗೆರೆಗೆ ಸ್ಪೆಷಲ್ಲಾಗಿ ಏನಾದರೂ ಮಾಡಬೇಕೆಂದಿದ್ದೀರಾ?

**ಶ್ರೀ ಎನ್. ರಾಚಯ್ಯ:** ಸ್ಪೆಷಲ್ಲಾಗಿ ಯಾವುದು ಸರ್ಕಾರದವರ ಗಮನಕ್ಕೆ ಬಂದಿಲ್ಲ. ಬಂದರೆ ಹೇಳುತ್ತೇನೆ.

**Sri C.J. MUKKANNAPPA:** He did not tell us about the study has at kunigal and also about the member adopted for popularizing fish the state.

**ಶ್ರೀ ಎನ್. ರಾಚಯ್ಯ :** ಈಗಾಗಲೇ ಸುಮಾರು 25 ಲಕ್ಷ ಮೀನಿನ ಮರಿಗಳನ್ನು ತಂದು ಹಂಚಿದ್ದೇವೆ.

**ಒಬ್ಬ ಸದಸ್ಯರು :** ಮೀನನ್ನು ತಂದುಕೊಡುವ ವ್ಯವಸ್ಥೆಯನ್ನು ಅವರು ಕೇಳುತ್ತಿದ್ದಾರೆ.

**ಶ್ರೀ ಎನ್.ರಾಚಯ್ಯ :** ಅದಕ್ಕೂ ಏರ್ಪಾಡು ಮಾಡಿದೆ. ಇನ್‌ಲ್ಯಾಂಡ್ ಫಿಷರಿ ಡೆವಲಪ್‌ಮೆಂಟ್ ಸ್ಕೀಮ್ ಎಂಬುದಿದೆ. ಕರಾವಳಿ ಜಿಲ್ಲೆಯಲ್ಲೇ ಕೃಷಿ, ಹುಬ್ಬಳ್ಳಿ ಕೆರೆ, ನುಗಕಟ್ಟಿ ಇತ್ಯಾದಿ ಕೆರೆಗಳ, ಒಳ್ಳೊಳ್ಳೆಯ ಎಂಟು ಹತ್ತು ಪೌಂಡು ತೂಕದ ಮೀನಿನ ಮರಿಗಳನ್ನು ಹಂಚಿದೆ ಈ ಬಗ್ಗೆ ಇನ್ನೂ ಹೆಚ್ಚಿನ ಕೆಲಸ ಮಾಡಬೇಕೆಂದು ಮಾಡಿದ್ದೇವೆ.

ಆಮೇಲೆ ಕುಣಿಗಲ್ ಸ್ಟಡ್ ಫಾರಮ್ಮಿನ ವಿವರ ಇದರ ಬಗ್ಗೆ ಸರ್ಕಾರದವರು ಯಾವ ತೀರ್ಮಾನವನ್ನೂ ಕೈಗೊಂಡಿಲ್ಲ. ಇದನ್ನು ಎಲ್ಲಾ ಬೇರೆಯವರಿಗೆ ಕೊಟ್ಟು ಬಿಡುತ್ತಾರೋ ಎಂಬ ಭ್ರಾಂತಿಯಿಂದ ಹೀಗೆ ಕೇಳುತ್ತಿದ್ದಾರೆ. ಈ ಬಗ್ಗೆ

ಈಗ ಹಿಂದಿನ ಸ್ಕೀಮನ್ನು ತರಿಸಿಕೊಂಡು ಅದನ್ನು ಸರ್ಕಾರದವರು ಏಕೆ ನಡೆಸಕೂಡದೆಂದು ಯೋಚನೆ ಮಾಡುತ್ತಿದ್ದಾರೆ. ಇದಕ್ಕೆ ಸರಿಯಾಗಿ ಕೇಂದ್ರ ಸರ್ಕಾರದವರೂ ಸ್ಟಡ್ ಫಾರಮ್ ಬೇಕೆಂದು ಕೇಳುತ್ತಿದ್ದಾರೆ. ಇದಕ್ಕೆ ಯಾವ ತೀರ್ಮಾನವನ್ನು ಕೈಗೊಂಡಿಲ್ಲ. ಎಲ್ಲ ಪರಿಶೀಲನೆ ಮಾಡಿ ತೀರ್ಮಾನ ಮಾಡುತ್ತಾರೆಂದು ಹೇಳುತ್ತೇನೆ.

**ಶ್ರೀ ಎಂ.ರಾಮಪ್ಪ :** ಅಮೋನಿಯಂ ಸಲ್ಫೇಟನ್ನು ಹಂಚುವುದು ಭೂಮಿಯ ಗುಣವನ್ನು ನೋಡಿ ಅದಕ್ಕನುಗುಣವಾಗಿ ಹಂಚುತ್ತಿದ್ದೀರಾ: ಯಾವ ಯಾವ ಭಾಗಕ್ಕೆ ವಹಿಸಬೇಕೆಂದು ನೋಡಿಕೊಂಡು ಕೊಡುತ್ತಿದ್ದೀರಾ?

**ಶ್ರೀ ಎನ್.ರಾಚಯ್ಯ:** ಪ್ರತಿಯೊಂದು ಭೂಮಿಯಲ್ಲೂ ಯಾವ ಯಾವ ಪ್ರಮಾಣದಲ್ಲಿ ಹಾಕಬೇಕೆಂದು ಸಂಬಂಧಪಟ್ಟ ಅಧಿಕಾರಿಗಳನ್ನು ಕೇಳಿ, ಅದರ ಪ್ರಕಾರ ಎಲ್ಲಾ ಜಿಲ್ಲೆಗಳಿಗೂ ಹಂಚುತ್ತಿದ್ದೇವೆ. ಅವಶ್ಯಕತೆಯನ್ನೂ ಪರಿಗಣಿಸುತ್ತೇವೆ. ನಿಮ್ಮ ಜಿಲ್ಲೆಯಲ್ಲಿ ಕೊರತೆಯಿದೆಯೆಂದು ಮಾನ್ಯ ಸದಸ್ಯರಾದ ಪಾಟೀಲರು ನಮ್ಮ ಗಮನಕ್ಕೆ ತಂದಿದ್ದಾರೆ. ಆದರೆ ಸಾಕಾದಷ್ಟು ಪ್ರಮಾಣದಲ್ಲಿ ಕೊಡುವುದಕ್ಕೆ ಸಾಧ್ಯವಿಲ್ಲವಾಗಿದೆ. ಕೇಂದ್ರ ಸರ್ಕಾರದಿಂದ ಎಷ್ಟು ಬರುತ್ತದೆ ನೋಡಿಕೊಂಡು ಜಿಲ್ಲೆಗಳ ಅವಶ್ಯಕತೆಯ ಮೇಲೆ ಹಂಚುತ್ತೇವೆಂಬ ಭರವಸೆಯನ್ನು ಮಾತ್ರ ನಾನು ಕೊಡಬಲ್ಲೆ.

**ಶ್ರೀ ಎಸ್. ಸುಬ್ಬಯ್ಯ ನಾಯಕ್:** ಕಾಸರಗೋಡಿನಲ್ಲಿ ತೆಂಗಿನ ಸಂಶೋಧನಾ ಕೇಂದ್ರ ಒಂದಿತ್ತು. ಈಗ ಅದು ಕೇರಳಕ್ಕೆ ಹೋಗಿ ನಮ್ಮ ಕಡೆಗೆ ಇದರ ಅನುಕೂಲತೆಯೇ ದೊರೆಯುದಂತಾಗಿದೆ. ಈ ದೃಷ್ಟಿಯಿಂದ ಬರುವ ವರ್ಷದಲ್ಲಿಯಾದರೂ ನಮ್ಮ ಕಡೆ ಒಂದು ತೆಂಗಿನ ಪರಿಶೋಧನಾ ಕೇಂದ್ರವನ್ನು ತೆರೆಯುತ್ತೀರಾ?

**ಶ್ರೀ ಎನ್.ರಾಚಯ್ಯ:** ತೆಂಗಿನ ಸಸಿಗಳು 500 ಕೊಡುತ್ತಿದ್ದ ಕಡೆ ಈ ಸಾರಿ ದಕ್ಷಿಣ ಕನ್ನಡ ಜಿಲ್ಲೆಗೆ 147 ಹಂಚಿದ್ದೇವೆ. ಕಾಸರಗೋಡಿನಲ್ಲಿ ಹೆಚ್ಚಿಗೆ ಪ್ರಮಾಣದಲ್ಲಿ ಸಿಕ್ಕದಿರುವ ಕಾರಣ ಈ ಸಾರಿ 90 ಸಾವಿರ ಸಸಿಗಳನ್ನು ಏಳಿಸಿ ಹಂಚಬೇಕೆಂದು ಮಾಡಿದ್ದೇವೆ. ರಿಸರ್ಚ್ ಸ್ಟೇಷನ್ ಸ್ಥಾಪನೆ ಮಾಡುವ ವಿಷಯ ಯೋಚನೆ ಮಾಡಬೇಕಾಗಿದೆ.

**ಶ್ರೀ ಕೆ.ಎಚ್. ಪಾಟೀಲ್:** ಅರಣ್ಯ ಇಲಾಖೆಯ ಸಂಬಂಧದಲ್ಲಿ ಅನೇಕ ಮಾನ್ಯ ಸದಸ್ಯರು ಖೋತಾ ಸೂಚನೆಗಳನ್ನು ಕಳುಹಿಸಿದ್ದಾರೆ ಮತ್ತು ಮಾತನಾಡಿದ ಅನೇಕ ಸದಸ್ಯರು ಕೆಲವು ಟೀಕೆಗಳನ್ನು ಸಹ ಮಾಡಿದ್ದಾರೆ. ಕಟ್ ಮೋಷನ್‌ಗಳಲ್ಲೂ ಕೆಲವು ಅಂಶಗಳನ್ನು ಎತ್ತಿದ್ದಾರೆ. ಬಹುಶಃ ಸರಿಯಾಗಿ ವಿಷಯಗಳ ಅರಿವಿಲ್ಲದೆ ಈ ಕೆಲವು ಸೂಚನೆಗಳು ಬಂದಂತಿದೆ. ಇವುಗಳ ಬಗ್ಗೆ ಮುಂಚೆ ನಾಲ್ಕು ಮಾತುಗಳನ್ನು ಹೇಳಿ, ಆಮೇಲೆ ಭಾಷಣಗಳಿಗೆ ಉತ್ತರ ಹೇಳಬಯಸುತ್ತೇನೆ.

**ಶ್ರೀ ಟಿ.ಆರ್. ಪರಮೇಶ್ವರಯ್ಯ:** ನನ್ನ (ಎ) ಪ್ರಶ್ನೆಗೆ ಉತ್ತರವಾಗಿ "ಯಾವುದೂ ಇಲ್ಲ"ವೆಂದು ಹೇಳಿದ್ದೀರಿ, ಈ ಆಫೀಸರು ಬರುವ ಮೊದಲು ಈ ಫಾರಂಗಳೇನಾದರೂ ಇದ್ದುವೇ?

**ಶ್ರೀ ಎನ್.ರಾಚಯ್ಯ:** 1947ನೆಯ ಇಸವಿಯಿಂದ ಈಚೆ ಅಂದರೆ 48–49ನೆಯ ಸಾಲಿಗೆ ಹಿಂದೆ ಆರು ಇಂತಹ ಕುರಿ ಫಾರಂಗಳು ಇದ್ದವು.

**ಶ್ರೀ ಟಿ.ಆರ್.ಪರಮೇಶ್ವರಯ್ಯ:** ಈ ಕುರಿ ಫಾರಂಗಳಿಗೆ ಎಷ್ಟು ಹಣ ಖರ್ಚಾಗಿದೆಯೆಂದೇನಾದರೂ ತಿಳಿಸಬಲ್ಲಿರಾ?

**ಶ್ರೀ ಎನ್.ರಾಚಯ್ಯ:** ಎಷ್ಟು ಮೊತ್ತ ಖರ್ಚಾಗಿದೆ ಎನ್ನತಕ್ಕದ್ದು ಇಲ್ಲ. ಆದರೆ ಈ ಆರು ಫಾರಂಗಳಿಂದಲೂ ಕೂಡ ಸರ್ಕಾರಕ್ಕೆ ಯಾವ ಪ್ರಯೋಜನವೂ ಇಲ್ಲವೆಂದು ತಿಳಿದ ಮೇಲೆ 1949–50 ಮತ್ತು 1950–51ರಲ್ಲಿ ಅವೆಲ್ಲವನ್ನೂ ಕೂಡ ಮುಚ್ಚಲಾಯಿತು.

**ಶ್ರೀ ಟಿ.ಆರ್.ಪರಮೇಶ್ವರಯ್ಯ:** ಸರ್ಕಾರದ ಮುಖಾಂತರ ಆಡಿಟರ್ ಜನರಲ್ ಅವರು ಈ ಬಗ್ಗೆ ಆಡಿಟ್ ನಡೆಸಿದ್ದಾರೆಯೇ?

**ಶ್ರೀ ಎನ್. ರಾಚಯ್ಯ:** 1946–47ನೆಯ ಇಸವಿಯವರೆಗೂ ಆಡಿಟ್ ಆಗಿದೆ. ಇನ್ನುಳಿದುದ್ದಕ್ಕೆ ಮುಂದೆ ಆಡಿಟ್ ಮಾಡಬೇಕೆಂಬ ವಿಚಾರವನ್ನು ಪರ್ಯಾಲೋಚನೆ ಮಾಡುತ್ತಿದ್ದಾರೆ.

**Dr R. NAGAN GOWDA:** Have the government any idea of restarting any of those farms?

**Sri N.Rachaiah:** That is a suggesetion for action. That Will be considered.

**ಶ್ರೀ ಜಿ.ಎಸ್‌ಪುಟ್ಟಣ್ಣ:** ಚಿಕ್ಕಬಳ್ಳಾಪುರದಲ್ಲಿ ಷೆಡ್ಯೂಲ್ ಕಾಸ್ಟಿಗೆ ಸೆಂಟ್ರಲ್ ಗವರ್ನಮೆಂಟಿನ ಆರ್ಡರ್ ಪ್ರಕಾರ ಯಾವ ಯಾವ ಕಮ್ಯುನಿಟಿಗಳು ಸೇರಿವೆ?

**ಶ್ರೀ ಎನ್.ರಾಚಯ್ಯ:** ಲಿಸ್ಟ್ ಇದೆ. ಲಿಸ್ಟು ಪ್ರೆಸಿಡೆಂಟ್ ಆಸಿಸ್ಟೆಂಟ್ ಪಡೆದು ಪ್ರಕಟವಾಗಿದೆ? will be placed on the table of the house?

**ಶ್ರೀ ಎನ್.ರಾಚಯ್ಯ :** ಗೆಜೆಟ್ಟಿನಲ್ಲಿ ಪ್ರಕಟವಾಗಿದೆ. It has been already published in the gazette

**ಶ್ರೀ ಜಿ.ಎನ್. ಪುಟ್ಟಣ್ಣ :** (ಬಿ)ಗೆ ಉತ್ತರವಾಗಿ ತಾವು ಕೊಟ್ಟಿರುವಲ್ಲಿ ಲಿಸ್ಟಿನಲ್ಲೆ 10–15 ತಾಲ್ಲೂಕುಗಳನ್ನು ಮಾತ್ರ ಕೊಟ್ಟಿದ್ದೀರಿ. ಕಾರಣವೇನು?

**ಶ್ರೀ ಎನ್.ರಾಚಯ್ಯ :** ತಮಗೆ ಕೊಟ್ಟಿರುವ ಎರಡನೇ ಲಿಸ್ಟನ್ನು ನೋಡಿದರೆ ಎಷ್ಟೆಷ್ಟು ಎಕರೆಯಷ್ಟು ಜಮೀನನ್ನು ನಾವು ಕೊಟ್ಟಿದ್ದೇವೆ ಎನ್ನುವುದು ಗೊತ್ತಾಗುತ್ತದೆ. Total area of the land in acres a sanctioned for each familyಒಂದು ಐದು ಎಕರೆಯಷ್ಟು ಮತ್ತು ಅದಕ್ಕಿಂತ ಹೆಚ್ಚಿಗೆ ಕೊಟ್ಟಿರುವ ವಿವರಗಳನ್ನು ಕೊಟ್ಟಿದೆ.

**ಶ್ರೀ ಜಿ.ಎಸ್.ಪುಟ್ಟಪ್ಪ:** ಷೆಡ್ಯೂಲ್ ಕ್ಯಾಸ್ಟು ಪಂಗಡದವರಿಗಾಗಿ ಸೆಂಟ್ರಲ್ ಗವರ್ನಮೆಂಟಿನವರಿಂದ ಬಂದಿರುವ ಗ್ರಾಂಟು ಎಷ್ಟು? ಮತ್ತು ಸ್ಟೇಟ್ ಗವರ್ನಮೆಂಟಿನವರಿಂದ ಕೊಟ್ಟಿರುವ ಗ್ರಾಂಟೆಷ್ಟು?

**Sri N. Rachaiah:** Total amount for the second plan period centrally sponcered schemes.

| | | |
|---|---|---|
| ವಸತಿಗಾಗಿ | Total | 1,31,200 |
| ಕೃಷಿ ನೆರವಿನ ನಿಧಿ | | 25,600 |
| ಕುಡಿಯುವ ನೀರಿನ ಬಾವಿಗಳಿಗಾಗಿ | | 33,000 |
| ಸಮುದಾಯ ಕೇಂದ್ರಗಳಿಗಾಗಿ | | 5,600 |
| ರಸ್ತೆ ಮತ್ತು ಒಳಚರಂಡಿಗಾಗಿ | | 1000 |

ಹೀಗೆ ಖರ್ಚನ್ನು ಮಾಡಿದ್ದೇವೆ.

**ಶ್ರೀ ಜಿ.ಎಸ್.ಪುಟ್ಟಣ್ಣ :** ಒಟ್ಟು ಸೆಂಟ್ರಲ್ ಗವರ್ನಮೆಂಟಿನಿಂದ ಕೊಟ್ಟಿರುವ ಗ್ರಾಂಟು ಎಷ್ಟು?

**ಶ್ರೀ ಎನ್.ರಾಚಯ್ಯ :** ನಾನು ಈ ಮೊದಲೇ ಹೇಳಿದ ಅಂಕಿಅಂಶಗಳನ್ನು ಸೇರಿಸಿದರೆ ಒಟ್ಟು ಮೊತ್ತ ಏನಾಗುತ್ತದೆ ಎನ್ನುವುದು ಗೊತ್ತಾಗುತ್ತದೆ.

**ಶ್ರೀ ಜಿ.ಎಸ್.ಪುಟ್ಟಣ್ಣ:** (ಎ) ಲಿಸ್ಟಿನಲ್ಲಿ ಕೊಟ್ಟಿರುವಂತ ತುಮಕೂರು ಜಿಲ್ಲೆಯ ಒಂಭತ್ತು ಕಾಲೋನಿಗಳಿಗಾಗಿ ಒಟ್ಟು ಎಷ್ಟು ಖರ್ಚಾಗಿದೆ.

**ಶ್ರೀ ಎನ್.ರಾಚಯ್ಯ :** 30,90, 372 ರೂಪಾಯಿಗಳಷ್ಟು.

**ಶ್ರೀ ಪಿ.ಎಸ್.ಪುಟ್ಟಣ್ಣ :** ತುಮಕೂರು ಜಿಲ್ಲೆಯಲ್ಲಿ ಇಲ್ಲಿ ಹೇಳಿರುವ ಒಂಬತ್ತು ಕಾಲೋನಿಗಳಲ್ಲಿ ಹೇಳಿರುವಂತೆ ನೋಡಿದರೆ ಪಾವಗಡ ತಾಲ್ಲೂಕಿನಲ್ಲಿ ಇಲ್ಲ. ಇಲ್ಲಿ ಷೆಡ್ಯೂಲು ಕ್ಯಾಸ್ಟಿನವರು ಅಥವಾ ಹರಿಜನರು ಯಾರು ಇರಲಿಲ್ಲವೇ?

**ಶ್ರೀ ಎನ್.ರಾಚಯ್ಯ :** ಸಾಮಾನ್ಯವಾಗಿ ತಾಲ್ಲೂಕುವಾರು, ಜಿಲ್ಲಾವಾರು ಎಂದು ಅಗ್ರಿಕಲ್ಚರ್ ಕಾಲೋನಿಗಳನ್ನು ಮಾಡುವುದಿಲ್ಲ. ಯಾರು ಜಮೀನನ್ನು ಸ್ವಂತವಾಗಿ ಮಾಡುವುದಕ್ಕೋಸ್ಕರ ಇಚ್ಛೆ ಇದೆ ಎನ್ನುವುದನ್ನು ತೋರಿಸುತ್ತಾರೋ ಅಂತಹ ಕಡೆಗಳಲ್ಲಿ ಸಂಬಂಧಪಟ್ಟ ಡೆಪ್ಯುಟಿ ಕಮಿಷನರು ಇಲ್ಲಿ ಕಾಲೋನಿಗಳನ್ನು ಮಾಡಬಹುದು ಎನ್ನುವ ಪ್ರಪೋಸಲ್ಲನ್ನು ಕಳುಹಿಸುತ್ತಾರೆ. ಹಾಗೆ ಕಳುಹಿಸುವಾಗ ಒಂದು ಊರಿಗೆ ಅಥವಾ ಒಂದು ತಾಲ್ಲೂಕಿಗೆ ಎಂದೇ ಕಳುಹಿಸುವುದಿಲ್ಲ. ಸಂಸ್ಥಾನದ ಯಾವ ಕಡೆಯಿಂದ ಯಾವ ಹರಿಜನರು ಆಗಲಿ, ಇಂತಹ ಕಾಲೋನಿಗೆ ಹೋದಪಕ್ಷದಲ್ಲಿ ಅವರಿಗೆ ಅಲ್ಲಿ ವ್ಯವಸಾಯ ಮಾಡಲು ಅವಕಾಶ ಕೊಡಬೇಕು ಎನ್ನುವುದು ಉದ್ದೇಶವಾಗಿದೆ. ಅದರಂತೆ ಕಾಲೋನಿಗಳು ಆಗಿದೆ.

**ಶ್ರೀ ಜಿ.ಎಸ್.ಪುಟ್ಟಣ್ಣ :** ತಾವು ಕೊಟ್ಟಿರುವ ಲಿಸ್ಟುಗಳಲ್ಲೆ (ಎ) ಲಿಸ್ಟಿನಲ್ಲಿ ತುಮಕೂರು ಜಿಲ್ಲೆಯಲ್ಲಿ 9 ಕಾಲೋನಿಗಳನ್ನು ಮಾಡಿರುವುದಿಲ್ಲ. ಆದಿ ಕರ್ನಾಟಕರು, ಆದಿ ದ್ರಾವಿಡರು, ಕೊರಡರು, ಕೊರಮರು ಇವರಿಗೆಲ್ಲ ಕೊಡಲಾಗಿದೆ. ಎರಡನೇ ಲಿಸ್ಟಿನಲ್ಲಿ ನೋಡಿದರೆ ಅಲ್ಲಿ ಕೊರಚರು, ಕೊರಮರು, ಯಾರಿಗೂ ಕೊಟ್ಟಿಲ್ಲ. ಅದಕ್ಕೆ ಕಾರಣಗಳೇನು?

ಶ್ರೀ ಎನ್.ರಾಚಯ್ಯ : ತಾವು ಲಿಸ್ಟ್‌ಗಳನ್ನು ನೋಡಿದರೆ, ಎಲ್ಲವನ್ನೂ ಸ್ಪಷ್ಟವಾಗಿ ಹೇಳಿದೆ, ಎನ್ನುವುದು ಗೊತ್ತಾಗುತ್ತದೆ. ಹರಿಜನರಿಗಾಗಿ ಎಂದು ಕೊಡುವಾಗ ಕೊರಡರು, ಕೊರಚರು ಇದ್ದರು ಎಂದು ಎಲ್ಲ ಕೊಟ್ಟಿದ್ದಾರೆ. ಷೆಡ್ಯೂಲ್ ಕ್ಯಾಸ್ಟಿನಲ್ಲೇ ಯಾವ ಯಾವ ಸಬ್ ಕ್ಯಾಸ್ಟುಗಳು ಇವೆಯೋ ಅವರು ಯಾರೇ ಆಗಲೀ ಅವರು ವಾಸಮಾಡುತ್ತೇವೆಂದರೆ ಅವರುಗಳಿಗೆ ವಸತಿಯನ್ನು ಮಾಡಿಕೊಡಬೇಕೆಂದು ಇದೆ. ಚಾಮರಾಜನಗರದಲ್ಲಿ ಲಂಬಾಣಿಗರು, ಹರಿಜನರಿಗೂ ಎಲ್ಲರಿಗೂ ಕೊಟ್ಟಿದ್ದೇವೆ.

ಶ್ರೀ ಎನ್.ರಾಚಯ್ಯ : ಕೊಟ್ಟಿದ್ದೇವೆ. According to the information available in the first list.We have given

**Sri C.J Mukkannappa:** May I know, sir, the Policy of the Government is just orgainising this agricultural colony?

**Sri N. Rachaiah:** The Policy of the Government is to see that landless Harians who are generally majoriry of the people among the agricultural workers are economically educationally and otherwise rehabitated.

**Sri C.J. Mukkannappa:** May I know sri according to the policy of the Government, whether the 12 aricultural colonies that have been started are collective farms or whether land have been garnted individually?

**Sri N.Rachiah:** Land are generally to individuals. If they come forward to organize co-operative societies, we will recognise.

ಶ್ರೀ ಜಿ.ಎಸ್.ಬೊಮ್ಮೇಗೌಡ : ಅಗ್ರಿಕಲ್ಚರು ಕಾಲೋನಿಗಳಿಗಾಗಿ ಸಹಸ್ರಾರು ರೂಪಾಯಿಗಳನ್ನು ವೆಚ್ಚ ಮಾಡಿ ಈ ರೀತಿಯಾದ ಕಾಲೋನಿಗಳನ್ನು ಮಾಡಿ ಮನೆಗಳನ್ನು ಕಟ್ಟಿಕೊಟ್ಟು, ಜಮೀನು ಹಂಚುವ ಕೆಲಸವನ್ನು ಮಾಡಿದ್ದರೂ

ಅಲ್ಲಿಗೆ ಯಾರು ಬರದಿದ್ದರೆ ಇದಕ್ಕಾಗಿ ಖರ್ಚು ಮಾಡುವ ಹಣದ ದುರ್ವ್ಯಯವಾಗುತ್ತಿದ್ದರೆ. ಅದಕ್ಕೆ ಏನಾದರೂ ಕಾರ್ಯಕ್ರಮಗಳನ್ನು ತೆಗೆದುಕೊಳ್ಳುತ್ತೀರಾ?

**ಶ್ರೀ ಎನ್. ರಾಚಯ್ಯ :** ಕ್ರಮವನ್ನು ತೆಗೆದುಕೊಳ್ಳುತ್ತೇವೆ. ಹರಿಜನರು ಬರದೇ ಹೋದರೆ ಹರಿಜನರಲ್ಲದವರು ಅದೇ ರೀತಿಯ ಷರತ್ತುಗಳಿಗೆ ಒಳಗಾಗಿ ಅಲ್ಲಿರುತ್ತೇವೆಂದು ಹೇಳಿದರೆ ಅಂತಹವರಿಗೂ ಕೊಡುವುದಕ್ಕೆ ಸರಕಾರದವರು ಹಿಂಜರಿಯುವುದಿಲ್ಲ.

**ಶ್ರೀ ಜೆ.ಬಿ.ಮಲ್ಲಾರಾಧ್ಯ :** ಹದಿಮೂರು, ಹದಿನಾಲ್ಕು ಕಾಲೋನಿಗಳಲ್ಲಿ ಎಷ್ಟು ಕಾಲೋನಿಗಳು ಸಮರ್ಪಕವಾಗಿ ಕೆಲಸ ಮಾಡುತ್ತಿವೆ?

**ಶ್ರೀ ಎನ್.ರಾಚಯ್ಯ :** ಬಹು ಭಾಗ ಕಾಲೋನಿಗಳು ಬಹಳ ಸಮರ್ಪಕವಾಗಿ ಕೆಲಸ ಮಾಡುತ್ತಿವೆ. ಮತ್ತೆ ಕೆಲವು ಭಾಗಗಳಲ್ಲಿ ನಾನಾ ತರಹದ ತೊಂದರೆಗಳಾಗಿ ಕೆಲಸವು ಸರಿಯಾಗಿ ನಡೆಯದಿರಬಹುದು. ಎಲ್ಲಾ ಕಡೆಗಳಲ್ಲಿಯೂ ಜಾಗ್ರತೆಯಾಗಿ ಸಮರ್ಪಕವಾಗಿ ಚೆನ್ನಾಗಿ ನಡೆಸಬೇಕು ಎನ್ನುವುದೇ ಸರಕಾರದ ಧ್ಯೇಯವಾಗಿದೆ.

**ಶ್ರೀ ಜೆ.ಬಿ.ಮಲ್ಲಾರಾಧ್ಯ :** ಅಗ್ರಿಕಲ್ಚರಲ್ ಕಾಲೋನಿಗಳಿಗೆ ಸಂಬಂಧಪಟ್ಟಂತೆ ಪ್ರತಿಯೊಂದು ವರ್ಷದಲ್ಲಿಯೂ ಒಂದು ವರದಿಯನ್ನು ಈ ಸಭೆಯ ಮುಂದಿಡುವುದಕ್ಕೆ ಸಾಧ್ಯವೇ?

**ಶ್ರೀ ಎನ್.ರಾಚಯ್ಯ :** ಷೆಡ್ಯೂಲ್ಡ್ ಕಾಸ್ಟ್ ಮತ್ತು ಷೆಡ್ಯೂಲ್ಡ್ ಟ್ರೈಬ್ ಇವುಗಳ ವಿಚಾರವಾಗಿ ಏನೇನನ್ನು ಮಾಡುತ್ತಿದ್ದೇವೆಯೋ ಅದನ್ನು ವರದಿಯ ರೂಪದಲ್ಲಿ ಇಲ್ಲಿನ ಮಾನ್ಯ ಸದಸ್ಯರಿಗೂ, ಸಾರ್ವಜನಿಕರಿಗೂ ಕೊಡಬೇಕು ಎಂದು ಈಗಾಗಲೇ ಏರ್ಪಾಡು ಮಾಡಿದ್ದೇವೆ.

**ಶ್ರೀ ಎಸ್. ಸುಬ್ಬಯ್ಯನಾಯಕ್ :** ಅಗ್ರಿಕಲ್ಚರ್ ಕಾಲೋನಿಯಲ್ಲಿರುವವರಿಗೆ ಧರ್ಮಾರ್ಥ ಭೂಮಿ ಕೊಡುವುದಲ್ಲದೆ ಅವರಿಗೆ ಏನಾದರೂ ಇತರ ಸೌಲಭ್ಯಗಳನ್ನು ಕೊಡುತ್ತಿರೋ ಆ ರೀತಿ ಇತರ ಸೌಲಭ್ಯವನ್ನು ಅರ್ಹತೆ ಇರುವವರಿಗೆ ಮಾತ್ರ ಕೊಡುತ್ತೀರಲ್ಲವೇ?

**ಶ್ರೀ ಎನ್. ರಾಚಯ್ಯ:** ಅರ್ಹತೆ ಆಗಿರುವವರಿಗೆ ಮಾತ್ರ ಆ ಸೌಲಭ್ಯಗಳನ್ನು ಕೊಡುತ್ತೇವೆ. 400 ರೂಪಾಯಿಗಳನ್ನು ಮನೆಗಳಿಗಾಗಿಯೂ, 300 ರೂಪಾಯಿಗಳನ್ನು ಎತ್ತುಗಳಿಗಾಗಿ ಕೊಂಡುಕೊಳ್ಳುವುದಕ್ಕಾಗಿಯೂ, ವ್ಯವಸಾಯ ಸಾಮಗ್ರಿಗಳನ್ನು ಕೊಂಡುಕೊಳ್ಳುವುದಕ್ಕೆ 100 ರೂಪಾಯಿಗಳನ್ನು, ಈ ವರ್ಷದಿಂದ ಸಬ್‌ಸಿಸ್ಟನ್ಸ್ ಅಲೋಯನ್ಸ್ 100 ರೂಪಾಯಿಗಳನ್ನು ಕೊಡಬೇಕೆಂದು ಯೋಚನೆ ಮಾಡಿದ್ದೇವೆ.

**Sri J.P. Sarvesh :** Out of 112 agicultural colonies. How many are started in Gulbarga district?

**Sri N.Rachaiah :** Five colonies have been started.

**ಶ್ರೀ ಎಂ.ಪಾಟೀಲ್:** ಹಡಗಲಿ ತಾಲ್ಲೋಕಿನಲ್ಲಿ ಅಗ್ರಿಕಲ್ಚರ್ ಕಾಲೋನಿಯನ್ನು ಒದಗಿಸಿಕೊಟ್ಟಿದ್ದೀರಾ?

**ಶ್ರೀ ಎನ್.ರಾಚಯ್ಯ :** ಬಳ್ಳಾರಿಯಲ್ಲಿ ಏಳು ಅಗ್ರಿಕಲ್ಚರ್‌ಕಾಲೋನಿಗಳನ್ನು ತೆಗೆದಿದ್ದೇವೆ. ಹಡಗಲಿ ವಿಚಾರವನ್ನು ತಿಳಿದು ಹೇಳುತ್ತೇವೆ.

**ಶ್ರೀಮತಿ ಬಸವರಾಜೇಶ್ವರಿ :** ಲಿಂಗಸೂಗೂರ್ ತಾಲ್ಲೂಕಿಗೆ ಒಂದು ಅಗ್ರಿಕಲ್ಚರ್ ಕಾಲೋನಿಯನ್ನು ಕೊಡಬೇಕೆಂದೇನಾದರೂ ಮನವಿಗಳು ಬಂದಿವೆಯೇ?

**ಶ್ರೀ ಎನ್.ರಾಚಯ್ಯ :** ಮಾನ್ಯ ಸದಸ್ಯರು ಈಗ ಹೇಳುತ್ತಿದ್ದಾರೆ. ಅದನ್ನು ಪರಿಶೀಲನೆ ಮಾಡುತ್ತೇವೆ.

**Sri C.J.Mukkannappa :** May I know in Gandhigram and Indragram whether land was garnted collectively or individually?

**Sri N Rachaiah :** According to the policy of government. We always grant land to the individuals an not to the societies.

**ಶ್ರೀ ಡಿ.ಮೂಕಪ್ಪ :** ವ್ಯವಸಾಯದ ಕಾಲೋನಿಯನ್ನು ಏರ್ಪಡಿಸುವ ಸಂಬಂಧದಲ್ಲಿ ಜಮೀನು ಕೊಡುವುದು ಒಂದು ಕಡೆ, ಮನೆಗಳನ್ನು ಕೊಡುವುದು

ಒಂದು ಕಡೆ. ಈ ರೀತಿ ಕೊಡುವುದರಿಂದ ಅನೇಕ ಜಮೀನುಗಳು ಕೃಷಿಗೆ ಉಪಯೋಗ ಮಾಡದೇ ಅವು ಬಂಜರು ಬಿದ್ದಿರುವ ಪರಿಸ್ಥಿತಿ ತಮ್ಮ ಗಮನಕ್ಕೆ ಬಂದಿದೆಯೇ?

**ಶ್ರೀ ಎನ್. ರಾಚಯ್ಯ :** ಎಲ್ಲಿ ಜಮೀನು ಕೊಡುತ್ತೇವೆ ಅಂತಹ ಕಡೆಯಲ್ಲಿಯೇ ವ್ಯವಸಾಯ ಮಾಡಲು ಮನೆಗಳನ್ನು ಕಟ್ಟಿ ಅಲ್ಲಲ್ಲಿ ವ್ಯವಸಾಯ ಕಾಲೋನಿ ಎಂದು ಆಗುತ್ತದೆ. ಇಲ್ಲದಿದ್ದರೆ ವ್ಯವಸಾಯ ಕಾಲೋನಿ ಆಗುವುದಿಲ್ಲ.

**ಶ್ರೀ ಡಿ.ಮೂಕಪ್ಪ:** ಒಂದು ಅಗ್ರಿಕಲ್ಚರ್ ಕಾಲೋನಿಯನ್ನು ಕಟ್ಟಬೇಕಾದರೆ ಎಷ್ಟು ಎಕರೆ ಜಮೀನು ಇರಬೇಕು?

**ಶ್ರೀ ಎನ್.ರಾಚಯ್ಯ:** 50 ಎಕರೆ ಜಮೀನು ಆ ರೀತಿ ಇದ್ದರೆ ಐದು ಹತ್ತು ಜನ ನೆಲೆಸುತ್ತಾರೆ.

**ಶ್ರೀ ಡಿ.ಮೂಕಪ್ಪ:** ಅದಕ್ಕಿಂತಲೂ ಜಾಸ್ತಿ ಜನರು ನೆಲೆಸಬೇಕಾದರೆ ಆಗ ಪುನಃ ಹೆಚ್ಚು ಜಮೀನು ಕೊಡುವ ಬಗ್ಗೆ ಏನಾದರೂ ತೀರ್ಮಾನ ಮಾಡಿದ್ದೀರಾ?

**ಶ್ರೀ ಎನ್.ರಾಚಯ್ಯ:** ಈ ವಿಚಾರವನ್ನು ಪರಿಶೀಲನೆ ಮಾಡಿ ಕೊಡುತ್ತೇವೆ.

**ಶ್ರೀ ಎನ್.ಪುಟ್ಟಣ್ಣ:** ತುಮಕೂರು ಜಿಲ್ಲೆಯ ಕೆಂಪನದೊಡ್ಡೇರಿ ಗ್ರಾಮದ ಒಂದು ಸಂಸಾರದಲ್ಲಿ ಅಣ್ಣ, ತಮ್ಮ, ಅಪ್ಪ, ಅಮ್ಮ ಹೀಗೆ ಮನೆಯಲ್ಲಿದ್ದರೆ ಅವರಿಗೆಲ್ಲರಿಗೂ ಒಂದೊಂದು ಮನೆಯನ್ನು ಕೊಡುವುದು ಸರಿಯೇ ಕ... ಇಂತಹ ಅನ್‌ಡಿವೈಡೆಡ್ ಫ್ಯಾಮಿಲಿಗೆ ಆ ರೀತಿ ಕೊಡುವ ಕಾರಣವೇನು?

**ಶ್ರೀ ಎನ್.ರಾಚಯ್ಯ:** ಸಾಮಾನ್ಯವಾಗಿ ನಾಲ್ಕು ಜನರು ಬೇರೆ ಬೇರೆಯಾಗಿ ಸಂಸಾರ ಮಾಡಿಕೊಂಡು ಇದ್ದರ ಮಾತ್ರ ಆ ರೀತಿ ಕೊಟ್ಟಿರಬಹುದು. ಅವರು ಆ ಊರಿನಲ್ಲೇನೋ ಒಟ್ಟಿಗೆ ಇರಬಹುದು. ಅವರೆಲ್ಲರೂ ಬೇರೆ ಬೇರೆಯಾಗಿ ಸಂಸಾರದಲ್ಲಿರುವಾಗ ಆ ರೀತಿ ಕೊಟ್ಟರೆ ಅದು ತಪ್ಪೇನೂ ಆಗುವುದಿಲ್ಲ.

**ಶ್ರೀ ಜಿ.ಎನ್.ಪುಟ್ಟಣ್ಣ:** ಆ ಸಂಸಾರದಲ್ಲಿ ಭಾಗವಾಗಿಲ್ಲ. ಒಟ್ಟಿಗೇ ಇದ್ದಾರೆ. ಹೆಂಗಸರಿಗೂ ಕೂಡ ಒಬ್ಬೊಬ್ಬರಿಗೆ ಪ್ರತ್ಯೇಕವಾಗಿ ಮನೆಗಳನ್ನು ಕೊಡುವುದಕ್ಕೆ ಕಾರಣವೇನು?

**ಶ್ರೀ ಎನ್.ರಾಚಯ್ಯ:** ನನ್ನ ಗಮನಕ್ಕೆ ಬಂದಿಲ್ಲ. ಗಮನಕ್ಕೆ ಬಂದರೆ ಅದನ್ನು ವಿಚಾರಿಸಿ ನಮ್ಮ ನೀತಿ ನಿಯಮಗಳಿಗೆ ವಿರೋಧವಾಗಿ ಹೋಗದಿರುವ ಹಾಗೆ ನೋಡಿಕೊಳ್ಳುವ ಭರವಸೆಯನ್ನು ತಮಗೆ ಕೊಡುತ್ತೇನೆ.

**ಶ್ರೀ ಜಿ.ಎಂ.ಪುಟ್ಟಣ್ಣ:** ಚಿಕ್ಕನಾಯಕನಹಳ್ಳಿ ತಾಲ್ಲೂಕ್ ಸೋಮನಹಳ್ಳಿ ಗ್ರಾಮದಲ್ಲಿ ಮೂರು, ನಾಲ್ಕು ವರ್ಷಗಳಿಂದಲೂ ಬೋವಿ ಜನಾಂಗದವರು ಹತ್ತಾರು ಅರ್ಜಿಗಳನ್ನು ಕೊಟ್ಟರೂ ಕೂಡ ಇನ್ನೂ ಅಲ್ಲಿ ಕಾಲೋನಿಯನ್ನು ಮಾಡಲಿಲ್ಲ. ರೆವಿನ್ಯೂ ಮಂತ್ರಿಗಳಿಗೂ ಕೂಡ 28–10–60 ರಲ್ಲಿ ಈ ಬಗ್ಗೆ ಅರ್ಜಿ ಕೊಟ್ಟಿದ್ದಾರೆ. ಆದರೂ ಇದುವರೆಗೂ ಯಾವ ಕಾರ್ಯಕ್ರಮವನ್ನು ತೆಗೆದುಕೊಂಡಿಲ್ಲ. ಅದಕ್ಕೆ ಕಾರಣವೇನು?

**ಶ್ರೀ ಎನ್.ರಾಚಯ್ಯ:** ವರದಿಗಳನ್ನು ಡೆಪ್ಯುಟಿ ಕಮಿಷನರ್ ಮೂಲಕ ತರಿಸಿಕೊಂಡು ಎಲ್ಲಿ ಜಮೀನುಗಳು ವ್ಯವಸಾಯ ಕಾಲೋನಿ ಮಾಡುವುದಕ್ಕೆ ಸಿಗುತ್ತದೋ ಅಂತಹ ಕಡೆಗಳಲ್ಲಿ ಮಾತ್ರ ಆ ಬಾಬ್ತಿಗೆ ಲೈಸೆನ್ಸ್ ಕೊಡುತ್ತೇವೆ. ಈಗಾಗಲೇ ವರದಿ ತರಿಸುವುದಕ್ಕೆ ಏರ್ಪಾಡು ಮಾಡಿದ್ದೇವೆ. ಆ ರೀತಿ ವರದಿ ಬಂದ ಮೇಲೆ ಆ ವಿಚಾರವನ್ನು ಪರಿಶೀಲನೆ ಮಾಡುತ್ತೇವೆ.

**ಶ್ರೀ ಎನ್.ರಾಚಯ್ಯ:** ಹರಿಜನ ಉದ್ಧಾರಕ್ಕಾಗಿ ಬೀದರ್ ಜಿಲ್ಲೆಯಲ್ಲಿ ವಿದ್ಯಾರ್ಥಿ ನಿಲಯ ಕುರಿತ ಚರ್ಚೆ, 60 ಸಾವಿರ ರೂಪಾಯಿಗಳ ವೆಚ್ಚದಲ್ಲಿ ಒಂದು ಹಾಸ್ಟಲನ್ನು ಕಟ್ಟಲು ಕಳೆದ ಜನವರಿ ತಿಂಗಳಲ್ಲಿ ನಾನೇ ಫೌಂಡೇಷನ್ ಸ್ಟೋನ್ ಹಾಕಿ ಬಂದಿದ್ದೇನೆ. ಹೈದರಾಬಾದಿನ ಕರ್ನಾಟಕದಲ್ಲಿಯೂ ಕೂಡ ಸುಮಾರು 3 ಜಿಲ್ಲೆಗಳಲ್ಲಿ ನಾವು ಈ ಬಗ್ಗೆ ಸೂಕ್ತ ಕ್ರಮಗಳನ್ನು ತೆಗೆದುಕೊಂಡು ಸಾಕಷ್ಟು ಹಣವನ್ನು ಮಂಜೂರು ಮಾಡಿದ್ದೇವೆ. ಕೆಲವು ಕಡೆ 40 ಸಾವಿರ ರೂಪಾಯಿಗಳ ವೆಚ್ಚದಲ್ಲಿ ಕಟ್ಟಡ ಆಗುವುದರಲ್ಲಿದೆ. ಕೆಲವು ಕಟ್ಟಡಗಳು ಈಗಾಗಲೇ ಅಲ್ಲಿ ರೂಫಿಂಗ್ ಲೆವಲ್ಲಿಗೆ ಬಂದಿದೆ. ಶ್ರೀಮಾನ್ ಶ್ಯಾಮಸುಂದರ್ ಅವರು ಮಾಗಡಿ ರೋಡಿನಲ್ಲಿ ಯಾವುದೋ ಒಂದು ಹಾಸ್ಟೆಲ್ಲಿಗೋಸ್ಕರ ವಿಶೇಷವಾಗಿ ಹಣ ಕೊಟ್ಟಿದ್ದಾರೆ. ಅಲ್ಲಿ 170 ಮಂದಿಗಿಂತಲೂ ಜಾಸ್ತಿ ವಿದ್ಯಾರ್ಥಿಗಳು ಇಲ್ಲ ಎಂದರು. ಆ ಕಡೆಯಲ್ಲಿ 500 ಜನರು ಸೇರುವುದಕ್ಕೆ ಅವಕಾಶವಿದೆ ಎಂದು ನಾನು ಹೇಳುತ್ತೇನೆ. ಕೋಲಾರ ಟೌನಿನಲ್ಲಿ ಮೊದಲನೆಯ ಪಂಚವಾರ್ಷಿಕ ಯೋಜನೆಯಲ್ಲಿ 370 ಸಾವಿರ

ರೂಪಾಯಿಗಳನ್ನು ಖರ್ಚುಮಾಡಿ ಒಂದು ಕಟ್ಟಡವನ್ನು ಕಟ್ಟಿದ್ದೇವೆ. ಅಲ್ಲಿ ಸಾಕಾದಷ್ಟು ಹುಡುಗರು ಇಲ್ಲ. ಅಂತಹ ಕಟ್ಟಡವನ್ನು ಏಕೆ ಕಟ್ಟಿಸಿದಿರಿ ಎಂದು ಕೇಳಿದರು. ನಾನು ಮಂತ್ರಿಯಾದ ಮೇಲೆ ಅಲ್ಲೂ ಕೂಡ ಎಲ್ಲೆಲ್ಲಿ ಮಿಡಲ್ ಮತ್ತು ಹೈಸ್ಕೂಲ್‌ಗಳಿವೆಯೋ ಅಂತಹ ಕಡೆಗಳಲ್ಲಿ 2–3 ಹಾಸ್ಟಲ್ ಕಟ್ಟಡಗಳನ್ನು ಕಟ್ಟಿಸುವುದು ಅವಶ್ಯಕವೆಂಬುದಾಗಿ ಸರ್ಕಾರದವರು ಮನಗಂಡಿದ್ದಾರೆ. ಹರಿಜನ ಮಕ್ಕಳಿಗೆ ಪ್ರತಿಯೊಂದು ಜಿಲ್ಲೆಯಲ್ಲೂ ಹಾಸ್ಟಲ್ಲಿನ ಸೌಕರ್ಯವಿದೆ. ಈಗ ಗುಲ್ಬರ್ಗದಲ್ಲಿ ಒಂದು ಮೆಡಿಕಲ್ ಕಾಲೇಜನ್ನು ಮಾಡಿದ್ದೇವೆ. ರಾಯಚೂರು, ಬಿದರ್‌ಗಳಲ್ಲಿ ಕೆಲವು ಹಾಸ್ಟಲ್‌ಗಳನ್ನು, ಕಾಲೇಜುಗಳನ್ನು, ಪಾಲಿಟೆಕ್ನಿಕಲ್ ಇನ್‌ಸ್ಟಿಟ್ಯೂಷನ್‌ಗಳನ್ನು ಕಟ್ಟಿಸಿಕೊಟ್ಟಿದ್ದೇವೆ. ಈಗ ಅಲ್ಲಿ ಒಂದು ಮೆಡಿಕಲ್ ಕಾಲೇಜ್ ಸಹ ಆಗುತ್ತದೆ. ಆದ್ದರಿಂದಲೇ ಈಗ ಎಲ್ಲೆಲ್ಲಿ ಮಿಡಲ್ ಮತ್ತು ಹೈಸ್ಕೂಲುಗಳಿವೆಯೋ ಅಲ್ಲೆಲ್ಲಾ ಇಂಜಿನಿಯರಿಂಗ್ ಮತ್ತು ಮೆಡಿಕಲ್ ಕಾಲೇಜುಗಳನ್ನು ಕಟ್ಟಿಸುವವರಾಗಿದ್ದೇವೆ. ಉದಾಹರಣೆಗೆ ಹೇಳುವುದಾದರೆ ಮೈಸೂರು ಜಿಲ್ಲೆಯಲ್ಲಿ ಮೊದಲನೆಯ ವರ್ಷದ ಮೂರನೆಯ ಪಂಚವಾರ್ಷಿಕ ಯೋಜನೆಯಲ್ಲಿ 3 ಕಟ್ಟಡಗಳನ್ನು ಮಂಜೂರು ಮಾಡಿದ್ದೇವೆ. ಒಂದು ಮೈಸೂರಿನಲ್ಲಿ, ಇನ್ನೊಂದು ಕೃಷ್ಣಮೂರ್ತಿಪುರಂನಲ್ಲಿ, ಚಾಮರಾಜನಗರದಲ್ಲಿಯೂ ಮೊದಲನೆಯ ಪಂಚವಾರ್ಷಿಕ ಯೋಜನೆಯ ವರ್ಷದ ಮೂರನೇ ಪಂಚವಾರ್ಷಿಕ ಯೋಜನೆಯಲ್ಲಿ 1,51,600 ರೂಪಾಯಿಗಳಲ್ಲಿ ಒಂದು ಹಾಸ್ಟಲ್ ಕಟ್ಟಿದ್ದೇವೆ. ಗುಲ್ಬರ್ಗಕ್ಕಾಗಲೀ ಅಥವಾ ಬೀದರ್‌ಗಾಗಲಿ ಒಂದು ಲಕ್ಷ, ಎಪ್ಪತ್ತೈದು ಸಾವಿರ ರೂಪಾಯಿಗಳನ್ನು ಕೊಡಲಿಲ್ಲ ಎಂದರೆ ಇದು ನಮ್ಮ ನೀತಿಗೇನೂ ಅಷ್ಟು ವಿರುದ್ಧವಾದುದಲ್ಲ. ಈಗಾಗಲೇ ಕೆಲವು ಕಡೆ ಆದಿಜಾಂಬವ ಹಾಸ್ಟೆಲಿಗೆ ಹಣವನ್ನು ಮಂಜೂರು ಮಾಡಿಕೊಟ್ಟಿದ್ದೇವೆ. ನೆಲಮಂಗಲದಲ್ಲಿ ಒಂದು ಹಾಸ್ಟೆಲ್ಲಿಗೆ 30 ಸಾವಿರ ರೂಪಾಯಿಗಳನ್ನು ಮಂಜೂರು ಮಾಡಿಕೊಡಲಾಗಿದೆ.

**ಶ್ರೀ ಎನ್.ರಾಚಯ್ಯ:** ಚಿಕ್ಕಬಳ್ಳಾಪುರದಲ್ಲಿ ಒಂದು ಹಾಸ್ಟಲಿಗಾಗಿ 39 ಸಾವಿರ ರೂಪಾಯಿಗಳನ್ನು ಮಂಜೂರು ಮಾಡಿಕೊಟ್ಟಿದ್ದೇವೆ. ಈ ಹಾಸ್ಟಲ್‌ಗಳ ಪೈಕಿ ನಾಲ್ಕನ್ನು ಮೊದಲನೇ ಪಂಚವಾರ್ಷಿಕ ಯೋಜನೆಯಲ್ಲಿ ಕೈಗೊಂಡಿರತಕ್ಕವುಗಳಾಗಿವೆ. ಮಾನ್ಯ ಸದಸ್ಯರಿಗೆ ಅಂತಹ ಅನುಮಾನವೇನಾದರೂ ಇದ್ದರೆ ನನ್ನ ಛೇಂಬರಿಗೆ ಬರಲಿ ನಾನು ಅವರಿಗೆ ನನ್ನ ಆಫೀಸಿನಲ್ಲಿರತಕ್ಕ ಸಂಪೂರ್ಣ ರೆಕಾರ್ಡುಗಳನ್ನೆಲ್ಲಾ ಅವರ ಎದುರಿಗಿಡುತ್ತೇನೆ. ನಾವು ಸಾಧ್ಯವಾದ

ಮಟ್ಟಿಗೆ ಈ ಹಾಸ್ಟೆಲ್‌ಗಳನ್ನು ಪ್ರತಿಯೊಂದು ತಾಲ್ಲೂಕಿಗೂ ಕೊಡಬೇಕೆಂದು ಮನಸ್ಸು ಮಾಡಿದ್ದೇವೆ. ಚಾಮರಾಜನಗರದಲ್ಲೊಂದು ಹಾಸ್ಟಲ್‌ನ್ನು ಒಂದು ಲಕ್ಷ 57 ಸಾವಿರ ರೂಪಾಯಿಗಳಲ್ಲಿ ಕಟ್ಟಿಸಲಾಗಿದೆ. ಆದರೆ ಚಿಕ್ಕಬಳ್ಳಾಪುರದಲ್ಲಿ ಹೆಚ್ಚು ಹುಡುಗರು ಆ ಹಾಸ್ಟಲ್‌ಗೆ ಸೇರತಕ್ಕ ಅವಕಾಶವಿದೆ. 500 ಹುಡುಗರ ತನಕ ಅಲ್ಲಿ ಸೇರುವ ನಿರೀಕ್ಷೆ ಇದೆ. ಆದರೆ ಕೆಲವರ ಈ ಹಾಸ್ಟಲ್‌ಗಳನ್ನು ಕಟ್ಟತಕ್ಕ ಬಗ್ಗೆ ಅಂದಾಜು ಮತ್ತು ಪ್ಲಾನ್‌ಗಳನ್ನೂ ಕಳುಹಿಸಿಲ್ಲ. ಅಂಥವರಿಗೆ ನಾವು ನೇರವಾಗಿ ಈ ಗ್ರಾಂಟ್‌ನ್ನು ಕೊಡುವುದು. ನಮ್ಮ ಹೊಣೆಗಾರಿಕೆಯಲ್ಲ. ಇವುಗಳಿಗೆ ಬರೀ ಅಡ್ಮಿನಿಸ್ಟ್ರೇಟಿವ್ ಸ್ಯಾಂಕ್ಷನ್ ಕೊಡುವುದೊಂದೇ ನಮ್ಮ ಪಾಲಿಗಿರುವುದು. ಈ ಕಾರ್ಯದಲ್ಲಿ ಸೋಷಿಯಲ್ ವೆಲ್‌ಫೇರ್‌ಇಲಾಖೆಯವರು ನೇರವಾಗಿ ಕೆಲಸಗಳನ್ನು ನಡೆಸುತ್ತಾರೆ. ಆದರೆ ಮಂಡ್ಯ ಜಿಲ್ಲೆಗೆ ಈ ಹಾಸ್ಟಲನ್ನು ಕಟ್ಟತಕ್ಕ ಬಗ್ಗೆ ಹಣವನ್ನಿನ್ನೂ ಕೊಟ್ಟಿಲ್ಲವೆಂದು ಹೇಳಿದರು. ಆದರೆ ಶ್ರೀ ಶ್ಯಾಮಸುಂದರ್ ಅವರಲ್ಲಿ ಕಪಟವಿಲ್ಲ. ಅವರು ಇದ್ದದನ್ನು ಬಹಿರಂಗದಲ್ಲಿ ಇದ್ದಂತೆಯೇ ಹೇಳಿಬಿಡುತ್ತಾರೆ. ಆದರೆ ಅಲ್ಲಿ ಯಾರೋ ಕೆಲವು ಜನರು ಈ ಪರಿಜನರನ್ನು ಇಬ್ಭಾಗ ಮಾಡಬೇಕಂತಾ ಇವರಿಗೆ ಈ ರೀತಿ ಹೇಳಿಕೊಟ್ಟಿದ್ದಾರೆ. ಮಾನ್ಯ ಸದಸ್ಯರು ಅವರಿಗೆ ಬಂದ ವಿಚಾರಗಳೆಲ್ಲಾ ನಿಜವೆಂತಲೇ ಭಾವಿಸಿರುವಂತೆ ಕಾಣುತ್ತಿದೆ. ಮಾನ್ಯ ಸದಸ್ಯರ ಅನುಮಾನ ಪರಿತ್ಯಾಗಕ್ಕಾಗಿ ನಾನೀಗ ಈ ವಿಚಾರದಲ್ಲಿ ಕೆಲವು ಅಂಶಗಳನ್ನು ಸೂಕ್ಷ್ಮವಾಗಿ ತಿಳಿಸಬೇಕಾಗಿದೆ. ಮಾನ್ಯ ಶ್ಯಾಮಸುಂದರ್ ಅವರು ಮಾತನಾಡುತ್ತ ಅವರು "ನಿಮ್ಮ ಕಡೆಯವರೇ ನನಗೆ ಇನ್‌ಫರ್‌ಮೇಷನ್ ಕೊಟ್ಟಿದ್ದಾರೆಂದು" ಹೇಳಿದರು. ಅವರು ಹೇಳಿದುದ್ದನ್ನೇ ನಾನೀಗ ಹೇಳುತ್ತಿದ್ದೇನೆ. ನಾವು ಮೊಟ್ಟಮೊದಲನೆಯದಾಗಿ ಮಂಡ್ಯದಲ್ಲಿ ಒಂದು ಹಾಸ್ಟಲನ್ನು ಕಟ್ಟಲು ಒಂದು ಲಕ್ಷ 7 ಸಾವಿರ ರೂಪಾಯಿಗಳನ್ನು ಮಂಜೂರು ಮಾಡಿದೆವು. ಮಂಡ್ಯದಲ್ಲಿ ಒಕ್ಕಲಿಗರ ಹಾಸ್ಟೆಲಿನ ಜಮೀನು ಅಲ್ಲಿ ಬಲಯುತವಾದ ವ್ಯಕ್ತಿಯ ಕೈಲಿದೆ. ಆ ಜಾಗವನ್ನು ಆ ವ್ಯಕ್ತಿ ತನ್ನ ಸ್ವಂತ ಉಪಯೋಗಕ್ಕೆ ಉಪಯೋಗಿಸಿಕೊಳ್ಳಬೇಕೆಂಬ ಪ್ರಯತ್ನಗಳು ನಡೆಯುತ್ತಿದ್ದವು. ಆಗ ನಾನು ನೇರವಾಗಿ ಜಿಲ್ಲಾಧಿಕಾರಿಗಳನ್ನು ಕರೆಸಿ ಆ ಪಾರ್ಟಿಯ ಒಪ್ಪಿಗೆಯನ್ನು ಪಡೆದು ಆ ಸೈಟನ್ನು ಸರ್ಕಾರದವರ ಸುಪರ್ದು ತೆಗೆದುಕೊಳ್ಳಬೇಕೆಂದು ಹೇಳಿದೆ. ಆದರೆ ಆ ಪಾರ್ಟಿ ಒಪ್ಪಿಗೆಯನ್ನು ಸಕಾಲದಲ್ಲಿ ಪಡೆಯಲು ಸಾಧ್ಯವಾಗಲಿಲ್ಲ. ಹೀಗಾಗಿ ಅಲ್ಲಿ ಆ ಕಟ್ಟಡದ ಕೆಲಸ

ನಿಧಾನವಾಯಿತು. ಹಾಗೇನೂ ಅಡಚಣೆ ಬಾರದಿದ್ದರೆ ಇದುವರೆಗಾಗಲೇ ಅಲ್ಲಿ ಕಟ್ಟಡ ಅರ್ಧಂಬರ್ಧ ಆಗಲೇಬೇಕಾಗಿತ್ತು. ಕೆಲವು ಕಡೆ ಇಂಥ ಎಡರು ತೊಡರುಗಳಿಂದ 3–4 ವರ್ಷಗಳ ಡಿಲೇ ಆಗಿರಬಹುದು. ಇನ್ನು ಕೆಲವು ಕಡೆ ಮೊದಲನೇ ಪಂಚವಾರ್ಷಿಕ ಯೋಜನೆಯಲ್ಲಿ ಮಂಜೂರಾದ ಕೆಲಸಗಳ ಬಗ್ಗೆ ರಿವೈಸ್ಡ್ ಎಸ್ಟಿಮೇಟ್‌ಗಳು ಬರುವುದು ನಿಧಾನವಾಗಿರುತ್ತೇ. ಆದ್ದರಿಂದ ಕೊಂಚ ಡಿಲೇ ಆಗಿರುತ್ತೆ. ಇಷ್ಟು ಹೊರತು ನಾವು ಯಾರೊಬ್ಬರ ಪ್ರಭಾವಕ್ಕೂ ಒಳಗಾಗಿ ಕೆಲಸ ಮಾಡುತ್ತಿಲ್ಲ. ಕೆಲವು ಕಡೆ ವಿದ್ಯಾರ್ಥಿಗಳ ಸಂಖ್ಯೆ ಜಾಸ್ತಿಯಾಗಿರುತ್ತೆ. ಅಂಥ ಕಡೆಗಳಲ್ಲಿ ಆ ಮಕ್ಕಳ ವಿದ್ಯಾಭಿವೃದ್ಧಿಗೆ ಸೂಕ್ತವಾದ ಹಾಸ್ಟಲ್, ಸ್ಕಾಲರ್‌ಶಿಪ್ ಇತ್ಯಾದಿಗಳನ್ನೆಲ್ಲಾ ನಾವು ಕೊಡುತ್ತಿದ್ದೇವೆ. ಆದರೆ ಶ್ರೀ ಶ್ಯಾಮಸುಂದರ್ ಅವರು ಕೆಲವು ಕಡೆ ಈ ಅನುಕೂಲಗಳು ದೊರೆಯಲಿಲ್ಲ ಎಂದು ಹೇಳಿದ್ದಾರೆ. ಅಂಥ ನಿದರ್ಶನಗಳ್ಯಾವಾದರೂ ಇದ್ದಲ್ಲಿ ಅವುಗಳನ್ನು ನನ್ನ ಗಮನಕ್ಕೆ ತಂದರೆ ಅದನ್ನು ಕೂಡಲೇ ಸರಿಪಡಿಸುತ್ತೇನೆ. ಆದರೆ, ಯಾರೇ ಆಗಲಿ ಆಧಾರ ರಹಿತವಾದ ಟೀಕೆಗಳನ್ನು ಮಾಡಿದರೆ ಅದನ್ನು ನಾನು ಉಗ್ರವಾಗಿ ಪ್ರತಿಭಟಿಸುತ್ತೇನೆ. ರಚನಾತ್ಮಕ ಟೀಕೆಗಳೆಲ್ಲಕ್ಕೂ ನಾನು ಮಾನ್ಯತೆ ಕೊಡುತ್ತೇನೆ. ನಾವು ಈ ಹಾಸ್ಟೆಲುಗಳ ವಿಚಾರದಲ್ಲಿ ಯಾವುದನ್ನು ನೇರವಾಗಿ ನಡೆಸುತ್ತಿರಲಿಲ್ಲ. ಇವುಗಳ ಆಡಳಿತದಲ್ಲಿ ಆಯಾಯ ಜಿಲ್ಲೆಯ ಜಿಲ್ಲಾಧಿಕಾರಿಗಳಿಗೆ ಒಪ್ಪಿಸಲಾಗಿದೆ. ಜೊತೆಗೆ ಸೋಷಿಯಲ್ ವೆಲ್‌ಫೇರ್ ಇಲಾಖೆಯ ಸೂಪರ್‌ವಿಷನ್ ಬೇರೆ ಇದೆ. ಇವರಿಂದ ಬರತಕ್ಕ ಶಿಫಾರಸ್ಸುಗಳ ಮೇಲೆ ನಾವು ಟ್ರೆಜರಿಯಿಂದ ಹಣ ಪಾವತಿ ಮಾಡುವಂತೆ ಏರ್ಪಾಡು ಮಾಡಿದ್ದೇವೆ. ಅವರು ಇವರು ಕಳುಹಿಸತಕ್ಕ ಪ್ಲಾನು, ಅಂದಾಜು ಇತ್ಯಾದಿ ಲೆಕ್ಕಗಳನ್ನೆಲ್ಲಾ ಚೆಕ್ ಮಾಡಿ ಹಣ ಕೊಡುತ್ತಾರೆ. ಹೀಗೆ ಪ್ರತಿಯೊಂದು ತಾಲ್ಲೂಕು ಮತ್ತು ಜಿಲ್ಲೆಗಳಲ್ಲಿ ಕಟ್ಟಿಸಿರತಕ್ಕ ಈ ಹಾಸ್ಟಲ್‌ಗಳ ಆಡಳಿತಕ್ಕೆ ಅಲ್ಲಲ್ಲೇ ಒಂದು ಪ್ರತ್ಯೇಕ ಇಲಾಖೆಯಿರುತ್ತದೆ. ಈ ವಿಚಾರಗಳನ್ನೆಲ್ಲಾ ನಾವು ಕಾನೂನಿನ ಪ್ರಕಾರವೇ ನಡೆಸುತ್ತಿರುತ್ತೇವೆ. ಈ ವಿಚಾರದಲ್ಲಿ ಖಾಸಗಿಯವರು ಯಾರಾದರೂ ಮುಂದೆ ಬಂದು ಹರಿಜನರ ಹಾಸ್ಟಲ್‌ಗಳನ್ನು ಕಟ್ಟಿಸುತ್ತೇವೆಂದು ಹೇಳಿದರೆ ಅಂಥವರಿಗೆ ಸರ್ಕಾರದ ನೀತಿ ನೇಮಕಗಳಿಗನುಗುಣವಾಗಿ ಸಹಾಯವನ್ನು ಕೊಡುತ್ತೇವೆ. ಇಲ್ಲಿಯವರೆಗೆ ಇಂಥ ಸಹಾಯವನ್ನು ಕೊಟ್ಟೂ ಇದ್ದೇವೆ. ಹಾಗೆ ಯಾರಾದರೂ

ಸರ್ಕಾರದ ಸಹಾಯ ನಮಗೆ ಕೊಡಲಿಲ್ಲವಂತೆ ಆರೋಪಣೆ ಮಾಡುವುದಿದ್ದರೆ ತಿಳಿಸಿ, ಅದಕ್ಕೆ ನಾನು ಜವಾಬ್ ಕೊಡುತ್ತೇನೆ.

ಆದರೆ ನಾವೀಗ ಈ ಹರಿಜನರನ್ನು ಉತ್ತಮ ಸ್ಥಿತಿಗೆ ತರಲು ಮತ್ತೊಂದು ತೀರ್ಮಾನವನ್ನು ತೆಗೆದುಕೊಂಡಿದ್ದೇವೆ. ಅದನ್ನೀಗ ನಾನು ತಮ್ಮ ಮುಂದಿಡಲು ಸಂತೋಷ ಪಡುತ್ತೇನೆ. ಈ ಹರಿಜನರ ಅಭಿವೃದ್ಧಿಗಾಗಿ ಎರಡನೇ ಪಂಚವಾರ್ಷಿಕ ಯೋಜನೆಯಲ್ಲಿ 296 ಲಕ್ಷ ರೂಪಾಯಿ ಮೀಸಲಿಡಲಾಗಿತ್ತು. ಈಗ ಮೂರನೇ ಯೋಜನೆಯಲ್ಲಿ ಈ ಹರಿಜನಾಭಿವೃದ್ಧಿಗಾಗಿ 440 ಲಕ್ಷ ರೂಪಾಯಿಗಳನ್ನು ಇಟ್ಟಿದ್ದೇವೆ. ಇಲ್ಲಿಯತನಕ ಹರಿಜನರಿಗೆ ಮನೆಗಳನ್ನು ಕಟ್ಟಿಕೊಳ್ಳಲು 400 ರೂಗಳ ಗ್ರಾಂಟನ್ನು ಕೊಡತಕ್ಕ ಒಂದು ಪದ್ಧತಿಯಿತ್ತು. ಈ ಪದ್ಧತಿಯನ್ನು ತಾ. 1-4-1961 ರಿಂದ ರದ್ದುಪಡಿಸಲಾಗುತ್ತದೆ. ಇನ್ನು ಮುಂದೆ ಈ ನಿರ್ಗತಿಕರಾದ ಯಾವ ಹರಿಜನರೇ ಆಗಲಿ, ಅವರು ವ್ಯವಸಾಯೋದ್ಯಮವನ್ನು ಕೈಗೊಳ್ಳುವುದಾದರೆ ಸರ್ಕಾರ ಅವರಿಗೆ ಕೊಡತಕ್ಕ ಜಮೀನನ್ನು ಕೊಡುವುದೊಂದೇ ಅಲ್ಲದೇ ಅದರ ಜೊತೆಗೆ ಅವರು ಜಮೀನಿನಲ್ಲೇ ಒಂದು ವಾಸದ ಮನೆಯನ್ನು ಕಟ್ಟಿಕೊಳ್ಳಲು ಇಲ್ಲಿಯತನಕ ಕೊಡಲಾಗುತ್ತಿದ್ದ 400 ರೂಗಳ ಗ್ರಾಂಟಿಗೆ ಬದಲು 500 ರೂಗಳ ಗ್ರಾಂಟನ್ನು ಕೊಡಬೇಕೆಂಬುದೇ ಈಗಿನ ಸರ್ಕಾರದ ನೀತಿ ಆಗಿದೆ. ಹೀಗೆ ಇನ್ನು ಮುಂದೆ ಈ ಬಡ ಜನರಿಗೆ 500 ರೂಗಳ ಮನೆ ಗ್ರಾಂಟು ವ್ಯವಸಾಯಕ್ಕೆ ಜಮೀನು, ಸೆಂಟರಿನಿಂದ ಸಹಾಯ ಬರತಕ್ಕ ಸ್ಕೀಮಿನಿಂದ ಇವರಿಗೆ ಎತ್ತುಗಳು, ಇವರು ಒಂದು ಕೋ-ಆಪರೇಟಿವ್ ಫಾರಂ ಮಾಡಿಕೊಂಡು ಜೀವನ ಮಾಡುವುದಾದರೆ ಈ ಇಲಾಖೆಯಿಂದಲೂ ಇವರಿಗೆ ವ್ಯವಸಾಯೋದ್ಯಮದ ಬಗ್ಗೆಯೇನು ಸೌಲಭ್ಯಗಳನ್ನೊದಗಿಸಬಹುದೋ ಅನುಕೂಲಗಳನ್ನೆಲ್ಲಾ ಕೊಡಲಾಗುತ್ತದೆ. ಇದರ ಜೊತೆಗೆ ಇವರು ಸಾಲದ ರೂಪದಲ್ಲೂ ಹಣ ಪಡೆಯಲು ಅವಕಾಶವಿರುತ್ತೆ. ಅಂತೂ ಒಟ್ಟಿನಲ್ಲಿ ಇವರ ಅಭಿವೃದ್ಧಿಗಾಗಿ ಇನ್ನು ಮುಂದೆ 100 ರೂಗಳ ಗ್ರಾಂಟನ್ನು ನಿಲ್ಲಿಸಿ ಈ ಜನಾಂಗಕ್ಕೆ 1500 ರೂಗಳಿಂದ 3000ರೂಗಳ ತನಕ ಸಹಾಯವನ್ನು ಕರಡು ರೂಪದಲ್ಲಿ ಒದಗಿಸಲಾಗುತ್ತೆ. ಇದರ ಜೊತೆಗೆ ಈಗ ಇರತಕ್ಕ ಲೋಇನ್‌ಕಂ-ಮಿಡಲ್‌ಕ್ಲಾಸಿನ ಜನರಿಗೆ ಹೌಸಿಂಗ್‌ಸ್ಕೀಮ್ ಅಂತಹ ಏನು ಒಂದು ಯೋಜನೆಯನ್ನು ಮಾಡಿದೆಯೋ ಅದೇ ರೀತಿ ಹರಿಜನರಿಗೂ ಒಂದು ಹರಿಜನರ ಹೌಸಿಂಗ್‌ಸ್ಕೀಂ ಅಂತ ಮಾಡಿದ್ದೇವೆ.

ಇವರು ಈ ಎರಡು ಯೋಜನೆಗಳಲ್ಲೂ ಅನುಕೂಲ ಪಡೆಯಬಹುದು. ಹರಿಜನ ಹೌಸಿಂಗ್‌ಸ್ಕೀಂ ಎಂದು ಏನು ಮಾಡಿದೆಯೋ ಅದಕ್ಕೆ ಇನ್ನೂ ಹೆಚ್ಚು ಹಣ ಕೊಡಬೇಕಾಗಿದೆ. ಇಂಥದ್ದಕ್ಕೆ ಸಾಲದ ರೂಪದಲ್ಲಿ ಹಣ ಒದಗಿಸುತ್ತೇವೆ. ಆದರೆ ಗ್ರಾಂಟ್ ಎಂದು ಕೊಡುವುದಿಲ್ಲ. ಯಾಕೆಂದರೆ ಸರ್ಕಾರದ ಮೇಲೆ ಯಾವುದೇ ರೀತಿಯ ಆಕ್ಷೇಪಣೆ ಬರಬಾರದು ಎಂದು ಹೀಗೆ ಮಾಡಿದೆ.

**Sri.C.M Arumugham:** Is this state policy or an all India policy? Are you directed by the home ministry of the government of India or is this only a state policy?

**ಶ್ರೀ ಎಸ್.ರಾಚಯ್ಯ:** ಕಳೆದ ಅಕ್ಟೋಬರ್ ತಿಂಗಳಿನ 24 ರಿಂದ 28ನೇ ತಾರೀಖಿನವರೆಗೆ ಎಲ್ಲಾ ಸ್ಟೇಟ್ ಮಿನಿಸ್ಟರ್ಸ್ ಬ್ಯಾಕ್‌ವರ್ಡ್ ಕ್ಲಾಸ್ ಮಿನಿಸ್ಟರ್ಸ್ ಒಂದು ಸಭೆ ನಡೆಯಿತು. ಅದರಲ್ಲಿ ನಿರ್ಣಯ ತೆಗೆದುಕೊಳ್ಳಲಾಗಿದೆ. ಹಿಂದುಳಿದ ವರ್ಗದ ವಿದ್ಯಾರ್ಥಿಗಳ ವಿದ್ಯಾಭ್ಯಾಸಕ್ಕೋಸ್ಕರ ಹೆಚ್ಚಿನ ಭಾಗ ಹಣವನ್ನು ಒದಗಿಸಬೇಕು. ಅದರಲ್ಲಿಯೂ ಹಣವನ್ನು ಹಾಸ್ಟೆಲ್‌ಕಟ್ಟಡ, ಟೆಕ್ನಿಕಲ್ ಟ್ರೇನಿಂಗ್ ಕೊಡುವುದಕ್ಕೆ ಖರ್ಚು ಮಾಡಬೇಕೆಂದು ತೀರ್ಮಾನಿಸಲಾಗಿದೆ. ಪ್ಲಾನಿಂಗ್ ಕಮಿಷನ್ ಅವರು ಸಹ ಇದನ್ನು ಒಪ್ಪಿಕೊಂಡಿದ್ದಾರೆ. ಅದಕ್ಕಾಗಿ ಸರ್ಕಾರ ಈ ರೀತಿ ಮಾಡುತ್ತಿದೆ.

ಇನ್ನು ಹೌಸಿಂಗ್ ವಿಚಾರದಲ್ಲಿ ಬೇರೆ ರಾಜ್ಯಗಳಲ್ಲಿ ಗ್ರಾಂಟ್ ಕೊಡುತ್ತಿರಬಹುದು ಮೊದಲು ಉದ್ಯೋಗ ಕಲ್ಪಿಸಬೇಕಾಗುತ್ತದೆ. ಇದು ಆದ ಮೇಲೆ ಮನೆ ಬೇಕಾಗುತ್ತದೆ. ಎಲ್ಲರೂ ಮನೆಗಳನ್ನು ಕಟ್ಟುವುದಕ್ಕೆ ಸೈಟುಗಳನ್ನು ಪಟ್ಟಣಗಳಲ್ಲಿಯೇ ಕೇಳುವುದು ಸರಿಯಲ್ಲ. ಗ್ರಾಮಾಂತರ ಪ್ರದೇಶಗಳಲ್ಲಿ ಹಳ್ಳಿಗಳಲ್ಲಿ ಹರಿಜನರಿಗೆ ಮುಫತ್ತಾಗಿ ಸೈಟು ಕೊಡುತ್ತೇವೆ. ಅಲ್ಲಿ ಮನೆಗಳನ್ನು ಕಟ್ಟಿಸಬಹುದು. ಈ ಸಾಲ ಹಣವನ್ನು 20 ವರ್ಷಗಳಲ್ಲಿ ವಾಪಸ್ ಕೊಡಬಹುದು. ಸಾಮಾನ್ಯವಾಗಿ 5 ಪರ್ಸೆಂಟ್ ಬಡ್ಡಿ ತೆಗೆದುಕೊಳ್ಳುತ್ತಾರೆ. ಆದರೆ ಇವರಿಗೆ ಶೇಕಡ 2ರಷ್ಟು ಬಡ್ಡಿ ಕೊಡಬೇಕಾಗುತ್ತದೆ. ಉಳಿದ ಶೇಕಡ 3ರಷ್ಟು ಬಡ್ಡಿಯನ್ನು ಸಮಾಜ ಕಲ್ಯಾಣ ಇಲಾಖೆಯವರು ಕೊಡುತ್ತಾರೆ. ಒಂದು ಮನೆಗೆ 400 ರೂಪಾಯಿ ಕೊಡುವ ಪದ್ಧತಿ ಇಟ್ಟುಕೊಂಡಿದ್ದಾರೆ. ಈ ಬಗ್ಗೆ ಬೊಂಬಾಯಿ ಕರ್ನಾಟಕ ದೇಶದಲ್ಲಿ ಒಂದು

ಒಳ್ಳೆಯ ಯೋಜನೆ ಮಾಡಿದ್ದಾರೆ. ಅದು ಯೋಗ್ಯವಾಗಿದೆ. ಅರ್ಧ ಭಾಗದಷ್ಟು ಹಣವನ್ನು ಕೈಗಾರಿಕೆಗೆ ಆರ್ಥಿಕ ಅಭಿವೃದ್ಧಿಗೆ ಉಪಯೋಗಿಬೇಕಾಗಿದೆ. ಇದು ಅತ್ಯಂತ ಮಹತ್ವದ್ದಾಗಿದೆ. ಕೈಗಾರಿಕೆಗಳ ಅನುಕೂಲ ಒದಗಿಸಿಕೊಟ್ಟು, ಅವರಿಗೆ ಉದ್ಯೋಗ ಕಲ್ಪಿಸಿಕೊಟ್ಟು ನಿಜವಾಗಿಯೂ ಅವರ ಉದ್ಧಾರವಾಗಬೇಕಾದರೆ ಪ್ರತಿಯೊಬ್ಬ ಹಿಂದುಳಿದವನ ವರದಾನ ಹೆಚ್ಚಾಗಬೇಕು. ಸರ್ಕಾರ ಈ ಬಗ್ಗೆ ತೀರ್ಮಾನ ತೆಗೆದುಕೊಂಡಿದೆ.

ಇದೂ ಅಲ್ಲದೆ ಪಟ್ಟಣಗಳಲ್ಲಿ ಜಾಗಗಳನ್ನು ಮುಫತ್ತಾಗಿ ಕೊಡುವುದಿಲ್ಲ ಈ ಸಾಲದ ಹಣವನ್ನು ಕಡಿಮೆ ಬಡ್ಡಿ ದರದಿಂದ ಕಂತುಗಳಲ್ಲಿ ವಾಪಸ್ ಕೊಡುವಂತೆ ಒಂದು ವ್ಯವಸ್ಥೆ ಮಾಡಲಾಗಿದೆ. ಒಟ್ಟಿನಲ್ಲಿ ಹರಿಜನರ ಅಭಿವೃದ್ಧಿಯಾಗುವುದಕ್ಕೆ ಒಳ್ಳೇ ತೀರ್ಮಾನ ತೆಗೆದುಕೊಂಡಿದ್ದೇವೆ. ಇಲ್ಲಿಯವರೆಗೆ ಸಾಧಿಸಿದ ಪ್ರಗತಿಗಿಂತ ಇನ್ನೂ ಹೆಚ್ಚಿನ ಪ್ರಮಾಣದಲ್ಲಿ ಮೂರನೇ ಯೋಜನೆಯ ಅವಧಿಯಲ್ಲಿ ಪ್ರಗತಿ ಆರ್ಥಿಕ ಅಭಿವೃದ್ಧಿಯ ಕಡೆಗೆ ಸಾಕಷ್ಟು ಗಮನ ಕೊಡಲಾಗುವುದು. ಅನೇಕ ಸದಸ್ಯರು ಆಧಾರ ರಹಿತವಾದ ಟೀಕೆ ಮಾಡಿದ್ದಾರೆ. ಅದನ್ನು ತೀವ್ರ ವಿರೋಧಿಸುತ್ತೇನೆ. ಅವರು ಸೂಚಿಸಿದ ಪ್ರಕಾರ ಒಂದು ಕಮಿಟಿಯನ್ನು ನೇಮಕ ಮಾಡುವ ಪ್ರಮೇಯವೇನೂ ಇಲ್ಲ ಕೊನೆಯದಾಗಿ ಸಂಬಂಧಪಟ್ಟ ಬೇಡಿಕೆಗಳನ್ನು ಅನುಮೋದಿಸಬೇಕೆಂದು ಹೇಳುತ್ತೇನೆ.

**ಶ್ರೀ ಕೆ.ಎಚ್.ವೆಂಕಟರೆಡ್ಡಿ:** ಸ್ವಾಮಿ, ಹೆಚ್ಚಿಗೆ ಬೆಳೆ ಬರುವುದಕ್ಕೆ ಬೇಕಾದ ಸೌಕರ್ಯವನ್ನು ರೈತರಿಗೆ ಒದಗಿಸುವುದರಲ್ಲಿ ಅದರಲ್ಲಿಯೂ ಜಪಾನೀಸ್ ಪದ್ಧತಿ ಭತ್ತ ಬೆಳೆಯುವುದಕ್ಕೆ ಅಗ್ರಿಕಲ್ಚರಲ್ ಡಿಪಾರ್ಟ್‌ಮೆಂಟಿನವರು ಸರಿಯಾಗಿ ಸಹಕಾರ ಕೊಡುವುದಿಲ್ಲವೆಂಬುದು ಸರಕಾರದ ಗಮನಕ್ಕೆ ಬಂದಿದೆಯೇ?

**ಶ್ರೀ ಎನ್.ರಾಚಯ್ಯ:** ಹಾಗೇನೂ ಇಲ್ಲ, ವ್ಯವಸಾಯ ಇಲಾಖೆಯವರ ಸಹಕಾರದಿಂದ ಉತ್ತಮ ಕೆಲಸ ನಡೆದಿದೆ ಎಂದು ಸರಕಾರಕ್ಕೆ ಗೊತ್ತಿದೆ. ಸದಸ್ಯರು ಹೇಳತಕ್ಕಂಥದ್ದು ಸರಕಾರದ ಗಮನಕ್ಕೆ ಬಂದಿಲ್ಲ. ಸಮಾಜ ವಿಕಾಸ ಕ್ಷೇತ್ರಗಳಲ್ಲಿ ಕೆಲಸ ಚೆನ್ನಾಗಿ ನಡೆದಿದೆ. ಯಾವುದೇ ಒಂದು ಉದಾಹರಣೆಯನ್ನು ತೆಗೆದುಕೊಂಡು ಅದು ಎಲ್ಲಾ ಕಡೆ ಸರ್ವಸಾಮಾನ್ಯವಾದದ್ದೆಂದು ಹೇಳುವುದನ್ನು ಸರ್ಕಾರ ಒಪ್ಪುವುದಿಲ್ಲ.

**ಶ್ರೀ ಕೆ.ಎಚ್.ವೆಂಕಟರೆಡ್ಡಿ:** ರೈತರಿಗೆ ಸಹಕಾರ ದೊರೆಯುತ್ತಿಲ್ಲ ಅಲ್ಲವೇ?

**ಶ್ರೀ ಎನ್.ರಾಚಯ್ಯ:** ರೈತರಿಗೆ ಸಹಕಾರ ದೊರೆಯುತ್ತಿದೆ ಮತ್ತು ಒಳ್ಳೇ ಕೆಲಸ ನಡೆದಿದೆ. ತಾವು ಹೇಳುವ ರೀತಿಯಲ್ಲಿ ರೈತರಿಂದ ಯಾವ ತಕರಾರು ನಮಗೆ ಬಂದಿಲ್ಲ.

**ಶ್ರೀ ಜೆ.ಬಿ.ಮಲ್ಲಾರಾಧ್ಯ:** ಪ್ರಸಕ್ತ ಸಾಲಿನಲ್ಲಿ ಜಪಾನೀಸ್ ಪದ್ಧತಿಯಿಂದ ಭತ್ತ ಬೆಳೆಯುವ ಭೂಮಿ ಎಷ್ಟು ಎಕರೆ ಆಗಿದೆ? ಮೂರನೇ ಯೋಜನೆಯಲ್ಲಿ ಎಷ್ಟು ಎಕರೆ ಮಾಡಬೇಕೆಂದಿದ್ದೀರಿ? ಈ ಬಗ್ಗೆ ಹೊಸ ಕ್ರಮ ಕೈಗೊಂಡಿದ್ದೀರಾ? ಸಂಪೂರ್ಣತೆ ಯಾಕೆ ಸಾಧ್ಯವಾಗಿಲ್ಲ?

**ಶ್ರೀ ಎನ್.ರಾಚಯ್ಯ:** ಈಗ ಸುಮಾರು 4.3ಲಕ್ಷ ಎಕರೆಯಷ್ಟು ಜಮೀನು ನಮ್ಮ ರಾಜ್ಯದಲ್ಲಿ ಜಪಾನೀಸ್ ಪದ್ಧತಿಯಿಂದ ವ್ಯವಸಾಯ ಮಾಡಲಾಗುತ್ತದೆ. ಇದನ್ನು ವಿಸ್ತರಣೆ ಮಾಡುವುದಕ್ಕೆ ರೈತರಿಗೆ ಅನುಕೂಲ ಒದಗಿಸಲು ಸರ್ಕಾರ ಕಾರ್ಯಕ್ರಮ ತೆಗೆದುಕೊಳ್ಳಲಾಗುತ್ತಿದೆ. ಮೂರನೇ ಯೋಜನೆಯಲ್ಲಿ ಎಷ್ಟು ಎಕರೆ ಭೂಮಿ ಆಗಬಹುದು ಎಂಬುದಕ್ಕೆ ಪ್ಲಾನಿನಲ್ಲಿ ಕೊಟ್ಟಿದೆ.

**ಶ್ರೀ ಜೆ.ಬಿ.ಮಲ್ಲಾರಾಧ್ಯ :** ಜಪಾನೀಸ್ ಪದ್ಧತಿಯಿಂದ ಹೆಚ್ಚು ಭತ್ತ ಬೆಳೆಯಬಹುದು ಎಂಬುದು ಕಂಡುಬಂದಿರುವುದರಿಂದ ಅದನ್ನು ಮುಂದುವರೆಸಲಿಕ್ಕೆ ಹೆಚ್ಚು ಮುತುವರ್ಜಿ ವಹಿಸಿ ಕೆಲಸ ಮುಂದುವರೆಸಬೇಕೆಂದು ಮೂರನೇ ಯೋಜನೆಯಲ್ಲಿ ನಿರ್ಧಾರ ಮಾಡದೇ ಇದ್ದರೆ ಅದು ಹೇಗೆ ಆಗುತ್ತದೆ?

**ಶ್ರೀ ಎನ್.ರಾಚಯ್ಯ:** ನಿರ್ಧಾರ ಮಾಡಿದ್ದೇವೆ. ಇಂಥ ಹೊಸ ಯೋಜನೆಗಳ ಬಗ್ಗೆ ಸಹ ಜಾಗೃತರಾಗಿರಬೇಕಾಗುತ್ತದೆ. ಅವರು ಸಹಕರಿಸಬೇಕಾಗುತ್ತದೆ. ಕೊಡತಕ್ಕ ಸೌಲಭ್ಯಗಳನ್ನು ಉಪಯೋಗಿಸಿಕೊಳ್ಳುವುದಕ್ಕೆ ಆಸಕ್ತಿ ವಹಿಸಬೇಕಾಗುತ್ತದೆ. ಅಂದರೆ ನಿರ್ದಿಷ್ಟ ಪ್ರಮಾಣದಲ್ಲಿ ಕೆಲಸ ಮುಂದುವರೆಯುತ್ತದೆ.

**ಶ್ರೀ ಜಿ.ವೆಂಕಟೇಗೌಡ:** ಎರಡನೇ ಯೋಜನೆ ಮುಗಿಯುವುದರೊಳಗೆ ಎಷ್ಟು ಎಕರೆ ಹೆಚ್ಚು ಮಾಡಬೇಕೆಂದು ಟಾರ್ಗೆಟ್ ಇದ್ದೀತು?

**ಶ್ರೀ ಎನ್.ರಾಚಯ್ಯ:** ಟಾರ್ಗೇಟ್ ನಿಗದಿ ಏನು ಮಾಡಿತ್ತೋ ಅದಕ್ಕಿಂತಲೂ ಹೆಚ್ಚಿನ ರಿತಿಯಲ್ಲಿ ಆಹಾರ ಉತ್ಪಾದನೆ ಮಾಡಿದ್ದೇವೆ. ಎರಡನೆಯ ಯೋಜನೆಯ

ಅವಧಿಯಲ್ಲಿ ಹೆಚ್ಚಿಗೆ ಸಾಧಿಸಿದ್ದೇವೆ. ಕಳೆದ ಸಾರಿ ಈ ಬಗ್ಗೆ ಅಂಕಿ ಅಂಶಗಳನ್ನು ಕೊಟ್ಟಿದ್ದೇನೆ.

**ಶ್ರೀ ಜಿ.ಎನ್.ಪುಟ್ಟಣ್ಣ:** ಕೆಮಿಕಲ್ ಮ್ಯಾನ್ಯುರ್ ರೈತರಿಗೆ ಸಿಕ್ಕುತ್ತಿಲ್ಲ. ಅದನ್ನು ಹಂಚುವುದರಲ್ಲಿ ಬಹಳ ಅನ್ಯಾಯವಾಗುತ್ತಿದೆ ಎಂಬುದು ಸರಕಾರದ ಗಮನಕ್ಕೆ ಬಂದಿದೆಯೇ?

**ಅಧ್ಯಕ್ಷರು :** ತಕ್ಕ ಏರ್ಪಾಡು ಮಾಡಿದ್ದೇವೆಂದು ಮಂತ್ರಿಗಳು ಉತ್ತರ ಹೇಳಿದ್ದಾರೆ.

**ಶ್ರೀ ಜಿ.ಎನ್. ಪುಟ್ಟಣ್ಣ:** ಹಾಗಾದರೆ ಏನೇನು arrangerments ಯಾವ ರೀತಿ ಮಾಡಿದ್ದೀರಿ ಎಂದು ಕೇಳುತ್ತೇನೆ, ಯಾಕೆಂದರೆ ರೈತರಿಗೆ ಕೆಮಿಕಲ್ ಮ್ಯಾನ್ಯುರ್ ಹಂಚುವುದರಲ್ಲಿ mismanagement ಇದೆ ರೈತರಿಗೆ ಸಿಕ್ಕುತ್ತಿಲ್ಲ.

**ಶ್ರೀ ಎನ್. ರಾಚಯ್ಯ :** ಮಾನ್ಯ ಸದಸ್ಯರಿಗೆ ಗೊತ್ತಿದೆ ಆದರೂ ಸಹ ಪ್ರಶ್ನೆ ಕೇಳುತ್ತಿದ್ದಾರೆ. ಸರಕಾರದ ನೀತಿ ಏನಿದೆ ಎನ್ನುವುದನ್ನು ಈ ಮಾನ್ಯ ಸಭೆಯಲ್ಲಿ ಪ್ರಕಟಣೆ ಮಾಡಿದ ಮೇಲೆ ಫರ್ಟಿಲೈಜರ್ಸ್ ಗೊಬ್ಬರ ಮುಂತಾದುವುಗಳನ್ನು ಸಹಕಾರಿ ಸಂಸ್ಥೆಗಳ ಮೂಲಕ ರೈತರಿಗೆ ಒದಗಿಸುವುದಕ್ಕೆ ಸರಕಾರ ಒಪ್ಪಿಕೊಂಡಿದೆ. ಆ ಪ್ರಕಾರ ಗೊಬ್ಬರ, ಕಬ್ಬಿಣ ಮುಂತಾದವುಗಳನ್ನು ಸಹಕಾರಿ ಸಂಸ್ಥೆಗಳ ಮೂಲಕ ಹಂಚಲಾಗುತ್ತಿದೆ ಆ ಸಂಸ್ಥೆಗಳಲ್ಲಿ ಏನಾದರೂ ಲೋಪದೋಷಗಳು ಕಂಡುಬಂದರೆ ಈ ವಿಚಾರದಲ್ಲಿ ಕಾನೂನು ಪ್ರಕಾರ ಸಂಬಂಧಪಟ್ಟ ಇಲಾಖೆಯವರು ಕ್ರಮ ತೆಗೆದುಕೊಳ್ಳುತ್ತಾರೆ.

**ಶ್ರೀ ಜಿ.ಎನ್. ಪುಟ್ಟಣ್ಣ :** Agricultural implements supply ಮಾಡುತ್ತೇವೆಂದು ಹೇಳಿದಿರಿ ಸೊಸೈಟಿಗಳಿಗೆ ಕಬ್ಬಿಣ ಕೊಟ್ಟುಬಿಡುತ್ತೀರಿ. ಮೂರು ತಿಂಗಳು ಇಟ್ಟು ಬಿಟ್ಟು ಆಮೇಲೆ ಅದು ಬ್ಲಾಕ್ ಮಾರ್ಕೆಟ್‌ಗೆ ಹೋಗುತ್ತಿದೆ. ರೈತರಿಗೆ ದೊರೆಯುವುದಿಲ್ಲ. ಸೊಸೈಟಿಗಳು ಸರಿಯಾಗಿ ಹಂಚುತ್ತಿಲ್ಲ. ಇದನ್ನು ತಡೆಗಟ್ಟುವುದಕ್ಕೆ ಏನು ಕ್ರಮ ತೆಗೆದುಕೊಂಡಿದ್ದೀರಿ?

**ಅಧ್ಯಕ್ಷರು :** ಇದರಲ್ಲಿ ಕಬ್ಬಿಣದ ವಿಚಾರವನ್ನು ಏಕೆ ತರುತ್ತೀರಿ?

**ಶ್ರೀ ಜಿ.ಎನ್. ಪುಟ್ಟಣ್ಣ** : Agricultual implementsಗೋಸ್ಕರ ಕಬ್ಬಿಣ ಬೇಕಾಗುತ್ತದೆ. ಈ ಬಗ್ಗೆ ಏನು ಕ್ರಮ ತೆಗೆದುಕೊಂಡಿದ್ದೀರಿ?

**ಅಧ್ಯಕ್ಷರು** : ಈ ಪ್ರಶ್ನೆಯನ್ನು ಕೇಳುವುದು ಬೇಡ.

**ಶ್ರೀ.ಎಸ್.ಸುಬ್ಬಯ್ಯನಾಯ್ಡು**: ಒಂದು ಬೆಳೆ ವರ್ಷಕ್ಕೆ ಬೆಳೆಯುವ ಕಡೆ ವರ್ಷಕ್ಕೆ ಎರಡು ಬೆಳೆ ಬೆಳೆಯುವಂತೆ ಮಾಡಿದ್ದೇವೆಂದು (ಸಿ)ಗೆ ಉತ್ತರದಲ್ಲಿ ತಿಳಿಸಿದ್ದಾರೆ. ಹೀಗೆ ಎರಡು ಬೆಳೆ ಬೆಳೆಯಲು ಈ ಮೂರನೇ ಪಂಚವಾರ್ಷಿಕ ಯೋಜನೆಯಲ್ಲಿ ಏನು ವ್ಯವಸ್ಥೆ ಮಾಡಿದ್ದಾರೆ?

**ಶ್ರೀ ಎನ್ ರಾಚಯ್ಯ** : ಎಲ್ಲ ಕಾರ್ಯಕ್ರಮಗಳನ್ನು ಮಾಡಿದ್ದೇವೆ.

**ಶ್ರೀ ಎನ್.ಜಿ. ನರಸಿಂಹೇಗೌಡ** : ಫರ್ಟಿಲೈಜರ್ಸ್‌ನ್ನು ದುರುಪಯೋಗ ಪಡಿಸತಕ್ಕವರ ವಿಚಾರದಲ್ಲಿ ಸರ್ಕಾರದವರೇನು ಕಾರ್ಯಕ್ರಮ ಕೈಗೊಂಡಿದ್ದಾರೆ?

**ಶ್ರೀ ಎನ್. ರಾಚಯ್ಯ** : ಅಂಥ ವಿಚಾರಗಳನ್ನು ಯಾರೇ ಆಗಲಿ ಸರ್ಕಾರದವರ ಗಮನಕ್ಕೆ ತಂದರೆ ಸೂಕ್ತ ಶಿಸ್ತಿನ ಕ್ರಮ ಕೈಗೊಳ್ಳಲಾಗುತ್ತದೆ.

**ಶ್ರೀ ಕೆ.ಪಿ. ರೇವಣ್ಣಸಿದ್ದಪ್ಪ** : ರೈತರಿಗೆ ಎಲ್ಲಾ ತರಹ ಗೊಬ್ಬರಗಳನ್ನೊದಗಿಸಲು ಪ್ರಯತ್ನ ಮಾಡಿದ್ದೇವೆಂದು ಮಂತ್ರಿಗಳು ಹೇಳಿದರು. ರೈತರಿಗೆ ಎಲ್ಲಾ ತರದ ಗೊಬ್ಬರಗಳೇನೂ ಬೇಕಾಗಿಲ್ಲ. ಉತ್ತಮ ಬೇಳೆ ಕೊಡಬಲ್ಲ ಗೊಬ್ಬರ ಸರಬರಾಜು ಮಾಡಲು ಸರ್ಕಾರದವರು ಬೇರೆ ಖಾಸಗಿ ಕಂಪೆನಿಗಳಿಗೆ ಯಾವುದಕ್ಕಾದರೂ ಪರ್ಮಿಷನ್ ಕೊಟ್ಟಿದ್ದಾರೆಯೇ?

**ಶ್ರೀ ಎನ್. ರಾಚಯ್ಯ** : ಗೊಬ್ಬರದಲ್ಲಿ ಅನೇಕ ತರಹ ಗೊಬ್ಬರಗಳಿವೆ. ಉದಾ: ಎತ್ತಿನ ಗೊಬ್ಬರ, ಕುರಿ ಗೊಬ್ಬರ, ಹಸುರೆಲೆ ಗೊಬ್ಬರ, ರಾಸಾಯನಿಕ ಗೊಬ್ಬರ ಹೀಗೆ ನಾನಾ ತರಗಳಿವೆ. ಯಾರ್‍ಯಾರಿಗೆ ಯಾವುದು ಸೂಕ್ತವಾಗಿರುತ್ತೋ ಅದನ್ನು ಒಂದು ನಿಗದಿ ಪ್ರಕಾರ ಸರಬರಾಜು ಮಾಡಲು ವ್ಯವಸ್ಥೆ ಮಾಡಿದ್ದೇವೆ.

**ಶ್ರೀ ಕೆ.ಪಿ.ರೇವಣಸಿದ್ದಪ್ಪ** : ಸೊಸೈಟಿಗಳ ಮೂಲಕವೇ ರೈತರಿಗೆ ಗೊಬ್ಬರಗಳನ್ನೊದಗಿಸಲಾಗುತ್ತದೆಂದು ಮಂತ್ರಿಗಳು ಹೇಳಿದರು. ಇವುಗಳಲ್ಲದೆ ಸರ್ಕಾರದವರ ಈ ಗೊಬ್ಬರಗಳ ಸರಬರಾಯಿಗಾಗಿ ಬೇರೆ ಖಾಸಗೀ ಕಂಪನಿಗಳ್ಯಾವುದಕ್ಕಾದರೂ ಪರ್ಮಿಟ್ ಕೊಟ್ಟಿದ್ದಾರೆಯೇ?

ಶ್ರೀ ಎನ್. ರಾಚಯ್ಯ : ರೈತರಿಗೆ ಅಗತ್ಯವಾದ ಕೆಲವು ಮೆನ್ಯೂರ್ ಮಿಕ್ಸ್‌ಚೆರ್‌ಗಳನ್ನು ಕೆಲವು ಕಂಪೆನಿಗಳು ತಯಾರಿಸುತ್ತಾರೆ ಅಂಥ ಕಂಪೆನಿಗಳು ಇಡೀ ದೇಶದಲ್ಲೆಲ್ಲಾ ಇವೆ. ಅವುಗಳೆಲ್ಲಕ್ಕೂ ಪರ್ಮಿಟ್ ಕೊಟ್ಟಿದ್ದೇವೆ.

ಶ್ರೀ ವೈ. ವೀರಪ್ಪ : ಸರ್ಕಾರದವರು ವ್ಯವಸಾಯಕ್ಕೆ ಆಯಾಯ ಕಾಲಕ್ಕೆ ಸಂಬಂಧಿಸಿದಂತೆ ಒಳ್ಳೆಯ ಉತ್ತಮ ಬೀಜಗಳನ್ನೊದಗಿಸದೆ ಇರುವ ಕಾರಣದಿಂದ ಉತ್ಪನ್ನ ಕಡಿಮೆಯಾಗುತ್ತಿದೆ ಎಂಬ ಅಂಶವನ್ನು ಸರ್ಕಾರದವರು ಒಪ್ಪಿಕೊಳ್ಳುತ್ತಾರೆಯೇ?

ಶ್ರೀ ಎನ್. ರಾಚಯ್ಯ : ಇಲ್ಲ

ಶ್ರೀ ಕೆ. ವೆಂಕಟರೆಡ್ಡಿ : ಈ ಕೆಮಿಕಲ್ ಮೆನ್ಯೂರುಗಳು ನಮ್ಮ ದೇಶಕ್ಕೆಷ್ಟು ಬೇಕೋ ಅಷ್ಟನ್ನು ತರಿಸಿ ಅವನ್ನು ನೇರವಾಗಿ ರೈತರಿಗೆ ಹಂಚದೆ ಅವುಗಳನ್ನು ಮಿಕ್ಸ್ ಮಾಡಿಕೊಡಲು ಸರ್ಕಾರದವರು ಅವುಗಳನ್ನು ಬೇರೆ ಕಂಪೆನಿಗಳಿಗೆ ಕೊಡುತ್ತಿರುವುದರಿಂದ ಈ ಕೆಮಿಕಲ್ ಮೆನ್ಯೂರ್‌ಗಳ ದುರುಪಯೋಗಕ್ಕೆ ಸರ್ಕಾರದವರೇ ಅವಕಾಶ ಮಾಡಿಕೊಟ್ಟ ಹಾಗೆ ಆಗಲ್ಲವೇ?

ಶ್ರೀ ಎನ್ ರಾಚಯ್ಯ : ಹಾಗೆಲ್ಲ ಸಿಕ್ಕಿದ ಕಂಪೆನಿಗಳಿಗೇನು ಕೊಡುತ್ತಿಲ್ಲ. ಇದನ್ನು ಕೂಡ ಸಹಕಾರ ಸಂಘಗಳ ಮೂಲಕವೇ ಕೊಡಲಾಗುತ್ತದೆ. ಆದರೆ ಯಾವ ಕಂಪೆನಿಗಳು ಈ ಮೆನ್ಯೂರ್ ಮಿಕ್ಸ್‌ಚರ್ ಮಾಡತಕ್ಕ ಕೆಲಸದಲ್ಲಿ ತೊಡಗಿರುತ್ತವೆಯೋ ಅಥವಾ ಕಂಪೆನಿಗಳಿಗೆ ಮಾತ್ರ ಅದರಲ್ಲೂ ನಿರ್ದಿಷ್ಟ ಪ್ರಮಾಣದಲ್ಲಿ ಕೊಡುತ್ತಿದ್ದೇವೆ.

## ♦ ರೈತ ಕಾರ್ಮಿಕ ಮಸೂದೆ ಜಾರಿ ಕುರಿತಾದ ನಿಲುವುಗಳು :

**ರೈತರು - ಕಾರ್ಮಿಕರ ಬಗ್ಗೆ ಸದನದಲ್ಲಿ ಮಾತನಾಡುವುದೆಂದರೆ ರಾಚಯ್ಯನವರಿಗೆ ಅತೀವ ಸಂತಸದ ವಿಷಯ. ಅದು ಅವರ ಚಿಂತನೆಯಲ್ಲಿ ವ್ಯಕ್ತವಾಗಿದೆ. 'ರೈತರ ಹಿತವೇ – ದೇಶದ ಹಿತ' ಎಂದು ಹೇಳುವ ರಾಚಯ್ಯನವರು ಮಲ್ಲಾರಾಧ್ಯ ಮತ್ತು ಪಿ.ಜಿ. ಸಿದ್ಧಾಂತಿಯವರ ಜೊತೆಗೆ ನಡೆಸಿದ ವಿಚಾರ ಮಂಥನದ ಚರಿತ್ರೆ ಇದು. ಮಟ್ಟಲು ಅವಕಾಶವಿಲ್ಲದ ಸ್ಥಿತಿಗತಿಗಳನ್ನು ಇಲ್ಲಿ ಚರ್ಚಿಸಲಾಗಿದೆ. ಆ ಸಮಸ್ಯೆಗೆ ಪರಿಹಾರವಾಗಿ ಇನ್ನೂ ಹೆಚ್ಚಿನ ಬಾವಿ ತೊಡಿಸುವ ಆ ವರ್ಗದವರನ್ನೆ ಇಲಾಖೆಗೆ ನಿಯಮಿಸಿಕೊಳ್ಳುವ ಬಗೆಗಿನ ಮಾಹಿತಿ ಪ್ರಧಾನ ಸಂವಾದವಿದು.**

ಶ್ರೀ ಎನ್. ರಾಚಯ್ಯ (ವ್ಯವಸಾಯ ಶಾಖೆಯ ಮಂತ್ರಿಗಳು) : ಸ್ವಾಮಿ ನಮ್ಮ ವಿರೋಧಪಕ್ಷದ ನಾಯಕರು ಮತ್ತು ಇತರ ಸದಸ್ಯರು ಈ ಮಸೂದೆಯನ್ನು ಸ್ವಾಗತಿಸಿದ್ದಾರೆ. ಅದಕ್ಕಾಗಿ ಅವರೆಲ್ಲರಿಗೂ ನನ್ನ ಅಭಿನಂದನೆಗಳು. ಈ ಮಸೂದೆ ಮೇಲೆ ಚರ್ಚೆ ಮಾಡುತ್ತಾ ಅನೇಕ ಒಳ್ಳೇ ಸಲಹೆಗಳನ್ನು ಅವರು ಕೊಟ್ಟಿದ್ದಾರೆ. ಈ ಸಲಹೆಗಳನ್ನು ಸರಕಾರ ಖಂಡಿತವಾಗಿಯೂ ಸಹಾನುಭೂತಿಯಿಂದ ಪರಿಶೀಲನೆ ಮಾಡಿ ಯಾವ ಅನುಮಾನಕ್ಕೆ ಅವಕಾಶವಿಲ್ಲದ ಹಾಗೆ ಸೂಕ್ತ ಕ್ರಮ ತೆಗೆದುಕೊಳ್ಳಲಾಗುವುದು. ಶ್ರೀಮಾನ್ ಮಲ್ಲಾರಾಧ್ಯರವರು ನನ್ನ ವಿಚಾರದಲ್ಲಿ ನಾನೊಬ್ಬ ಒಳ್ಳೆ ಕಟ್ಟಾಮಂತ್ರಿಯೆಂದು ಅಭಿಮಾನದಿಂದ ಮಾತನಾಡಿದ್ದಾರೆ. ವೈಯಕ್ತಿಕವಾಗಿ ನಾನು ಅವರಿಗೆ ಅಭಾರಿಯಾಗಿದ್ದೇನೆ. ನಮ್ಮ ದೇಶದಲ್ಲಿರುವ ಕಾರ್ಮಿಕರ ಬಡ ರೈತರ ಸಮಸ್ಯೆಗಳನ್ನು ಬಗೆಹರಿಸುವುದಕ್ಕೆ ಕಟ್ಟಾಮಂತ್ರಿಯೇ ಆಗಿರಬೇಕಾಗುತ್ತದೆ. ಇಲ್ಲದಿದ್ದರೆ ಅದು ಸಾಧ್ಯವಿಲ್ಲ. ಆದ್ದರಿಂದ ಸಾಮಾನ್ಯವಾಗಿ ಹಾಗೆ ಇರಬೇಕಾದುದು ನಮ್ಮ ಕರ್ತವ್ಯ. ಶ್ರೀಮಾನ್ ಮುಕ್ಕಣ್ಣನವರು ಪ್ರಾಸಂಗಿಕವಾಗಿ ಒಂದೆರಡು ವಿಷಯ ಮಾತನಾಡಿದ್ದಾರೆ. 'Yes there are some fools who cannot fallow what the minsters and

leaders say. Naturally they must say like that. When fools say we ignore it'ಇದೇ ಸಂದರ್ಭದಲ್ಲಿ.

ವಿರೋಧಪಕ್ಷದ ನಾಯಕರು ಈ ಮಸೂದೆಯನ್ನು ಸ್ವಾಗತಿಸಿದ್ದಾರೆ. ಈ ಮಸೂದೆಯನ್ನು ತರುವುದಕ್ಕೆ ಬಹಳ ನಿಧಾನವಾಗಿದೆಯೆಂದು ಕೆಲವರು ಹೇಳಿದ್ದಾರೆ. ಜಾಗ್ರತೆ ಏಕೆ ತರಲಿಲ್ಲ ಎಂದು ಕೇಳಿದ್ದಾರೆ. ಅದಕ್ಕೆ ಕಾರಣವಿದೆ. ಹೊಸ ಮೈಸೂರು ರಚನೆಯ ಮೇಲೆ ಅನುಭವವುಳ್ಳತಕ್ಕ ಸಿಬ್ಬಂದಿ ಸಾಕಷ್ಟು ಇರಲಿಲ್ಲ. ಅವರಿಗೆ ಮೊದಲು ತರಬೇತಿ ಕೊಡಿಸಬೇಕಾಗಿತ್ತು. ಜನರಲ್ಲಿ ಸಹ ಒಂದು ವಿಶ್ವಾಸದ ನಂಬಿಕೆಯ ವಾತಾವರಣ ಸೃಷ್ಟಿ ಮಾಡಬೇಕಾಗಿತ್ತು. ಇದನ್ನು ಕೆಲವು ಕಡೆ ಪ್ರಾಯೋಗಿಕವಾಗಿ ಮಾಡಲಾಯಿತು. ಇದನ್ನೆಲ್ಲ ಪರಿಶೀಲಿಸಿ ಒಂದು ನಿರ್ದಿಷ್ಟ ತೀರ್ಮಾನಕ್ಕೆ ಬಂದು ಈ ಮಸೂದೆಯನ್ನು ತಮ್ಮ ಮುಂದೆ ಈಗ ತಂದಿದ್ದೇವೆ. ಇದಕ್ಕೆ ಸಕಲಾವಕಾಶ ಬೇಕಾಯಿತು. ಆದ್ದರಿಂದ ತಡವಾಯಿತೆಂದು ಆಕ್ಷೇಪಣೆ ಮಾಡುವುದರಲ್ಲಿ ಯಾವ ಅರ್ಥವಿಲ್ಲ ಇದರಲ್ಲಿ ಯಾವ ಅರ್ಥವಿಲ್ಲವೆಂದು ಈ ಸಂದರ್ಭದಲ್ಲಿ ಹೇಳುತ್ತೇನೆ. ವಿರೋಧಪಕ್ಷದ ನಾಯಕರು ಅಂಕಿಅಂಶಗಳನ್ನು ಹೇಳಿದ್ದಾರೆ. ಅಷ್ಟು ಪ್ರಮಾಣದಲ್ಲಿ ಹಣ ಒದಗಿಸಿಲ್ಲವೆಂದು ಆಕ್ಷೇಪಣೆ ಮಾಡಿದ್ದಾರೆ. ಹೇಳಿದ್ದಾರೆ. ಅಷ್ಟು ಪ್ರಮಾಣದಲ್ಲಿ ಹಣ ಒದಗಿಸಿಲ್ಲವೆಂದು ಆಕ್ಷೇಪಣೆ ಮಾಡಿದ್ದಾರೆ. ಅದರಲ್ಲಿ ನಿಜವಾಗಿಯೂ ಅರ್ಥವಿದೆ. There is no sense of ur gency. First thing should come first ಆದರೆ ಹಣ ಒದಗಿಸುವ ವಿಚಾರದಲ್ಲಿ ಯಾರೂ ಸಂದೇಹ ಪಡಬೇಕಾಗಿಲ್ಲ. ಪ್ಲಾನಿಲ್ಲದೆ ಹಣ ಒದಗಿಸುವುದಕ್ಕಾಗುವುದಿಲ್ಲ. ಹೆಚ್ಚು ಹಣ ಒದಗಿಸುವುದಕ್ಕೆ ಸರಕಾರಕ್ಕೆ ಆಸಕ್ತಿಯಿದೆ. ಸಾಯಲ್ ಕನ್‌ಸರ್‌ವೇಷನ್ ಬಗ್ಗೆ ಹಣ ಖರ್ಚು ಆಗಿದೆ. ಹಳೇ ಮೈಸೂರಿನಲ್ಲಿ ಈ ಕಾನೂನು ಮೊದಲು ಇರಲಿಲ್ಲ. ತರಬೇತಿ ಹೊಂದಿದ ಸಿಬ್ಬಂದಿ ಎಲ್ಲಾ ಕಡೆ ನೇಮಕ ಮಾಡುವುದು ಕಷ್ಟ. ಆದ್ದರಿಂದ ಧಾರವಾಡ ಮತ್ತು ಇತರ ಪ್ರದೇಶಗಳಲ್ಲಿ ಟ್ರೈನಿಂಗ್ ಸೆಂಟರ್ಸ್ ಪ್ರಾರಂಭಿಸಿ ತರಬೇತಿ ಹೊಂದಿದವರನ್ನು ತಯಾರು ಮಾಡುತ್ತಿದ್ದೇನೆ. ದೊಡ್ಡ ದೊಡ್ಡ ಅಧಿಕಾರಿಗಳು ತರಬೇತಿಗಳಿಗೆ ಹೋಗಿ ತರಬೇತಿ ಹೊಂದಿ ಬಂದಿದ್ದಾರೆ. ಅದಕ್ಕೆ ಕ್ರಮ ತೆಗೆದುಕೊಂಡಿದ್ದೇವೆ. ತರಬೇತಿ ಹೊಂದಿದ ಸಿಬ್ಬಂದಿ ಹೆಚ್ಚು ಹೆಚ್ಚಾಗಿ ದೊರೆತ ಹಾಗೆ ಸಾಕಷ್ಟು ಹಣ ಇದಕ್ಕಾಗಿ ಒದಗಿಸಲಾಗುವುದು. ಹಣ ಒದಗಿಸಲು

ಸರಕಾರಕ್ಕೆ ತೊಂದರೆ ಏನೂ ಇಲ್ಲ. ಯಾಕೆಂದರೆ ವ್ಯವಸಾಯ ಮಂತ್ರಿಗಳ ಸಮ್ಮೇಳನವನ್ನು ಇದಕ್ಕಾಗಿ ಎಷ್ಟು ಹಣ ಬೇಕೋ ಅಷ್ಟನ್ನು ಕೇಂದ್ರ ಸರಕಾರ ಒದಗಿಸುತ್ತದೆ ಎಂದು ಹೇಳಿದ್ದಾರೆ. ಆದುದರಿಂದ ಎಲ್ಲ ಸೌಕರ್ಯ ಒದಗಿಸಿಕೊಡುತ್ತೇವೆ. ತಕ್ಷಣ ಕ್ರಮ ತೆಗೆದುಕೊಳ್ಳಲು ಅನುಕೂಲವಾಗುವುದಕ್ಕೆ ಬೋರ್ಡಿಗೆ ಅಧಿಕಾರ ವಹಿಸಿಕೊಡಲಾಗಿದೆ. ಬೋರ್ಡಿಗೆ ಈ ರೀತಿ ಅಧಿಕಾರವಿರಬೇಕಾದುದು ಅಗತ್ಯ. ಇಲ್ಲದಿದ್ದರೆ ಪ್ರಯೋಜನವಾಗುವುದಿಲ್ಲ. ಕ್ರಮ ತೆಗೆದುಕೊಳ್ಳುವುದು ತಡವಾದರೆ ರೈತರಿಗೆ ತೊಂದರೆಯಾಗುತ್ತದೆ. ರೈತರಿಗೆ ಅನ್ಯಾಯವಾಗುತ್ತದೆ. ರೈತರ ವಿಚಾರದಲ್ಲಿ ಇದು ಬಹು ಮುಖ್ಯವಾದುದು. ರೈಟ್ ಆಫ್ ಮಾಡುವ ವಿಚಾರದಲ್ಲಿ ಸೂಕ್ತ ಕ್ರಮ ತೆಗೆದುಕೊಂಡಿದೆ ಎಂಬುದನ್ನು ಅವರ ಗಮನಕ್ಕೆ ತರುತ್ತೇವೆ.

ಅನಾವಶ್ಯಕವಾಗಿ, ಕೆಲವರು ಸರ್ಕಾರಕ್ಕೆ ಹಣ ಕೊಡತಕ್ಕ ಚೈತನ್ಯವಿದ್ದರೂ, ಅಲ್ಲ ಸಲ್ಲದ ಕಾರಣಗಳನ್ನು ನೆಪ ಮಾಡಿಕೊಂಡು ಹಣವನ್ನು ರೈಟ್ ಆಫ್ ಮಾಡಿ ಎಂದು ಕೇಳುವುದಕ್ಕೆ ಇದರಿಂದ ಒಂದು ಅವಕಾಶವಾಗಬಹುದೇನೋ ಎಂಬ ಶಂಕೆಯಿಂದ ಅದನ್ನಿಲ್ಲಿ ನಮೂದು ಮಾಡಿಲ್ಲ. ಕಾನೂನು ದೃಷ್ಟಿಯಲ್ಲಿ ಜನರಿಗೆ ಏನಾದರೂ ಅಂಥ ತೊಂದರೆಗಳಾಗಿದ್ದರೆ ಅಂಥ ಸಂದರ್ಭದಲ್ಲಿ ಹಾಗೆ ತೊಂದರೆಗೀಡಾದವರಿಗೊಂದು ಅನುಕೂಲ ಮಾಡಲು ಸರ್ಕಾರದವರಿಗೆ ಈ ಒಂದು ಹೆಚ್ಚಿನ ಅಧಿಕಾರವಿರಲಿ, ಇಂಥ ಒಂದು ಅಧಿಕಾರ ಸರ್ಕಾರದವರ ಕೈಲಿದ್ದರೆ ತೊಂದರೆಗೊಳಗಾದ ಜನರಿಗೆ ರಕ್ಷಣೆ ಕೊಡಲು ಅವಕಾಶವಾಗುತ್ತದಲ್ಲ ಎನ್ನತಕ್ಕ ಉದ್ದೇಶದಿಂದ ಈ ಪ್ರಾವಿಜನ್ನನ್ನು ಇಲ್ಲಿ ಸೇರಿಸಲಾಗಿದೆ. ರೈತರ ಹಿತವೇ ದೇಶದ ಹಿತವೆಂಬುದು ಸರ್ಕಾರದವರೂ ಸಹ ಅಕ್ಷರಶಃ ಅರಿತಿದ್ದಾರೆ. ಅದರಲ್ಲೂ ಇಂದಿನ ಸರಕಾರಕ್ಕೆ ರೈತ ಮತ್ತು ಕಾರ್ಮಿಕರ ಹಿತರಕ್ಷಣೆ ಬಗ್ಗೆ ಒಂದು ಹೆಚ್ಚಿನ ಆಕಾಂಕ್ಷೆ ಇರುವಾಗ ಈ ವಿಚಾರದಲ್ಲಿ ಯಾವ ಮಾನ್ಯ ಸದಸ್ಯರಿಗೂ ಯಾವ ಅನುಮಾನವೂ ಇರಬೇಕಾಗಿಲ್ಲವೆಂಬ ಅಂಶವನ್ನು ತಿಳಿಸಿದ ನಂತರ ಎಲ್ಲ ಮಾನ್ಯ ಸದಸ್ಯರೂ ಈ ಮಸೂದೆಯನ್ನು ಒಪ್ಪಿಕೊಳ್ಳುತ್ತಾರೆಂದು ನಾನು ಭಾವಿಸಿದ್ದೇನೆ.

ಇನ್ನು ನಮ್ಮ ಅವಕಾಶವಾಗುತ್ತದಲ್ಲ ಎನ್ನತಕ್ಕ ಉದ್ದೇಶದಿಂದ ಈ ಪ್ರಾವಿಜನ್ನನ್ನು ಇಲ್ಲಿ ಸೇರಿಸಲಾಗಿದೆ. ರೈತರ ಹಿತವೇ – ದೇಶದ ಹಿತವೆಂಬುದು ಸರ್ಕಾರದವರೂ

ಸಹ ಅಕ್ಷರಶಃ ಅರಿತಿದ್ದಾರೆ. ಅದರಲ್ಲೂ ಇಂದಿನ ಸರ್ಕಾರಕ್ಕೆ ರೈತ ಮತ್ತು ಕಾರ್ಮಿಕರ ಹಿತರಕ್ಷಣೆ ಬಗ್ಗೆ ಒಂದು ಹೆಚ್ಚಿನ ಆಕಾಂಕ್ಷೆ ಇರುವಾಗ ಈ ವಿಚಾರದಲ್ಲಿ ಯಾವ ಮಾನ್ಯ ಸದಸ್ಯರಿಗೂ ಯಾವ ಅನುಮಾನವೂ ಇರಬೇಕಾಗಿಲ್ಲವೆಂಬ ಅಂಶವನ್ನು ತಿಳಿಸಿದ ನಂತರ ಎಲ್ಲ ಮಾನ್ಯ ಸದಸ್ಯರೂ ಈ ಮಸೂದೆಯನ್ನು ಒಪ್ಪಿಕೊಳ್ಳುತ್ತಾರೆಂದು ನಾನು ಭಾವಿಸಿದ್ದೇನೆ.

ಇನ್ನು ಇರಿಗೇಷನ್ ವಿಚಾರದಲ್ಲಿ ಸರ್ಕಾರದವರು ಹೆಚ್ಚಿನ ಹಣವನ್ನು ಖರ್ಚು ಮಾಡಿಲ್ಲವೆಂದು ಕೆಲವರು ಹೇಳಿದರು. ಆದರೆ ಈ ವಿಚಾರದಲ್ಲಿ ನಾವು ನಮ್ಮ ಶಕ್ತಿಗೆ ಮೀರಿ ಸಹಾಯ ಮಾಡಿದ್ದೇವೆ. ಆದರೆ ಶ್ರೀ ಸಿ.ಕೆ. ರಾಜಯ್ಯಶೆಟ್ಟರವರು ಕಮ್ಯುನಿಕೇಷನ್ ಬಗ್ಗೆ ಸರ್ಕಾರದವರೇನೂ ಪ್ರಯತ್ನಪಟ್ಟಿಲ್ಲ ಎಷ್ಟರಮಟ್ಟಿಗೆ ಹಣ ಒದಗಿಸಲಾಗಿತ್ತೆಂಬುದರ ವಿಚಾರದಲ್ಲಿ ಅವರಿಗೆ ನಾನು ಅಂಕಿ ಅಂಶಗಳನ್ನೊದಗಿಸಿದರೆ ಆಗ ಈ ವಿಚಾರ ಅವರಿಗೆ ಗೊತ್ತಾಗುತ್ತೆ. ಅವರು ಹೇಳಿದ್ದು ಸರಿಯಲ್ಲ ಎಂದು.

ಇನ್ನು ನಮ್ಮ ಹಳೇ ಮೈಸೂರು ಪ್ರಾಂತ್ಯದಲ್ಲೂ ಹಿಂದಿನಿಂದಲೂ ನಮ್ಮ ರೈತರು ಈ ಬಂಡಿಂಗ್ ಹಾಕುವುದನ್ನು ಮಾಡುತ್ತಿದ್ದಾರೆ. ಆದರೆ ಅದು ಈಗಿನ ವಿಜ್ಞಾನಯುಗಕ್ಕೆ ಆಧುನಿಕ ರೀತಿಯಲ್ಲಿ ಸರಿಯಾಗಿಲ್ಲದೆ ಇರಬಹುದು. ಆದರೆ ಈ ಕಾರ್ಯವನ್ನು ಒಂದು ಶಾಸ್ತ್ರೋಕ್ತ ರೀತಿಯಲ್ಲಿ ಸೈಂಟಿಫಿಕ್ ಆಗಿ ಮಾಡಿದರೆ ಇದರಿಂದ ರೈತನ ಉತ್ಪತ್ತಿ ಮತ್ತಷ್ಟು ಹೆಚ್ಚಾಗಬಹುದೆಂದು ನಾವು ಈಗ ಅದನ್ನು ಇಲ್ಲಿಯೂ ಇದನ್ನು ಕಾರ್ಯರೂಪಕ್ಕೆ ತರಲು ಪ್ರಯತ್ನ ಮಾಡಿದ್ದೇವೆ. ಮಾನ್ಯ ಸದಸ್ಯರುಗಳು ಈ ಮಸೂದೆಯಲ್ಲಿ 26ನೇ ಕಾಲಂ ನೋಡಿದರೆ ಅದು ಎಲ್ಲರಿಗೂ ಚೆನ್ನಾಗಿ ವೇದ್ಯವಾಗುತ್ತದೆ. ಈ ಯೋಜನೆಯಲ್ಲಿ ನಾವು ಸಿದ್ಧಗೊಳಿಸಿದ ನಂತರ ನೂರಕ್ಕೆ 67 ಜನಗಳಿಗೆ ಕಡಿಮೆಯಿಲ್ಲದೆ ಈ ಯೋಜನೆಗೆ ಅವರು ಬೆಂಬಲ ಕೊಟ್ಟರೆ ಅಪೇಕ್ಷೆ ಪಟ್ಟರೆ ಆಗ ಈ ಯೋಜನೆ ಈ ಬೋರ್ಡ್ ಮುಂದೆ ಬರುತ್ತೆ. ಆ ನಂತರ ಇದಕ್ಕೆ ಅವರ ಮಂಜೂರಾತಿ ದೊರೆಯುತ್ತೆ. ಹಾಗೆ ಮಂಜೂರಾತಿ ದೊರೆತ ಮೇಲೂ ಒಬ್ಬ ರೈತ ತಾನೇ ತನ್ನ ಸ್ವಂತ ಖರ್ಚಿನಿಂದ ಈ ಬಂಡಿಂಗ್ ಕೆಲಸ ಮಾಡಿಕೊಳ್ಳುತ್ತೇನೆಂದು ಹೇಳುವುದಾದರೆ ಆಗಲೂ ಕೂಡ ಈ ಕಾನೂನಿಂದ ಅಂಥ ರೈತನಿಗೆ ಏನೂ ತೊಂದರೆಯಾಗುವುದಿಲ್ಲ. ಇದರಿಂದ ಏನೊಂದು

ಅನುಕೂಲವಿದೆಯೆಂದರೆ ಕೆಲವರಿಗೆ ಕೆಲಸ ಮಾಡಿಕೊಳ್ಳಲು ಅವಕಾಶವಾಗದೆ ಇರುವುದು ಅಂಥವರ ಬಗ್ಗೆಯೂ ಮತ್ತು ಕೆಲವರಿಗೆ ಸರಾಗವಾಗಿ ಕೂಲಿ ಕೆಲಸ ಒದಗಿಸಲು ಇದರಿಂದ ಒಂದು ಅನುಕೂಲ – ಅವಕಾಶ ಒದಗುತ್ತದೆಂಬ ಉದ್ದೇಶದಿಂದಲೂ ಈ ಸ್ಕೀಂನ್ನು ತಯಾರಿಸಲಾಗಿದೆ. ಮೇಲಾಗಿ ಈ ದಿವಸ ರೈತ ಎಕರೆಯಲ್ಲಿ ಕೇವಲ 2–3 ಪಲ್ಲ ಬೆಳೆಯುವ ಕಡೆ 4–6 ಪಲ್ಲ ದವಸವನ್ನು ಹೆಚ್ಚಾಗಿ ಬೆಳೆದುಕೊಳ್ಳಲು ಒಂದು ಅವಕಾಶವಾಗುತ್ತದೆ. ಬಡವರಿಗೂ ಇದರಿಂದ ತುಂಬಾ ಸಹಾಯವಾಗುತ್ತದೆ. ಕೆಲಸವಿಲ್ಲದೆ ಇರತಕ್ಕವರಿಗೆ ಅವರ ಸ್ವಂತ ಖರ್ಚಿನಿಂದ ಈ ಕಾಂಟೂರ್ ಬಂಡಿಂಗ್ ಮಾಡಿಕೊಳ್ಳಲು ಸಾಧ್ಯವಿರುವುದಿಲ್ಲ. ಅವರು ತಮ್ಮ ಜಮೀನಿನ ಉತ್ಪನ್ನವನ್ನು ಅವರ ಸ್ವಂತ ಪ್ರಯತ್ನದಿಂದ ಹೆಚ್ಚಿಸಿಕೊಳ್ಳುವುದಕ್ಕೂ ಸಾಧ್ಯವಿಲ್ಲ. ಅಂಥವರಿಗೆ ಇದರಿಂದ ಬಹಳ ಅನುಕೂಲವಾಗುತ್ತದೆ. ಆದರೆ ಯಾರೋ ಕೆಲವರು – ಇದರ ಅಗತ್ಯವಿಲ್ಲದೆ ಇರತಕ್ಕವರು ಇದನ್ನು ವಿರೋಧಮಾಡಬಹುದೇ ವಿನಃ ರೈತನಾದವನು ಎಂದಿಗೂ ವಿರೋಧಿಸಲಾರ. ಬಹುಭಾಗದ ಜನರಿಗೆ ಇದರಿಂದ ಅನುಕೂಲ ಲಭಿಸುವುದರಿಂದ ಇದಕ್ಕೆ ಯಾರೂ ಅಡ್ಡಿ ಬರಲಾರರು ಹಾಗೂ ಒಂದು ವೇಳೆ ಈ ಯೋಜನೆಯಿಂದ ರೈತನಿಗೇನಾದರೂ ಅನುಕೂಲವಾಗುವುದಾದರೆ ಅಂಥ ರೈತನಿಗೆ ಸರ್ಕಾರ ರಿಯಾಯಿತಿ ತೋರಿಸಲು ಸದಾ ಸಿದ್ಧವಿರುತ್ತದೆ. ಉದ್ದೇಶವಾಗಿ ಜನಗಳಿಗೊಂದು ತೊಂದರೆಯಾಗಲೆಂದು ಯಾವ ಅಧಿಕಾರಿಯೂ ಪ್ರಯತ್ನಪಡಲಾರನು. ನಿಜವಾಗಿಯೂ ರೈತರ ಏಳಿಗೆಗಾಗಿ ಶ್ರಮಿಸತಕ್ಕಂಥ ಸತ್ಯವಂತರೂ ನೀತಿವಂತರೂ ಆದಂಥ ಅಧಿಕಾರಿಗಳು ನಮ್ಮಲ್ಲೂ ಅನೇಕರಿದ್ದಾರೆ. ಆದ್ದರಿಂದ ಈ ವಿಚಾರದಲ್ಲಿ ಕಿರುಕುಳ ಕೊಡುತ್ತಾರೆಂಬ ಅಂಶವನ್ನು ನಾನು ಒಪ್ಪಿಕೊಳ್ಳುವುದಕ್ಕಾಗುವುದಿಲ್ಲ. ಇನ್ನು ಕೆಲವರು ಜಿಲ್ಲಾಧಿಕಾರಿಗಳಿಗೇಕೆ ಈ ಸಮಿತಿಯ ಅಧ್ಯಕ್ಷ ಪದವಿ ಅಧಿಕಾರ ಕೊಟ್ಟಿದ್ದೀರೆಂದು ಕೇಳಿದ್ದಾರೆ. ಈ ದಿವಸ ನಮ್ಮ ರಾಜ್ಯದಲ್ಲಿ ಎಲ್ಲಾ ಕಾನೂನುಗಳ ಪರಿಕ್ರಮ ಹಾಗೂ ದೇಶದಲ್ಲಿ ಜನರ ನಡವಳಿಕೆ ಇತ್ಯಾದಿ ಪ್ರತಿಯೊಂದು ವಿಚಾರದಲ್ಲೂ ಜಿಲ್ಲಾಧಿಕಾರಿಗಳಿಗೆ ಒಂದು ಹೆಚ್ಚಿನ ಪರಿಶ್ರಮವಿರುತ್ತೆ. ಆ ಒಂದು ಉದ್ದೇಶದಿಂದ ಈಗ ಅವರಿಗೆ ಈ ಅಧಿಕಾರ ಕೊಟ್ಟಿದ್ದೇವೆ. ಆದರೆ ಅವರಿಗೆ ಈ ವಿಚಾರದಲ್ಲಿ ಅಷ್ಟೇನೂ ಹೆಚ್ಚಿನ ಕೆಲಸವಿರುವುದಿಲ್ಲ. ಈಗಾಗಲೇ ಆಂಧ್ರಪ್ರದೇಶದಲ್ಲಿ ಜಿಲ್ಲಾ ಅಡಿಷನಲ್ ಮ್ಯಾಜಿಸ್ಟ್ರೇಟ್

ಎಂಬುದಾಗಿ ಅಲ್ಲಿ ಒಬ್ಬ ಪ್ರತ್ಯೇಕ ಡೆಪ್ಯುಟಿ ಕಮೀಷನರನ್ನೇ ನೇಮಕ ಮಾಡಿದ್ದಾರೆ. ಆದರೆ ನಾವಿನ್ನೂ ಇಲ್ಲಿ ಪ್ರಾಯೋಗಿಕವಾಗಿ ಇದನ್ನು ನಡೆಸುತ್ತಿದ್ದೇವೆ. ಮುಂದೆ ಎಲ್ಲ ಕಡೆಗಳಿಗೂ ಈ ಯೋಜನೆಯನ್ನು ಹರಡುವ ಕಾಲಕ್ಕೆ ಇಲ್ಲಿಯೂ ಇದಕ್ಕೆ ಒಬ್ಬ ಪ್ರತ್ಯೇಕ ಅಧಿಕಾರಿಗಳನ್ನಿಡಬೇಕೆಂಬುವುದೇ ನಮ್ಮ ಮುಖ್ಯ ಉದ್ದೇಶ. ಮುಂದೆ ಕಾನೂನಿನ ಅಡ್ಡಿ ಅಡಚಣೆಗಳೇನಾದರೂ ಬರಬಹುದೇನೋ ಎಂಬ ಶಂಕೆಯಿಂದ ನಾವೀಗ ಜಿಲ್ಲಾ ಮಟ್ಟದಲ್ಲಿ ಕೋ – ಆರ್ಡಿನೇಷನ್ ಸಮಿತಿಯಂತೆ ಒಂದು ಸಮಿತಿಯನ್ನೂ ಸಹ ಮಾಡಿದ್ದೇವೆ. ಆದ್ದರಿಂದ ಸಧ್ಯಕ್ಕೆ ಜಿಲ್ಲಾಧಿಕಾರಿಗಳೇ ಇದಕ್ಕೆ ಅಧ್ಯಕ್ಷರಾಗಿದ್ದರೆ ಸಾಕೆಂತಲೂ ಸೂಕ್ತವಾಗಿರುತ್ತೆಂತಲೂ ಭಾವಿಸಿದ್ದೇವೆ.

ಇನ್ನು ಈ ಅಡಿಷನಲ್ ಸಬ್ ಡಿವಿಜನ್ ಅಧಿಕಾರಿಗಳ ಬಗ್ಗೆ ಇವರು ಅನಾವಶ್ಯಕ ಅಂತ ಹೇಳಿದ್ದಾರೆ. ಈ ಬಗ್ಗೆ ಈಗಾಗಲೇ ಶ್ರೀ ಬೋರಯ್ಯನವರೊಂದು ತಿದ್ದುಪಡಿ ಕಳುಹಿಸಿದ್ದಾರೆ. ಅದನ್ನು ನಾನು ಒಪ್ಪಿಕೊಳ್ಳತಕ್ಕವನಿದ್ದೇನೆ.

ಇನ್ನು ಕ್ಲಾಸ್ 14(3) ವಿಚಾರದಲ್ಲಿ ವಿರೋಧ ಪಕ್ಷದ ನಾಯಕರು ಕೆಲವು ವಿಚಾರಗಳನ್ನು ವ್ಯಕ್ತಪಡಿಸಿದ್ದಾರೆ. ಆದರೆ ಅದಕ್ಕೆಲ್ಲ ಅವಕಾಶವಿಲ್ಲ. ಇದರಲ್ಲಿ ಅಡಗಿರತಕ್ಕ ಮುಖ್ಯ ಉದ್ದೇಶವೆಂದರೆ ಪ್ರಕೃತಿ ವಿಕೋಪಕ್ಕೆ ಒಳಗಾಗಿ ದೊಡ್ಡ ಮಳೆ ಬಂದಾಗ ಹೆಚ್ಚಿನ ಪ್ರವಾಹದ ಅನಾಹುತಕ್ಕೆ ಒಳ್ಳೆಯ ಜಮೀನುಗಳು ಈಡಾಗಿ – ಅವು ಕೊಚ್ಚಿ ಹೋಗದಂತೆ ಒಂದು ಬಂದೋಬಸ್ತು ಬಿಡಬೇಕೆಂಬುದೇ ಸರ್ಕಾರದವರ ಮುಖ್ಯೋದ್ದೇಶ.

ಇನ್ನೂ ಬ್ಲಾಕ್ ಕಾಟನ್ ಸಾಯಿಲ್ ಬಗ್ಗೆ ಏನು ಮಾಡಬೇಕಾಗಿರುತ್ತೆಂಬ ವಿಚಾರದಲ್ಲಿ ನಾವು ರಿಸರ್ಚ್ ಕೇಂದ್ರಗಳನ್ನು ತೆರೆದಿದ್ದೇವೆ. ಅವು ಕೆಲಸ ಮಾಡುತ್ತಿವೆ. ಈ ಕೇಂದ್ರಗಳಿನ್ನೂ ದೇಶದಲ್ಲಿ ಹೆಚ್ಚು ಹೆಚ್ಚಾಗಿ ತೆರೆಯಬೇಕೆಂದು ಮಾಡಿದ್ದೇವೆ. ಇದರಲ್ಲಿ ರೈತರಿಗೆ ತುಂಬಾ ಅನುಕೂಲವಾಗುತ್ತದೆಂಬ ಘನೋದ್ದೇಶದಿಂದ ಈ ಮಸೂದೆಯನ್ನು ತಯಾರಿಸಲಾಗಿದೆ.

ತಮಗೆಲ್ಲಾ ಗೊತ್ತಿರುವ ಹಾಗೆ ಸಂಶೋಧನೆಯ ಕೆಲಸದಲ್ಲಿ ಹೆಚ್ಚು ಪ್ರಗತಿಯನ್ನು ಹೊಂದಿದ್ದೇನೆ. ವಿದ್ಯಾವಂತರು ವ್ಯವಸಾಯದ ಕೆಲಸಕ್ಕೆ ಹೆಚ್ಚು ಹೆಚ್ಚಾಗಿ ಮುಂದೆ ಬಂದರೆ ಯಶಸ್ಸು ಹೆಚ್ಚಾಗುತ್ತದೆ. Black Cotton Soil ಎಲ್ಲೆಲ್ಲಿ ಇದೆಯೋ, ಎಲ್ಲಿ ಕಲ್ಲು ಇಲ್ಲದೆ ಇರುವ ಭೂಮಿ ಇದೆಯೋ ಅಂಥ

ಕಡೆ ಪ್ರಯೋಗ ಮಾಡುವುದು ಕಷ್ಟ ಎಂದು ಹೇಳುತ್ತಾರೆ. ಈ ಭಾಗಗಳಲ್ಲಿ dry cum wet cultivation ಮಾಡುವುದಕ್ಕೆ ಸಾಧ್ಯವಿದೆಯೇ ಎನ್ನುವ ವಿಚಾರದಲ್ಲಿ ಈಗಾಗಲೇ ಪ್ರಯೋಗ ಮಾಡುತ್ತಿದ್ದೇವೆ. ಈ ಪ್ರಯೋಗವು ಯಶಸ್ವಿಯಾಗುತ್ತದೆನ್ನುವ ನಂಬಿಕೆ ಇದೆ. ಈ ಪರಿಶೋಧನೆಯ ಫಲಿತಾಂಶಗಳು ನಮಗೆ ಅನುಕೂಲವಾಗಿ ನಮ್ಮ ದೇಶದ ಆಹಾರ ಉತ್ಪಾದನೆಯು ಹೆಚ್ಚಾಗಲು ಸಾಧ್ಯವಾಗುತ್ತದೆನ್ನುವ ನಂಬಿಕೆ ಸರ್ಕಾರಕ್ಕೆ ಇದೆ. ಈ ಪ್ರಯೋಗಗಳು ಯಶಸ್ವಿಯಾದಾಗ ಅದನ್ನು ಜಾರಿಯಲ್ಲಿ ತರುವುದಕ್ಕೆ ಕಾನೂನು ಅಡ್ಡಿಯಾಗಬಾರದು. ಸರ್ವೇಸಾಮಾನ್ಯವಾಗಿರಬೇಕು. ಉತ್ತರ ಕರ್ನಾಟಕದ ಕೆಲವು ಕಡೆ black cotton soil ಇರುವ ಕಡೆ ಪ್ರಯೋಗ ಮಾಡಬಾರದೆಂದು ಸರ್ಕಾರದಿಂದ ಆದೇಶವನ್ನು ಕೊಟ್ಟಿದ್ದೇವೆ. ಎಲ್ಲೆಲ್ಲಿ ಈ ಕಾನೂನನ್ನು ಜಾರಿಯಲ್ಲಿ ಕೊಡುವುದು ಅಗತ್ಯವಿಲ್ಲವೋ, ಎಲ್ಲೆಲ್ಲಿ ಇದರಿಂದ ರೈತರಿಗೆ ಅನುಕೂಲ ಆಗುವುದಿಲ್ಲವೋ ಅಂಥ ಕಡೆಗೆ ಇದು ಅನ್ವಯಿಸುವುದು ಬೇಡವೆಂದು ಆಜ್ಞೆ ಮಾಡುವ ಅಧಿಕಾರ ಸರ್ಕಾರಕ್ಕೆ ಇದೆ.

ಸಬ್ಸಿಡಿ ಕೊಡುವ ವಿಚಾರದಲ್ಲಿ ನಾನಾಗಲೇ ಹೇಳಿದ್ದೇನೆ, ಸಿಕ್ಕಾಪಟ್ಟೆ ಖರ್ಚು ಮಾಡಿ, ವೆಚ್ಚ ಏರಿಸುವ ಸಂದರ್ಭಗಳನ್ನು ಗಮನಕ್ಕೆ ತಂದರೆ, ನಾನು ಬಂದು ಪರಿಶೀಲನೆ ಮಾಡಿ ಸೂಕ್ತ ಕ್ರಮ ತೆಗೆದುಕೊಳ್ಳುತ್ತೇನೆ. ಮಾನ್ಯ ಸಿದ್ಧಾಂತಿಯವರು ಕೆಲವು ವಿಷಯಗಳನ್ನು ತಿಳಿಸಿದರು. ಬೊಂಬಾಯಿ ಕರ್ನಾಟಕ ಪ್ರದೇಶದಲ್ಲಿ ಇಂಥ ಕಾನೂನಿಂದ ಬಹಳ ಅನುಕೂಲವಾಗಿದೆ ಎಂಬ ಅಭಿಪ್ರಾಯ ಬಂದುದರಿಂದ ಅದನ್ನೂ ನಾವು ಈಗ ವಿಸ್ತರಣೆ ಮಾಡುತ್ತಿದ್ದೇವೆ. ಆದರೆ ಒಂದೆರಡು ಕಡೆ ಸ್ವಲ್ಪ ತೊಂದರೆಯಾಗುತ್ತದೆಂದು ಎಲ್ಲ ಕಡೆಗೂ ಆಗುವ ಅನುಕೂಲತೆಗೆ, ರೈತರಿಗೆ ಆಗುವ ಒಳ್ಳೆಯದಕ್ಕೆ ಅಡ್ಡಿಯಾಗುವುದು ಬೇಡ. ಅಂಥಾದ್ದೇನಾದರೂ ಆದರೆ ಅದನ್ನು ಸರಿಪಡಿಸುತ್ತೇವೆ. ನಾನು ವ್ಯವಸಾಯ ಖಾತೆ ಮಂತ್ರಿಯಾದ ಎರಡು ವರ್ಷಗಳಲ್ಲಿ ಶ್ರೀಮಾನ್ ಪಂಚಗಾವಿ ಮತ್ತು ಇತರರು ಒಂದೆರಡು ವಿಷಯಗಳನ್ನು ಹೇಳಿದ್ದಾರೆ. ಈ ಕಾನೂನಿನಿಂದ ತೊಂದರೆಯಾಗುತ್ತದೆ ಎಂದು ಈ ಒಂದು ಸಣ್ಣ ಕಾರಣಕ್ಕಾಗಿ ಇದನ್ನು ತಡೆಗಟ್ಟತಕ್ಕದ್ದು ಬೇಡ. ಈ ವಿಚಾರದಲ್ಲಿ ಈಗಾಗಲೇ ತಡಮಾಡಿದ್ದೀರಿ. ನಿಮಗೆ sense of urgency ಇಲ್ಲ sense of important ಇಲ್ಲ, priority

ಕೊಡುವುದಿಲ್ಲ ಎಂದು ಈಗಾಗಲೇ ಮಾನ್ಯ ವಿರೋಧ ಪಕ್ಷದ ನಾಯಕರೂ ಮತ್ತು ಇತರ ಮಾನ್ಯ ಸದಸ್ಯರೂ ಹೇಳುವಾಗ ಮಾನ್ಯ ಸದಸ್ಯರಾದ ಸಿದ್ಧಾಂತಿಯವರು ತೊಂದರೆಗಳನ್ನು ಹೇಳಿದರೆ ಏನು ಮಾಡಬೇಕೋ ಗೊತ್ತಾಗುವುದಿಲ್ಲ. ಈ ವಿಚಾರಗಳಲ್ಲಿ top most priority should be given and it has been have given by the Governmentಎಂದು ಹೇಳುತ್ತೇನೆ.

ಶ್ರೀಮಾನ್ ಮಲ್ಲಾರಾಧ್ಯರು ಮುಖ್ಯವಾದ ಒಂದು ಅನುಮಾನವನ್ನು ವ್ಯಕ್ತಪಡಿಸಿದ್ದಾರೆ, ಏಕೆ ಮಾಡಬೇಕು ಎಂದು ಕೇಳಿದ್ದಾರೆ. ರಾಜ್ಯಾಂಗದ 203ನೆಯ ಆರ್ಟಿಕಲ್‌ನಲ್ಲಿ ಹೇಳಿದ್ದಾರೆ.

"So much of the estimates as relates to expenditure charged upon the consolidated fund of a state shall not be submitted to the vote of the LegislativeAssembly, but nothing in this clause shall be constructed as preventing the discussion in the Legislative of any of those estimates".

ಆದ್ದರಿಂದ ಮಾಡುವುದು ರಾಜ್ಯಾಂಗಬದ್ಧವಾಗಿದೆ. ಆಹಾರ ಉತ್ಪಾದನೆಯ ದೃಷ್ಟಿಯಿಂದ, ದೇಶದ ಹಿತದೃಷ್ಟಿಯಿಂದ, ರೈತರ ಹಿತದೃಷ್ಟಿಯಿಂದ ಇಂಥ ಕಾರ್ಯಗಳನ್ನು ಕೈಗೊಂಡು, ತಮ್ಮ ಮುಂದೆ ವರದಿಯನ್ನಿಟ್ಟು, ಏನಾದರೂ ಲೋಪದೋಷಗಳು ಕಂಡು ಬಂದರೆ ಅದನ್ನು ಸರಿಪಡಿಸುತ್ತೇವೆ. ಒಳ್ಳೆಯ ಉದ್ದೇಶದಿಂದ ಇಂಥ ಕೆಲಸಗಳಿಗೆ ಖರ್ಚು ಮಾಡುತ್ತೇವೆಯೇ ಹೊರತು ಇತರ ಕೆಲಸಗಳಿಗೆ ಖರ್ಚು ಮಾಡಲು ಸಾಧ್ಯವಿಲ್ಲ. ವ್ಯವಸಾಯ ಉತ್ಪಾದನೆಯ ದೃಷ್ಟಿಯಿಂದ, ಆಹಾರದ ದೃಷ್ಟಿಯಿಂದ ಮಾತ್ರ consolidate fundನಿಂದ ಹಣವನ್ನು ಖರ್ಚು ಮಾಡುತ್ತೇವೆ.

ಕೆಲವಾರು ಅನುದಾನಗಳನ್ನು ಮಾನ್ಯ ಸದಸ್ಯರು ಹೇಳಿದ್ದಾರೆ, ಈ ಮಸೂದೆಯಲ್ಲಿ ಎಲ್ಲವೂ ಅಡಕವಾಗಿದೆ. ಇದಕ್ಕೆ ತಿದ್ದುಪಡಿಗಳು ಅನಾವಶ್ಯಕವೆಂದು ಕಾಣುತ್ತದೆ. ಅಗತ್ಯವಿದ್ದ ಪಕ್ಷದಲ್ಲಿ, ಕಾನೂನು ಅನ್ವಯವಾದ ಮೇಲೆ ಅದರಿಂದ ತೊಂದರೆಯಾಗಿದೆ ಎಂದು ಕಂಡು ಬಂದರೆ, ಸರಿಯಾದ ಕ್ರಮ ತೆಗೆದುಕೊಂಡು

ಸೂಕ್ತ ತಿದ್ದುಪಡಿಗಳನ್ನು ತಮ್ಮ ಮುಂದೆ ತಂದು ಅವುಗಳಿಗೆ ಮಂಜೂರಾತಿಯನ್ನು ತೆಗೆದುಕೊಳ್ಳುತ್ತೇವೆ.

ಸಿಬ್ಬಂದಿಯ ವೆಚ್ಚದ ವಿಚಾರವಾಗಿ ಹೇಳುವುದಾದರೆ, ಯಾವ ಕೆಲಸವನ್ನು ಮಾಡಲು ಮಾಲೀಕರ ಒಪ್ಪಿಗೆಯನ್ನು ಪಡೆದ ಮೇಲೆ ಅದಕ್ಕೆ ತಗಲುವ ಖರ್ಚಿನಲ್ಲಿ ಮೂರನೆಯ ಒಂದು ಭಾಗ ಸಿಬ್ಬಂದಿ ಖರ್ಚು ಎಂದು ಬೀಳುತ್ತದೆ. ಇದರ ಪೈಕಿ ಅರ್ಧ ಭಾಗವನ್ನು ಕೇಂದ್ರ ಸರ್ಕಾರದವರು ಕೊಡುತ್ತಾರೆ. ಉಳಿದರ್ಧ ಭಾಗವನ್ನು ರಾಜ್ಯ ಸರಕಾರದವರು ಕೊಡುತ್ತಾರೆ.

ಶ್ರೀಮಾನ್ ಮುಕ್ಕಣ್ಣಪ್ಪನವರು ಮಾಡಿರುವ ಆಕ್ಷೇಪಣೆಗಳಿಗೆ ಬುಡವಿಲ್ಲ, ಆಧಾರವಿಲ್ಲ, ಅವನ್ನು ನಾನು ಒಪ್ಪುವುದಿಲ್ಲ. ಒಳ್ಳೆಯ ಸಲಹೆಗಳನ್ನು ವಿರೋಧ ಪಕ್ಷದ ನಾಯಕರು ಏನೇನು ಹೇಳಿದ್ದಾರೆಯೋ ಅದನ್ನೆಲ್ಲ ಅಂಕಿ ಅಂಶಗಳ ಮೂಲಕವಾಗುವ ರೀತಿಯಲ್ಲಿ ಜಾರಿಗೆ ಬರಬೇಕೆಂದು ಮಾತ್ರ ಈ ಸಂದರ್ಭದಲ್ಲಿ ನಾನು ಹೇಳುತ್ತೇನೆ.

**ಶ್ರೀ ಪಿ.ಜಿ. ಸಿದ್ಧಾಂತಿ :** ಮಾಡಿದ ಕೆಲಸದ ಮೇಲೆ ಅಪಿಯರ್ ಇಲ್ಲ. ಹದಿಮೂರನೆಯ ಕ್ಲಾಜ಼್ ಎರಡನೆಯ ಸಬ್‌ಕ್ಲಾಜ಼್‌ನಲ್ಲಿ ಎಂದು ಸೇರಿಸುವ ವಿಚಾರದಲ್ಲಿ ಏನು ಹೇಳುತ್ತಿರಿ?

**ಶ್ರೀ ಎನ್ ರಾಚಯ್ಯ :** The Deputy Commissioner is the chairman of the Board. The certainly exercise his power to best advantage of the person. ಇದರಲ್ಲಿ ಸರ್ಕಾರಕ್ಕೆ ಪೂರ್ಣವಾದ ನಂಬಿಕೆ ಇದೆ. ಬೋರ್ಡಿನವರೇ ತೀರ್ಮಾನ ಮಾಡಬೇಕೆಂದು ಹೇಳುವ ಪಕ್ಷದಲ್ಲಿ ಅದನ್ನು ಒಪ್ಪಿಕೊಳ್ಳುವುದಕ್ಕೆ ನನ್ನ ಅಭ್ಯಂತರವಿಲ್ಲ. ವಿರೋಧ ಪಕ್ಷದ ನಾಯಕರು ಹೇಳಿರುವಂತೆ 'Executing Officer' ಎನ್ನುವುದಕ್ಕೆ ಬದಲಾಗಿ 'Executive Officer' ಎಂದು ಮಾಡಿಕೊಳ್ಳುವುದಕ್ಕೆ ನನ್ನ ಒಪ್ಪಿಗೆ ಇದೆ.

**ಶ್ರೀ ಎನ್. ರಾಚಯ್ಯ :** ಈ ಒಂದು ತಿದ್ದುಪಡಿಯನ್ನು ಒಪ್ಪತಕ್ಕಂಥಾದ್ದು ಸಾಧ್ಯವಿಲ್ಲ. ಏತಕ್ಕೆಂದರೆ ಈಗ ನಾವು ಸರ್ಕಾರದವರು ವ್ಯವಸಾಯದ ವಿಚಾರದಲ್ಲಿ ಅನೇಕ ಸಮಿತಿಗಳನ್ನು ಮಾಡಿದ್ದೇವೆ. ಉದಾಹರಣೆಗೆ ಕಾಟನ್ ಡೆವಲಪ್‌ಮೆಂಟ್ ಕಮಿಟಿ, ಟೊಬ್ಯಾಕೊ ಡೆವಲಪ್‌ಮೆಂಟ್ ಕಮಿಟಿ ಇತ್ಯಾದಿ ಹೀಗೆ ನೇಮಕ

ಮಾಡುವಾಗ, ಆಯಾ ಕ್ಷೇತ್ರಗಳಲ್ಲಿ ಯಾರು ಪರಿಶ್ರಮ ಹೊಂದಿದ್ದಾರೋ ರೈತರ ವಿಷಯದಲ್ಲಿ ಯಾರು ಆಸಕ್ತಿ ವಹಿಸುತ್ತಾರೆಯೋ ಅಂಥವರನ್ನೇ ಶೇಕಡ 99 ಭಾಗ ಏಕೆ? 100 ಕ್ಕೆ 100 ಭಾಗ ನೇಮಕಮಾಡಿದ್ದೇನೆ. ಯಾರಿಗೆ ವ್ಯವಸಾಯದ ಕ್ಷೇತ್ರದಲ್ಲಿ ಪರಿಶ್ರಮವಿರುತ್ತದೆಯೋ ಅಂಥವರನ್ನೇ ಈಗಲೂ ನೇಮಿಸುತ್ತೇವೆ. ಆದ್ದರಿಂದ ಮಾನ್ಯ ಸದಸ್ಯರು ಈ ವಿಚಾರದಲ್ಲಿ ಯಾವ ವಿಧವಾದ ಅನುಮಾನವನ್ನೂ ಪಡಬಾರದು, ರೈತರ ಸಂಘದಲ್ಲಿ ಶ್ರೀಮತಿ ನಾಗರತ್ನಮ್ಮನವರನ್ನು ನೇಮಿಸಿದ್ದೇವೆ. ಹಾಗೆಯೇ ಪಿ.ಎಸ್.ಪಿಯವರಾದ ಚಿಕ್ಕಣ್ಣನವರನ್ನು ನೇಮಿಸಿದ್ದೇವೆ. ಆದ್ದರಿಂದ ರಾಜಕೀಯದಲ್ಲಿ, ಎಲ್ಲಾ ಪಕ್ಷಗಳಿಗೂ ಅವಕಾಶವಿದೆ. ಕಾಂಗ್ರೆಸ್ ಪಕ್ಷದವರಿಗಿಂತ ಬಾಕಿಯವರೇ ಹೆಚ್ಚಾಗಿದ್ದಾರೆ. ಈ ನೇಮಕದ ವಿಷಯದಲ್ಲಿ ಯಾವ ವಿಧವಾದ ಅನುಮಾನವನ್ನು ಇಟ್ಟುಕೊಳ್ಳಬೇಕಾಗಿಲ್ಲ. ಈ ತಿದ್ದುಪಡಿಯನ್ನು ಒತ್ತಾಯಮಾಡಬಾರದೆಂದು ವಿನಂತಿ ಮಾಡುತ್ತೇನೆ ನಾನು ಒಪ್ಪುವುದೂ ಇಲ್ಲ.

## ♦ ವ್ಯವಸಾಯ ಬಾಬಿನಲ್ಲಿ ರೈತರಿಗೆ ಅನುಕೂಲತೆ ಮೇಲಿನ ಚಿಂತನೆಗಳು :

**ಸಲಹೆ ಮತ್ತು ಬೇಡಿಕೆಗಳೆರಡನ್ನು ಸಮನಾಗಿ ಸ್ವೀಕರಿಸಿ ಸ್ಪಂದಿಸುವ ವಿಶಾಲ ವ್ಯಕ್ತಿತ್ವದ ಎನ್. ರಾಚಯ್ಯನವರು ಅಂಕಿ – ಅಂಶಗಳ ಸಮೇತ ಪ್ರಶ್ನೋತ್ತರದಲ್ಲಿ ಭಾಗವಹಿಸಿದ್ದಾರೆ. ಸಿ.ಜಿ. ಮುಕ್ಕಣ್ಣಪ್ಪ, ಕೆ.ಎ. ಬೈರೇಗೌಡ, ಜಿ. ವೆಂಕಟಪ್ಪ, ಎ.ಎಸ್. ಶ್ರೀನಿವಾಸಶೆಟ್ಟಿ, ಜಿ.ಎಸ್. ಬೊಮ್ಮೆಗೌಡ ಇವರೊಂದಿಗೆ ಸಂವಾದದಲ್ಲಿ ಭಾಗವಹಿಸಿದ್ದಾರೆ, ವ್ಯವಸಾಯದ ಅಭಿವೃದ್ಧಿಗಾಗಿ ಅವಿರತ ಹೋರಾಡಿದವರು ಎಬ್, ರಾಚಯ್ಯನವರು.**

**ಶ್ರೀ ಎನ್. ರಾಚಯ್ಯ** : ಸ್ವಾಮಿ ಅಧ್ಯಕ್ಷರೇ ಈವರೆಗೂ ನನ್ನ ಶಾಲೆಗೆ ಅನ್ವಯಿಸಿರತಕ್ಕ ಬೇಡಿಕೆಗಳ ಮೇಲೆ ಮಾನ್ಯ ಸದಸ್ಯರನೇಕರು .....

**Sri C.M. Arumugham :** Sir did you want us also to get out (Laughter). Because you are asking SriVenkatareddy to go out. The opposition will go out. Now what do you say it?

**ಶ್ರೀ ಎನ್. ರಾಚಯ್ಯ :** ಉತ್ತಮವಾದ ಸಲಹೆಗಳನ್ನು ಇತ್ತಿದ್ದಾರೆ. ಕೆಲವರು ರಚನಾತ್ಮಕವಾದ ಟೀಕೆಗಳನ್ನು ಮಾಡಿದ್ದಾರೆ. ಇವರೆಲ್ಲರಿಗೂ ನಾನು ಬಹಳ ಸಂತೋಷದಿಂದ ನನ್ನ ವಂದನೆಗಳನ್ನು ಅರ್ಪಿಸುತ್ತೇನೆ. ಆದರೆ ಈ ಸಂದರ್ಭದಲ್ಲಿ ಕೆಲವು ಮಾನ್ಯ ಸದಸ್ಯರುಗಳು ಆಧಾರ ರಹಿತವಾದ ಹಾಗೂ ಅರ್ಥರಹಿತವಾದ ಟೀಕೆಗಳನ್ನು ಮಾಡಿದ್ದಾರೆ. ಹೀಗೆ ಅವರು ಮಾಡಿರತಕ್ಕ ಟೀಕೆಗಳನ್ನು ಸರ್ಕಾರ ಒಪ್ಪುವುದಿಲ್ಲ. ಅವುಗಳನ್ನು ನಾನು ನಿರಾಕರಿಸುತ್ತೇನೆ. ವ್ಯವಸಾಯದ ಬಾಬಿನಲ್ಲಿ ಸಾಕಷ್ಟು ಪ್ರಗತಿಯನ್ನು ಸಾಧಿಸಲು ರೈತರಿಗೆ ನಾವು ಇಲ್ಲಿಯತನಕ ಅನೇಕ ಅನುಕೂಲಗಳನ್ನು ಒದಗಿಸಿಕೊಟ್ಟಿದ್ದೇವೆ. ಟೀಕೆ ಮಾಡಿರತಕ್ಕ ಮಾನ್ಯ ಸದಸ್ಯರುಗಳು ಅಂಕಿ ಅಂಶಗಳನ್ನು ಕೂಲಂಕಷವಾಗಿ ಪರಿಶೀಲನೆ ಮಾಡಿ ನೋಡಿದರೆ ಅವರಿಗೆ ತಿಳಿದು ಬರುವುದು ಏನೆಂದರೆ ಹೊಸ ರಾಜ್ಯ ಆದ ಮೇಲೆ ಐದು ಪ್ರದೇಶಗಳು ನಮ್ಮ ರಾಜ್ಯದಲ್ಲಿ ಬಂದ ನಂತರ ಅನೇಕ ತೊಂದರೆಗಳು ಇದ್ದರೂ ಕೂಡ

ನಮ್ಮ ಸರಕಾರ ಜನತೆಯ ಹಿತದೃಷ್ಟಿಯಿಂದ ವ್ಯವಸಾಯ ಇಲಾಖೆಯ ಬಗ್ಗೆ ಕೆಲಸ ಮಾಡಿದೆ ಎಂದು ಹೇಳಲು ಸಂತೋಷವಾಗುತ್ತದೆ. ಹೊಸ ರಾಜ್ಯವಾದ ಮೇಲೆ ಹೊಸ ಅಧಿಕಾರಿಗಳು ಬಂದರು ಹೊಸ ವಾತಾವರಣಕ್ಕೆ ಅನುಸಾರವಾಗಿ ಪ್ರತಿಯೊಂದು ಶಾಖೆಯಲ್ಲಿಯೂ ಕೂಡ ಹೊಂದಿಕೊಂಡು ಕೆಲಸ ಸರಿಯಾಗಿ ಮಾಡಬೇಕಾಯಿತು. ಅನೇಕ ತೊಂದರೆಗಳನ್ನು ನಿವಾರಣೆ ಮಾಡಬೇಕಾಯಿತು ಎಂಬುದು ಎಲ್ಲರಿಗೂ ಗೊತ್ತಿದೆ. ಈ ರೀತಿ ಪರಿಸ್ಥಿತಿ ಇದ್ದರೂ ಕೂಡ ನಿರ್ದಿಷ್ಟ ಪ್ರಮಾಣದಲ್ಲಿ ನಾವು ಪ್ರಗತಿಯನ್ನು ಸಾಧಿಸಿರತಕ್ಕಂಥಾದ್ದು ನಿಜವಾಗಿಯೂ ಹೆಮ್ಮೆ ಪಡತಕ್ಕಂಥಾದ್ದು. ಮೊದಲನೇ ಯೋಜನೆಯಲ್ಲಿ ಹಳೇ ಮೈಸೂರು ರಾಜ್ಯದಲ್ಲಿ 192,47,000 ರೂಪಾಯಿ ಒದಗಿಸಿದ ಹಣದಲ್ಲಿ 152,82,000 ರೂಪಾಯಿ ಖರ್ಚು ಆಗಿದೆ. ಎರಡನೇ ಯೋಜನೆಯ ಅವಧಿಯಲ್ಲಿ 698,86,000 ರೂಪಾಯಿ ಒದಗಿಸಿರುವುದಕ್ಕೆ 755,18,000 ರೂಪಾಯಿ ಖರ್ಚಾಗಿವೆ. ಅಂದರೆ ಖರ್ಚಾಗಿವೆ. ಮೂರನೇ ಯೋಜನೆಯಲ್ಲಿ 19,99,00,000 ರೂಪಾಯಿ ಅಂದರೆ ಸುಮಾರು 20 ಕೋಟಿ ರೂಪಾಯಿ ಹೆಚ್ಚು ಖರ್ಚಾಗಿದೆ. ನಮ್ಮ ರಾಜ್ಯದಲ್ಲಿ 244 ಲಕ್ಷ ಜಮೀನು ಉಳುಮೆ ಆಗಿದೆ. 36 ಲಕ್ಷ ಎಕರೆ ಪಾಳು ಜಮೀನು ಇದೆ. ಒಟ್ಟಿನಲ್ಲಿ 280 ಲಕ್ಷ ಎಕರೆ ಜಮೀನು ವ್ಯವಸಾಯಕ್ಕೆ ಯೋಗ್ಯವಾದುದು ಇದೆ. ಇದರಲ್ಲಿ 17 ಲಕ್ಷ ಎಕರೆ ನೀರಾವರಿ ಜಮೀನು ಇದೆ. ಕೇಂದ್ರ ಸರಕಾರದ ಸಹಾಯದಿಂದ ನೀರಾವರಿ ಜಮೀನು ಇದೆ. ಕೇಂದ್ರ ಸರಕಾರದ ಸಹಾಯದಿಂದ ನೀರಾವರಿ ಪ್ರದೇಶವನ್ನು ಇನ್ನೂ ಹೆಚ್ಚಿಸಬೇಕಾಗಿದೆ. ದೊಡ್ಡ ದೊಡ್ಡ ನೀರಾವರಿ ಯೋಜನೆಗಳ ಜೊತೆಗೆ ನುಗು, ತುಂಗಭದ್ರ, ಮಲಪ್ರಭಾ, ಘಟಪ್ರಭಾ, ಶರಾವತಿ ಪವರ್ ಅಂಡ್ ಇರಿಗೇಷನ್ ಪ್ರಾಜೆಕ್ಟ್ ಈಗಾಗಲೇ ಕಾರ್ಯಗತ ಮಾಡಿದ್ದೇವೆ. ಇನ್ನೂ ಹೆಚ್ಚಿನ ಪ್ರಮಾಣದಲ್ಲಿ ಕಾರ್ಯಗತ ಮಾಡಲು ಅವಕಾಶವಿದೆ. ನಮ್ಮ ರಾಜ್ಯಕ್ಕೆ 41 ಲಕ್ಷ ಟನ್ ಆಹಾರ ಬೇಕಾಗುತ್ತದೆ. ಈಗ ಉತ್ಪತ್ತಿ 381/2 ಲಕ್ಷ ಟನ್ ಇದೆ. ಸದ್ಯಕ್ಕೆ 21/2 ಲಕ್ಷ ಟನ್ ಮಾತ್ರ ಕೊರತೆ ಇದೆ. ಮೂರನೇ ಯೋಜನೆಯ ಅವಧಿಯಲ್ಲಿ ಈ ಕೊರತೆ ಹೋಗುತ್ತದೆಂದು ಸರಕಾರಕ್ಕೆ ನಂಬಿಕೆಯಿದೆ. ಇತ್ತೀಚೆಗೆ ರೈತನಿಗೆ ವ್ಯವಸಾಯಕ್ಕೆ ಬೇಕಾಗುವ ಗೊಬ್ಬರ, ಕಬ್ಬಿಣ ಮುಂತಾದ ಅವಶ್ಯಕತೆಗಳ ಬೇಡಿಕೆ ಹೆಚ್ಚಾಗಿದೆ. ಈ ಬಗ್ಗೆ ಕೇಂದ್ರ ಸರಕಾರ ಸಹಾಯ ಮಾಡುತ್ತಿದೆ. ಈ ಎಲ್ಲಾ ವಿವರಗಳನ್ನು ಮಾನ್ಯ ಸದಸ್ಯರ ಗಮನಕ್ಕೆ

ತರಲು ನಾನು ಸಂತೋಷ ಪಡುತ್ತೇನೆ. ಆಹಾರ ಉತ್ಪಾದನೆಯ ವಿಚಾರದಲ್ಲಿ ಹೆಚ್ಚಿನ ಪ್ರಗತಿಯನ್ನು ಸಾಧಿಸಿದ್ದೇವೆಂದು ಸದಸ್ಯರ ಗಮನಕ್ಕೆ ತರುತ್ತೇನೆ. ಇನ್ನೂ ಅಗ್ರಿಕಲ್ಚರಲ್ ರಿಸರ್ಚ್ ಸಲುವಾಗಿ ಹೆಚ್ಚು ಹಣ ಇಟ್ಟಿದ್ದೇವೆ. ಹಳೇ ಮೈಸೂರಿನಲ್ಲಿ ಸಾಯಿಲ್ ಕನ್‌ಸರ್ವೇಷನ್ ಕಾನೂನು ಇರಲಿಲ್ಲ. ಅದು ಹೊಸ ಮೈಸೂರು ಪ್ರದೇಶದಲ್ಲಿದೆ. ಅದಕ್ಕೆ ಹಣ ಒದಗಿಸಿದ್ದೇವೆ. ಮೈನರ್ ಇರಿಗೇಷನ್ ವರ್ಕ್ಸ್‌ನಲ್ಲಿ ಬಾವಿ ತೆಗೆಯುವ ಕಾರ್ಯಕ್ರಮವಿದೆ. ಇದಕ್ಕೂ ಸಹ ಹೆಚ್ಚಾಗಿಯೇ ಹಣ ಒದಗಿಸಲಾಗಿದೆ. ಖರ್ಚನ್ನು ಕೂಡ ಪ್ರತಿಯೊಂದರಲ್ಲಿಯೂ ನಾವು ಬಹಳ ಹೆಚ್ಚಾಗಿ ಖರ್ಚು ಮಾಡಿದ್ದೇವೆ. ಇದರ ಅಂಕಿ ಅಂಶಗಳನ್ನು ಕೂಡ ಒದಗಿಸಿ ಕೊಟ್ಟಿದ್ದೇವೆ.

**ಶ್ರೀ ಸಿ.ಜಿ. ಮುಕ್ಕಣ್ಣಪ್ಪ** : ಕೇಂದ್ರ ಸರಕಾರದಿಂದ ಎರಡು ಕೋಟಿ ರೂಪಾಯಿಗಳಷ್ಟು ಹಣವನ್ನು ಒದಗಿಸಿದ್ದಾರೆಂದು ಹೇಳುತ್ತೀರಿ ಈಚೆಗೆ ಕೇಂದ್ರದಲ್ಲೆ ಮಂತ್ರಿಗಳಾಗಿರುವ ಶ್ರೀ ಕೃಷ್ಣಪ್ಪನವರು ರಾಜ್ಯ ಸರಕಾರದವರು ಈ ವಿಚಾರದಲ್ಲಿ ಇನ್ನೂ ಏನನ್ನು ತಿಳಿಸಿಲ್ಲ ಎಂದು ಹೇಳುತ್ತಾರೆ.

**ಶ್ರೀ ಎನ್. ರಾಚಯ್ಯ** : ರಾಜ್ಯ ಸರಕಾರವು ಈ ಯೋಜನೆಯನ್ನು ಮುಂದುವರಿಸುವುದು ಮೂರನೆಯ ಪಂಚವಾರ್ಷಿಕ ಯೋಜನೆಯಲ್ಲಿ.

**ಶ್ರೀ ಸಿ.ಜಿ. ಮುಕ್ಕಣ್ಣಪ್ಪ** : ಬಜೆಟ್ಟು ಪ್ರಾವಿಷನ್ನಿಲ್ಲದಿದ್ದರೆ ಹಣವನ್ನು ಹೇಗೆ ಒದಗಿಸುತ್ತಾರೆ?

**ಶ್ರೀ ಎನ್. ರಾಚಯ್ಯ** : ಕೇಂದ್ರ ಸರಕಾರದವರಿಂದ ಬರಬೇಕಾದ ಹಣವನ್ನು ಕೇಳುತ್ತೇವೆ. ಆದುದರಿಂದ ಈ ವ್ಯವಸಾಯದ ಕ್ಷೇತ್ರದಲ್ಲಿ ಅದರಲ್ಲೂ ಸಾಯಿಲ್ ಕನ್‌ಸರ್‌ವೇಷನ್ನಿನಲ್ಲಿ ವಿಚಾರ ಮಾಡದೆ ಶ್ರೀಮಾನ್ ರಾಜಯ್ಯ ಶೆಟ್ಟರು ಹಣವನ್ನು ಒದಗಿಸಿಯೇ ಇಲ್ಲ. ಏನೂ ದುಡ್ಡನ್ನು ಖರ್ಚು ಮಾಡಿಲ್ಲ ಎಂದು ಹೇಳಿದರು. ಇದು ಒಪ್ಪತಕ್ಕ ಮಾತಲ್ಲ. ಒದಗಿಸಿದಂತಹ ಹಣದಲ್ಲಿ ಎಲ್ಲೋ ಒಂದು ಕಡೆ ಸುಮಾರು 17 ಲಕ್ಷ ರೂಪಾಯಿಗಳಷ್ಟು ಮಾತ್ರ ಉಳಿತಾಯವಾಗಿದೆ. ಉಳಿದ ಎಲ್ಲಾ ಭಾಗಗಳಲ್ಲಿಯೂ ಖರ್ಚನ್ನು ಮಾಡಲಾಗಿದೆ. ಸಾಯಿಲ್ ಕನ್‌ಸರ್‌ವೇಷನ್ನು ಪ್ರಗತಿಯನ್ನು ಸಾಧಿಸುವುದಕ್ಕೆ ಮೊದಲನೇ ಎರಡು ವರ್ಷಗಳಲ್ಲಿ ಮುಂಬಯಿನ ಪ್ರದೇಶಗಳಲ್ಲಿ ಹೆಚ್ಚು ಖರ್ಚನ್ನು ಮಾಡುವುದಕ್ಕಾಗದೆ ಉಳಿತಾಯವಾಯಿತು. 17 ಲಕ್ಷ ರೂಪಾಯಿಗಳು ಮಾತ್ರ ಉಳಿತಾಯವಾಗಿದೆ.

**ಶ್ರೀ ಕೆ.ಎ. ಬೈರೇಗೌಡ :** ಸಾಯಿಲ್ ಕನ್‌ಸರ್‌ವೇಷನ್ನು ಫಾಯಿದೆಯಾಗದೇ ಇದ್ದರೆ ಇಡೀ ದೇಶದಲ್ಲಿಯೂ ಅನುಕೂಲವಾಗುತ್ತದೆ ಎಂದು ಭಾವಿಸಿದ್ದೀರಾ?

**ಶ್ರೀ ಎನ್. ರಾಚಯ್ಯ :** ತುಮಕೂರು, ಚಿತ್ರದುರ್ಗ ಮುಂತಾದ ಕೇಂದ್ರಗಳಲ್ಲಿ ಪ್ರಾಯೋಗಿಕವಾಗಿ ನಾವು ಈಗಾಗಲೇ ಮಾಡಿದ್ದೇವೆ. ಉಳಿದ ಮೂರು ನಾಲ್ಕು ಡಿಸ್ಟ್ರಿಕ್ಟುಗಳಲ್ಲಿ ಇದನ್ನು ಎಕ್ಸ್‌ಟೆಂಡು ಮಾಡಿದ ಪಕ್ಷದಲ್ಲಿ ಇನ್ನೂ ಅನುಕೂಲವಾಗುವ ಎಂದು ಸರಕಾರ ಭಾವಿಸಿ ಇದನ್ನು ಧೈರ್ಯದಿಂದ ವಿಸ್ತಾರ ಮಾಡಿ ರೈತರಿಗೆ ಇನ್ನೂ ಹೆಚ್ಚಿನ ಅನುಕೂಲವಾಗುವ ರೀತಿಯಲ್ಲೇ ಮಾಡಬೇಕೆಂದು ಆಸಕ್ತಿಯಿಂದ ಇದೆ ಎಂದು ತಮ್ಮ ಮುಂದೆ ಹೇಳುತ್ತೇನೆ. ಈ ಸಾಯಿಲ್ ಕನ್‌ಸರ್‌ವೇಷನ್ನಿನ ವಿಚಾರದಲ್ಲಿ ಅಂಕಿ ಅಂಶಗಳನ್ನು ಕೊಟ್ಟರೂ ಬಹಳ ಒಳ್ಳೆಯದು ಎಂದು ಕಾಣುತ್ತದೆ. ಈಗ 10,1,16,000 ಒದಗಿಸಿದ್ದುದರಲ್ಲೆ 92,881,000 ರೂಪಾಯಿಗಳಷ್ಟನ್ನು ಈಗಾಗಲೇ ಖರ್ಚು ಮಾಡಿದ್ದೇವೆ. ಈ ರೀತಿಯಾಗಿ ಪ್ರಗತಿಯನ್ನು ಸಾಧಿಸಿದ್ದೇವೆ. ಬೊಂಬಾಯಿ ಕರ್ನಾಟಕದ ಭಾಗದಲ್ಲೇ ಷೆಡ್ಯೂಲ್ ಪ್ರಕಾರ ಹಣ ಖರ್ಚಾಗದೇ 17 ಲಕ್ಷ ರೂಪಾಯಿಗಳಷ್ಟು ಮಾತ್ರ ಉಳಿತಾಯವಾಗಿದೆ. ಹೀಗಿದ್ದರೂ ಕೂಡ ಶ್ರೀಮಾನ್ ರಾಚಯ್ಯ ಶೆಟ್ಟರ ಹಣವನ್ನೆಲ್ಲಾ ಹಾಗೇ ಉಳಿಸಿದ್ದಾರೆ. ಎಲ್ಲಾ ಉಳಿದಿದೆ ಎಂದು ಹೇಳಿರುವುದು, ಅವರು ಅಂಕಿ ಅಂಶಗಳನ್ನು ತಿಳಿದುಕೊಳ್ಳದೇ ಹೇಳಿದ್ದಾರೆಯೇ ಹೊರತು ಬೇರೇನಿಲ್ಲ ಮತ್ತು ಇದೇ ಒಂದು ಸಂದರ್ಭದಲ್ಲಿ ಶ್ರೀಮಾನ್ ಶ್ರೀನಿವಾಸ ಶೆಟ್ಟರು ಅನೇಕ ಸಲಹೆ ಸೂಚನೆಗಳನ್ನು ಬಹಳ ಹೃದಯಂಗಮವಾಗಿ ಮಾತಾಡಿದ್ದಾರೆ. ಆದರೆ ಒಂದೇ ಆಕ್ಷೇಪ ಸರಕಾರದ ತಪ್ಪು ಇದೆ ಎಂದು ಬಹಳ ನಿರ್ದಿಷ್ಟವಾಗಿ ಮಾಡಿದರು ಅದನ್ನು ಸರಕಾರ ಒಪ್ಪುವುದಿಲ್ಲ. ಯಾವ ಆಧಾರಗಳ ಮೇಲೆ ತಾವು ಮಂಡ್ಯ ಜಿಲ್ಲೆಯಲ್ಲಿ 138 ಸಾವಿರ ಎಕರೆ ಭೂಮಿಗೆ (Assured Watter Supply) ಅಷ್ಯೂರ್ಡ್ ವಾಟರ್ ಸಪ್ಲೈ ಎಂದರೆ ಖಾಯಂ ಆಗಿ ನೀರಿನ ಸರಬರಾಜು ಇರುವಂತಹ ಸೌಕರ್ಯವಿದೆ.

ಇದು ಒಂದು ಕಾರಣ. ಈ ಒಂದು ಸೌಕರ್ಯ ಸೌತ್ ಕೆನರಾದಲ್ಲಿಲ್ಲ. ಅಲ್ಲಿ ನಾಲ್ಕು ಲಕ್ಷ ಎಕರೆಗಿಂತ ಹೆಚ್ಚಿನ ಭತ್ತ ಬರುತ್ತಿದ್ದರೂ ಅಲ್ಲೆ ಮಳೆಯ ನೀರಿನ ಸಹಾಯದಿಂದ ಬರುತ್ತಿದೆ. ಈ ರೀತಿಯಾಗಿ ನಿರ್ದಿಷ್ಟ ವಾಟರ್ ಸಪ್ಲೈ

ಇರುವಂತಹ ಕಾರಣವಿಲ್ಲ ಎಂದು ಇಲ್ಲೆ ಹಾಕಬೇಕೆಂದು ಮಾಡಿದ್ದೇವೆ ಮತ್ತು ಕೆರೆಕೆಳಗಣ ನೀರಾವರಿ ಎಂದರೆ Under Tank Irrigation ಸುಮಾರು 27,000 ಎಕರೆಗಳಷ್ಟು ಭೂಮಿಗೆ ನೀರಾವರಿ ಮಾಡುವ ವ್ಯವಸ್ಥೆ ಇದೆ. ಇಂತಹ ಒಂದು ಹೆಚ್ಚಿನ ವ್ಯವಸ್ಥೆ ಸೌತ್ ಕ್ಯಾನರದಲ್ಲಿಲ್ಲ. ಮಂಡ್ಯದಲ್ಲಿ ಸಕ್ಕರೆ ಕಾರ್ಖಾನೆ ಇರುವುದರಿಂದ ಸುಮಾರು 20-30 ಸಾವಿರ ರೂಪಾಯಿಗಳಷ್ಟು ಷುಗರ್ ಕೇನ್ ಸೆಸ್ ಫಂಡ್ ಎಂದು ಬರುತ್ತದೆ. ಇದರಿಂದ ಪ್ರತಿಯೊಂದು ಗ್ರಾಮಗಳಿಗೂ ಬೇಕಾದ ಸೌಕರ್ಯಗಳನ್ನು ಮಾಡಿಕೊಳ್ಳಬಹುದು. ಇಲ್ಲಿ ಈ ಸೆಸ್ ಫಂಡಿನಲ್ಲಿ ಬರುವ ಹಣದಿಂದ ಒಳ್ಳೆಯ ರಸ್ತೆಗಳನ್ನು ಮಾಡಿರುವುದರಿಂದ ಇಲ್ಲೆ Transport Facilitie ಅನುಕೂಲವಾಗಿದೆ. ರೈತರಿಗೆ ಕೂಡ ತಾವು ಬೆಳೆಯುವ ಬೆಳೆಯನ್ನು ಸಾಗಿಸಿಕೊಳ್ಳಲು ಉತ್ತಮವಾದ ರೋಡುಗಳನ್ನು ಬಹಳ ಚೆನ್ನಾಗಿ ಇಲ್ಲಿ ವ್ಯವಸ್ಥೆ ಮಾಡಿದ್ದಾರೆ. ಈ ಒಂದು ಪ್ಯಾಕೇಜು ಡೀಲ್ ಎನ್ನುವುದನ್ನು ಪ್ರಾಯೋಗಿಕವಾಗಿ ಮಂಡ್ಯದಲ್ಲಿ ಮಾಡಲಾಗಿದೆ. ಇಲ್ಲಿ ಇದು ಯಶಸ್ವಿಯಾದ ನಂತರ ಇದನ್ನು ಎಲ್ಲಾ ಜಿಲ್ಲೆಗಳಿಗೂ ವಿಸ್ತರಣೆಯನ್ನು ಮಾಡಬೇಕೆಂದು ಇದೆ. ಹಾಗೆ ಮಾಡುವುದಕ್ಕೆ ಆಯಾ ಜಿಲ್ಲೆಯವರು ಎಲ್ಲಾ ಷರತ್ತುಗಳನ್ನು ಪೂರೈಸಬೇಕು.

**ಶ್ರೀ ಜಿ. ವೆಂಕಟಪ್ಪ :** ಈ ಪ್ಯಾಕೇಜುಗಳನ್ನು ಸಹಕಾರ ಸಂಘಗಳ ಮೂಲಕ ಕೊಡಬೇಕೆಂದಿದೆಯೇ?

**ಶ್ರೀ ಎನ್. ರಾಚಯ್ಯ :** ಕೊಡಬೇಕೆಂದಿದೆ.

**ಶ್ರೀ ಎ.ಎಸ್. ಶ್ರೀನಿವಾಸಶೆಟ್ಟಿ :** ವಾಟರ್‌ಕ್ರೈಟೀರಿಯಾ ಇದ್ದರೆ ಸಾಕು.

**ಶ್ರೀ ಎನ್. ರಾಚಯ್ಯ :** ಇದಕ್ಕೆ ಬೇಕಾದಷ್ಟು ವಾಟರ್ ಸಪ್ಲೈ ಇರಬೇಕು. ಒಳ್ಳೆಯ ರಸ್ತೆಗಳಿರಬೇಕು. ರೆಗ್ಯೂಲೇಟೆಡ್ ಮಾರ್ಕೆಟ್ ಕಮಿಟಿ (facilities) ಫೆಸಿಲಿಟೀಸ್‌ಗಳಿರಬೇಕು ಕೋ ಆಪರೇಟಿವ್ ಸೊಸೈಟಿಗಳು, ನಾವು ಉತ್ಪಾದನೆ ಮಾಡತಕ್ಕ ಸಾಮಾನುಗಳನ್ನು ಸಾಕು ಮಾಡಿಕೊಂಡು ಸುಲಭವಾದ ರೀತಿಯಲ್ಲೆ ಅದನ್ನು ಹಂಚುವ ವ್ಯವಸ್ಥೆ ಇರಬೇಕು. ಇದೂ ಅಲ್ಲದೆ Ryots should be respective in their mood . ಇದಕ್ಕೆ ರೈತರು ಕೂಡ ಹೆಚ್ಚಿನ ಜಾಗರೂಕತೆಯಿಂದ ಇಂತಹ ಕೆಲಸಗಳನ್ನು ಮಾಡುವುದರಲ್ಲಿ ಸಹಕಾರ ಮಾಡಿದರೆ

ಇನ್ನೂ ಅನುಕೂಲವಾಗುತ್ತದೆ. ಆ ರೀತಿಯಾದ ಒಂದು ಹೆಚ್ಚಿನ ಸಹಕಾರ ಇಲ್ಲಿ ಬೇಕಾಗಿದೆ.

ಶ್ರೀ ಎ.ಎಸ್. ಶ್ರೀನಿವಾಸ ಶೆಟ್ಟಿ : ಅವರು ಕೇಳಿದ ಕಾರಣಗಳೇನು?

ಶ್ರೀ ಎನ್. ರಾಚಯ್ಯ : ನಾನು ತಮಗೆ ಹೇಳುವುದಾದರೆ ಇದರಲ್ಲಿ ಯಾರಿಂದಲೂ ಮದ್ದೂರು ಅಥವಾ ಮೈಸೂರಿಗೆ ಕೊಡಬೇಕು ಎಂದು ಗೈಡೆನ್ಸ್ ಯಾರಿಂದಲೂ ಬರೆದಿಲ್ಲ. ಮಂಡ್ಯದಲ್ಲಿ ಕೊಡಲು ಕೆಲವು ಕಾರಣಗಳು ಇವೆ. ಅಲ್ಲಿ ಅಗ್ರಿಕಲ್ಚರ್ ಫಾರಂ ಮಾಡಿದ್ದಾರೆ. ಅಗ್ರಿಕಲ್ಚರ್ ಸ್ಕೂಲು ಇದೆ ಗ್ರಾಮ ಸೇವಕರ ಟ್ರೇನಿಂಗ್ ಸೆಂಟರುಗಳು ಇವೆ ಇದೂ ಅಲ್ಲದೆ Not work of roads built from out of the Sugar Cane Cess Fundಹೀಗೆ ಅನೇಕ ತರಹದ ಅನುಕೂಲತೆಗಳು ಇಲ್ಲಿವೆ. ಇದೇ ರೀತಿಯಾದ ಸೌಕರ್ಯಗಳು ಸೌತ್ ಕ್ಯಾನರಾ ಜಿಲ್ಲೆಯಲ್ಲಿ ಇಲ್ಲ. ಆದರೆ ಈ ರೀತಿಯಾಗಿ ಮಾಡುವಾಗ ಯಾರ ಪ್ರಭಾವವಾಗಲೀ ನಮ್ಮ ಮೇಲೆ ಬಂದಿಲ್ಲ ಮತ್ತು ಇದರಲ್ಲೆ ಬೇರೆ ಯಾವ ಸ್ವಂತ ಪ್ರಭಾವವಾಗಲೀ ಇದರಲ್ಲಿ ಒಳಗೊಂಡಿಲ್ಲ. ಮಂಡ್ಯ ಜಿಲ್ಲೆಯಿಂದ ಒಬ್ಬ ರೈತನಾಗಲೀ ಬಂದು ನಮ್ಮ ಜಿಲ್ಲೆಗೆ ಕೊಡಿ ಎಂದು ಬಂದು ಕೇಳಲಿಲ್ಲ. ಹೀಗಿರುವಾಗ ಇದರಲ್ಲಿ ಯಾವ ಪ್ರಭಾವವಿದೆ ಎನ್ನುವುದು ನನಗೆ ಗೊತ್ತಾಗಲಿಲ್ಲ. ಇದನ್ನು ನಾನು ನಿರ್ದಿಷ್ಟವಾಗಿ ಹೇಳುವುದಾದರೆ, ಎಲ್ಲಾ ಅಂಕಿ ಅಂಶಗಳನ್ನು ಡೈರೆಕ್ಟರರಿಂದ ತರಿಸಿಕೊಂಡು ಟಿ.ಸಿ.ಎಂ. ಎಕ್ಸ್‌ಪರ್ಟುಗಳ ವರದಿಯನ್ನು ತರಿಸಿಕೊಂಡು, ಎಲ್ಲ ವಿಚಾರಗಳನ್ನು ಕೂಲಂಕಷವಾಗಿ ಪರಿಶೀಲನೆ ಮಾಡಿ ನನ್ನ ಸ್ವಂತ ಜವಾಬ್ದಾರಿಯಿಂದ ಇದನ್ನು ಮಾಡಿದ್ದೇನೆ. ಆ ವಿಧವಾದ ಅಭಿಪ್ರಾಯವನ್ನು ಇಟ್ಟುಕೊಂಡು ಇದನ್ನು ಮಾಡಬೇಕಾಗಿದ್ದರೆ ನಮ್ಮ ಸ್ವಂತ ಜಿಲ್ಲೆಯಾದ ಮೈಸೂರು ಜಿಲ್ಲೆಗೆ ಮಾಡಬಹುದಾಗಿತ್ತು.

ಶ್ರೀ ವಿ.ಎಸ್. ಶ್ರೀನಿವಾಸ ಶೆಟ್ಟಿ : ಅದು ನಿಮ್ಮ ಜಿಲ್ಲೆ ಮತ್ತು ನಮ್ಮ ಜಿಲ್ಲೆಗೆ ಕೊಡಬೇಕು ಎಂದು ನಾನು ಹೇಳಲಿಲ್ಲ.

ಶ್ರೀ ಎನ್. ರಾಚಯ್ಯ : ತಾವು ಹೇಳಲಿಲ್ಲ. ನಾವು ಆ ರೀತಿಯಾದ ಪ್ರಭಾವಕ್ಕೆ ಒಳಗಾಗಿಯೂ ಇಲ್ಲ. ತಮಗೆ ಇನ್ನೊಂದು ವಿಚಾರ ಹೇಳುತ್ತೇನೆ. ಈ ಸಭೆಯಲ್ಲಿ ಮಾನ್ಯ ಸದಸ್ಯರುಗಳು ಹೇಳಿರತಕ್ಕ ಸೂಚನೆಗಳಿವೆ ಮತ್ತು ಎಷ್ಟೋ

ಅಭಿಪ್ರಾಯಗಳನ್ನು ಕೊಟ್ಟಿದ್ದಾರೆ. ಅವೆಲ್ಲವನ್ನು ಪರಿಶೀಲನೆ ಮಾಡಿ ಇಲ್ಲಿ ಉತ್ತರ ಕೊಡಬೇಕೆಂದರೆ ಕನಿಷ್ಟ ಪಕ್ಷ ಎರಡು ಗಂಟೆಗಳ ಕಾಲವಾದರೂ ನನಗೆ ಬೇಕಾಗುತ್ತದೆ. ಆಗ ಪ್ರತಿಯೊಬ್ಬ ಮಾನ್ಯ ಸದಸ್ಯರಿಗೂ ಅವರು ಮಾಡಿರತಕ್ಕ ಆಕ್ಷೇಪಣೆಗಳಿಗೆ ಉತ್ತರ ಕೊಡಬಹುದು ಎಂದು ನನ್ನ ಮನಸ್ಸಿನಲ್ಲಿತ್ತು. ಆದರೆ ತಾವು ಅಪ್ಪಣೆ ಕೊಡಿಸಿರುವಷ್ಟು ಕೇವಲ ಸ್ವಲ್ಪ ಕಾಲದಲ್ಲೇ ಮುಖ್ಯವಾಗಿರುವ ವ್ಯವಸಾಯದ ಬಗ್ಗೆ ಹೇಳುತ್ತೇನೆ. ಈ ವ್ಯವಸಾಯದ ಕ್ಷೇತ್ರದಲ್ಲಿ ವ್ಯವಸಾಯಗಾರನಿಗೆ ಇನ್ನೂ ಸೂಕ್ತವಾದ ಸಹಾಯಗಳನ್ನು ಮಾಡಲು ತಾವೆಲ್ಲರೂ ಮೆಚ್ಚತಕ್ಕ ರೀತಿಯಲ್ಲಿ ಕೆಲಸ ಮಾಡಿದೆ ಮತ್ತು ಮುಂದಿನ ಮೂರನೇ ಪಂಚವಾರ್ಷಿಕ ಯೋಜನೆಯಲ್ಲಿ ಇನ್ನೂ ಹೆಚ್ಚಿನ ಪ್ರಗತಿಯನ್ನು ಸಾಧಿಸಲು ಈಗಾಗಲೇ ಯೋಜನೆಗಳನ್ನು ತಯಾರು ಮಾಡಿದ್ದೇವೆ ಮತ್ತು ಹೆಚ್ಚಿನ ಪ್ರಮಾಣದಲ್ಲಿ ಗೊಬ್ಬರ, ಕಬ್ಬಿಣ ಇವುಗಳು ಮೂರನೇ ಪಂಚವಾರ್ಷಿಕ ಯೋಜನೆಯಲ್ಲಿ ಸಿಕ್ಕುತ್ತದೆ. ಅಗ್ರಿಕಲ್ಚರ್ ಕಾಲೇಜು ಈಗಾಗಲೇ ಸಿದ್ಧವಾಗಿದೆ.

**ಶ್ರೀ ಜಿ.ಎಸ್. ಬೊಮ್ಮೇಗೌಡ :** ಈಗ ತಾವು ವ್ಯವಸಾಯ ಜಾಸ್ತಿ ಆಗಬೇಕು ಎಂದು ಹೇಳುತ್ತೀರಿ. ಆದರೆ ವ್ಯವಸಾಯದ ದೇಶದಲ್ಲಿ ಮೂರು ವ್ಯವಸಾಯದ ಕಾಲೇಜುಗಳನ್ನು ಸ್ಥಾಪನೆ ಮಾಡಲು ಏತಕ್ಕೆ ಅವಕಾಶವನ್ನು ಕಲ್ಪಿಸಿಕೊಂಡಿಲ್ಲ? ಶ್ರೀ ವಿಶ್ವೇಶ್ವರಯ್ಯ ಕೆನಲ್‌ನಲ್ಲಿ ರಿಸರ್ಚ್ ಸ್ಟೇಷನ್ ಮಾಡುವುದಕ್ಕೆ ಸಾಕಾದಷ್ಟು ಜಮೀನು ಮತ್ತು ನೀರಿನ ಸೌಕರ್ಯ ಇದೆ. ಅಲ್ಲಿ ಒಂದು ಅಗ್ರಿಕಲ್ಚರ್ ಕಾಲೇಜನ್ನು ಸ್ಥಾಪನೆ ಮಾಡಲು ಏತಕ್ಕೆ ಆಲೋಚಿಸಬಾರದು?

## ◆ ಅಗ್ರಿಕಲ್ಚರಲ್ ಕಾಲೇಜು ಸ್ಥಾಪನೆ ಮೇಲಿನ ಪರ ವಿರೋಧ ನಿಲುವುಗಳು :

**ಎನ್. ರಾಚಯ್ಯನವರ ಕಲ್ಪನೆಯ ಕೂಸು ಅಗ್ರಿಕಲ್ಚರಲ್ ಕಾಲೇಜು ಸ್ಥಾಪಿಸುವುದು. ಅದನ್ನು ಕುರಿತು ಸದನದಲ್ಲಿ ದೀರ್ಘ ಸಮಾಲೋಚನೆ ನಡೆಸಿ ಅದರ ರೂಪುರೇಷೆಗಳನ್ನು ವೈಚಾರಿಕವಾಗಿ ಸಿದ್ಧಪಡಿಸಿ ಮಾಡಿದ ಚರ್ಚೆ ಇಲ್ಲಿದೆ. ವಿವಿಧ ಸಚಿವರ ಪ್ರಶ್ನೆಗಳಿಗೆ ವಾಸ್ತವ ನೆಲೆಯಲ್ಲಿ ಉತ್ತರ ನೀಡುತ್ತಾ ಸಾಗಿರುವುದು ಇಲ್ಲಿನ ವಿಶೇಷ.**

ಶ್ರೀ ಎನ್. ರಾಚಯ್ಯ : ಈಗಿರುವ ಕಾಲೇಜುಗಳನ್ನು ಸಾಕಷ್ಟು ಪ್ರಮಾಣದಲ್ಲಿ ಬಿ.ಎ.ಜಿ. ಗ್ರಾಜುಯೇಟ್ಸ್‌ಗಳನ್ನು ತಯಾರು ಮಾಡಲು ಸಾಧ್ಯವಿರುವುದರಿಂದ ಮೂರನೇ ಪಂಚವಾರ್ಷಿಕ ಯೋಜನೆಯಲ್ಲಿ ವ್ಯವಸಾಯದ ಕಾಲೇಜುಗಳನ್ನು ಹೆಚ್ಚು ಸ್ಥಾಪನೆ ಮಾಡುವುದು ಸರಕಾರದ ಮನಸ್ಸಿನಲ್ಲಿ ಇಲ್ಲ. ನಾಲ್ಕು ಅಥವಾ ಐದನೇ ಪಂಚವಾರ್ಷಿಕ ಯೋಜನೆಯಲ್ಲಿ ಹೆಚ್ಚು ಅವಕಾಶ ಇರಬಹುದು. ಮೊದಲು ಅಗ್ರಿಕಲ್ಚರ್ ಕಾಲೇಜಿನಲ್ಲಿ 48 ವಿದ್ಯಾರ್ಥಿಗಳನ್ನು ಸೇರಿಸಲು ಅವಕಾಶವಿತ್ತು. ಈಗ 100 ವಿದ್ಯಾರ್ಥಿಗಳನ್ನು ಸೇರಿಸಲು ಅವಕಾಶವನ್ನು ಕಲ್ಪಿಸಿದ್ದೇವೆ. ಇನ್ನೂ ಸಂಖ್ಯೆಯನ್ನು ಹೆಚ್ಚಿಸುವುದಕ್ಕೆ ಸರಕಾರದವರು ಹಿಂಜರಿಯುವುದಿಲ್ಲ. ಹೆಚ್ಚಿನ ಪ್ರಮಾಣದಲ್ಲಿ ವಿದ್ಯಾರ್ಥಿಗಳನ್ನು ಸೇರಿಸುವುದಕ್ಕೆ ತಯಾರಾಗಿದ್ದೇವೆ. ಶ್ರೀಮಾನ್ ಶ್ರೀನಿವಾಸಶೆಟ್ಟರು ಹೇಳಿದ ಹಾಗೆ ವ್ಯವಸಾಯದ ಸ್ಕೂಲುಗಳನ್ನು ಫಾರ್ಮರ್ಸ್ ಫೋರಂ ಮುಖಾಂತರ ಮಾಡಬೇಕು. ಯಾವ ಯಾವ ಜಿಲ್ಲೆಗಳಲ್ಲಿ ಶಾಖೆಗಳು ಇಲ್ಲವೋ ಇದನ್ನು ಅದನ್ನು ನೋಡಿಕೊಂಡು ಎಲ್ಲಾ ಜಿಲ್ಲೆಗಳಲ್ಲಿಯೂ ಒಂದೊಂದನ್ನು ಸ್ಥಾಪನೆ ಮಾಡಿ ತಮಗೆ ಎಷ್ಟು ಸಂಖ್ಯೆ ಬೇಕೋ ಅಷ್ಟು ವ್ಯವಸ್ಥೆ ಮಾಡುವ ರೀತಿಯಲ್ಲಿ ಹಣವನ್ನು ಒದಗಿಸಿದ್ದೇವೆ. ಆರು ತಿಂಗಳ ಹಿಂದೆ ಒಂದು ಆಜ್ಞೆಯನ್ನು ಮಾಡಿದ್ದೇವೆ. ಮೂರನೇ ಪಂಚವಾರ್ಷಿಕ ಯೋಜನೆಯಲ್ಲಿ ವ್ಯವಸಾಯ ಶಾಲೆಗಳನ್ನು ಸ್ಥಾಪನೆ ಮಾಡಬೇಕು ಎಂದು ಹೇಳಿದ್ದೇವೆ.

ಹಾಲು ಸರಬರಾಜಿನ ವಿಷಯದಲ್ಲಿ ಶ್ರೀ ಬಿ.ಜಿ. ಖೋತ್ ಅವರು ಬಹಳ ಸ್ವಾರಸ್ಯವಾದ ನಿದರ್ಶನ ಕೊಟ್ಟು ಹಾಲು ಸರಬರಾಜು ಆಗಬೇಕು ಎಂದು

ಹೇಳಿದ್ದಾರೆ. ಹೆಚ್ಚು ಹೆಚ್ಚು ಹಣ್ಣು ಹಂಪಲುಗಳನ್ನು ಮಾಡಿದ್ದೇವೆ. ಮಂಡ್ಯ, ಗುಲ್ಬರ್ಗ, ದಾವಣಗೆರೆ ಮುಂತಾದ ಕಡೆಗಳಲ್ಲಿ ಹಾಲು ಸರಬರಾಜು ಮಾಡುವ ಯೂನಿಯನ್ ಕೋ-ಆಪರೇಟಿವ್ಸ್‌ಗಳನ್ನು ತೆಗೆದಿದ್ದೇವೆ ಮತ್ತು ಒಂದು ಲಕ್ಷಕ್ಕಿಂತ ಜನಸಂಖ್ಯೆ ಹೆಚ್ಚಾಗಿದ್ದ ಮೈಸೂರು ಮುಂತಾದ ಕಡೆಗಳಲ್ಲಿಯೂ ಆ ರೀತಿ ಮಾಡಿದ್ದೇವೆ. ಮೂರನೇ ಪಂಚವಾರ್ಷಿಕ ಯೋಜನೆಯಲ್ಲಿ ಎಲ್ಲಾ ಕಡೆಗೂ ಅದನ್ನು ಸ್ಥಾಪನೆ ಮಾಡುತ್ತೇವೆ. ಸ್ಥಳಿಯ ಸಂಸ್ಥೆಗಳು ಮುಂದೆ ಬಂದು ಹಾಲಿನ ಸರಬರಾಜು ಕೇಂದ್ರ್ರಗಳನ್ನು ತೆರೆಯುತ್ತೇವೆ ಎಂದರೆ ಕೇಂದ್ರ ಸರಕಾರದವರು ಮತ್ತು ರಾಜ್ಯ ಸರಕಾರದವರು ಅಂಥಾ ಬೇಡಿಕೆಗಳನ್ನು ಪರಿಶೀಲನೆ ಮಾಡುತ್ತೇವೆ ಎಂದು ಹೇಳಿದ್ದಾರೆ. ಬೆಂಗಳೂರಿನಲ್ಲಿ ಹಾಲು ಸರಬರಾಜಿನ ವಿಷಯದಲ್ಲಿ ಆಗಲೇ ಹೇಳಿದ್ದೇನೆ ಈ ವಿಷಯವನ್ನು ಮತ್ತೆ ಪ್ರಸ್ತಾಪ ಮಾಡುವುದು ಅನಾವಶ್ಯಕ.

ರೂರಲ್ ಯೂನಿವರ್ಸಿಟಿಗಳನ್ನು ಮಾಡಲೇಬೇಕೆಂದು ಸರಕಾರದವರು ಈಗಾಗಲೇ ತೀರ್ಮಾನವನ್ನು ತೆಗೆದುಕೊಂಡು ಕೇಂದ್ರ ಸರಕಾರದವರನ್ನು ಕೇಳಿದ್ದೇವೆ. ಕಳೆದ ವಾರ ರೂರಲ್ ಅಗ್ರಿಕಲ್ಚರಲ್ ಯೂನಿವರ್ಸಿಟಿಗಳನ್ನು ಮೈಸೂರು ರಾಜ್ಯದಲ್ಲಿ ಹೆಸರುಘಟ್ಟ ಮತ್ತು ಹೆಬ್ಬಾಳು ಕ್ಷೇತ್ರಗಳಲ್ಲಿ ಸ್ಥಾಪನೆ ಮಾಡಬೇಕೆಂದು ಸರಕಾರದವರು ಈಗಾಗಲೇ ತೀರ್ಮಾನವನ್ನು ತೆಗೆದುಕೊಂಡಿವೆ. ಈ ವಿಚಾರದಲ್ಲಿ ಕೇಂದ್ರ ಸರಕಾರದವರು ನಮಗೆ ಕೊಡಬೇಕಾದಂಥ ಸಹಾಯ ಮತ್ತು ಸಹಕಾರವನ್ನು ನೀಡಬೇಕೆಂದು ಅವರನ್ನು ಕೇಳುತ್ತೇವೆ. ಅದನ್ನು ಸಂಸ್ಥಾಪನೆ ಮಾಡುವುದು ಅವರ ಅನುಮತಿ ಮತ್ತು ಮಂಜೂರಾತಿ ಮೇಲೆ ನಿಂತಿದೆ. ಬೆಂಗಳೂರಿನ ಹಾಲಿನ ಸರಬರಾಜಿನ ಕೇಂದ್ರವನ್ನು ಹೊಸೂರು ರೋಡಿನಲ್ಲಿ ಮೆಂಟಲ್ ಆಸ್ಪತ್ರೆಯ ಹತ್ತಿರ ಸಂಸ್ಥಾಪನೆ ಮಾಡಲು 50 ಎಕರೆಯ ಜಮೀನನ್ನು ಅಕ್ವೈರ್ ಮಾಡಿದ್ದೇವೆ.

ವೆಟರ್‌ನರಿ ಸರ್ವೀಸ್ ವಿಚಾರದಲ್ಲಿ ಮಾನ್ಯ ಸದಸ್ಯರು ಅನೇಕ ಒಳ್ಳೆಯ ಸಲಹೆಗಳನ್ನು ಮಾಡಿದ್ದಾರೆ. ಎಲ್ಲಾ ರಾಜ್ಯಕ್ಕಿಂತಲೂ ಹೆಚ್ಚಿನ ರೀತಿಯಲ್ಲಿ ನಮ್ಮ ರಾಜ್ಯದಲ್ಲಿ ವೆಟರ್‌ನರಿ, ಸರ್ವೀಸ್ ಅನಿಮಲ್ ಹಸ್ಬೆಂಡರಿ ಸರ್ವೀಸ್ ಮಾಡಿದ್ದೇವೆ. ಇನ್ನು ಹೆಚ್ಚಿಗೆ ಮಾಡಬೇಕು ಎಂದು ಮೂರನೇ ಪಂಚವಾರ್ಷಿಕ ಯೋಜನೆಯಲ್ಲಿ

ಅನೇಕ ಯೋಜನೆಗಳನ್ನು ತಯಾರು ಮಾಡಿದ್ದೇವೆ. ಈಗಾಗಲೇ 567 ವೆಟರ್‌ನರಿ ಡಿಸ್‌ಪೆನ್‌ಸರಿಗಳನ್ನು ಮಾಡಿದ್ದೇವೆ ಮತ್ತು ಆರ್ಟಿಫಿಷಿಯಲ್ ಇನ್‌ಸಿಮಿನೇಷನ್ ಸೆಂಟರ್‌ಗಳನ್ನು ತೆಗೆದಿದ್ದೇವೆ. ಇನ್ನು ಹೆಚ್ಚಿನ ಪ್ರಮಾಣದಲ್ಲಿ ರೈತರಿಗೆ ಪ್ರತಿಯೊಂದು ಕಡೆಯಲ್ಲಿಯೂ ತಳಿಯನ್ನು ಉತ್ತಮ ಪಡಿಸತಕ್ಕ ರೀತಿಯಲ್ಲಿ ಈಗಾಗಲೇ ಯೋಜನೆಯಲ್ಲಿ ಅಳವಡಿಸಿಕೊಂಡಿದ್ದೇವೆ. ಮಾನ್ಯ ಸದಸ್ಯರು ಕೆಲವರು ಹೇಳಿದರು ತಳಿಗಳು ಹಾಳಾಗುತ್ತವೆ ಎಂದು ಅದು ಸರಿಯಿಲ್ಲ. ಪ್ರತಿಯೊಂದು ಹಳ್ಳಿಯಲ್ಲಿಯೂ ಒಂದೊಂದು ಅಮೃತಮಹಲ್ ಬ್ರೀಡು ಇದೆ. ಸಿಂದಿ, ಹಳ್ಳಿಕಾರ್ ಬ್ರೀಡ್ ಎಂದು ಹೀಗೆ ನಾನಾ ತರಹ ತರಹದ ಆಯಾ ಪ್ರದೇಶದಲ್ಲಿ ತಳಿಯನ್ನು ಉತ್ತಮಪಡಿಸುವುದಕ್ಕೆ ಮೂರನೇ ಪಂಚವಾರ್ಷಿಕ ಯೋಜನೆಯಲ್ಲಿ ವಿಶೇಷವಾದ ಫಾರಮ್‌ಗಳನ್ನು ಮಾಡಬೇಕೆಂದು ಮಾಡಿಕೊಂಡಿದ್ದೇವೆ. ಹೀಗೆಯೇ ಕೋಳಿ ಸಾಕಾಣಿಕೆ, ಹಂದಿ ಸಾಕಾಣಿಕೆ, ಕುರಿ ಸಂಪತ್ತನ್ನು ಅಭಿವೃದ್ಧಿ ಮಾಡತಕ್ಕದ್ದು ಎಲ್ಲಾ ವಿಚಾರಗಳಲ್ಲೂ ನಾವು ಸಾಕಾದಷ್ಟು ಪ್ರಮಾಣದಲ್ಲಿ ಇಲಾಖೆಯಲ್ಲಿ ಅನೇಕ ಕೆಲಸಗಳು ಖಾಲಿ ಇದ್ದರೂ ಕೂಡ, ಹೆಚ್ಚಿನ ಪ್ರಗತಿಯನ್ನು ಸಾಧಿಸಿದ್ದೇವೆ. ಒಳ್ಳೆಯ ರೀತಿಯಲ್ಲಿ ಕೆಲಸವನ್ನು ಮಾಡಿದ್ದೇವೆ.

ಮೀನುಗಾರಿಕೆಯ ವಿಷಯದಲ್ಲಿ ಹೇಳುವುದಾದರೆ, ಈಗ ಎರಡು ಮೂರು ವರ್ಷಗಳಿಂದ ಮಾತ್ರ ಈ ಶಾಖೆ ಇರುವುದು. ಹೊಸ ಮೈಸೂರು ಆಗುವುದಕ್ಕೆ ಮೊದಲು ಇರಲಿಲ್ಲ. ಕಳೆದ ಮೂರು ವರ್ಷಗಳಿಂದ ನಡೆದಿರುವ ಒಂದು ಪ್ರಗತಿಯನ್ನು ತಾವುಗಳು ನೋಡಿದರೆ ಬಹಳ ಸಂತೋಷಪಡುತ್ತೀರಿ. ಈಗಾಗಲೇ ಎರಡನೇ ಪಂಚವಾರ್ಷಿಕ ಯೋಜನೆಯಲ್ಲಿ 48 ಮೆಕಾನೈಜ್ಡ್ ಬೋರ್ಡುಗಳನ್ನು ಸಪ್ಲೈ ಮಾಡಿದ್ದೇವೆ. ಸುಮಾರು 150 ಬೋರ್ಡುಗಳನ್ನು ಮೂರನೇ ಪಂಚವಾರ್ಷಿಕ ಯೋಜನೆಯಲ್ಲಿ ಸಪ್ಲೈ ಮಾಡಬೇಕೆಂದಿದ್ದೇವೆ. ಶ್ರೀಮತಿ ಮಿರ್ಜಾಶಂಕರ್ ಅವರು ಫಿಷರ್‌ಮೆನ್ ಕಮ್ಯುನಿಟಿಯರವರಿಗೆ ಸಹಾಯ ಮಾಡಿಲ್ಲ ಎಂದು ಹೇಳಿದರು. ಅವರಿಗೆ ಸಾಕಷ್ಟು ಸಹಾಯವನ್ನು ಮಾಡಿದ್ದೇವೆ. ಅವರ ಒಂದು ಉದಾರವಾದ ಕೈಗಾರಿಕೆಯಿಂದ ದೇಶದ ಆಹಾರದ ಕೊರತೆಯನ್ನು ನೀಗಲು ಕಾರಣವಾಗಿದೆ. ಅವರು ಒಳ್ಳೆಯ ಕೆಲಸಗಳನ್ನು ಮಾಡಿದ್ದಾರೆ.

ತೋಟಗಾರಿಕೆ ವಿಷಯದಲ್ಲಿ ಸ್ಟೆಪ್ ಮಾದರಿಯಲ್ಲಿ ಫೀಲಿಂಗ್ ಇದೆ ಎಂದು

ಶ್ರೀ ಶ್ರೀನಿವಾಸ ಶೆಟ್ಟರು ಹೇಳಿದರು. ತೋಟಗಾರಿಕೆಯ ವಿಷಯದಲ್ಲಿ ಹೆಚ್ಚಿನ ಗಮನವನ್ನು ಕೊಟ್ಟಿದ್ದೇವೆ. ಅದಕ್ಕೆ ಪ್ರತ್ಯೇಕವಾಗಿ ಒಬ್ಬ ಡೈರೆಕ್ಟರ್ ಆಫ್ ಗಾರ್ಡನ್ಸ್ ಎಂದು ಮಾಡಿದ್ದೇವೆ.

**ಶ್ರೀ ಜಿ.ಎನ್. ಪಟ್ಟಣ್ಣ :** ಈ ವಿಷಯದಲ್ಲಿ 18 ಸ್ಕೀಮುಗಳು ಇವೆ. ಅವುಗಳಿಗಾಗಿ ಒಂದು ಕಾಸೂ ಖರ್ಚಾಗಿಲ್ಲ. ಏತಕ್ಕೋಸ್ಕರ ಖರ್ಚು ಮಾಡಿಲ್ಲ. ಸುಮ್ಮನೆ ಈ ತರಹ ಹೇಳಬೇಡಿ, ಇದುವರೆಗೂ ಅವುಗಳ ಬಗ್ಗೆ ಏನೂ ಮಾಡಿಲ್ಲ. ಇನ್ನು ಮುಂದು ಮಾಡುತ್ತೇವೆ ಎಂದು ಹೇಳಿ.

**ಶ್ರೀ ಎನ್. ರಾಚಯ್ಯ :** ಎಲ್ಲಾ ಖರ್ಚಾಗಿದೆ ಎಂದು ಹೇಳುವುದಿಲ್ಲ. ಕೆಲವು ಆಗ ಖರ್ಚಾಗಿಲ್ಲ. ತಾವು ಹೇಳುವ ರೀತಿಯಲ್ಲಿ ಅಡ್ಮಿನಿಸ್ಟ್ರೇಟೀವ್ ಡಿಫಿಕಲ್ಟಿಯಿಂದ ಕೆಲವು ಭಾಗವನ್ನು ಖರ್ಚು ಮಾಡುವುದಕ್ಕೆ ಆಗಿಲ್ಲ. ಬಹುಭಾಗವನ್ನು ಖರ್ಚು ಮಾಡಿದ್ದೇವೆ. ಮುಂದೆ ಇನ್ನೂ ಹೆಚ್ಚಿನ ಭಾಗವನ್ನು ಖರ್ಚು ಮಾಡುವುದಕ್ಕೆ ಈ ವಿಚಾರದಲ್ಲಿ ಸೂಕ್ತ ಕ್ರಮವನ್ನು ತೆಗೆದುಕೊಳ್ಳುತ್ತೇವೆ.

ಸಮಾಜ ಕಲ್ಯಾಣ ವಿಚಾರದಲ್ಲಿ ಶ್ರೀಮಾನ್ ಚನ್ನಿಗರಾಮಯ್ಯನವರು, ನನ್ನ ಕೆಲಸದ ವಿಚಾರದಲ್ಲಿ ಬಹಳ ಅಭಿನಂದನೆ ಮಾಡಿದ್ದಾರೆ. ನಾನು ಅವರಿಗೆ ಬಹಳವಾಗಿ ವಂದಿಸುತ್ತೇನೆ. ಶ್ರೀಮಾನ್ ಶ್ಯಾಮ್‌ಸುಂದರ್ ಅವರು ಸ್ವಲ್ಪ ಆಕ್ರೋಶದಿಂದ ಮಾತನಾಡುತ್ತಿದ್ದರು. ಆದರೆ ಈ ಸಾರಿ ಆ ರೀತಿ ಮಾತನಾಡಲಿಲ್ಲ. ಇವರಿಬ್ಬರಿಗೂ ಅಭಿನಂದನೆ ಮಾಡುತ್ತೇನೆ. ಇವರು ಕೆಲವು ವಿಷಯಗಳನ್ನು ಹೇಳಿದ್ದಾರೆ. ಅವುಗಳನ್ನು ಕೂಲಂಕುಷವಾಗಿ ಸೂಕ್ತವಾದ ಕ್ರಮವನ್ನು ತೆಗೆದುಕೊಳ್ಳುತ್ತೇವೆ.

ಮನೆ ಕಟ್ಟುವ ವಿಚಾರದಲ್ಲಿ ಗ್ರಾಂಟನ್ನು ಮುಂದುವರಿಸಿ ಎಂದು ಕೆಲವು ಮಾನ್ಯ ಸದಸ್ಯರು ಹೇಳಿದರು. ಹರಿಜನರು ಬೇರೆಯವರಿಗೆ ಮೋಸ ಮಾಡಿಲ್ಲ. ಹರಿಜನರಿಗೆ ಅನುಕೂಲವಾಗುವ ಉದ್ದೇಶದಿಂದ ಮನೆ ಕಟ್ಟುವುದಕ್ಕೆ ಗ್ರಾಂಟ್ ಕೊಡುವುದರಿಂದ ಅವರಿಗೆ ನೇರವಾಗಿ ಅನುಕೂಲವಾಗಿರುವುದಿಲ್ಲ. ಶ್ರೀಮಾನ್ ಚೆನ್ನಿಗರಾಮಯ್ಯನವರು ಹೇಳುವ ವಿಷಯದಲ್ಲಿ ನನಗೆ ನಂಬಿಕೆ ಇದೆ. ಈ ವಿಚಾರದಲ್ಲಿ ಹರಿಜನರಿಗೆ ಮನೆಗಳನ್ನು ಕಟ್ಟಿಸಿಕೊಡುವ ಅವರನ್ನು ಉದ್ಧಾರ

ಮಾಡುವುದಕ್ಕಿಂತಲೂ ಗುಡಿಸಲುಗಳಲ್ಲಿ ವಾಸ ಮಾಡುವ ಅವರ 10–12 ಮಕ್ಕಳನ್ನು ಉದ್ಧಾರ ಮಾಡಿ ಅವರಿಗೆ ಒಳ್ಳೆಯ ಊಟವನ್ನು ಹಾಕಿ ಒಳ್ಳೆಯ ಶಿಕ್ಷಣವನ್ನು ಕೊಟ್ಟು ಒಳ್ಳೆಯ ರೀತಿಯಲ್ಲಿ ಅವರನ್ನು ತಯಾರು ಮಾಡಿ ಅವರು ನಾಯಿಗಳು, ಹಂದಿಗಳು, ಕತ್ತೆಗಳ ಜೊತೆಯಲ್ಲಿ ತಿರುಗಾಡುವುದನ್ನು ತಪ್ಪಿಸುವುದಕ್ಕೋಸ್ಕರ ಅವರ ತಂದೆ ತಾಯಿಗಳಿಗೆ ಮನೆಗಳನ್ನು ಕಟ್ಟಿಕೊಡುವ ಬದಲು ಮಕ್ಕಳಿಗೆ ದೊಡ್ಡ ದೊಡ್ಡ ಭವ್ಯ ಭವನಗಳನ್ನು ಕಾಲೇಜು, ಹೈಸ್ಕೂಲ್ ಮಿಡಲ್‌ಸ್ಕೂಲ್ ಮತ್ತು ಪ್ರೈಮರಿ ಸ್ಕೂಲ್ ಹಾಸ್ಟೇಲುಗಳನ್ನು ಕಟ್ಟಿಸಬೇಕೆಂದಿದ್ದೇವೆ. ಅವರು ಸಣ್ಣ ಮನೆಗಳಲ್ಲಿ ಇರುವುದಕ್ಕಿಂತ ಭವ್ಯ ಭವನದಲ್ಲಿ ಬೆಳೆಯಲಿ ಎನ್ನುವ ಉದ್ದೇಶವೇ ಹೊರತು ಬೇರೆ ಇಲ್ಲ. ಆ ವಿಚಾರದಲ್ಲಿ ಸಾಕಷ್ಟು ಯೋಜನೆಗಳನ್ನು ಮಾಡಿದ್ದೇವೆ. ಆ ಯೋಜನೆಯ ಪ್ರಕಾರ ಹೌಸಿಂಗ್ ಸ್ಕೀಮಿನಲ್ಲಿ ಅವರಿಗೆ ಸಿಕ್ಕುವ ವ್ಯವಸ್ಥೆಯನ್ನು ಮಾಡಿದ್ದೇವೆ. ಆ ಹೌಸಿಂಗ್ ಸ್ಕೀಮಿನಲ್ಲಿ ಮನೆ ಕಟ್ಟಲು 400 ರೂಪಾಯಿ ತೆಗೆದುಕೊಳ್ಳಲಿ ಮೂರು ಸಾವಿರ ರೂಪಾಯಿಗಳನ್ನು ತೆಗೆದುಕೊಳ್ಳಲಿ ಒಳ್ಳೆಯ ಮನೆಗಳನ್ನು ಕಟ್ಟಿಕೊಳ್ಳಲಿ. ಮನೆಗಳನ್ನು ಕಟ್ಟಿಕೊಳ್ಳಲು ಸಹಾಯ ಮಾಡುವುದನ್ನು ನಿಲ್ಲಿಸಿಲ್ಲ ತಾಲ್ಲೂಕು ಬೋರ್ಡ್ ಈ ಕೆಲಸ ಮಾಡಬೇಕು. ತಾಲ್ಲೂಕು ಬೋರ್ಡ್‌ನಲ್ಲಿ ಎಲೆಕ್ಟೆಡ್ ಮೆಂಬರುಗಳಲ್ಲಿ ಆಸಕ್ತಿ ಇರುವವರು ಇದ್ದಾರೆ. ಶ್ರೀಮಾನ್ ಲಿಂಗೇಗೌಡರು ಹೇಳಿದ ಹಾಗೆ ಅನೇಕ ಪಕ್ಷಗಳವರು ಇದ್ದಾರೆ. ಹಣ ದುರುಪಯೋಗವಾಗದ ರೀತಿಯಲ್ಲಿ ಹರಿಜನರಿಗೆ ಅನುಕೂಲವಾಗುವ ರೀತಿಯಲ್ಲಿ ಮಾಡುತ್ತಾರೆ ಎನ್ನುವುದು ಸರ್ಕಾರಕ್ಕೆ ನಂಬಿಕೆ ಇದೆ. ಇದು ಒಳ್ಳೆಯ ತೀರ್ಮಾನ ಅದನ್ನು ಶ್ರೀಮಾನ್ ಚೆನ್ನಿಗ ರಾಮಯ್ಯನವರು ಖಂಡಿತ ಒಪ್ಪುತ್ತಾರೆಂದು ನಾನು ನಂಬಿಕೊಂಡಿದ್ದೇನೆ.

**ಶ್ರೀ ಆರ್. ಚೆನ್ನಿಗರಾಮಯ್ಯ** : ಇನ್ನು ಮೇಲೆ ಹರಿಜನರಿಗೆ ಮಾತ್ರವಲ್ಲ, ಯಾರಿಗೂ ಗ್ರಾಂಟ್ ಕೊಡುವುದಿಲ್ಲ. ಕೈಗಾರಿಕೆ ತೋಟಗಾರಿಕೆ ಮುಂತಾದವುಗಳ ವಿಚಾರದಲ್ಲಿ ಸಹಾಯ ಮಾಡೋಣ. ಅದರಿಂದ ವರಮಾನವೂ ಹೆಚ್ಚುತ್ತದೆ. ಆರ್ಥಿಕ ಸ್ಥಿತಿಯು ಸುಧಾರಣೆಯಾಗುತ್ತದೆ. ಮನೆ ಕಟ್ಟುವುದಕ್ಕೆ ಹಣವನ್ನು ಗ್ರಾಂಟ್ ರೂಪವಾಗಿ ಕೊಟ್ಟರೆ ಆರ್ಥಿಕಾಭಿವೃದ್ಧಿಯಾಗುವುದಿಲ್ಲ. ಜ್ಞಾನವೂ ಬೆಳೆಯುವುದಿಲ್ಲ, ಶರೀರ ಕೂಡ ಬೆಳೆಯುವುದಿಲ್ಲ ಎಂದು ಇದನ್ನೆಲ್ಲಾ ಕೂಲಂಕುಷವಾಗಿ ಪರಿಶೀಲನೆ ಮಾಡಿ ರಾಜ್ಯಾಂಗಬದ್ಧವಾಗಿ ಏನು ರಕ್ಷಣೆ ಕೊಡಬೇಕೋ ಅದನ್ನು ಕಾನೂನು ಪ್ರಕಾರ ಸರ್ಕಾರ ಕೊಡಲು ಸಿದ್ಧವಾಗಿದೆ.

ಹಾಗೆ ಕೊಡುವ ಹಣ ಅನ್ಯಾಯವಾಗಬಾರದು. ಅದು ಹರಿಜನರಿಗೆ ಮಾತ್ರ ಕೊಟ್ಟರೆ ಸ್ವಾರ್ಥ ಭಾವನೆಗೆ ಅವಕಾಶವಾಗುತ್ತದೆ. ಹಾಗಾಗಬಾರದು, ಎಲ್ಲರಿಗೂ ಅನುಕೂಲವಾಗಬೇಕು. ಕೈಗಾರಿಕೆ, ವಿದ್ಯಾಭ್ಯಾಸ ಮುಂತಾದವನ್ನೆಲ್ಲಾ ಬೆಳೆಸಲು ಅವಕಾಶಬೇಕು. ಆರ್ಥಿಕ ಸ್ಥಿತಿ ಉತ್ತಮವಾಗಬೇಕು, ಕೊಡುವುದು ನೇರವಾಗಿ ಜನರಿಗೆ ತಲುಪಬೇಕು, ಸರ್ಕಾರಕ್ಕೂ ಹೊರೆಯಾಗಬಾರದು ಎಂದು ಉದ್ದೇಶಪಟ್ಟಿದ್ದೇವೆ.

**ಶ್ರೀ ಎನ್. ರಾಚಯ್ಯ :** ಇನ್ನು ಚನ್ನಿಗರಾಮಯ್ಯನವರು ಒಂದು ವಿಚಾರ ಪ್ರಸ್ತಾಪಿಸಿದ್ದಾರೆ. ಗ್ರ್ಯಾಂಟ್ ಕೊಡುವುದನ್ನು ನಿಲ್ಲಿಸಿದ್ದೇವೆ. ಜಮೀನು ಕೊಟ್ಟು ವ್ಯವಸಾಯ ಕಾಲೋನಿ ಕೊಡುವ ಕಡೆ 400 ರೂಪಾಯಿಗಳನ್ನು ಬದಲಾಗಿ 500 ರೂಪಾಯಿಗಳನ್ನು ಕೊಡಲು ಅವಕಾಶವಿದೆ ಎಷ್ಟು ಸಂಸಾರಗಳಿದ್ದರೂ ಪರವಾಗಿಲ್ಲ. 10 ಇರಬಹುದು ಅಥವಾ 100 ಇರಬಹುದು. ಪಿರಿಯಾಪಟ್ಟಣದಲ್ಲಿ 18 ಸಾವಿರ ಎಕರೆ ಕೊಟ್ಟಿದ್ದೇವೆಯೆಂದು ಹೇಳಿದರು. ಆರ್ಥಿಕ ಪರಿಸ್ಥಿತಿ ಸುಧಾರಿಸಲು ಜಮೀನು ಕೊಟ್ಟರೆ ಅದರ ಮೇಲೆ ಮನೆ ಕಟ್ಟಬೇಕಾಗಿ ಬಂದಿರುವುದು ಹರಿಜನರಿಗೂ ಮತ್ತು ಬೇರೆಯವರಿಗೂ ಸಹಾಯ ಮಾಡುತ್ತೇವೆ. ಕೇಂದ್ರ ಸರ್ಕಾರದ ನೀತಿಗೆ ವಿರುದ್ಧವಾಗಿ ಹೋಗುವುದಕ್ಕಾಗುವುದಿಲ್ಲ.

**ಶ್ರೀ ಆರ್. ಚನ್ನಿರಾಮಯ್ಯ :** ನಾನು ಕೇಂದ್ರದ ಸ್ಕೀಮ್ ವಿಚಾರ ಹೇಳಲಿಲ್ಲ. ಮನೆ ಕಟ್ಟಿಕೊಳ್ಳುವುದಕ್ಕೆ 400 ರೂಪಾಯಿ ಕೊಡುವ ವಿಚಾರ ಹೇಳಿದೆ.

**ಶ್ರೀ ಎನ್. ರಾಚಯ್ಯ :** ಮನೆ ಕಟ್ಟಲು ಹಣ ಗ್ರ್ಯಾಂಟ್ ರೂಪವಾಗಿ ಕೊಡಲು ಸರಕಾರ ಒಪ್ಪುವುದಿಲ್ಲ. 400 ರೂಪಾಯಿಗಳಿಗೆ ಬದಲಾಗಿ ಸಾಲದ ರೂಪವಾಗಿ ಜಾಸ್ತಿ ಹಣ ಕೊಡುತ್ತೇವೆ. ಅದನ್ನು ತೆಗೆದುಕೊಂಡು ಮನೆ ಕಟ್ಟಿಕೊಳ್ಳಲಿ.

**ಶ್ರೀ ಎ. ಮುನಿಯಪ್ಪ :** ಸಾಲ ಕೊಡುವಾಗ ಕೊಡುವ 100 ರೂಪಾಯಿಗಳನ್ನು ಸಬ್ಸಿಡಿಯಾಗಿ ಏಕೆ ಕನ್‌ವರ್ಟ್ ಮಾಡಬಾರದು.

**ಶ್ರೀ ಎನ್. ರಾಚಯ್ಯ :** ಈಗ ಮನೆ ವಿಚಾರದಲ್ಲಿ ಸಬ್ಸಿಡಿ ಕೊಡುವುದು ಸರಿಯಲ್ಲವೆಂಬ ತೀರ್ಮಾನಕ್ಕೆ ಸರ್ಕಾರ ಬಂದಿದೆ. ಅದನ್ನು ಈಗಾಗಲೇ ಹೇಳಿದ್ದೇನೆ. ಇಷ್ಟು ಹೇಳಿ ತೋಟಗಾರಿಕೆ, ಮೀನುಗಾರಿಕೆ, ಸಮಾಜ ಕಲ್ಯಾಣ ಮುಂತಾದವುಗಳ ವಿಚಾರದಲ್ಲಿ ಆಧಾರ ರಹಿತವಾಗಿ ಟೀಕೆ ಮಾಡಿರುವುದನ್ನು

ಒಪ್ಪಿಕೊಳ್ಳದೇ ಈ ಬಜೆಟ್ಟನ್ನು ಸರ್ವಾನುಮತದಿಂದ ಒಪ್ಪಿಕೊಳ್ಳಬೇಕೆಂದು ಪ್ರಾರ್ಥನೆ ಮಾಡುತ್ತೇನೆ.

## ಕೃಷಿ ವಿಭಾಗಕ್ಕೆ ಟ್ರ್ಯಾಕ್ಟರ್ಸ್ ಬುಲ್ಡೋಜರ್ಸ್ ಲಾರಿಸ್ ಸೇರ್ಪಡೆ

Sri N. Rachaiaha (Minister forAgriculture and SocialWelfare)

| | | 1958–59 | 1959–60 | 1960–61 |
|---|---|---|---|---|
| a. | (1) ಟ್ರ್ಯಾಕ್ಟರ್ಸ್‌ಗಳು | 187 | 184 | 166 |
| | (2) ಬುಲ್ಡೋಜರ್‌ಗಳು | 51 | 51 | 53 |
| | (3) ಲಾರಿಗಳು | 24 | 24 | 28 |
| | (4) ಟ್ರಕ್ಕುಗಳು | 01 | 01 | 01 |
| b. | (1) ಟ್ರ್ಯಾಕ್ಟರ್‌ಗಳು | 43 | 45 | 44 |
| | (2) ಬುಲ್ಡೋಜರ್‌ಗಳು | 40 | 32 | 40 |
| | ಲಕ್ಷಗಳಲ್ಲಿ | | | |
| c. | | 7.39 | 8.14 | 5.28 |
| d. | | 2.56 | 3.78 | 1.50 |
| | | No | No | No |
| | (1) ಟ್ರ್ಯಾಕ್ಟರ್‌ಗಳು | 3 | 3 | 3 |
| | (2) ಬುಲ್ಡೋಜರ್‌ಗಳು | 7 | 6 | 10 |
| | (3) ಲಾರಿಗಳು | 25 | 25 | 20 |
| | ಲಕ್ಷಗಳಲ್ಲಿ | | | |
| e. | 2.07 | 3.27 | 2.27 | |

**ಶ್ರೀ ಕೆ. ಕೆಂಚಪ್ಪ :** (ಬಿ) ಗೆ ಉತ್ತರವಾಗಿ ಟ್ರಾಕ್ಟರ್‌ಗಳು 43, 45 ಮತ್ತು 44 ಎಂದು ಹೇಳಿದ್ದೀರಿ. (ಡಿ) ಗೆ ಉತ್ತರವಾಗಿ 2.56 ಲಕ್ಷ, 3.78 ಲಕ್ಷ ಮತ್ತು 1.50 ಲಕ್ಷ ಬರೀ ರಿಪೇರಿಗಾಗಿ ಖರ್ಚಾಗಿದೆ ಎಂದು ಹೇಳಿದ್ದೀರಿ. ಹೀಗೆ ರಿಪೇರಿಗಾಗಿ ಖರ್ಚು ಮಾಡುವುದಕ್ಕಿಂತ ಇವನ್ನು ಕೊಂಡುಕೊಡಿದ್ದರೆ ಎಷ್ಟು ಖರ್ಚಾಗುತ್ತಿತ್ತು?

**ಶ್ರೀ.ಎನ್.ರಾಚಯ್ಯ:** ಇರತಕ್ಕ ಮೆಷಿನ್‌ಗಳನ್ನು ನಾವು ರಿಪೇರಿ ಮಾಡಿ ಸಾಧ್ಯವಾದಷ್ಟು ಎಕನಾಮಿಕ್ ಆಗಿ ಉಪಯೋಗಿಸಬೇಕು ಎಂದು ಮಾಡಿದೆ.

**ಶ್ರೀ.ಕೆ.ಕೆಂಚಪ್ಪ:** ರಿಪೇರಿ ಮಾಡದೇನೇ ಇವುಗಳನ್ನು ಕೊಂಡು ಕೊಂಡಿದ್ದರೆ ಎಷ್ಟು ಖರ್ಚಾಗುತ್ತಿತ್ತು?

**ಶ್ರೀ.ಎನ್.ರಾಚಯ್ಯ:** ತಾವೇ ಲೆಕ್ಕ ಹಾಕಿಕೊಂಡು ನೋಡಿದರೆ ನಿಮಗೇ ಗೊತ್ತಾಗುತ್ತದೆ.

**ಶ್ರೀ.ಕೆ.ಕೆಂಚಪ್ಪ:** ಒಂದು ವೇಳೆ ಈ ಟ್ರಾಕ್ಟರು ಮತ್ತು ಬುಲ್‌ಡೋಜರ್‌ಗಳನ್ನು ಕೊಂಡುಕೊಂಡಿದ್ದರೆ ಎಷ್ಟು ಖರ್ಚು ಬರುತಿತ್ತು?

**ಶ್ರೀ ಎನ್.ರಾಚಯ್ಯ:** ಕೊಂಡುಕೊಳ್ಳದೆ ಇರುವ ಯಂತ್ರಗಳನ್ನು ರಿಪೇರಿ ಮಾಡಿ ರೈತರಿಗೆ ಉಪಯೋಗಕ್ಕಾಗಿ ಕೊಡಬೇಕೆಂದು ಈ ಟ್ರಾಕ್ಟರ್‌ಗಳನ್ನು ಮತ್ತು ಬುಲ್‌ಡೋಜರ್‌ಗಳನ್ನು ರಿಪೇರಿ ಮಾಡಲಾಯಿತು. ಇದಕ್ಕಾಗಿ ನಮ್ಮಲ್ಲೇ 15 ವರ್ಕ್‌ಶಾಪ್ ಯೂನಿಟ್‌ಗಳಿವೆ. ಈ ವರ್ಕ್‌ಶಾಪ್‌ಗಳಲ್ಲೇ ಇವನ್ನೆಲ್ಲಾ ರಿಪೇರಿ ಮಾಡುತ್ತಿದ್ದೇವೆ.

**ಶ್ರೀ ಜೆ.ಬಿ.ಮಲ್ಲಾರಾಧ್ಯ:** (ಎ)ಗೆ ಉತ್ತರವಾಗಿ 187, 184, 166 ಎಂದಿದೆ. ಇವುಗಳ ಪೈಕಿ (ಬಿ)ಗೆ ಕೊಟ್ಟಿರುವ ಉತ್ತರದಲ್ಲಿ 43, 45, 44 ಮಾತ್ರ ಕೆಲಸ ಮಾಡಲು ಯೋಗ್ಯವಾಗಿವೆ ಎಂದಿದೆ ಮಿಕ್ಕವುಗಳು ಏನಾದವು?

**ಶ್ರೀ ಎನ್.ರಾಚಯ್ಯ:** ಎಲ್ಲಾ ರಿಪೇರಿ ಆಗಬೇಕು.

**ಶ್ರೀ ಜೆ.ಬಿ.ಮಲ್ಲಾರಾಧ್ಯ:** 58–59ರಲ್ಲಿ 187, 59–60ರಲ್ಲಿ 184 ಮತ್ತು 60–61ರಲ್ಲಿ 186 ಇವೆ. ಇವುಗಳಲ್ಲಿ ಕೆಲಸ ಮಾಡಲು ಲಾಯಕ್ಕಾದವು 43, 45,

44 ಎಂದಿದೆ. ಎಂದರೆ ನೂರಕ್ಕೆ ಮೇಲ್ಪಟ್ಟು ರಿಪೇರಿಯಾಗಬೇಕು ಎಂದರೆ, ಇದರ ಮೇಲೆ ಡೆಡ್ ಕ್ಯಾಪಿಟಲ್, ಇಂಟರೆಷ್ಟ್ ಏನಾಯಿತು? ಇದರಿಂದಾಗಿ ರೈತರಿಗೆ ಅನುಕೂಲವೂ ಇಲ್ಲ, ಇಂತಹುಗಳನ್ನು ಏಕೆ ಇಟ್ಟುಕೊಂಡಿದ್ದೀರಿ?

**ಶ್ರೀ ಎನ್.ರಾಚಯ್ಯ:** ಈಗಾಗಲೇ 62 ಟ್ರ್ಯಾಕ್ಟರ್‌ಗಳನ್ನು ಆಕ್ಷನ್ ಮಾಡಬೇಕು ಮತ್ತು ಈ ರೀತಿಯಾಗಿ ಡಿಸ್‌ಪೋಸ್ ಮಾಡಬೇಕೆಂದು ಆಜ್ಞೆಯನ್ನೂ ಮಾಡಿದೆ. ಒಂಬತ್ತನ್ನು ಸ್ಕ್ರಾಪ್ ಮಾಡಬೇಕೆಂದು ಇದೆ. ಹತ್ತು ವರ್ಷಗಳಿಗೆ ಮೇಲ್ಪಟ್ಟು ಕೆಲಸ ಮಾಡಿರತಕ್ಕವುಗಳನ್ನು ರಿಪೇರಿ ಮಾಡುವುದಕ್ಕಾಗುವುದಿಲ್ಲ ಎಂದು ಈ ರೀತಿ ಮಾಡಲಾಗುತ್ತಿದೆ.

**ಶ್ರೀ ಜೆ.ಬಿ. ಮಲ್ಲಾರಾಧ್ಯ:** (ಬಿ) ಯ ಉತ್ತರದಲ್ಲಿ ಕೊಟ್ಟಿರುವ 43, 45 ಮತ್ತು 44 ಇವುಗಳನ್ನು ಬಿಟ್ಟು ಸ್ಕ್ರಾಪ್ ಮಾಡುವುದು ಎಷ್ಟು? ರಿಪೇರಿಯಾಗಬೇಕು ಮತ್ತು ಇನ್ನುಳಿದವುಗಳು ಏನಾಗಿವೆ ಎನ್ನುವುದರ ಪೂರ್ತಿ ವಿವರಗಳನ್ನು ಕೊಡುವುದಕ್ಕಾಗುತ್ತದೆಯೇ?

**ಶ್ರೀ ಎನ್.ರಾಚಯ್ಯ:** ಈಗ 44 ಕೆಲಸ ಮಾಡುತ್ತಿವೆ. 51 Tracters are under repairs and capable of being repaired. Spare parts for repaiting these machines are being procured. These level about 71 tracters which are beyond economic repairs, 9 are be scrapped an 62 to be auctioned in public action.

**ಶ್ರೀ ಕೆ.ಕೆಂಚಪ್ಪ:** (ಇ) ಗೆ ಉತ್ತರವಾಗಿ 2.07 ಲಕ್ಷ, 3.27 ಲಕ್ಷ ಮತ್ತು 2.27 ಲಕ್ಷ ಎಂದು ಇರುವುದರಲ್ಲಿ ಇಂಜಿನಿಯರ್‌ಗಳ ಸಿಬ್ಬಂದಿಗಾಗಿ ಎಷ್ಟು ಖರ್ಚಾಗಿದೆ ಮತ್ತು ಇಷ್ಟು ಸಿಬ್ಬಂದಿಯನ್ನೂ ಏತಕ್ಕಾಗಿ ಇಟ್ಟುಕೊಂಡಿದ್ದೀರಿ?

**ಶ್ರೀ ಎನ್.ರಾಚಯ್ಯ:** ತಾವು ಬರೀ ಖರ್ಚಾಗಿರುವುದನ್ನೇ ನೋಡುತ್ತಿದೀರಿ. 58–59ರಲ್ಲಿ 8, 13, 868 ರೂಪಾಯಿಗಳಷ್ಟು ರೆವಿನ್ಯೂ ಬಂದಿದೆ. ಮತ್ತು ಈ ಡಿಸೆಂಬರ್ ಅಖೈರುವರೆಗೆ 7, 27, 783 ರೂಪಾಯಿಗಳು ಕಳೆದ ವರ್ಷಕ್ಕೆ ಬಂದಿದೆ. ಇದೇ ರೀತಿ ರೆವಿನ್ಯೂ ಕೂಡ ಬಂದಿದೆ. ಖರ್ಚು ಬಂದಿದೆ.

ಶ್ರೀ ಕೆ.ಕೆಂಚಪ್ಪ: ಬರೀ ಇಂಜಿನಿಯರುಗಳಿಗಾಗಿ ಎಷ್ಟು ಖರ್ಚು ಮಾಡಿದ್ದೀರಿ?

ಶ್ರೀ ಎನ್.ರಾಚಯ್ಯ: ಬರೀ ರಿಪೇರಿ ಮಾಡುವ ಉದ್ದೇಶಕ್ಕಾಗಿ ಈ ಬುಲ್‌ಡೋಜರ್‌ಗಳನ್ನು ಇಟ್ಟುಕೊಂಡಿಲ್ಲ. ರೈತರುಗಳಿಗೆ ಸಾಧ್ಯವಾದಷ್ಟು ಕಡಿಮೆಯ ದರದಲ್ಲಿ ಅವರಿಗೆ ಒದಗಿಸಬೇಕೆಂದು ಮತ್ತು ಅವರಿಗೆ ಅನುಕೂಲ ಮಾಡಬೇಕೆಂದು ಇದೆ. ಲಾಭಕ್ಕೋಸ್ಕರವಾಗಿ ನಾವು ಇಟ್ಟುಕೊಂಡಿಲ್ಲ.

ಶ್ರೀ ಕೆ.ಕೆಂಚಪ್ಪ: ಲಕ್ಷಾಂತರ ರೂಪಾಯಿಗಳನ್ನು ಖರ್ಚು ಮಾಡುತ್ತಿರುವಾಗ ನೀವು ರಿಪೇರಿ ಎಷ್ಟಾಬ್ಲಿಷ್‌ಮೆಂಟಿಗಾಗಿ ಎಷ್ಟು ಖರ್ಚು ಮಾಡುತ್ತಿದ್ದೀರಿ?

**Sri J.B.Mallaradhya:** The Hon'ble Minister pleased to state that it is not a question of profit. May I know what is the return on the capital invested on this?

**Sri N. Rachiah:** I have called for the information. As the Hon'ble members has asked for information for the last three years, I was not able to go get it early

ಶ್ರೀಮತಿ ಕೆ.ಎಸ್.ನಾಗರತ್ನಮ್ಮ: 58–59, 59–60 ಮತ್ತು 60–61 (ಸಿ)ಗೆ ಉತ್ತರವಾಗಿ ಬಾಡಿಗೆ, ಸರ್ಕಾರಕ್ಕೆ ಪೂರ್ತಿ ಬಂದಿದೆಯೋ ಇಲ್ಲ ಇನ್ನೂ ಬಾಕಿ ಉಳಿದಿರುವುದು ಎಷ್ಟು?

ಶ್ರೀ ಎನ್.ರಾಚಯ್ಯ : ಬೇರೆ ಪ್ರಶ್ನೆ ಕೇಳಿದರೆ ಆಗ ಉತ್ತರ ಕೊಡಬಹುದು.

ಶ್ರೀಮತಿ ಬಸವರಾಜೇಶ್ವರಿ: ಮೂರನೇ ಪಂಚವಾರ್ಷಿಕ ಯೋಜನೆಯಲ್ಲಿ ಪ್ರತಿಯೊಂದು ಡಿಸ್ಟ್ರಿಕ್ಸ್‌ನಲ್ಲೂ ಟ್ರಾಕ್ಟರ್ ಸರ್ವೀಸಿಂಗ್ ಸ್ಟೇಷನ್ ತೆಗೆಯುವ ಯೋಜನೆ ಏನಾದರೂ ಸರ್ಕಾರದವರು ಮಾಡಿದ್ದಾರೆಯೇ?

ಶ್ರೀ ಎನ್.ರಾಚಯ್ಯ: ಅದನ್ನು ಪರಿಶೀಲನೆ ಮಾಡುತ್ತೇವೆ.

ಶ್ರೀ ಎಚ್.ವಿ.ಕೌಜಲಗಿ: ಪ್ರತಿಯೊಂದು ಟ್ರಾಕ್ಟರು, ಬುಲ್‌ಡೋಜರು ಎಷ್ಟು ವರ್ಷ ಕೆಲಸ ಕೊಟ್ಟಿದೆ?

**ಶ್ರೀ ಎನ್.ರಾಚಯ್ಯ:** ಸುಮಾರು ಹತ್ತು ವರ್ಷ ಕೊಟ್ಟಿದೆ. Subject to correction.

**ಶ್ರೀ ಡಿ.ಎಚ್.ರುದ್ರಪ್ಪ:** ದೇಶದಲ್ಲಿ ತಾಲ್ಲೂಕಿಗೆ ಒಂದೊಂದು ಟ್ರಾಕ್ಟರ್ ಇರುವ ಹಾಗೆ ಮಾಡಲಿಕ್ಕೆ ಸರ್ಕಾರದವರು ಏನಾದರೂ ವ್ಯವಸ್ಥೆ ಮಾಡಿದ್ದೀರಾ?

**ಶ್ರೀ ಎನ್.ರಾಚಯ್ಯ:** ಮೂರನೇ ಪಂಚವಾರ್ಷಿಕ ಯೋಜನೆಯಲ್ಲಿ ಸುಮಾರು ಮೂವತ್ತು ಬುಲ್‌ಡೋಜ಼ರ್‌ಗಳನ್ನು ತೆಗೆದುಕೊಳ್ಳಬೇಕೆಂದು ಇದೆ. ಮತ್ತು ಪ್ರಶ್ನೆಯನ್ನು ಮಾನ್ಯ ಸದಸ್ಯರ ಗಮನಕ್ಕೆ ತಂದಿದ್ದೇನೆ. ರೈತರು ಅವರೇ ಸ್ವಂತವಾಗಿ ಟ್ರಾಕ್ಟರ್‌ಗಳನ್ನೂ ತೆಗೆದುಕೊಳ್ಳುವುದಕ್ಕೆ ಅನುಕೂಲವಾಗುವಂತೆ ಹೈರ್ ಪರ್ಚೆಸ್ ಸಿಸ್ಟಂ ಮೇಲೆ 100ಕ್ಕಿಂತಲೂ ಹೆಚ್ಚು ಟ್ರಾಕ್ಟರ್‌ಗಳನ್ನು ಒದಗಿಸಿದ್ದೇವೆ. ಅದರಲ್ಲಿ ಫರ್ಗುಸನ್ ಟ್ರಾಕ್ಟರ್‌ಗಳನ್ನೇ ಹೆಚ್ಚಾಗಿ ಕೇಳುತ್ತಾ ಇರುವುದರಿಂದ ಎಷ್ಟು ಬರುತ್ತದೆಯೋ ಅಷ್ಟನ್ನು ಸಪ್ಲೈ ಮಾಡುತ್ತೇವೆ. ಸರ್ಕಾರದವರು ಒದಗಿಸುವುದು ಒಂದರಿಂದಲೇ ಅಲ್ಲ. ರೈತರು ತಮ್ಮ ಸ್ವಂತ ಟ್ರಾಕ್ಟರ್‌ನಿಂದ ತಾವೂ ಉಳುಮೆ ಮಾಡಿ ಅಕ್ಕ ಪಕ್ಕದ ರೈತರಿಗೂ ಕೊಡುತ್ತಾ ಇರುವುದರಿಂದ ಅಷ್ಟೇನೂ ಇದರ ಕೊರತೆ ಕಾಣುತ್ತಾ ಇಲ್ಲ.

**Dr.A.R.Krisiddappa:** The Hon'ble Minister was pleased to say that these tracters and bulldozers are maintained by government in order to help the ryots and that government is not motivated merely by the concideration of profit or loss. Will the government be pleases to reduce the rent charged per hour for bulldozer in view of the fact is far too high now?

**Sri.N.Rachaiah;** I agree with the hon'ble member. In fact, government have been receiving representations that the rates must be reduced. This aspect is also actually being examined.

**ಶ್ರೀ ಬಿ.ದುಗ್ಗಪ್ಪ:** 60–61 ರಲ್ಲಿ ಕೆಲಸ ಮಾಡುತ್ತಿರುವ ಟ್ರಾಕ್ಟರ್‌ಗಳ ಸಂಖ್ಯೆ 44 ಎಂದು ಹೇಳಿದ್ದೀರಿ. ಜಿಲ್ಲಾವಾರು ವಿವರ ಕೊಡುವುದಕ್ಕಾಗುತ್ತದೆಯೇ?

**ಶ್ರೀ ಎನ್.ರಾಚಯ್ಯ:** ಸಾಮಾನ್ಯವಾಗಿ ಇಡೀ ಸ್ಟೇಟ್‌ನಲ್ಲಿ 15 ಯೂನಿಟ್‌ಗಳನ್ನು ಇಟ್ಟುಕೊಂಡಿದ್ದೇವೆ. ಆ ಯೂನಿಟ್ಟುಗಳಲ್ಲಿ ಕೆಲಸ ಮಾಡುತ್ತಾ ಇರುತ್ತವೆ. ಕೆಲವು ಸಂದರ್ಭಗಳಲ್ಲಿ ಡಿಸ್ಟ್ರಿಕ್ಟ್‌ನಿಂದ ಡಿಸ್ಟ್ರಿಕ್ಟ್‌ಗೆ ಅಗತ್ಯ ಬಿದ್ದಾಗ ಟ್ರಾನ್ಸ್‌ಫರ್ ಮಾಡುತ್ತೇವೆ. ಆ ಅಂಕಿಅಂಶ ಇಲ್ಲ. ಬೇಕಾದರೆ ತರಿಸಿಕೊಡುತ್ತೇನೆ.

**ಶ್ರೀ ಬಿ.ದುಗ್ಗಪ್ಪ:** ಟ್ರಾಕ್ಟರ್‌ಗಳು, ಬುಲ್‌ಡೋಜ಼ರ್‌ಗಳು ಸಿಕ್ಕದೆ ತೊಂದರೆಯಾಗಿದೆ ಎಂದು ರೈತರು ಹೇಳುತ್ತಾರೆ. ಇವತ್ತು ಕೇಳಿದರೆ ವರ್ಷ ಎರಡು ವರ್ಷ ಆಗುತ್ತದೆ. ಎಂಬುದು ಸರ್ಕಾರದ ಗಮನಕ್ಕೆ ಬಂದಿದೆಯೇ?

**ಶ್ರೀ ಎನ್.ರಾಚಯ್ಯ:** ಸಂಬಂಧಪಟ್ಟ ಕೇಂದ್ರ ಸರ್ಕಾರದ ವ್ಯವಸಾಯ ಮಂತ್ರಿಗಳಿಗೂ ಮತ್ತು ಪ್ರಧಾನಮಂತ್ರಿಗಳಿಗೂ ಮುಖ್ಯಮಂತ್ರಿಗಳು ಮತ್ತು ನಾನೂ ಇಬ್ಬರೂ ಕೂಡ ಬಹಳ ಒತ್ತಾಯವಾಗಿ ಟ್ರಾಕ್ಟರ್ ಮತ್ತು ಬುಲ್‌ಡೋಜ಼ರ್‌ಗಳು ಬೇಕೆಂದು ಪದೇ ಪದೇ ಒತ್ತಾಯ ಮಾಡುತ್ತಾ ಇದ್ದೇವೆ. ಅವರು ಭರವಸೆ ಕೊಡುತ್ತಾ ಇದ್ದಾರೆ. ಸಪ್ಲೈ ಬಂದಾಗ ಸಾಧ್ಯವಾದಷ್ಟೂ ಕೊಡುತ್ತೇವೆ ಎಂದು ಹೇಳಿದ್ದಾರೆ ಈಗಾಗಲೇ ಸೂಕ್ತಕ್ರಮ ತೆಗೆದುಕೊಂಡಿದ್ದಾರೆ.

**ಶ್ರೀಮತಿ ಬಸವರಾಜೇಶ್ವರಿ:** ಟ್ರಾಕ್ಟರ್ ಹರಾಜು ಮಾಡಿದ್ದೇವೆ ಎಂದು ಹೇಳಿದಿರಿ ರಾಯಚೂರು ಜಿಲ್ಲೆಯಲ್ಲಿ ಯಾವುದಾದರೂ ಹರಾಜು ಮಾಡಿರುತ್ತೀರಾ?

**ಶ್ರೀ ಎನ್.ರಾಚಯ್ಯ:** ಇಂಥಾ ಜಿಲ್ಲೆಯದು ಅಂತ ಅಲ್ಲ. ಎಲ್ಲೆಲ್ಲಿ ಹರಾಜು ಮಾಡಬೇಕಾದಂಥವು ಇವೆ ಅಂಥದ್ದು ಇಡೀ ಜಿಲ್ಲೆಯಲ್ಲಿ ಎಲ್ಲಾ ಕಡೆಯಲ್ಲಿ ಮಾಡುತ್ತೇನೆ.

**ಶ್ರೀ ಜಿ.ಎಸ್.ಬೊಮ್ಮೇಗೌಡ:** ಲಾಭ, ನಷ್ಟ ಯಾವುದೂ ಇಲ್ಲದಂತೆ ಕೆಲಸ ಮಾಡುತ್ತೇವೆ ಎಂದು ಹೇಳಿದಿರಿ. ಈಗ ಹಾಕಿರತಕ್ಕ ಬಂಡವಾಳಕ್ಕೆ ನಷ್ಟವಾಗಿದೆಯೇ ಅಥವಾ ಲಾಭ ಬಂದಿದೆಯೇ?

**ಶ್ರೀ ಎನ್.ರಾಚಯ್ಯ:** ನಷ್ಟ ಮಾಡಿಕೊಂಡು ಏಕೆ ನಡೆಸುತ್ತಾರೆ ಎಂದು ಕೇಳುತ್ತಾರೆ. ಒಂದು ಕಡೆ ನಷ್ಟ ಮಾಡಿಕೊಂಡು ನಡೆಸಬಾರದೆಂಬ ವಾದ

ಇದೆ, ಇನ್ನೊಂದು ಕಡೆ ಲಾಭವಾಗಲೀ, ನಷ್ಟವಾಗಲೀ ಈ ಸೌಕರ್ಯ ರೈತರಿಗೆ ಒದಗಿಸಬೇಕೆಂದು ವಾದ ಇದೆ. ಇದನ್ನೆಲ್ಲಾ ಮೂರನೇ ಪಂಚವಾರ್ಷಿಕ ಯೋಜನೆಯಲ್ಲಿ ಪರಿಶೀಲನೆ ಮಾಡಿ ಸೂಕ್ತವಾದ ಕ್ರಮ ತೆಗೆದುಕೊಳ್ಳುತ್ತೇವೆ.

**ಶ್ರೀ ಜಿ.ಎಸ್.ಬೊಮ್ಮೇಗೌಡ:** ನನ್ನ ಪ್ರಶ್ನೆ ಲಾಭ ನಿರೀಕ್ಷಣೆ ಮಾಡುವುದಲ್ಲ ಎಂದು ಮಾನ್ಯ ಮಂತ್ರಿಗಳು ಹೇಳಿದರು ಲಾಭ ಬಂದಿದೆಯೇ, ನಷ್ಟವಾಗಿದೆಯೇ ಎಂದು ಅದಕ್ಕೆ ಉತ್ತರ ಹೇಳಲಿಲ್ಲ. ಲಾಭ ನಷ್ಟ ಇಲ್ಲದಂತೆ ಲಾಭ ಬಂದಿದೆಯೇ, work out ಮಾಡುವುದಕ್ಕಾಗುತ್ತದೆಯೇ?

**ಶ್ರೀ ಎನ್.ರಾಚಯ್ಯ:** ಪ್ರತಿ ವರ್ಷವೂ ಕೂಡ ಒಂದು ಲಕ್ಷ ಎರಡು ಲಕ್ಷದವರೆಗೂ ನಷ್ಟ ಹೊಂದುತ್ತಾ ಇದೆ, ಎಂದ ಮೇಲೆ ಇದನ್ನೆಲ್ಲಾ ರೈತರ ಹಿತಕ್ಕೆ ಉಪಯೋಗ ಮಾಡುತ್ತಾ ಇದ್ದೇವೆ, ತಮ್ಮ ಸಲಹೆಯನ್ನೂ ಕೂಡ ಪರಿಶೀಲನೆ ಮಾಡುತ್ತೇನೆ.

**ಶ್ರೀ ಕೆ.ಪಿ.ರೇವಣಸಿದ್ದಪ್ಪ:** ದೇಶದಲ್ಲಿ ಆಹಾರ ಉತ್ಪನ್ನ ಹೆಚ್ಚು ಮಾಡುವ ದೃಷ್ಟಿಯಿಂದ ಮತ್ತಿ ರೈತರು ಬಹಳ ಬಡವರು ಎಂದು ಈ ಟ್ರಾಕ್ಟರ್ ಮತ್ತು ಬುಲ್‌ಡೋಜರ್‌ಗಳನ್ನು ಒದಗಿಸುತ್ತಿದ್ದೀರಿ. 187 ಇದ್ದುದ್ದನ್ನೂ 43ಕ್ಕೆ ಇಳಿಸಬೇಕಾದರೆ ರೈತರಿಗೆ ಹೆಚ್ಚು ಅನುಕೂಲ ಮಾಡಿಕೊಟ್ಟಿದ್ದೀರಿ ಎಂದು ತಮ್ಮ ಅಭಿಪ್ರಾಯವೇ?

**ಶ್ರೀ ಎನ್.ರಾಚಯ್ಯ:** ಅದಕ್ಕೆ ಈಗಾಗಲೇ ಉತ್ತರ ಹೇಳಿದ್ದೇನೆ.

**ಶ್ರೀ ಕೆ.ಪಿ.ರೇವಣ್ಣ ಸಿದ್ದಪ್ಪ:** ಪಾಶ್ಚಿಮಾತ್ಯ ದೇಶಗಳಲ್ಲಿ ಎಲ್ಲಾದರೂ ಈ ರೀತಿ ಹತ್ತು ವರ್ಷದಲ್ಲೇ ಹರಾಜು ಆಗುವ ಮಟ್ಟಕ್ಕೆ ಒಂದನ್ನು ಸರ್ಕಾರದವರ ಗಮನಕ್ಕೆ ಬಂದಿದೆಯೇ?

**ಶ್ರೀ ಎನ್.ರಾಚಯ್ಯ:** ಅದಕ್ಕೆ ನಮ್ಮ ದೇಶದಲ್ಲಿ ಟ್ರಾಕ್ಟರ್ ಮತ್ತು ಬುಲ್‌ಡೋಜರ್‌ಗಳನ್ನು ತಯಾರು ಮಾಡತಕ್ಕ ಕಾರ್ಖಾನೆ ಮಾಡಬೇಕೆಂಬ ವಿಚಾರ ಕೇಂದ್ರ ಸರ್ಕಾರದ ಮನಸ್ಸಿನಲ್ಲಿದೆ.

**ಶ್ರೀ ಎನ್.ರಾಚಯ್ಯ:** ಬೇರೆ ದೇಶದ ವಿಚಾರ ನಾನು ಹೇಳುವುದು?

**ಶ್ರೀ ಇ. ನಾರಾಯಣಗೌಡ:** ಹಾಲಿ ಕೆಲಸ ಮಾಡತಕ್ಕ ಲಾರಿ, ಟ್ರಾಕ್ಟರ್, ಬುಲ್‌ಡೋಜ಼ರ್‌ಗಳನ್ನೂ ಆಯಾಯ ಜಿಲ್ಲಾ ಕ್ವಾಟ್ರಸ್‌ಗಳಲ್ಲೇ ಇರುವುದರಿಂದ ರೈತರಿಗೆ ದೊರೆಯಲು ಅನುಕೂಲವಾಗುತ್ತದೆ. ಆ ವ್ಯವಸ್ಥೆಯನ್ನೂ ಮಾಡುತ್ತೀರಾ?

**ಶ್ರೀ ಎನ್. ರಾಚಯ್ಯ:** ಪ್ರತಿಯೊಂದು ಜಿಲ್ಲೆಯಲ್ಲೂ ಆ ವ್ಯವಸ್ಥೆ ಮಾಡಬೇಕು.

**ಶ್ರೀ ಸಿ.ಜೆ.ಮುಕ್ಕಣ್ಣಪ್ಪ:** ಇಷ್ಟು ಭಾರಿ ಪ್ರಮಾಣದಲ್ಲಿ ಟ್ರಾಕ್ಟರ್, ಬುಲ್‌ಡೋಜ಼ರ್‌ಗಳನ್ನು ಇಟ್ಟುಕೊಂಡಿದ್ದೀರಿ. ತಾವು ತೆಗೆದುಕೊಂಡ ತಾರೀಖಿನಿಂದ ಇಲ್ಲಿಯವರೆಗೂ ಎಷ್ಟು ಸಾವಿರ ಎಕರೆ ಜಮೀನು ಉಳುಮೆ ಮಾಡುವುದಕ್ಕೆ ಸಾಧ್ಯವಾಗಿದೆ?

**Mr.Speaker:** That is a separate question.

**Sri C.J.Muckannappa:** what is the total cost a government an account of these tractors, bulldozrs and lorries?

**Sri N.Rachiah:** I have already repailed. The information will be supplied to the house.

**ಶ್ರೀ ಬಿ.ಇ. ರಾಮಯ್ಯ:** ಕೋ ಆಪರೇಟಿವ್ ಸೊಸೈಟಿಗಳಿಗೆ ಈ ಟ್ರಾಕ್ಟರ್ ಕೊಡುತ್ತೇವೆ. ಹಾಗೇ ಸ್ಥಳೀಯ ಸಂಸ್ಥೆಗಳಿಗೂ ಕೊಡಬೇಕೆಂದು ಸರ್ಕಾರದ ಪರಿಶೀಲನೆಯಲ್ಲಿದೆ.

**ಶ್ರೀ ಪಿ.ಜಿ.ಸಿದ್ಧಾಂತಿ:** ಹೊಸದಾಗಿ ನೀರಾವರಿ ಆಗುವ ಕಾಲಕ್ಕೆ ಭೂಮಿ ಸಮ ಮಾಡುವ ಸಲುವಾಗಿ ಟ್ರಾಕ್ಟರ್, ಬುಲ್‌ಡೋಜ಼ರ್‌ಗಳನ್ನೂ ಕೊಡಲಿಕ್ಕೆ ವ್ಯವಸ್ಥೆ ಮಾಡುತ್ತೀರಾ?

**ಶ್ರೀ ಎನ್.ರಾಚಯ್ಯ:** ಕೊಡುತ್ತೇವೆ.

**ಶ್ರೀ ಬಿ.ಇ.ರಾಮಯ್ಯ:** ಕೆಲವು ಸೊಸೈಟಿಗಳವರು ಈಗಾಗಲೇ ಹೈರ್ ಪರ್ಚೆಸ್ ಸಿಸ್ಟಂ ಮೇಲೆ ಸಪ್ಲೈ ಮಾಡಬೇಕೆಂದು ಕೇಳಿದ್ದರೂ ಅವರಿಗೆ ಕೊಟ್ಟಿಲ್ಲ ಕಾರಣವೇನು?

**ಶ್ರೀ ಎನ್.ರಾಚಯ್ಯ:** ನಮ್ಮ ಕೋಟಾ ಬಂದ ಹಾಗೆಲ್ಲಾ ಕೊಡುತ್ತೇವೆ.

**ಶ್ರೀ.ಎಸ್.ಇ.ರಾಮಯ್ಯ:** ಟ್ರ್ಯಾಕ್ಟರ್ ಮತ್ತು ಬುಲ್ಡೋಜರ್‌ಗಳನ್ನು ಪಿ.ಡಬ್ಲ್ಯೂ.ಡಿ.ಕೊಡುತ್ತಾ ಇದ್ದೀರಿ ಅಲ್ಲವೇ?

**ಶ್ರೀ ಎನ್.ರಾಚಯ್ಯ:** ಅದು ಇಂಟರ್ನಲ್ ಅರೇಂಜ್‌ಮೆಂಟು.

**Dr.A.R.Karisiddappa:** Are these lorries given on hire the ryots?

**Sri N.Rachiah:** If they are actually needed up them, government will not hesitate to give them.

**ಶ್ರೀ ಕೆ.ಕೆಂಚಪ್ಪ:** ಈಗಿರತಕ್ಕ ಒಟ್ಟು ಟ್ರಾಕ್ಟರ್‌ಗಳು 51 ಬುಲ್‌ಡೋಜರ್‌ಗಳು, 24 ಲಾರಿಗಳ ಪೈಕಿ 1950ರಿಂದ ಇಲ್ಲಿಯವರೆಗೂ ಯಾವಾಗಲಾದರೂ ಒಂದು ವರ್ಷ ಅದರ ಅರ್ಧದಷ್ಟಾದರೂ ಕೆಲಸ ಮಾಡಿವೆಯೇ?

**Sri N.Rachiah :** That information will be furnished.

## ◆ ಪಂಚವಾರ್ಷಿಕ ಯೋಜನೆಯಲ್ಲಿ ಕೃಷಿ ಮತ್ತು ಆಹಾರ ಉತ್ಪಾದನೆಯಲ್ಲಿ ಗಣನೀಯ ಪ್ರಗತಿ ಕುರಿತು ಚರ್ಚೆ

**ವ್ಯವಸಾಯ ಮತ್ತು ಸಮಾಜಕಲ್ಯಾಣ ಇಲಾಖೆಯ ಮಂತ್ರಿಗಳಾಗಿ ರಾಚಯ್ಯನವರು ರೈತಪರ, ಅನ್ನದ ಪರ ಕಾರ್ಯೋನ್ಮುಖರಾದರು. ಬಿ.ಕೆ. ಪುಟ್ಟರಾಮಯ್ಯ, ಬಿ.ಡಿ. ಜತ್ತಿ, ಬಿ. ರಾಚಯ್ಯ, ಎ.ಎಂ. ಬಸವೇಗೌಡ, ಕೆ.ವಿ. ಬೈರೇಗೌಡ, ಜೆ.ಬಿ. ಮಲ್ಲಾರಾಧ್ಯ, ಡಿ. ಮೂಕಪ್ಪ, ಕೆ.ಸಿ. ರೇವಣಸಿದ್ಧಪ್ಪ, ಬಿ. ಶ್ಯಾಮಸುಂದರ ಇವರೊಟ್ಟಿಗೆ ಸಂವಾದಿಸಿ ಸುಳ್ಳು, ಜನವಿರೋಧಿ ನಿಲುವುಗಳನ್ನು ನೇರವಾಗಿ ಖಂಡಿಸಿದವರು. ತಮ್ಮ ತಪ್ಪುಗಳನ್ನು ಹಾಗೇ ಒಪ್ಪಿಕೊಂಡು, ತಿದ್ದಿಕೊಳ್ಳುವ ನೆಲೆಯಲ್ಲಿ ಕಾರ್ಯಪ್ರವೃತ್ತರಾದ, ನೈಜ ದಾಖಲೆಯಾಗಿ ಈ ವಾಗ್ವಾದವನ್ನು ಗ್ರಹಿಸಿಕೊಳ್ಳಬಹುದು.**

ಶ್ರೀ ಎನ್.ರಾಚಯ್ಯ: (ವ್ಯವಸಾಯ ಹಾಗೂ ಸಮಾಜ ಕಲ್ಯಾಣ ಶಾಖೆಯ ಮಂತ್ರಿಗಳು): ಸ್ವಾಮಿ, ಮಾನ್ಯ ಸದಸ್ಯರು ಅನೇಕರು ಸಾಮಾನ್ಯವಾದ ಚರ್ಚೆಯಲ್ಲಿ ಮಾತನಾಡುತ್ತಾ ಒಳ್ಳೇ ಉಪಯುಕ್ತವಾದ ಸಲಹೆಗಳನ್ನು ವ್ಯವಸಾಯ ಇಲಾಖೆಯ ವಿಚಾರದಲ್ಲಿ ಮಾಡಿದ್ದಾರೆ. ಅದಕ್ಕಾಗಿ ಎಲ್ಲಾ ಮಾನ್ಯ ಸದಸ್ಯರಿಗೂ ಯಾರು ಯಾರು ಈ ಚರ್ಚೆಯಲ್ಲಿ ಭಾಗವಹಿಸಿ ವ್ಯವಸಾಯ ಇಲಾಖೆ, ಮೀನುಗಾರಿಕೆ ಇಲಾಖೆ, ತೋಟಗಾರಿಕೆ ಇಲಾಖೆ ಮತ್ತು ಪ್ರಾಣಿ ಸಂಪತ್ತು ಬೆಳೆಸತಕ್ಕಂಥ ಇಲಾಖೆ ವಿಚಾರದಲ್ಲಿ ಸೂಕ್ತ ಸಲಹೆ ಕೊಟ್ಟು ಬೆಂಬಲ ನೀಡಿದ್ದಾರೋ ಅವರಿಗೆಲ್ಲಾ ನಾನು ವಂದನೆಗಳನ್ನು ಅರ್ಪಿಸುತ್ತೇನೆ. ಈ ಸಂದರ್ಭದಲ್ಲಿ ಶ್ರೀ ದೊಡ್ಡ ಮೇಟಿಯವರು ಶ್ರೀ ಶಿವಪ್ಪನವರು, ಶ್ರೀ ದೇವರಾಜ ಅರಸುರವರು ಶ್ರೀ ಹುಚ್ಚ ಮಾಸ್ತಿಗೌಡರು ಮುಂತಾದ ಮಾನ್ಯ ಸದಸ್ಯರು ಅನೇಕ ಸೂಕ್ತ ಸಲಹೆಗಳನ್ನು ಕೊಟ್ಟಿದ್ದಾರೆ. ಮತ್ತು ಇನ್ನು ಹೆಚ್ಚಾಗಿ ಉತ್ಪತ್ತಿ ಮಾಡಬೇಕಾದರೆ ರಿಸರ್ಚ್ ಕೆಲಸ ನಡೆಸಲು ಸರಕಾರ ಗಮನಕೊಟ್ಟಿಲ್ಲ ಎಂದು ಮತ್ತು ಸಾಕಷ್ಟು ಆಹಾರ ಉತ್ಪತ್ತಿ

ಮಾಡತಕ್ಕಂಥ ಪ್ರಯತ್ನ ನಡೆದಿಲ್ಲವೆಂದೂ ಸರ್ವೇಸಾಮಾನ್ಯವಾದ ಟೀಕೆ ಮಾಡಿದ್ದಾರೆ. ಹಾಗೆ ಮಾಡುವಾಗ ಸರ್ಕಾರ ಮತ್ತು ವ್ಯವಸಾಯ ಶಾಖೆ ಅಧಿಕಾರ ಒಂದನೆಯ ಮತ್ತು ಎರಡನೆಯ ಪಂಚವಾರ್ಷಿಕ ಯೋಜನೆಗಳಲ್ಲಿ ಈ ಮಾನ್ಯ ಸಭೆಯವರು ಏನೊಂದು ನಿರ್ದಿಷ್ಟವಾದ ಆಹಾರೋತ್ಪಾದನೆಯ target ಇಟ್ಟುಕೊಂಡಿದ್ದಾರೋ ಅದರಂತೆ ಮಾಡಲಾಗುವುದು.

**ಶ್ರೀ ಬಿ.ಕೆ.ಪುಟ್ಟರಾಮಯ್ಯ:** ಇವೊತ್ತು ನಮ್ಮ ಈ ಸಭೆಯಲ್ಲಿ ಬಡ್ಜೆಟ್ ಮೇಲಿನ ಚರ್ಚೆ ಮತ್ತು ಶಾಸನ ರಚನೆಗೆ ಸಂಬಂಧಪಟ್ಟ ವಿಷಯ, ಹೀಗೆ ಎರಡು ಬಾಬ್ತುಗಳಿವೆ. ಇವೊತ್ತು ಪೂರ್ತಿ ಬಡ್ಜೆಟ್ ಮೇಲಿನ ನಡೆಯುತ್ತದೆಯೇ ಅಥವಾ ಮಸೂದೆಯನ್ನು ತೆಗೆದುಕೊಳ್ಳುತ್ತೀರಾ ಎಂದು ತಿಳಿಯಬಯಸುತ್ತೇನೆ.

**ಶ್ರೀ ಬಿ.ಡಿ.ಜತ್ತಿ:** ಇವೊತ್ತು ಪೂರ್ತಿ ಬಡ್ಜೆಟ್ ಮೇಲಿನ ಚರ್ಚೆ ನಡೆಯುತ್ತದೆ. ಮಸೂದೆಯನ್ನು ಇವೊತ್ತು ತೆಗೆದುಕೊಳ್ಳಲು ಆಗುವುದಿಲ್ಲ.

**ಶ್ರೀ ಎನ್.ರಾಚಯ್ಯ:** ನಿರ್ದಿಷ್ಟವಾದ ಉತ್ಪಾದನೆ ಗುರಿಯನ್ನು ಎರಡು ಯೋಜನೆಗಳಲ್ಲಿಯೂ ಮುಟ್ಟಿದ್ದೇವೆ. ಅದರಲ್ಲಿಯೂ ಹೆಚ್ಚಿಗೆ ಸಾಧಿಸಿದ್ದೇವೆಂದು ಬಹಳ ಸಂತೋಷದಿಂದ ಮಾನ್ಯ ಸಭೆಯ ಗಮನಕ್ಕೆ ತರುತ್ತೇನೆ. ಈ ಸಂದರ್ಭದಲ್ಲಿ ಒಂದು ಮಾತನ್ನು ಅವಲಂಭಿಸಿರತಕ್ಕ ಜನಸಂಖ್ಯೆ ಕಡಿಮೆಯಾಗಬೇಕು, ಇದು ಸರಕಾರದ ಗಮನದಲ್ಲಿ ಬಹಳ ತೀವ್ರತೆಯಿಂದ ಇದೆ. ರಾಜ್ಯದಲ್ಲಿ ಸುಮಾರು 244 ಲಕ್ಷ ಎಕರೆ ಜಮೀನನ್ನು ಆದಾಯ ಮಾಡಲು ಯೋಗ್ಯವಾಗಿದ್ದು ಪಾಳುಬಿದ್ದಿವೆ. ಒಟ್ಟು 280 ಲಕ್ಷ ಎಕರೆಗಳಷ್ಟು ಜಮೀನು ವ್ಯವಸಾಯ ಮಾಡಲು ಯೋಗ್ಯವಾಗಿದೆ. ಇದರಲ್ಲಿ 17 ಲಕ್ಷ ಎಕರೆ ಜಮೀನಿನಲ್ಲಿ ನೀರಾವರಿ ಸಹಾಯದಿಂದ ಆದಾಯ ಮಾಡುತ್ತಿದ್ದೇವೆ. ಇತರ ಕೆಲವು ರಾಜ್ಯಗಳಿಗೆ ಹೋಲಿಸಿದರೆ ನೀರಾವರಿಯಲ್ಲಿ ನಮಗೆ ವಿಶೇಷವಾದ ನೀರಿನ ಸಂಪತ್ತಿದ್ದರೂ ಕೂಡ ಹೆಚ್ಚಿನ ಪ್ರಮಾಣದಲ್ಲಿ ನೀರಾವರಿಯನ್ನು ನಾವು ಮಾಡಲು ಈವರೆಗೂ ಆಗಿಲ್ಲ ಮತ್ತು ಆಗಿರತಕ್ಕ ಕೆಲಸವನ್ನು ಬಹಳ ಶ್ರದ್ಧೆಯಿಂದ ಬಹಳ ಹೆಚ್ಚಿನ ಪ್ರಮಾಣದಲ್ಲಿ ಸ್ವರಾಜ್ಯ ಬಂದಾಗಿನಿಂದ ತೀವ್ರತೆಯಿಂದ ಸರ್ಕಾರ ಮಾಡಿದೆ.

ಎರಡನೆಯ ಪಂಚವಾರ್ಷಿಕ ಯೋಜನೆಯಲ್ಲಿ ತುಂಗಭದ್ರ, ಮಲಪ್ರಭಾ, ಘಟಪ್ರಭಾ ಮುಂತಾದ ದೊಡ್ಡ ದೊಡ್ಡ ಅಣೆಕಟ್ಟುಗಳನ್ನು ಕಟ್ಟುವ ಪ್ರದೇಶಗಳಲ್ಲಿ

ನಮ್ಮ ರಾಜ್ಯದಲ್ಲಿ ಇತರ ರಾಜ್ಯಗಳಿಗೆ ಕಡಿಮೆಯಿರದ ರೀತಿಯಲ್ಲಿ ನಾವು ನೀರಾವರಿಯನ್ನು ಮಾಡಿ ಇನ್ನೂ ಹೆಚ್ಚು ಪ್ರಮಾಣದಲ್ಲಿ ಆಹಾರ ಪದಾರ್ಥಗಳನ್ನು ಉತ್ಪಾದನೆ ಮಾಡುವುದಕ್ಕೆ ಸರ್ಕಾರ ತೀವ್ರವಾಗಿ ಗಮನಕೊಟ್ಟಿದೆ. ಮೂರನೆಯ ಯೋಜನೆಯಲ್ಲಿಯೂ ಇದಕ್ಕೆ ಗಮನವನ್ನು ಕೊಡಲಾಗಿದೆ. ಮೊದಲನೆಯ ಪಂಚವಾರ್ಷಿಕ ಯೋಜನೆಯ ಅವಧಿಯಲ್ಲಿ 97 ಸಾವಿರ ಟನ್ ಉತ್ಪಾದನೆ ಮಾಡಬೇಕೆಂದಿತ್ತು. ಆದರೆ ನಾವು 2.15 ಲಕ್ಷ ಟನ್ ಆಹಾರ ಪದಾರ್ಥಗಳನ್ನೇ ಬೆಳೆದಿದ್ದೇವೆ. ಎರಡನೆಯ ಪಂಚವಾರ್ಷಿಕ ಯೋಜನೆಯಲ್ಲಿ 5.1 ಲಕ್ಷ ಟನ್ ಉತ್ಪಾದನೆ ಮಾಡಬೇಕೆಂಬ ಗುರಿಯನ್ನು ನಿಗದಿ ಮಾಡಲಾಗಿತ್ತು. ಉತ್ಪಾದನೆ ಮಾಡಿರುವುದು 6 ಲಕ್ಷ ಟನ್ ಎಂದರೆ ಸುಮಾರು ಒಂದು ಲಕ್ಷ ಟನ್ ಆಹಾರ ಪದಾರ್ಥಗಳನ್ನು ಎರಡನೆಯ ಪಂಚವಾರ್ಷಿಕ ಯೋಜನೆ ಪೂರೈಸುವುದರೊಳಗೆ ಈ ತಿಂಗಳ ಕೊನೆಯೊಳಗೆ ನಾವು ಬೆಳೆದಂತಾಗುತ್ತದೆ. ಮೂರನೆಯ ಯೋಜನೆಯಲ್ಲಿ ನಾವು ಹತ್ತು ಲಕ್ಷಟನ್ ಆಹಾರ ಪದಾರ್ಥಗಳನ್ನು ಉತ್ಪಾದನೆ ಮಾಡಬೇಕೆಂದು ಸರ್ಕಾರದ ನಿರೀಕ್ಷೆ ಇದೆ. ಇದರಲ್ಲಿ ಸರ್ಕಾರ ತಾನು ಜವಾಬ್ದಾರಿಯನ್ನು, ಹೊರಬೇಕಾದ ಜವಬ್ಧಾರಿಯನ್ನು ಮತ್ತು ಯಾವ ಕ್ರಮ ತೆಗೆದುಕೊಳ್ಳಬಹುದಿತ್ತೋ ಅದನ್ನು ನಿಷ್ಠೆಯಿಂದ ದೇಶದ ಹಾಗೂ ರಾಜ್ಯದ ಹಿತವನ್ನು ಮನಸ್ಸಿನಲ್ಲಿಟ್ಟುಕೊಂಡು ಹೆಚ್ಚಿನ ಶ್ರದ್ಧೆಯಿಂದ ಸಂಬಂಧಪಟ್ಟ ಇಲಾಖೆ ಕೆಲಸ ಮಾಡಿದೆಯೆಂದು ಬಹಳ ಸಂತೋಷದಿಂದ ತಮ್ಮ ಗಮನಕ್ಕೆ ತರುತ್ತಿದ್ದೇನೆ. ಈ ಸಂದರ್ಭದಲ್ಲಿ ಆಹಾರ ಪದಾರ್ಥಗಳ ಉತ್ಪಾದನೆಯ ಕ್ಷೇತ್ರದಲ್ಲಿರುವ ಕೆಲವು ಅನಿವಾರ್ಯಗಳನ್ನು ಮಾನ್ಯ ಸಭೆಯವರ ಗಮನಕ್ಕೆ ತಂದರೆ ಮೆಚ್ಚುತ್ತೀರೆಂದು ಭಾವಿಸುತ್ತೇನೆ. ನಮ್ಮ ಸಂಸ್ಥಾನಕ್ಕೆ ಈ ಹೊತ್ತು ಸುಮಾರು 41,54,000 ಟನ್ ಆಹಾರ ಪದಾರ್ಥಗಳು ಬೇಕು. ಆದರೆ ನಾವು ಉತ್ಪಾದನೆ ಮಾಡುತ್ತಿರುವುದು 38,50,000 ಟನ್‌ನಷ್ಟು ಮಾತ್ರ. ಮೂರನೆಯ ಯೋಜನೆಯಲ್ಲಿ ನಮಗೆ 48,50,000 ಟನ್ ಆಹಾರ ಪದಾರ್ಥಗಳು ಬೇಕು, ಸ್ವಾವಲಂಬನೆಯನ್ನು ಮನಸ್ಸಿನಲ್ಲಿಟ್ಟುಕೊಂಡು ಇಷ್ಟು ಪ್ರಮಾಣದಲ್ಲಿ ಆಹಾರ ಪದಾರ್ಥಗಳ ಉತ್ಪಾದನೆಯನ್ನು ಮೂರನೆಯ ಪಂಚವಾರ್ಷಿಕ ಯೋಜನೆಯ ಅವಧಿಯಲ್ಲಿ ಸಾಧಿಸಬೇಕು ಎನ್ನುವುದು ಸರ್ಕಾರದ ನಿರ್ದಿಷ್ಟ ನೀತಿಯಾಗಿದೆ. ಆ ಗುರಿಯನ್ನು

ಸಾಧಿಸುತ್ತೇವೆ. ಅದಕ್ಕೆ ಹೆಚ್ಚಿನ ಅನುಕೂಲಗಳೂ ಇವೆ ಎನ್ನುವುದನ್ನೂ ಕೂಡ ತಮಗೆ ತಿಳಿಸಲು ಇಷ್ಟಪಡುತ್ತೇನೆ.

**ಶ್ರೀ ಬಿ.ರಾಚಯ್ಯ:** ಮಾಡಿದ್ದೇವೆಂದು ಹೇಳುತ್ತಿರಲಿಲ್ಲ!

**ಶ್ರೀ ಎನ್.ರಾಚಯ್ಯ:** ಮಾನ್ಯ ಸದಸ್ಯರು ಈ ದಿನ ಊಟ ಮಾಡುತ್ತ ಇಲ್ಲ. ತಮಗೆ ಸಮೃದ್ಧಿಯಾಗಿ ಊಟದ ಪದಾರ್ಥಗಳನ್ನು ಒದಗಿಸುತ್ತಿದ್ದೇವೆ. ಎಲ್ಲರೂ ಸಂತೋಷವಾಗಿದ್ದಾರೆ. ನಿಮಗೆ ಸಮಾಧಾನವಾದ ಮೇಲೆ ದೇಶಕ್ಕೆಲ್ಲ ಸಮಾಧಾನ ಎಂದು ಹೇಳುತ್ತೇನೆ.

**ಶ್ರೀ ಬಿ.ರಾಚಯ್ಯ:** ನಿಮಗೆ ಸಮಾಧಾನವಾದರೆ ದೇಶಕ್ಕೆಲ್ಲ ಸಮಾಧಾನವಾಗಿದೆ ಎಂದು ಅಭಿಪ್ರಾಯವೇ?

**ಶ್ರೀ ಎನ್.ರಾಚಯ್ಯ:** ಅವರಿಗೆ ಹೆಚ್ಚಿನ ಆಹಾರ ಪದಾರ್ಥಗಳು ಸಿಕ್ಕುತ್ತಿರುವುದರಿಂದ ಬಹಳ ಚುರುಕಾಗಿದ್ದಾರೆ.

ನಮಗೆ ಒಂದು ವರ್ಷಕ್ಕೆ ಬೇಕಾಗಿರತಕ್ಕ ಕೃತಕ ಗೊಬ್ಬರ ಸುಮಾರು ಮೂರು ಲಕ್ಷ ಟನ್ ಕೇಂದ್ರ ಸರ್ಕಾರಕ್ಕೆ ಒಂದೆರಡು ಲಕ್ಷಟನ್ ಒಂದು ವರ್ಷಕ್ಕೆ ಬೇಕು ಎಂದು ಬೇಡಿಕೆಗಳನ್ನು ಕಳಿಸಿದ್ದೇವೆ. ಆದರೆ ನಮಗೆ 30 ರಿಂದ 40 ಸಾವಿರ ಟನ್ ಗೊಬ್ಬರ ಮಾತ್ರ ಕೇಂದ್ರದಿಂದ ಒದಗುತ್ತಿದೆ. ಹೀಗಿರುವಾಗ ಅದನ್ನು ಸಮಂಜಸವಾಗಿ ಹಂಚಬೇಕೆಂದು ಉದ್ದೇಶದಿಂದ ಎಲ್ಲಾ ಹಳ್ಳಿಗಳು ತಾಲ್ಲೂಕುಗಳು ಮತ್ತು ಜಿಲ್ಲೆಗಳಿಗೂ ಸಹ ಆಯಾಯ ಜಿಲ್ಲೆಯ ಜನಸಂಖ್ಯೆಗೆ ಅನುಸಾರವಾಗಿ ಮತ್ತು ಆ ಪ್ರದೇಶದ ಅವಶ್ಯಕತೆಗಳಿಗನುಸಾರವಾಗಿ ಕೊಡುತ್ತಿದ್ದೇವೆ. ಈ ಸಭೆಯ ಮಾನ್ಯ ಸದಸ್ಯರ ಒತ್ತಾಯದ ಮೇಲೆ ಮತ್ತು ಆಶಯದ ಪ್ರಕಾರವಾಗಿ ಸಹಕಾರ ಸಂಘಗಳ ಮೂಲಕ ಮಾತ್ರ ಕಬ್ಬಿಣ ಮತ್ತು ಗೊಬ್ಬರ ಇವನ್ನು ಹಂಚಬೇಕೆನ್ನುವ ತೀರ್ಮಾನವನ್ನು ತೆಗೆದುಕೊಂಡು ಕಳೆದ ವರ್ಷದಿಂದ ಆ ರೀತಿ ಮಾಡುತ್ತಿದ್ದೇವೆನ್ನುವುದು ತಮಗೆಲ್ಲರಿಗೂ ಗೊತ್ತೇ ಇದೆ.

**ಶ್ರೀ ಎ.ಎಂ.ಬಸವೇಗೌಡ:** ಕೇಂದ್ರದಿಂದ ಬರುವ 30–40 ಸಾವಿರ ಟನ್ ಗೊಬ್ಬರವನ್ನು ಸಕಾಲದಲ್ಲಿ ಏಕೆ ಒದಗಿಸುತ್ತಿಲ್ಲ?

**ಶ್ರೀ ಎನ್.ರಾಚಯ್ಯ:** ಸಕಾಲದಲ್ಲಿ ಕಳಿಸುತ್ತಿದ್ದೇವೆ. ಕೆಲವು ಸಂದರ್ಭಗಳಲ್ಲಿ ಕೆಲವು ಕಡೆ ಸಹಕಾರ ಸಂಘಗಳಿಗೆ ನಾವು ಅಲರ್ಟ್ ಮಾಡಿದರೂ ಕೂಡ, ಹಣದ ಅಭಾವದಿಂದ ಅಥವಾ ಸಾರಿಗೆಯ ಅನಾನೂಕೂಲತೆಗಳಿಂದ ಅವರು ತೆಗೆದುಕೊಳ್ಳುತ್ತಾ ಇಲ್ಲ ಎಂದು ನಾನು ಪ್ರವಾಸ ಮಾಡುವಾಗ ಸಹಕಾರ ಸಂಘಗಳವರು ತಿಳಿಸಿದ್ದಾರೆ. ಸರ್ಕಾರ ವಿತರಣೆಯಿಂದ ಸಕಾಲಕ್ಕೆ ಗೊಬ್ಬರ ಹಂಚುವ ವ್ಯವಸ್ಥೆಯನ್ನು ಮಾಡಿದೆ. ಆದರೆ ಅಲ್ಲಿ ಕೆಲವು ಲೋಪದೋಷಗಳಿರಬಹುದು. ಅವು ನನ್ನ ಗಮನಕ್ಕೆ ಬಂದಿಲ್ಲ.

ಹೀಗೆ ಲೋಪ ದೋಷಗಳಿವೆ ಎನ್ನುವುದು ನನ್ನ ಗಮನಕ್ಕೆ ಬಂದರೆ ಅದನ್ನು ಸಮಂಜಸವಾಗುವ ರೀತಿಯಲ್ಲಿ ಸರ್ಕಾರದವರು ಸಹಾಯ ಮಾಡುತ್ತಾರೆ ಎನ್ನುವ ಭರವಸೆಯನ್ನು ಶ್ರೀಮಾನ್ ಬಸವೇಗೌಡರಿಗೆ ಇಲ್ಲಿ ಕೊಡುತ್ತೇನೆ.

ಇವೊತ್ತಿನ ದಿವಸ ಕಬ್ಬಿಣ 36,6000 ಟನ್ನುಗಳು ಇದನ್ನು ನಮ್ಮ ರಾಜ್ಯದಲ್ಲಿರುವ ವ್ಯವಸಾಯಗಾರರುಗಳಿಗೆ ಒದಗಿಸಬೇಕು. ನಮಗೆ ಕೇಂದ್ರ ಸರ್ಕಾರದಿಂದ ಒದಗುತ್ತಿರುವುದು ಸುಮಾರು 3 ಅಥವಾ 4 ಸಾವಿರ ಟನ್ನುಗಳಷ್ಟು ಮಾತ್ರ. ಸಾಮಾನ್ಯವಾಗಿ ವ್ಯವಸಾಯ ಮಾಡುವವರಿಗೆ ಬೇಕಾದಂತಹ ಗೊಬ್ಬರ, ಕಬ್ಬಿಣ ಕೊಡಬೇಕು ಎಂದು ಅಂದಾಜು ಮಾಡಿಕೊಂಡಿದ್ದರೂ ಅದನ್ನು ನಾವು ಇನ್ನೂ ಒದಗಿಸುವುದಕ್ಕೆ ಅವಕಾಶವಿಲ್ಲವಾಗಿದೆ. ಏಕೆಂದರೆ ಸಾಕಾದಷ್ಟು ಪ್ರಮಾಣದಲ್ಲಿ ನಮಗೆ ಕಬ್ಬಿಣ ಒದಗುತ್ತಿಲ್ಲ ಇದರಿಂದಾಗಿ ಆಹಾರ ಪದಾರ್ಥಗಳನ್ನು ಎಷ್ಟು ಉತ್ಪಾದನೆ ಮಾಡಬೇಕೆಂದು ಯೋಜನೆಯಲ್ಲಿಟ್ಟುಕೊಂಡಿದ್ದರೂ ಅಷ್ಟು ಉತ್ಪತ್ತಿಯನ್ನು ಮಾಡಲು ಇನ್ನು ಸಾಧ್ಯವಾಗಿಲ್ಲ. ನಮ್ಮ ಭಾರತ ದೇಶದಲ್ಲಿ ಭಿಲಾಯ್, ರೂರ್ಕೆಲಾ ಮುಂತಾದ ದೊಡ್ಡ ದೊಡ್ಡ ಕಾರ್ಖಾನೆಗಳು ಇನ್ನೂ ಹೆಚ್ಚಿನ ಉತ್ಪನ್ನವನ್ನು ಮಾಡುತ್ತಿವೆ. ಇದರಿಂದ ಕಬ್ಬಿಣದ ಉತ್ಪಾದನೆ ಹೆಚ್ಚಾಗಿ, ಕಬ್ಬಿಣದ ಸರಬರಾಜು ಮತ್ತು ಅದನ್ನು ಹಂಚತಕ್ಕ ವ್ಯವಸ್ಥೆ ಬಹಳ ಸಮರ್ಪಕವಾಗಿ ಮಾಡಬೇಕೆನ್ನುವ ಆಸೆ ರಾಜ್ಯ ಸರ್ಕಾರಕ್ಕಿದೆ.

**ಶ್ರೀ ಕೆ.ವಿ.ಭೈರೇಗೌಡ:** ಎಷ್ಟು ಕಬ್ಬಿಣ ಒದಗುತ್ತಿದೆಯೋ ಆ ಕಬ್ಬಿಣ ಸಕಾಲದಲ್ಲಿ ವ್ಯವಸಾಯಗಾರನಿಗೆ ಒದಗುತ್ತಿಲ್ಲ. ಮತ್ತು ವ್ಯವಸಾಯದ ಸೀಸನ್ನಿನಲ್ಲಿ ಬರುತ್ತಿಲ್ಲ

ಎನ್ನುವ ತೊಂದರೆಯೂ ಇದೆ. ಇದರ ಬಗ್ಗೆ ಸರಕಾರ ಏನು ಕ್ರಮ ತೆಗೆದುಕೊಳ್ಳುತ್ತಿದೆ.

**ಶ್ರೀ ಎನ್.ರಾಚಯ್ಯ:** ಗೊಬ್ಬರದ ವಿಚಾರದಲ್ಲಿ ರೈತನಿಗೆ ವ್ಯವಸಾಯ ಮಾಡುವ ಕಾಲಕ್ಕೆ ಹದಿನೈದು ದಿವಸಗಳಿಗೆ ಮುಂಚಿತವಾಗಿ ಹಂಚಿದರೆ ಅನುಕೂಲವಾಗುತ್ತದೆ. ಮುಂಜಾಗ್ರತೆ ವಹಿಸಿ ಇವರಿಗೆ ಕೊಟ್ಟರೆ ಅನುಕೂಲವಾಗುತ್ತದೆ ಈ ವರ್ಷ ಮಾಡಲು ಕ್ರಮವನ್ನು ತೆಗೆದುಕೊಂಡರೂ ಹೆಚ್ಚಿನ ಉಪಯೋಗವಾಗಲಿಲ್ಲ. ಮುಂದಿನ ವರ್ಷ ಇದನ್ನು ಇನ್ನೂ ಹೆಚ್ಚು ತೀವ್ರವಾಗಿ ಮಾಡಬೇಕೆಂದು ಯೋಚನೆ ಮಾಡಿದ್ದೇವೆ ಎಂದು ಇಲ್ಲಿ ನಾನು ಹೇಳುತ್ತೇನೆ. ಕಬ್ಬಿಣ ನಮಗೆ ಬೇಕಾಗಿರತಕ್ಕದ್ದು ಸುಮಾರು 36,000 ಟನ್ನುಗಳಷ್ಟು. ಇದರಲ್ಲಿ ಕೇಂದ್ರ ಸರಕಾರದವರು ಸ್ಥಾಪನೆ ಮಾಡಿ ಇನ್ನೂ ಹೆಚ್ಚಿನ ಉತ್ಪನ್ನವನ್ನು ಮಾಡುವ ಸ್ಥಿತಿಯಲ್ಲಿದ್ದಾರೆ. ನಮ್ಮ ಭದ್ರಾವತಿ ಕಾರ್ಖಾನೆಯಲ್ಲೂ ಕೂಡ ಅವನ್ನು ವಿಸ್ತರಣೆ ಮಾಡಬೇಕೆಂದು ಯೋಚನೆ ಮಾಡಿ ಅದರ ಮೂಲಕ ಹೆಚ್ಚಿನ ಕಬ್ಬಿಣವನ್ನೂ ಉತ್ಪತ್ತಿ ಮಾಡುವ ಅವಕಾಶವೂ ಇದೆ. ಮಾನ್ಯ ಸದಸ್ಯರಿಗೆ ನಾನು ಹೇಳತಕ್ಕದ್ದು ಕೇವಲ ಇನ್ನೂ ಎರಡು – ಮೂರು ವರ್ಷಗಳಲ್ಲಿ ಎಂದರೆ ಮೂರನೆಯ ಪಂಚವಾರ್ಷಿಕ ಯೋಜನೆಯೊಳಗೆ ಎಂದರೆ ಅದರ ಮಧ್ಯಭಾಗದಲ್ಲಿ ಇನ್ನೂ ಸಾಕಾದಷ್ಟು ಕಬ್ಬಿಣ ರೈತರಿಗೆ ಕೊಡತಕ್ಕ ಭರವಸೆ ನಿಮ್ಮ ಸರ್ಕಾರಕ್ಕಿದೆ ಎಂದು ಇಲ್ಲಿ ಹೇಳುತ್ತೇನೆ.

**ಶ್ರೀ ಜೆ.ಬಿ.ಮಲ್ಲಾರಾಧ್ಯ:** ಕೇಂದ್ರ ಸರಕಾರದವರು ಪ್ರತಿಯೊಂದು ರಾಜ್ಯ ಸರ್ಕಾರಗಳಿಗೂ ವ್ಯವಸಾಯದ ಉತ್ಪನ್ನವನ್ನು ಹೆಚ್ಚಿಸಬೇಕೆಂದು ಹೇಳುತ್ತಿರುವವರು ಅವರೇಕೆ ವ್ಯವಸಾಯಕ್ಕೆ ಬೇಕಾದ ಉಪಕರಣಗಳನ್ನು ಕೊಡುವ ಜವಾಬ್ದಾರಿಯನ್ನು ಹೊತ್ತುಕೊಳ್ಳುವುದಿಲ್ಲ?

**ಶ್ರೀ ಎನ್.ರಾಚಯ್ಯ:** ಈ ಜವಾಬ್ದಾರಿ ರಾಜ್ಯ ಸರಕಾರಕ್ಕೂ ಇದೆ, ಕೇಂದ್ರ ಸರಕಾರಕ್ಕೂ ಇದೆ. ಅಷ್ಟು ತೀವ್ರತೆ ಇರುವುದರಿಂದಲೇ ಇನ್ನೂ ಹೆಚ್ಚು ಹೆಚ್ಚಾಗಿ ಕಬ್ಬಿಣದ ಉತ್ಪಾದನೆಯನ್ನು ಮಾಡಲು ದೊಡ್ಡ ಕಾರ್ಖಾನೆಗಳನ್ನು ತೆರೆಯುತ್ತಿದ್ದಾರೆ. ಕೇವಲ ಇನ್ನು ಒಂದೆರಡು ವರ್ಷಗಳಲ್ಲಿ ಪರಿಸ್ಥಿತಿ ಸುಧಾರಿಸುತ್ತದೆ ಎಂದು ಕೇಂದ್ರದ ಆಹಾರ ಸಚಿವರು ಪಾರ್ಲಿಮೆಂಟಿನಲ್ಲಿ ಹೇಳಿರುವುದು ಸ್ಪಷ್ಟವಾಗಿದೆ. ಇದನ್ನು ಈಗಾಗಲೇ ಷೇರುಗಳಲ್ಲಿ ನೀವೂ ನೋಡಿರಬಹುದು.

**ಶ್ರೀ ಡಿ.ಮೂಕಪ್ಪ:** ಗೊಬ್ಬರದ ಕಾರ್ಖಾನೆಯನ್ನು ತೆರೆಯುವ ಯೋಜನೆ ಸರ್ಕಾರಕ್ಕಿದೆಯೇ?

**ಶ್ರೀ ಎನ್.ರಾಚಯ್ಯ:** ಮೂರನೆಯ ಪಂಚವಾರ್ಷಿಕ ಯೋಜನೆಯಲ್ಲಿ ಇದಕ್ಕೆ ಹಣವನ್ನು ಒದಗಿಸಲಾಗಿದೆ. ಕೇಂದ್ರ ಸರ್ಕಾರದ ಸಹಾಯದಿಂದ ರೈತರಿಗೆ ಅನುಕೂಲವಾಗುವಂತೆ ಒಂದು ಗೊಬ್ಬರದ ಕಾರ್ಖಾನೆಯನ್ನು ರಾಜ್ಯ ಸರ್ಕಾರದವರು ತೆಗೆಯಬೇಕೆಂಬ ಯೋಜನೆ ಇದೆ. ಹೀಗೆ ನಮಗೆ ಮೂರನೆಯ ಪಂಚವಾರ್ಷಿಕ ಯೋಜನೆಯಲ್ಲಿ ಸುಮಾರು 250 ಕೋಟಿ ರೂಪಾಯಿಗಳು ಇರುವುದರಲ್ಲಿ ನಾವು 19.81 ಕೋಟಿಯಷ್ಟು ಹಣವನ್ನು ಆಹಾರದ ಉತ್ಪಾದನೆಗಾಗಿ ಎರಡನೆಯ ಪಂಚವಾರ್ಷಿಕ ಯೋಜನೆಯ ಪ್ರಮಾಣಕ್ಕಿಂತಲೂ ಹೆಚ್ಚಿನ ಪ್ರಮಾಣದಲ್ಲಿ ಒದಗಿಸಿದ್ದೇವೆ. ಅಗ್ರಿಕಲ್ಚರ್ ಪ್ರೊಡಕ್ಷನ್ನಿಗಾಗಿ ಮತ್ತು ಉತ್ಪತ್ತಿಗಾಗಿ 10.02 ಕೋಟಿ ಮೈನರು ಇರಿಗೇಷನ್ನಿಗಾಗಿ 7.5 ಕೋಟಿಗಳು, ಸಾಯಿಲ್ ಕನ್‌ಸರ್‌ವೇಷನ್ನಿಗಾಗಿ 2.3 ಕೋಟಿ ಎಂದು ಇಷ್ಟೊಂದು ಹಣವನ್ನು ಹೆಚ್ಚು ಆಹಾರ ಉತ್ಪನ್ನ ಮಾಡುವುದಕ್ಕಾಗಿ ಒದಗಿಸಲಾಗಿದೆ. ಹಿಂದೆ ಇಷ್ಟು ಒದಗಿಸಿರಲಿಲ್ಲ. ಈಗಿರುವ ಮೂರನೇ ಪಂಚವಾರ್ಷಿಕ ಯೋಜನೆಯಲ್ಲಿ ಗೊಬ್ಬರದ ಕಾರ್ಖಾನೆಯಾಗುವ ನಂಬಿಕೆ ಇರುವ ಕಾರಣದಿಂದ ನಾನು ಮೊದಲು ಹೇಳಿದ ಕಾರಣಗಳಿಂದ ರಾಜ್ಯ ಮತ್ತು ಕೇಂದ್ರ ಸರ್ಕಾರಗಳು ವ್ಯವಸಾಯದ ದೃಷ್ಟಿಯಿಂದ ಉತ್ಪನ್ನವನ್ನು ಹೆಚ್ಚು ಮಾಡಿಕೊಂಡು ಈಗಿರುವ 10 ಲಕ್ಷದಷ್ಟು ಉತ್ಪಾದನೆ ಪ್ರಮಾಣದಲ್ಲಿರುವುದನ್ನು ಇದಕ್ಕಿಂತಲೂ ಹೆಚ್ಚಿನ ಪ್ರಮಾಣದಲ್ಲಿ ಬೆಳೆಯುವ ಭರವಸೆ ರಾಜ್ಯ ಸರ್ಕಾರಕ್ಕೆ ಇದೆ ಎಂದು ಸಂತೋಷದಿಂದ ಇಲ್ಲಿ ತಮ್ಮ ಮುಂದೆ ಹೇಳುತ್ತೇನೆ.

ಮಾನ್ಯ ಸದಸ್ಯರು ರೀಸರ್ಚ್ ಸೈಡಿನಲ್ಲಿ ಏನೂ ಮಾಡಿಲ್ಲ ಎಂದು ಹೇಳಿದರು. ನಮ್ಮ ದೇಶದಲ್ಲಿ ತಮಗೇ ಗೊತ್ತಿರತಕ್ಕ ರೀತಿಯಲ್ಲಿ ವ್ಯವಸಾಯದ ಕ್ಷೇತ್ರದಲ್ಲಿ ಎಷ್ಟು ಗಮನವನ್ನು ಕೊಡುತ್ತಿದ್ದಾರೋ ಅಷ್ಟು ಗಮನವನ್ನು ಸ್ವರಾಜ್ಯ ಬರುವುದಕ್ಕೆ ಮುಂಚೆ ಆಗಿನ ಸರ್ಕಾರ ಕೊಟ್ಟಿರಲಿಲ್ಲ. ಸ್ವರಾಜ್ ಬಂದ ಮೇಲೆ ಈಗ ನಮ್ಮ ರಾಜ್ಯ ಸರಕಾರದವರು ಹೆಚ್ಚಿನ ಗಮನವನ್ನು ಕೊಟ್ಟು ವ್ಯವಸಾಯದ ಉತ್ಪತ್ತಿಯನ್ನು ಹೆಚ್ಚು ಮಾಡಿ, ಪ್ರಾಣಿಗಳ ಸಂಪತ್ತನ್ನು ಮೀನು ಕೈಗಾರಿಕೆ ಅಭಿವೃದ್ಧಿ ಮುಂತಾದ

ಇನ್ನೂ ಎಷ್ಟೋ ಅಭಿವೃದ್ಧಿ ಕಾರ್ಯಗಳನ್ನು ಕೈಗೊಂಡಿದ್ದಾರೆ. ಇನ್ನೂ ಹೆಚ್ಚಿನ ಪ್ರಮಾಣದಲ್ಲಿ ಆಹಾರ ಉತ್ಪಾದನೆಯನ್ನು ಸಾಧಿಸಲು ಗೊಬ್ಬರದ ಮತ್ತು ಕಬ್ಬಿಣದ ಕಾರ್ಖಾನೆಗಳಿಂದ ಹೆಚ್ಚಿನ ಉತ್ಪನ್ನ ಬರದೆ ಆಹಾರ ಪದಾರ್ಥಗಳನ್ನು ಹೆಚ್ಚಿಗೆ ಬೆಳೆಯುವುದಕ್ಕೆ ಸಾಧ್ಯವಿಲ್ಲ. ಈಗ ಇನ್ನೂ ಹೆಚ್ಚು ಹೆಚ್ಚಾಗಿ ಟ್ರಾಕ್ಟರ್‌ಗಳು, ಬುಲ್‌ಡೋಜ಼ರ್‌ಗಳು ವ್ಯವಸಾಯಕ್ಕೆ ಬೇಕಾಗಿವೆ. ಸುಮಾರು 600 ಕ್ಕೂ ಹೆಚ್ಚಿನ ಜನರು ಈಗ ಟ್ರಾಕ್ಟರ್‌ಗಳು ಬೇಕೆಂದು ಕೇಳುತ್ತಿದ್ದಾರೆ. ಆದರೆ ನಮಗೆ ಒದಗಿಸಲು ಶಕ್ತಿ ಇಲ್ಲ. ಈ ಯಂತ್ರಗಳನ್ನು ಪರದೇಶಗಳಿಂದ ತರಿಸಿಕೊಳ್ಳಲು ಇನ್ನೂ ಸಾಧ್ಯವಾಗಿಲ್ಲ. ಈಗ ಇಂತಹ ಟ್ರಾಕ್ಟರ್‌ಗಳನ್ನು ಮತ್ತು ಬುಲ್‌ಡೋಜ಼ರ್‌ಗಳನ್ನು ನಮ್ಮ ದೇಶದಲ್ಲಿಯೇ ತಯಾರು ಮಾಡಬೇಕೆಂದು ಕೇಂದ್ರ ಸರಕಾರದವರು ಯೋಜನೆಯನ್ನು ಇಟ್ಟುಕೊಂಡಿದ್ದಾರೆ. ಹಾಗೆ ಹಸಿರು ಗೊಬ್ಬರ, ಕಾಂಪೋಸ್ಟ್ ಇವುಗಳನ್ನು ಒದಗಿಸಲು ರಾಷ್ಟ್ರೀಯ ವಿಸ್ತರಣಾ ಯೋಜನೆ ಮೂಲಕ ಒದಗಿಸುತ್ತಿದ್ದರೂ ವ್ಯವಸಾಯಗಾರರಿಗೆ ಅನೇಕ ಕಡೆಗಳಲ್ಲಿ ಇದರಲ್ಲಿ ನಂಬಿಕೆ ಇರಲಿಲ್ಲ. ಇವೊತ್ತು ಯಾವ ಯಾವ ಕ್ಷೇತ್ರದಲ್ಲಿ ಯಾವ ರೀತಿಯ ಬೀಜಗಳನ್ನು ಹಾಕಬೇಕು, ಯಾವ ರೀತಿಯ ಗೊಬ್ಬರವನ್ನು ಮಾಡಿ ಹಾಕಬೇಕು, ಹೇಗೆ ಮಾಡಬೇಕು ಎನ್ನುವುದನ್ನು ರೈತರ ಮನಸ್ಸಿನಲ್ಲಿ ತಿಳುವಳಿಕೆ ಕೊಡತಕ್ಕಂತಹ ಭೂಮಿಯ ಮಾಲೀಕರಿಲ್ಲ. ರೈತರೇ ಆಹಾರ ಪದಾರ್ಥಗಳನ್ನು ಬೆಳೆಯತಕ್ಕದ್ದು, ಅವರಿಗೆ ಹೆಚ್ಚಾಗಿ ಒದಗಿಸುತ್ತಿದ್ದೇವೆ. ತಾವು ಹೇಳಿದಂತೆ ಕಷ್ಟಗಳು ಏನು ಆಗುತ್ತಿದೆ ಎನ್ನುವುದು ನಮಗೆ ಗೊತ್ತಾಗಿದೆ. ಈ ವಿಚಾರದಲ್ಲಿ ಕೇಂದ್ರ ಸರಕಾರದವರು ಮತ್ತು ನಮ್ಮ ರಾಜ್ಯ ಸರಕಾರದವರು ತೀವ್ರವಾದ ಕ್ರಮ ತೆಗೆದುಕೊಳ್ಳಬೇಕೆಂದು ಪ್ರಯತ್ನ ಮಾಡುತ್ತಿದ್ದಾರೆ. ಗ್ರಾಮಗಳಲ್ಲಿರುವ ರೈತರಿಗೆ ತಿಳುವಳಿಕೆ ಕೊಡಲು ವಿದ್ಯಾವಂತರಾದವರು ಮತ್ತು ವ್ಯವಸಾಯ ಮಾಡುವವರು ಈ ಕ್ಷೇತ್ರದಲ್ಲಿ ಹೆಚ್ಚಾಗಿ ಬರಬೇಕು. ಈಗ ರೈತರಿಗೆ ಟ್ರಾಕ್ಟರ್‌ಗಳು, ಬುಲ್‌ಡೋಜ಼ರ್‌ಗಳು ಇತ್ಯಾದಿಗಳನ್ನು ಉಪಯೋಗಿಸಿಕೊಳ್ಳಲು ಸರಿಯಾಗಿ ತಿಳಿಯುವುದಿಲ್ಲ. ಇದರ ಬಗೆಗೆ ತಿಳಿವಳಿಕೆ ಕೊಡಲು ನಮ್ಮ ದೇಶದಲ್ಲಿ ಹೆಚ್ಚು ಹೆಚ್ಚಾಗಿ ವಿದ್ಯಾವಂತರು ಅದರಲ್ಲಿಯೂ ಹೆಣ್ಣು ಮಕ್ಕಳು ಮತ್ತು ಗಂಡಸರು ಈ ಕ್ಷೇತ್ರದಲ್ಲಿ ವಿದ್ಯಾವಂತರಾಗಿ ಹೆಚ್ಚಾಗಿ ಬರಬೇಕು. ಜಪಾನ್ ದೇಶದಲ್ಲಿ ವ್ಯವಸಾಯದ ಬಗ್ಗೆ ಈಚೆಗೆ ನಾನು ಒಂದು ಪುಸ್ತಕವನ್ನು ಓದುತ್ತಿದ್ದಾಗ ಅಲ್ಲಿನ ಜನ ವ್ಯವಸಾಯದ ಮೇಲೆ ಎಷ್ಟು ನಿಷ್ಠೆಯಿಂದ ಇದ್ದಾರೆ

ಎಂದರೆ ಪ್ರತಿಯೊಂದು ಸಂಸಾರದಲ್ಲಿಯೂ husbandry and wifery ಯಂತೆ ಆಗಿದೆ ಎನ್ನುವುದು ತಿಳಿಯಿತು. ಅಲ್ಲಿ ಎಲ್ಲಾ ಹೆಣ್ಣು ಮಕ್ಕಳೂ ವ್ಯವಸಾಯದ ವಿಷಯದಲ್ಲಿ ಹೆಚ್ಚಿನ ಆಸಕ್ತಿಯನ್ನು ವಹಿಸಿ ಟ್ರಾಕ್ಟರ್‌ಗಳನ್ನು ಉಪಯೋಗಿಸುವುದರಲ್ಲಿ ಮತ್ತು ಇನ್ನಿತರ ಕೆಲಸಗಳನ್ನು ಮಾಡುವುದರಲ್ಲಿ ಗಂಡಸರೊಡನೆ ಮತ್ತು ವ್ಯವಸಾಯದಲ್ಲಿ ಪಂಡಿತರಾದವರೊಡನೆ ಹೆಚ್ಚು ಹೆಚ್ಚಾಗಿ ಕೆಲಸ ಮಾಡುತ್ತಿರುವುದನ್ನು ನೋಡಬಹುದು. ನಾನು ರಷ್ಯಾ ದೇಶದಲ್ಲಿ ಹೋಗಿದ್ದಾಗಲೂ ಅಲ್ಲಿಯೂ ಈ ತರಹ ಇರುವುದನ್ನು ನೋಡಿದೆ. ಅಲ್ಲಿ ಹೆಣ್ಣು ಮಕ್ಕಳೇ ಎಷ್ಟೋ ಜನರು Horticultural Experts, Dairy Experts,Animal husbandry expert ಇತ್ಯಾದಿ ಹೀಗೆ ಹೆಚ್ಚು ಹೆಚ್ಚಾಗಿ ವಿದ್ಯಾವಂತರಾಗಿರುವವರು ಬಂದಿದ್ದರು. ನಮ್ಮ ದೇಶದಲ್ಲಿ ತಮಗೇ ಗೊತ್ತಿರುವಂತೆ ಮೊದಲನೆಯ ಪಂಚವಾರ್ಷಿಕ ಯೋಜನೆಯಲ್ಲಿ ಕಡ್ಡಾಯ ಶಿಕ್ಷಣವನ್ನು ಜಾರಿಗೆ ಉಚಿತವಾಗಿ ಮಾಡುತ್ತಿರುವುದರಿಂದ, ಇನ್ನು ಕೇವಲ ಹತ್ತು ವರ್ಷಗಳೊಳಗೆ ನಮ್ಮ ಹೆಣ್ಣು ಮಕ್ಕಳು ಹೆಚ್ಚು ಹೆಚ್ಚಾಗಿ ವಿದ್ಯೆಯನ್ನು ಕಲಿಯಲು ಬರುತ್ತಾರೆ ಎನ್ನುವ ನಿರೀಕ್ಷೆ ಇದೆ. ಆಗ್ಗೆ ಇನ್ನೂ ಹೆಚ್ಚಿನ ಆಹಾರದ ಉತ್ಪತ್ತಿಯನ್ನು ಪಡೆಯಲು ತಾವು ಅಪೇಕ್ಷೆಪಟ್ಟಂತೆ, ಇನ್ನೂ ಹೆಚ್ಚಿನ ಆಸಕ್ತಿ ವಹಿಸಲು ಸಾಧ್ಯವಾಗಬಹುದು. ಮತ್ತು ಈಗಿರುವುದಕ್ಕಿಂತಲೂ ಹೆಚ್ಚಿನ ಆಹಾರ ಉತ್ಪನ್ನವನ್ನು ಮಾಡಲು ನಮ್ಮ ರಾಜ್ಯದ ಜನಗಳಿಗೆ ನೀರಿನ ಸಂಪತ್ತನ್ನು ಹೆಚ್ಚು ಮಾಡಿ ಅನುಕೂಲ ಮಾಡಿಕೊಡಲು ಏರ್ಪಾಡಾಗುತ್ತಿವೆ. ಇವೆಲ್ಲವನ್ನೂ ನೋಡಿದರೆ, ಯಾವ ರಾಜ್ಯದಲ್ಲಿಯೂ ಉತ್ಪತ್ತಿ ಮಾಡುವುದಕ್ಕಿಂತ ಹೆಚ್ಚಿನ ಪ್ರಮಾಣದಲ್ಲಿ ನಾವು ಆಹಾರ ಪದಾರ್ಥಗಳನ್ನು ಬೆಳೆಯಲು ತಕ್ಕ ಅವಕಾಶಗಳು ನಮ್ಮ ರಾಜ್ಯದಲ್ಲಿಯೇ ಇದೆ.

ಆದ್ದರಿಂದ ಈ ದಿವಸ ಈ ವಿಚಾರದಲ್ಲಿ ಯಾರೂ ಯಾವ ವಿಧವಾದಂತಹ ಅನುಮಾನವನ್ನೂ ಸಹ ಪಡಬೇಕಾಗಿಲ್ಲ. ಬುಲ್‌ಡೋಝರ್ಸ್, ಕಬ್ಬಿಣ, ಗೊಬ್ಬರ, ಟ್ರಾಕ್ಟರ್ಸ್, ನೀರಾವರಿ ಸೌಕರ್ಯ ಇವೆಲ್ಲವೂ ರೈತರಿಗೆ ಸಾಕಷ್ಟು ದೊರೆಯುವಂತೆ ವ್ಯವಸ್ಥೆ ಮಾಡಲಾಗುತ್ತಿದೆ.

**ಶ್ರೀ ಕೆ.ಪಿ.ರೇವಣ ಸಿದ್ದಪ್ಪ:** ಆದರೂ ರೈತರು ಇನ್ನೂ ಮುಂದೆ ಬಾರದೇ ಇರುವುದಕ್ಕೆ ಕಾರಣವೇನು? ಬುಲ್‌ಡೋಜರ್ಸ್, ಟ್ರಾಕ್ಟರ್ಸ್, ಗೊಬ್ಬರ, ಕಬ್ಬಿಣ ಇವುಗಳನ್ನು ನಿಜವಾಗಿ ಸಾಕಷ್ಟು ರೈತರಿಗೆ ಒದಗಿಸುತ್ತಿದ್ದಿರೋ?

**ಶ್ರೀ ಎನ್.ರಾಚಯ್ಯ:** ಈಗ ಸಾಕಷ್ಟು ಆ ಸಾಮಾನುಗಳು ಸಾಗಾಣಿಕೆಯಾಗಿ ಇಲ್ಲಿಗೆ ಬರುತ್ತಿವೆ. ಮಂತ್ರಿಯಾಗಿದ್ದರೂ ನನಗೂ ಜಮೀನು ಇದೆ. ಆದರೆ ಆ ಜಮೀನಿನಿಂದ ನನಗೆ ಬರಬೇಕಾದ ವ್ಯವಸಾಯ ಉತ್ಪತ್ತಿ ಆಗುತ್ತಾ ಇಲ್ಲ. ವ್ಯವಸಾಯದ ಕೂಲಿಗಾರರಿಗೆ ಸರಿಯಾದ ರಕ್ಷಣೆಯನ್ನು ಇನ್ನೂ ಕೊಟ್ಟಿಲ್ಲ. ಒಟ್ಟಿನಲ್ಲಿ ಏಕರೂಪವಾದ ಶಾಸನವನ್ನು ಜಾರಿಗೆ ತಂದು ವ್ಯವಸಾಯ ಕ್ಷೇತ್ರದಲ್ಲಿ ರೈತರಿಗೂ ಮತ್ತು ಕಾರ್ಮಿಕರಿಗೂ ದನ, ಕುರಿ, ಕೋಳಿ ಸಾಕುವ ಬಡ ರೈತರಿಗೂ equal wage for equal work ಎಂಬ ಪಾಲಿಸಿಯನ್ನು ಜಾರಿಗೆ ತರಲೇಬೇಕೆಂದು ಸರ್ಕಾರದ ಮೂಲ ಉದ್ದೇಶವಾಗಿದೆ. ಆದರೆ ರಾಜ್ಯಾಂಗಬದ್ಧವಾಗಿ ಯಾವ ರೀತಿ ನ್ಯಾಯ ದೊರೆಯಬೇಕಾಗಿತ್ತೋ ಆ ರೀತಿಯಲ್ಲಿ ರೈತರಿಗೆ ಕೆಲವು ಫಾರಂಗಳಲ್ಲಿ ಕೊಟ್ಟಿಲ್ಲ. ಹೆಚ್ಚಿಗೆ ವಿಶ್ವಾಸವನ್ನು ಬೆಂಬಲವನ್ನೂ , ಧೈರ್ಯವನ್ನು ರೈತರಿಗೆ ಉಂಟು ಮಾಡಲು ನ್ಯಾಯವಾಗಿ ಅವರಿಗೆ ಎಲ್ಲಾ ಸೌಕರ್ಯಗಳನ್ನು, ಸಕಾಲಕ್ಕೆ ಒದಗಿಸಿದ್ದ ಪಕ್ಷದಲ್ಲಿ ಒಂದು ದಿವಸಕ್ಕೆ 8 ಘಂಟೆ ಬದಲಾಗಿ 10 ಘಂಟೆ ಕೆಲಸ ಮಾಡುತ್ತಾರೆಂಬ ನಂಬಿಕೆ ಇದೆ. ಇದರಿಂದ ಹೆಚ್ಚು ಉತ್ಪತ್ತಿಯಾಗುತ್ತದೆ. ರೈತರಲ್ಲಿ ಒಂದು ಸಂಘಟನೆಯಾಗಬೇಕು. ಫಾರ್ಮರ್ಸ್ ಫೋರಂನಲ್ಲಿ ಎಷ್ಟೇ ಪ್ರಮಾಣದಲ್ಲಿಯಾದರೂ ರೈತರಿಗೆ ಗೊಬ್ಬರ ಕೊಡಬೇಕು. ಕೇಂದ್ರ ಸರ್ಕಾರದವರು ರಾಜ್ಯ ಸರ್ಕಾರದವರಿಗೆ ಈ ಫಾರ್ಮರ್ಸ್ ಫೋರಂನಲ್ಲಿ ರೈತರಿಗೆ ಬೇಕಾದಷ್ಟು ಸೌಲಭ್ಯಗಳನ್ನು ಒದಗಿಸುವ ದೃಷ್ಟಿಯಿಂದ ಮತ್ತು ರೈತರಲ್ಲೂ ಸಂಘಟನೆಯಾಗಿ ಚೆನ್ನಾಗಿ ಕೆಲಸ ಮಾಡುವುದಕ್ಕಾಗಿ 50 ಸಾವಿರ ರೂಪಾಯಿಗಳನ್ನು ಹೆಚ್ಚಿಗೆ ಗ್ರಾಂಟ್ ರೂಪವಾಗಿ ಕೊಟ್ಟಿದ್ದಾರೆ. ಈ ವರ್ಷವೂ ಅದೇ ರೀತಿಯಲ್ಲಿ ಕೊಡಬೇಕೆಂದಿದ್ದಾರೆ. ಮುಂದೆಯೂ ಕೊಡುವವರಿದ್ದಾರೆ. ಇದರಿಂದಾಗಿ ರೈತರು ಮುಂದೆ ಮುಂದೆ ಬಂದು ಕಬ್ಬಿಣ, ಟ್ರಾಕ್ಟರ್, ಬುಲ್‌ಡೋಜರ್ಸ್‌ಗಳನ್ನು ಒದಗಿಸುವ ಹಾಗೆ ರೈತರೇ ಒಂದು ತಮ್ಮ ವರ್ಕ್ ಷಾಪ್‌ನ್ನು ಮೇಂಟೇನ್ ಮಾಡುವುದು, ಡೈರಿ ಫಾರಂಗಳನ್ನು ಮಾಡುವುದು, ಯಂಗ್ ಫಾರ್ಮರ್ಸ್ ಅಸೋಸಿಯೇಷನ್ ಸ್ಥಾಪನೆ ಮಾಡುವುದು, ಅಲ್ಲದೇ ಡೆಮಾನ್‌ಸ್ಟ್ರೇಷನ್ಸ್ ಫಾರಂ ಎಂದು ಮಾಡುವುದು ತೋಟಗಾರಿಕೆ ಮುಂತಾದ ಕೆಲಸ ಕಾರ್ಯಗಳಲ್ಲಿ ಪ್ರದರ್ಶನಗಳನ್ನು ಮಾಡುವುದು ಈ ಕೆಲಸಗಳಿಗೆ ರೈತರೇ ಮುಂದೆ ಬಂದು ತಮ್ಮ ಈ ಕೆಲಸ ಕಾರ್ಯಗಳನ್ನು

ವಿಚಕ್ಷಣೆಯಿಂದ ಶ್ರದ್ಧಾಸಕ್ತಿಗಳಿಂದ ಮಾಡುವುದಾದರೆ ದೇಶದಲ್ಲಿ ಹೆಚ್ಚಿನ ಆಹಾರ ಪದಾರ್ಥಗಳನ್ನು ಬೆಳೆಯಬಹುದು. ಅಂತಹ ಒಂದು ಶಕ್ತಿ ಸಾಮರ್ಥ್ಯ ಅವರಿಗೆ ಬರುತ್ತದೆ. ರೈತರೇ ತಾವೇ ಇವೆಲ್ಲವನ್ನು ಮಾಡೋಣವೆಂಬ ಧೈರ್ಯ, ಉತ್ಸಾಹ ಅವರಿಗೆ ಬರಬೇಕು. ಇನ್ನು ಫಾರ್ಮರ್ಸ್ ಫೋರಂಗಳಲ್ಲಿ ಯಾವರೀತಿ ಬೇರೆ ದೇಶಗಳಲ್ಲಿ ಕೆಲಸ ನಡೆಯುತ್ತಿದೆ ಎಂಬುದನ್ನು ನಮ್ಮ ದೇಶದ ರೈತ ಮುಖಂಡರನ್ನು ಜಪಾನ್ ಮತ್ತು ಅಮೇರಿಕಾ ದೇಶಗಳಿಗೆ ಕಳುಹಿಸಿ ಅಲ್ಲಿನ ವ್ಯವಸಾಯದ ರೀತಿ ನೀತಿಗಳನ್ನು ಇಲ್ಲಿಯೂ ಅನುಸರಿಸುವಂತೆ ತಕ್ಕ ವ್ಯವಸ್ಥೆಯನ್ನು ಸರ್ಕಾರವದವರು ಮಾಡುತ್ತಿದ್ದಾರೆ. ಅದರಿಂದಾಗಿ ರೈತರ ಸಂಘಟನೆಯಾಗುತ್ತಿದೆ. ರೈತರಲ್ಲಿ ಹೆಚ್ಚಿನ ಆಸಕ್ತಿ ಶ್ರದ್ಧೆ, ಹೆಚ್ಚುತ್ತಿದೆ. ಸಾಕಾದಷ್ಟು ಈಚೀಚೆಗೆ ಕಬ್ಬಿಣ, ಗೊಬ್ಬರ ಮುಂತಾದ ವ್ಯವಸಾಯದ ಉಪಕರಣಗಳನ್ನು ಕೊಡಲಾಗುತ್ತಿದೆ. ಎಷ್ಟೆಷ್ಟು ಸಾಧ್ಯವೋ ಅಷ್ಟನ್ನು ಹಂಚುತ್ತಿದ್ದೇವೆ. ಆದರೂ ಸರ್ಕಾರದ ಉದ್ದೇಶ ಸಾಧ್ಯವಾಗಲಿಲ್ಲ. ಇನ್ನೂ ಸ್ಟಾಕ್ ಬರುತ್ತಿದೆ. ಒಟ್ಟಿನಲ್ಲಿ ರೈತರಿಗೆ ಈಗ ಕೊಡತಕ್ಕ ಸೌಕರ್ಯಗಳನ್ನು ನೀವೆಲ್ಲರೂ ಒಪ್ಪಿಕೊಳ್ಳುವ ರೀತಿಯಲ್ಲಿ ವ್ಯವಸ್ಥೆ ಮಾಡಿದೆ. ಇನ್ನು ರಿಸರ್ಚ್ ವಿಷಯದಲ್ಲಿ ದ್ವಿತೀಯ ಪಂಚವಾರ್ಷಿಕ ಯೋಜನೆಯಲ್ಲಿ 150 ಯೋಜನೆಗಳನ್ನು ಕಾರ್ಯಗತ ಮಾಡಲಾಗಿದೆ. ಈ ಸಂಬಂಧಪಟ್ಟ ಬೇಡಿಕೆಗಳು ಈ ಸಭೆಯಲ್ಲಿ ಚರ್ಚೆಗೆ ಬಂದಾಗ ಹೆಚ್ಚಿನ ವಿವರಗಳನ್ನು ಈ ಬಾಬ್ತಿನಲ್ಲಿ ಕೊಡುತ್ತೇನೆ. ಇನ್ನು ಪ್ಲಾಂಟ್ ಪ್ರೊಟೆಕ್ಷನ್, ಬಾರದೇ ಇರುವ ಹಾಗೆ ಅವಕ್ಕೆ ಸರಿಯಾದ ಔಷಧಿಗಳನ್ನು ಹಂಚುವ ವಿಚಾರವನ್ನು ಸಹ ಮಾಡುತ್ತಿದ್ದೇವೆ. ಇದಕ್ಕಾಗಿ ಸಾಕಾದಷ್ಟು ಯೋಜನೆಗಳನ್ನು ಮಾಡಿದ್ದೇವೆ. ಈಗ ಆ ಯೋಜನೆಗಳ ಅಂತಸ್ತು ಮೀರಿ ಹೆಚ್ಚಿನ ಪ್ರಮಾಣದಲ್ಲಿ ಕೆಲಸ ಮಾಡಿಕೊಂಡು ಬಂದಿದ್ದೇವೆ. ಆ ವಿವರಗಳನ್ನೆಲ್ಲಾ ಸಂಬಂಧಪಟ್ಟ ಬೇಡಿಕೆ ಬಂದಾಗ ಕೊಡುತ್ತೇನೆ.

ಇನ್ನು ಪ್ರಾಣಿ ಸಂಪತ್ತು ವಿಷಯವಾಗಿ ಕೆಲವು ಮಾತುಗಳನ್ನು ಹೇಳಬೇಕಾಗಿದೆ. ನಾವು ಪ್ರಾಣಿಸಂಪತ್ತನ್ನು ಹೆಚ್ಚಿಸಿರುವ ಹಾಗೆ ಭಾರತ ದೇಶದಲ್ಲಿ ಯಾವ ರಾಜ್ಯದಲ್ಲೂ ಇಲ್ಲ. ಆ ರೀತಿ ಈ ಸಂಪತ್ತನ್ನು ಹೆಚ್ಚಿಸುವುದಕ್ಕೆ ಪ್ರಯತ್ನ ಮಾಡಿದ್ದೇವೆ. ಈಗ ನಮ್ಮ ರಾಜ್ಯದಲ್ಲಿ 527 ಪಶು ವೈದ್ಯ ಶಾಲೆಗಳಿವೆ. ಮತ್ತು 25 ಸಾವಿರ ಜಾನುವಾರುಗಳು ಇದ್ದ ಪಕ್ಷದಲ್ಲಿ ಒಂದೊಂದು ಪಶುವೈದ್ಯ ತೆರೆದಿದ್ದೇವೆ. ಕಳೆದ ವರ್ಷ 40 ಪಶುವೈದ್ಯ ಶಾಲೆಗಳನ್ನು ತೆರೆದಿದ್ದೇವೆ. ಈ ಮೂರನೇ ಪಂಚವಾರ್ಷಿಕ ಯೋಜನೆಯಲ್ಲಿ 90 ಪಶುವೈದ್ಯ ಶಾಲೆಗಳನ್ನು ನಾವು ಮಂಜೂರು ಮಾಡಿ

ಸಾಮಾನ್ಯವಾಗಿ ಅವನ್ನು ಎಲ್ಲಾ ಕಡೆಗಳಲ್ಲೂ ಕೊಡಬೇಕೆಂದು ವ್ಯವಸ್ಥೆ ಮಾಡಿದ್ದೇವೆ. ಈಗಿರತಕ್ಕ ಪಶುವೈದ್ಯ ಆಸ್ಪತ್ರೆಗಳನ್ನು ಅಪ್‌ಗ್ರೇಡ್ ಮಾಡುವುದಲ್ಲದೆ ಅವನ್ನು ಆದಷ್ಟು ಜಾಗ್ರತೆ ಉತ್ತಮಗೊಳಿಸಬೇಕಾಗಿದೆ. ಏಕೆಂದರೆ ನಮ್ಮ ಸ್ಥಳೀಯ ಪ್ರಾದೇಶಿಕ ಕೆಲವು ಹಸುಗಳನ್ನು ನೋಡಿದರೆ ಸರಿಯಾಗಿ ಒಂದು ಪಾವು ಅಥವಾ 1/4 ಪಾವು ಹಾಲನ್ನೂ ಸಹ ಕೊಡುವುದಿಲ್ಲ. ಕೇವಲ 50-60 ಹಸುಗಳೂ ಸಹ ತಮ್ಮ ಕರುಗಳು ಹಾಲನ್ನು ಪೂರ್ತಿಯಾಗಿ ಕುಡಿಯುವುದರಿಂದ ಹಾಲನ್ನೇ ಕೊಡುತ್ತಿಲ್ಲ. ಈಗ ಅದರ ಕೆಚ್ಚಲಿನಲ್ಲಿ ಹಾಲೇ ಇರುವುದಿಲ್ಲವೆಂದು ರೈತರು ಹೇಳುತ್ತಾರೆ. ಅಂದಮೇಲೆ ಅಲ್ಲಿ ಏನೋ ತಪ್ಪು ನಡವಳಿಕೆ ನಡೆಯುತ್ತಿದೆ ಎಂದು ಹೇಳಬಹುದು. ಅದಕ್ಕಾಗಿ ಹೊಸ ತಳಿಯನ್ನು ತಂದು ಅದನ್ನು ಉತ್ತಮಪಡಿಸಬೇಕಾದರೆ ಆರ್ಟಿಫಿಷಿಯಲ್ ಇನ್‌ಸೆಮಿನೇಷನ್ಸ್ ಮಾಡುವ ಹಾಗೆ ಕೀ-ವಿಲೇಜ್ ಸ್ಕೀಮುಗಳನ್ನು ಮಾಡಬೇಕಾಗಿದೆ. ಎಲ್ಲೆಲ್ಲಿ ದನ ಸಂಪತ್ತು ಕಡಿಮೆ ಇದೆಯೋ, ಎಲ್ಲೆಲ್ಲಿ ತಳಿಯನ್ನು ಉತ್ತಮ ಪಡಿಸಲಿಕ್ಕೆ ಆಯಾ ಪ್ರದೇಶಗಳಲ್ಲಿಯೇ ಈ ವ್ಯವಸ್ಥೆಯನ್ನು ಏರ್ಪಾಡು ಮಾಡಿ ಒಳ್ಳೆಯ ತಳಿಯನ್ನು ಹೆಚ್ಚಿಸುವುದಕ್ಕೆ ಟಾಪ್ ಪ್ರೈಯಾರಿಟಿ ಕೊಡಬೇಕು. ಸಾಕಾದಷ್ಟು ಪ್ರಮಾಣದಲ್ಲಿ ಎಲ್ಲ ಕಡೆಗಳ ಹಾಲನ್ನು ಸರಬರಾಜು ಮಾಡುವ ವಿಚಾರದಲ್ಲಿ ಪ್ಲಾನಿಂಗ್ ಕಮಿಷನ್ನಿನ ಶ್ರೀಮಾನ್ ನಾರಾಯಣಜೀಯವರು ಹೇಳಿರತಕ್ಕ ನೀತಿಯನ್ನು ರಾಜ್ಯ ಸರ್ಕಾರದವರು ಅನುಸರಿಸಿದ್ದಾರೆ. ಮೂರನೇ ಪಂಚವಾರ್ಷಿಕ ಯೋಜನೆಯಲ್ಲಿ ಹಾಲಿನ ಸರಬರಾಜು ಯೋಜನೆ ಬಹಳ ಯಶಸ್ವಿಯಾಗುತ್ತದೆ ಎಂಬುದಾಗಿ ನಾನು ತಮ್ಮ ಮುಂದೆ ಬಹಳ ಸಂತೋಷದಿಂದ ಹೇಳುತ್ತಿದ್ದೇನೆ. ಈ ಪಶುವೈದ್ಯ ಶಾಲೆಗಳನ್ನು ತೆರೆಯುವುದರ ಜೊತೆಗೆ ಅನೇಕ ಕಡೆಗಳಲ್ಲಿ ಫಾರಂಗಳನ್ನು ತೆರೆಯಬೇಕೆಂದು ಸರ್ಕಾರ ಮನಸ್ಸು ಮಾಡಿದೆ. ಪ್ರತಿಯೊಂದು ತಾಲ್ಲೂಕಿನಲ್ಲೂ ವ್ಯವಸಾಯದ ಒಂದು ಫಾರಂ ತೋಟಗಾರಿಕೆ ಹಣ್ಣು, ತರಕಾರಿ ಬೆಳೆಯುವ ಒಂದು ಫಾರಂ ಈ ರೀತಿ ಸೌಕರ್ಯಗಳನ್ನು ರೈತರಿಗೆ ಕೊಡಲಾಗುವುದು. ಇದರಿಂದ ಸಾಮಾನ್ಯ ಜನಗಳಿಗೆ ಹೆಚ್ಚಿಗೆ ಆಹಾರ ಪದಾರ್ಥಗಳು ಸುಲಭ ಬೆಲೆಗೆ ದೊರೆಯುತ್ತವೆ. 2 ಸಾವಿರ ಅಥವಾ 3ಸಾವಿರ ಜನಸಂಖ್ಯೆ ಇರುವ ಕಡೆ ಒಂದೊಂದು ಕಂಬೈನ್ಡ್ ಅಗ್ರಿಕಲ್ಚರ್ ಫಾರಂಗಳನ್ನು ಮಾಡಿ ಅಲ್ಲಿ ಪೌಲ್ಟ್ರಿ, ಅನಿಮಲ್ ಹಸ್ಬೆಂಡ್ರಿ ಡೆವಲಪ್‌ಮೆಂಟ್, ಅಗ್ರಿಕಲ್ಚರ್ ಫಿಷರಿ ಇತ್ಯಾದಿ

ಸೌಕರ್ಯಗಳನ್ನು ಕೊಡಬೇಕೆಂದು ಸರ್ಕಾರದ ಮನಸ್ಸಿನಲ್ಲಿದೆ. ಇನ್ನು ಮಂಡ್ಯಾದಲ್ಲಿ ಈ ಯೋಜನೆಗಳ ಕೆಲವು ಪ್ರಯೋಗಗಳನ್ನು ಮಾಡಬೇಕೆಂದು ಸರ್ಕಾರದ ಮನಸ್ಸಿನಲ್ಲಿದೆ. ಕೇಂದ್ರ ಸರಕಾರಕ್ಕೆ ಅವನ್ನೆಲ್ಲಾ ಕಳುಹಿಸಿದ್ದೇವೆ. ಅವರ ಅನುಮತಿ ಇನ್ನೂ ದೊರೆತಿಲ್ಲ. ಅದು ಆದಷ್ಟು ಜಾಗ್ರತೆ ಬರುತ್ತದೆಂಬ ಭರವಸೆಯೂ ಇದೆ. ಇನ್ನು ವ್ಯವಸಾಯೋತ್ಪಾದನೆ ಮಾಡುವಾಗ ವ್ಯವಸಾಯದ ಕೂಲಿಗಾರರಿಗೆ ಕೇವಲ ನಾಲ್ಕೈದು ಎಕರೆ ಜಮೀನು ಕೊಟ್ಟರೆ ಸಾಲದು. ಅವರಿಗೆ ವ್ಯವಸಾಯ ಮಾಡಲು ತಕ್ಕ ಸೌಕರ್ಯಗಳನ್ನು ಒದಗಿಸಿಕೊಡಬೇಕಾದುದು ಮುಖ್ಯವಾದುದು. ಈ ವಿಷಯದ ಬಗ್ಗೆ ನಾಲ್ಕೈದು ಸಲ ಮಂತ್ರಿಮಂಡಲದಲ್ಲಿ ಚರ್ಚೆಯಾಗಿದೆ. ಆದರೆ ಅದನ್ನು ಒಪ್ಪಿದ್ದರೂ ತೀರ್ಮಾನವನ್ನು ಇನ್ನೂ ತೆಗೆದುಕೊಂಡಿಲ್ಲ. ಆದ್ದರಿಂದ ಎಲ್ಲಿ 4, 5, 10 ಎಕರೆ ಜಮೀನನ್ನು ಸರಕಾರದವರು ಕೊಡುತ್ತಾರೋ ಅಂತಹ ಕಡೆಗಳಲ್ಲಿ ರೈತರು ಕಾರ್ಮಿಕರು ಮುಂದೆ ಬಂದು ನಾವು ಒಂದು ಸಹಕಾರ ಸಂಘಗಳನ್ನು ಮಾಡಿಕೊಳ್ಳುತ್ತೇವೆ ಎಂದು ಒಪ್ಪಿಕೊಂಡರೆ ಅಂತಹ ಜನಗಳ ಒಪ್ಪಿಗೆ ತೆಗೆದುಕೊಂಡು ಅವರಿಗೆ ಆ 4, 5, 10 ಎಕರೆ ಜಮೀನನ್ನು ಸಹಕಾರ ಸಂಘದ ಕ್ಷೇತ್ರಕ್ಕೆ ಅನ್ವಯಿಸುವ ಕಾಯಿದೆಗಳ ಅನುಸಾರವಾಗಿ ಕೊಡಬೇಕೆಂದು ಸರಕಾರದ ಆಶಯವಾಗಿದೆ. ಅಲ್ಲದೇ ಆ ರೀತಿ ಅವರು ವ್ಯವಸಾಯ ಮಾಡಲು ಅವರಿಗೆ ತಕ್ಕ ಸೌಕರ್ಯಗಳನ್ನೂ ಸಹ ಸರ್ಕಾರದವರು ಒದಗಿಸಿ ಕೊಡಬೇಕಾಗುತ್ತದೆ. ಇದರಿಂದ ವ್ಯವಸಾಯ ಕಾರ್ಮಿಕರಲ್ಲಿ ನಿರುದ್ಯೋಗ ಸಮಸ್ಯೆಯನ್ನೂ ಸಹ ಬಗೆಹರಿಸಬಹುದು.

ಅವರ ಬಡತನ ಬಗೆಹರಿಯುವುದಕ್ಕೂ ಮತ್ತು ಅವರ ಸ್ಥಿತಿಗತಿ ಹೆಚ್ಚು ಉತ್ತಮಗೊಳ್ಳಲು ಸಾಧ್ಯವಾಗುತ್ತದೆ. ಇದನ್ನು ನಾವು ಈಗಾಗಲೇ ಮಾಡಿದ್ದೇವೆ. ಈ ವಿಚಾರ ಈಗ ಸರ್ಕಾರದವರ ತೀವ್ರ ಪರಿಶೀಲನೆಯಲ್ಲಿದೆ. ಈ ಬಗ್ಗೆ ಸರ್ಕಾರ ಇನ್ನೂ 1–2 ತಿಂಗಳಲ್ಲೇ ತೀರ್ಮಾನ ಕೈಗೊಳ್ಳುವ ನಿರೀಕ್ಷಣೆ ಇದೆ. ಇದರಿಂದ ವ್ಯವಸಾಯದ ಕಾರ್ಮಿಕರಿಗೆ ತುಂಬಾ ಅನುಕೂಲವಾಗುತ್ತದೆ ಹಾಗೂ ಅವರ ಅಂತಸ್ತು ಸಹ ಇದರಿಂದ ಹೆಚ್ಚಾಗುತ್ತದೆ. ಇಷ್ಟೇ ಅಲ್ಲದೆ ಈ ಒಂದು ವ್ಯವಸ್ಥೆಯಿಂದ ಈ ಬಡವರಿಗೇನೂ ಜಮೀನನ್ನು ಕೊಡುವುದೋ ಅದನ್ನು ಅವರು ದುರ್ವಿನಿಯೋಗ ಮಾಡದಂತೆ ತಡೆಗಟ್ಟಿ ಪರಭಾರೆಗೆ ಅವಕಾಶವಿಲ್ಲದಂತೆ ಆಗುವುದು. ಹೀಗೆ ಈ ವರ್ಗಕ್ಕೆ ಅಗತ್ಯವಾಗಿ ಬೇಕಾಗಿರತಕ್ಕ ಎಲ್ಲಾ ಸೌಕರ್ಯಗಳನ್ನು ಸರಬರಾಜು ಮಾಡತಕ್ಕ

ವಿಚಾರದಲ್ಲಿ ಈಗ ಸರ್ಕಾರದವರು ತೀವ್ರ ಗಮನ ಕೊಡಲು ವ್ಯವಸ್ಥೆ ಮಾಡಲಿದ್ದೇವೆ. ಮೂರನೇ ಪಂಚವಾರ್ಷಿಕ ಯೋಜನೆಯ ಅವಧಿಯಲ್ಲಿ ಈ ವ್ಯವಸ್ಥೆಯು ಪ್ರತಿಯೊಂದು ತಾಲ್ಲೂಕಿನಲ್ಲೂ ಜಾರಿಗೆ ಬರುವಂತೆ ಮಾಡಲಾಗುತ್ತದೆ. ಈ ಬಾಬ್ತಿನಲ್ಲಿ ನಮಗೆ ಬೇಕಾಗಿರತಕ್ಕ ಸಲಕರಣೆ ಮತ್ತು ತರಬೇತಿ ಪಡೆದ ಸಿಬ್ಬಂದಿ ಎಲ್ಲವನ್ನೂ ನಾವು ತಯಾರು ಮಾಡಿ ಕಳುಹಿಸಬೇಕಾಗಿದೆ. ನಮಗೆ ತರಬೇತಿ ಪಡೆದ ಸಿಬ್ಬಂದಿ ದೊರೆತರೆ ನಾವು ಪ್ರತಿಯೊಮದು ತಾಲ್ಲೂಕಿಗೂ ಈ ಯೋಜನೆಯನ್ನು ಹರಡಲು ಅನುಕೂಲವಾಗುತ್ತದೆ. ಆದರೆ ಈಗ ಕೆಲವು ತಾಲ್ಲೂಕುಗಳಲ್ಲಿ ಇದನ್ನು ಜಾರಿಗೆ ತರಬೇಕೆಂದು ಸರ್ಕಾರ ತೀರ್ಮಾನ ತೆಗೆದುಕೊಂಡಿದೆ. ಈಗಾಗಲೇ 1958 ರಲ್ಲಿ ಒಂದು ವೆಟರಿನರಿ ಕಾಲೇಜನ್ನು ನಾವಿಲ್ಲಿ ಸ್ಥಾಪನೆ ಮಾಡಿದ್ದೇವೆ. ಈ ಕಾಲೇಜಿನಲ್ಲಿ ಈಗಾಗಲೇ ವಿದ್ಯಾರ್ಥಿಗಳು ಮೂನೇ ವರ್ಷದ ತರಗತಿಯಲ್ಲಿ ಅಭ್ಯಾಸ ಮಾಡುತ್ತಿದ್ದಾರೆ. ಇನ್ನು ಕೆಲವು ದಿವಸಗಳಲ್ಲೇ ಈ ಕಾಲೇಜಿನಿಂದ ಬಿ.ಎಸ್.ಸಿ ಡಿಗ್ರಿಯನ್ನು ಪಡೆದು 40–50 ಜನರು ದೇಶ ಸೇವೆಗೆ ತಯಾರಾಗುವಂತಹ ಅವಕಾಶವನ್ನು ನಾವೀಗಾಗಲೇ ಕಲ್ಪಿಸಿದ್ದೇವೆ. ನಾವು ಹೊರದೇಶಕ್ಕೂ ನಮ್ಮ ವಿದ್ಯಾರ್ಥಿಗಳನ್ನು ಕಳುಹಿಸಿ ತರಬೇತು ಪಡೆಯಲು ಅವಕಾಶವನ್ನೂ ಸಹ ಕಲ್ಪಿಸಿರುತ್ತೇವೆ. ನಾವು ಈಗ ಮತ್ತೊಂದು ಕಟ್ಟಡದ ಶಂಖು ಸ್ಥಾಪನೆಯನ್ನು ಹೋದ ವರ್ಷ ಪ್ರಾರಂಭ ಮಾಡಿ ಈಗಾಗಲೇ ಆ ಕಟ್ಟಡ ಪೂರೈಸುತ್ತಾ ಬಂದಿದೆ. ಇದಕ್ಕೆ 26 ಲಕ್ಷ ರೂಪಾಯಿಗಳನ್ನು ವೆಚ್ಚ ಮಾಡಲಾಗಿದೆ. ಮುಂದಿನ ತಿಂಗಳಲ್ಲಿ ಕೇಂದ್ರ ಸರಕಾರದ ಮಂತ್ರಿಗಳಾದ ಶ್ರೀ.ಎಸ್.ಕೆ.ಪಾಟೀಲ್‌ರನ್ನು ಇದರ ಪ್ರಾರಂಭೋತ್ಸವಕ್ಕೆ ಕರೆಸಬೇಕೆಂದಿದ್ದೇವೆ. ಈ ಅಧಿವೇಶನ ಮುಗಿಯುವುದಕ್ಕೆ ಮುಂಚೆಯೇ ಇದರ ಓಪನಿಂಗ್ ಸೆರ್ಮನಿಯನ್ನು ಮಾಡಬೇಕೆಂಬ ತೀವ್ರ ಗಮನವನ್ನು ಕೊಟ್ಟು ಇವುಗಳನ್ನು ಕಾರ್ಯ ರೂಪಕ್ಕೆ ತರಲು ಎಲ್ಲಾ ಕಾರ್ಯಕ್ರಮಗಳನ್ನು ಕೈಗೊಂಡಿದ್ದೇವೆ.

**ಶ್ರೀ ಜೆ. ಮುಕ್ಕಣ್ಣಪ್ಪ:** ಈ ಮೂರನೇ ಪಂಚವಾರ್ಷಿಕ ಯೋಜನೆಯಲ್ಲಿ 5 ಪಾಠ ಶಾಲೆಗಳನ್ನು ತೆರೆಯಲು ಬಜೆಟ್ಟಿನಲ್ಲಿ ಹಣವನ್ನೊದಗಿಸಿದ್ದೀರಲ್ಲಾ?

**ಶ್ರೀ ಎನ್.ರಾಚಯ್ಯ:** ಹಣವನ್ನೊದಗಿಸಿರುವುದು ನಿಜ. ಆದರೆ ನಾವು ಇಲ್ಲಿಯವರೆಗೂ ಈ ವಿದ್ಯಾಪೀಠ ಮತ್ತು ಈ ಎಕ್ಸ್‌ಟೆನ್‌ಸೀವ್ ಟ್ರೈನಿಂಗ್

ಸೆಂಟರ್‌ಗಳಿಂದ ತರಬೇತು ಹೊಂದಿದ ಜನರು ಸಿಗಬಹುದೆಂದು ಅಂದಾಜು ಮಾಡಿದ್ದೆವು. ಆದರೆ ಈಗ ಪ್ರತ್ಯೇಕವಾದ ಪಾಠ ಶಾಲೆಗಳನ್ನು ತೆರೆಯಲು ಮೂರನೇ ಪ್ಲಾನಿನಲ್ಲಿ 5 ಲಕ್ಷ ರೂಪಾಯಿಗಳನ್ನು ಒದಗಿಸಲಾಗಿದೆ. ಆದರೆ ಅಷ್ಟೇ ಏಕೆ ಈ ಶಾಲೆಗಳನ್ನು ನಾವು ಪ್ರತಿಯೊಂದು ಜಿಲ್ಲೆ ಹಾಗೂ ತಾಲ್ಲೂಕು ಕಸಬಾಗಳಲ್ಲಿ ಪ್ರಾರಂಭಿಸಬೇಕೆಂಬ ಆಸೆ ನಮಗಿದೆ. ಈಗ ಹೆಚ್ಚು ಜನರನ್ನು ಈ ಬಾಬ್ತಿನಲ್ಲಿ ತಯಾರು ಮಾಡಿದರೆ ಮುಂದೆ ಈ ಪೌಲ್‌ಟ್ರಿ ಫಾರಂ, ವ್ಯವಸಾಯ, ಗಾರ್ಡನಿಂಗ್, ತೋಟಗಾರಿಕೆ ಇತ್ಯಾದಿ ಯಾವುದೇ ಒಂದು ಬಾಬ್ತಿಗಾಗಲೀ ಈ ಜನರು ಅನುಕೂಲವಾಗುತ್ತಾರೆ. ಇಂತಹ ಪದ್ಧತಿಯನ್ನು ಜಾರಿಗೆ•ತರಲು ಈ ಸರಕಾರ ಒಪ್ಪಿದೆ. ಈಗ ಬರಲಿರುವ ಮೂರನೇ ಯೋಜನೆಯಲ್ಲಿ ಇದನ್ನು ಖಂಡಿತವಾಗಿಯೂ ಜಾರಿಗೆ ತಂದೇ ತರುತ್ತೇವೆ. ಸರ್ಕಾರದವರು ಇಂಥ ಕಾರ್ಯಕ್ರಮಗಳನ್ನು ಬಹಳ ಶೀಘ್ರವಾಗಿ ಈಗ ಮುಂದುವರೆಸಿಕೊಂಡು ಬರುತ್ತಿದೆ. ಈಗಾಗಲೇ ಅಗ್ರಿಕಲ್ಚರ್ ಕಾಲೇಜಿನ ಕಟ್ಟಡ ಸಹ ಪೂರ್ಣವಾಗಿದೆ. ಅದನ್ನೂ ಕೂಡ ಆದಷ್ಟು ಜಾಗ್ರತೆ ಓಪನ್ ಮಾಡಬೇಕೆಂದಿರುತ್ತೇವೆ. ಇನ್ನು ಈ ಹಾಲಿನ ಸೆಂಟರುಗಳನ್ನು ತೆರೆಯತಕ್ಕ ವಿಚಾರದಲ್ಲಿ ಈಗಾಗಲೇ ಭದ್ರಾವತಿಯಲ್ಲಿ ಒಂದು ಸೆಂಟರನ್ನು ಪ್ರಾರಂಭಿಸಲಾಗಿದೆ. ಹಾಲಿನ ಕೊರತೆಯಿರತಕ್ಕ ಮೈಸೂರು, ಗುಲ್ಬರ್ಗಾ, ದಾವಣಗೆರೆ, ಕೂಡ್ಲಿಗೆ, ಧಾರವಾಡ ಇಲ್ಲೆಲ್ಲ ಹಾಲಿನ ಕೇಂದ್ರಗಳನ್ನು ತೆರೆಯಲಾಗುವುದು. ಈ ಯೋಜನೆಯನ್ನೂ ಕೂಡ ಆದಷ್ಟು ಪ್ರದೇಶಗಳಿಗೆ ಮುಂದುವರೆಸಬೇಕು ಎಂಬ ಆಸೆ ಸರಕಾರದವರಿಗಿದೆ.

ಇನ್ನು ಸ್ವಾಮಿ, ಈ ಮೀನುಗಾರಿಕೆ ವಿಚಾರದಲ್ಲಿ ಕೂಡ ನಾವು ಒಳ್ಳೆಯ ಪ್ರಯತ್ನಗಳನ್ನು ಕೈಗೊಂಡಿದ್ದೇವೆ. ನಮಗೆ ತಾ.11–1–56 ಮೇಲೆ ಹೊಸ ರಾಜ್ಯ ಜಾರಿಗೆ ಬಂದ ಮೇಲೆ ನಮಗೆ ಸುಮಾರು 200 ಮೈಲಿಗಳ ಸಮುದ್ರ ಕರಾವಳಿ ದೊರೆತಿರುತ್ತೆ. ಈ ಹಿಂದೆ ಈ ಬಾಬ್ತಿಗೆ ಒಂದು ಪ್ರತ್ಯೇಕ ಇಲಾಖೆ ಇರಲಿಲ್ಲ. ಈಗ ನಾವು ಇನ್‌ಫೆಂಟೈನ್ ಮತ್ತು ಮೆರೀನ್ ಎಂಬ ಎರಡು ಜಾತಿಯ ಮೀನುಗಳ ಅಭಿವೃದ್ಧಿಗೆ ಹೆಚ್ಚು ಗಮನ ಕೊಟ್ಟಿದ್ದೇವೆ. ಈ ಇಲಾಖೆಯ ವಿಚಾರದಲ್ಲಿ ಯಾರೂ ಅಷ್ಟು ಹೆಚ್ಚಿನ ಟೀಕೆಗಳನ್ನು ಮಾಡಿಲ್ಲ. ಆದಾಗ್ಯೂ ನಾವು ಬಾಬ್ತಿಗೆ ಹೆಚ್ಚಿನ ಗಮನಕೊಟ್ಟಿದ್ದೇವೆ. ಇನ್ನು ಇದರ ಸಲುವಾಗಿ 40–50 ಮೆಕನೈಜ್ಡ್

ಮೋಟರ್‌ಗಳನ್ನಿಟ್ಟಿದ್ದೇವೆ. ಇದಕ್ಕಾಗಿ ಇನ್ನೂ 2-3 ಯಾರ್ಡ್‌ಗಳನ್ನು ಮಾಡಬೇಕೆಂದಿದ್ದೇವೆ. ಇದರ ಜೊತೆಗೆ ಸಬ್-ಸಿಡೈಜ್ಡ್ ರೂಪದಲ್ಲಿ ಉಪಕರಣಗಳನ್ನು ಮತ್ತು ವ್ಯಾನನ್ನೂ ಒದಗಿಸುವುದಕ್ಕೆ ಏರ್ಪಾಡು ಮಾಡಿದ್ದೇವೆ. ಈ ಬಗ್ಗೆ ಇನ್ನೂ ಹೆಚ್ಚಿನ ರೀತಿಯಲ್ಲಿ ಈ ಮೂರನೇ ಪಂಚವಾರ್ಷಿಕ ಯೋಜನೆಯ ಪ್ರಗತಿಯನ್ನು ಸಾಧಿಸಬೇಕೆಂದು ಆಸೆ ಸರ್ಕಾರದವರಿಗಿದೆ. ಇನ್ನು ಉಳಿದಿರತಕ್ಕ ಅಷ್ಟಿಷ್ಟು ವಿಚಾರಗಳನ್ನು ಮುಂದೆ ಖೋತಾ ಸೂಚನೆಗಳು ಚರ್ಚೆಗೆ ಬಂದಾಗ ಸಂಪೂರ್ಣ ವಿವರಗಳನ್ನು ಆಗ ಕೊಡಬಯಸುತ್ತೇನೆ. ನಾವು ಈ ಬಾಬ್ತುಗಳಲೆಲ್ಲಾ ಎಷ್ಟರ ಮಟ್ಟಿಗೆ ಪ್ರಗತಿಯನ್ನು ಸಾಧಿಸಬೇಕಾಗಿರುತ್ತೆಂಬ ವಿಚಾರದಲ್ಲಿ ತಾವೆಲ್ಲರೂ ಒಳ್ಳೆಯ ರಚನಾತ್ಮಕ ಸಲಹೆಗಳನ್ನು ಕೊಟ್ಟಿದ್ದೀರಿ. ಆದರೆ ನಾವೂ ಸಹ ದೇಶದಲ್ಲಿ ಈ ವ್ಯವಸಾಯ ಹಾಗೂ ಆಹಾರೋತ್ಪಾದನೆ ವಿಚಾರದಲ್ಲಿ ಹೆಚ್ಚಿನ ಗಮನವನ್ನು ಕೊಟ್ಟು ಸಾಧ್ಯವಿರತಕ್ಕ ಪ್ರಯತ್ನಗಳನ್ನೆಲ್ಲಾ ಮಾಡುತ್ತಿದ್ದೇವೆ.

**ಶ್ರೀ ಎ.ಎಂ.ಬಸವೇಗೌಡ:** ಭತ್ತದ ಬೆಳೆಗೆ ಮಲೆನಾಡಿನಲ್ಲಿ ಹುಳುಗಳು ಬೀಳುತ್ತಿವೆ. ಅದರಲ್ಲೇನು ಪರಿಹಾರ ಕಂಡುಹಿಡಿಯಲಾಗಿದೆ?

**ಶ್ರೀ ಎನ್.ರಾಚಯ್ಯ:** ಈಗ ಕೆಲವರು ಈ ವ್ಯವಸಾಯದ ಇಲಾಖೆಯಲ್ಲಿ ಶೇಕಡಾ 25 ಸಿಬ್ಬಂದಿ ಹೆಚ್ಚಾಗಿದೆ ಎಂತ ಹೇಳಿದ್ದಾರೆ, ನಾನು ಇದನ್ನು ಒಪ್ಪಿಕೊಳ್ಳಲು ಸಾಧ್ಯವಿಲ್ಲ. ಬೇರೆ ರಾಜ್ಯಗಳಲ್ಲಿ ನಮ್ಮ ಇಲಾಖೆ ಸಿಬ್ಬಂದಿಯ 5ರಷ್ಟು ಸಿಬ್ಬಂದಿಯನ್ನು ಇಟ್ಟುಕೊಂಡಿದ್ದಾರೆ. ಆದರೆ ನಾವು ನಮ್ಮ ಹಣದ ಕೊರತೆಯಿಂದ ಆದಷ್ಟೂ ಕಡಿಮೆ ಸಿಬ್ಬಂದಿಯನ್ನು ಇಟ್ಟುಕೊಂಡಿದ್ದೇವೆ. It is a developing department. ಅದಾಗ್ಯೂ ಈ ದಿವಸ ಈ ಇಲಾಖೆಯಲ್ಲಿರತಕ್ಕ ಸಿಬ್ಬಂದಿ ಬಹಳ ಹೆಚ್ಚಾಗಿರುತ್ತೆಂದು ಹೇಳಿದರೆ ನಾನು ಅದನ್ನು ಒಪ್ಪಿಕೊಳ್ಳಲು ಸಾಧ್ಯವಿಲ್ಲ.

ಇನ್ನು ಭತ್ತಕ್ಕೆ ಹುಳ ವಿಚಾರದಲ್ಲಿ ಅನೇಕರು ವಿನಾಕಾರಣವಾಗಿ ಗಾಬರಿಯಾಗಿದ್ದಾರೆ. ಎಲ್ಲೆಲ್ಲಿ ಭತ್ತಕ್ಕೆ ಹುಳ ಬಿದ್ದಿದೆ ಎಂದು ತಿಳಿದು ಬಂದಿದೆಯೋ ಅಲ್ಲಿಂದ ಭತ್ತ ತರಿಸಿ ತಜ್ಞರ ಪರಿಶೀಲನೆಗೆ ಕಳಿಸಿಕೊಡಲಾಗಿದೆ, ತಜ್ಞರ ಪ್ರಕಾರ ಈ ವಿಷಯದಲ್ಲಿ ಹೆದರಿಕೆಗೆ ಏನೂ ಆಸ್ಪದವಿಲ್ಲ. ಭತ್ತವನ್ನು ಯಾವ ರೀತಿಯಾಗಿ ಸಂರಕ್ಷಣೆ ಮಾಡಬೇಕು ಎಂಬುದಕ್ಕೆ ವಿಧವಿಧವಾದ ರೀತಿಯಲ್ಲಿ ಪ್ರಚಾರಕಾರ್ಯ ಮಾಡಲ್ಪಟ್ಟಿದೆ. ಪತ್ರಿಕೆಗಳಲ್ಲಿ ತಿಳಿಸಲಾಗಿದೆ. ಕೆಲವೊಂದು ಜನರು ತಮ್ಮ ಸ್ವಾರ್ಥ

ಸಾಧನೆಗಾಗಿ ಭತ್ತಕ್ಕೆ ಹುಳ ಹತ್ತಿದೆ ಎಂದು ಅಪಪ್ರಚಾರ ಮಾಡಿ ರೈತರನ್ನು ಹೆದರಿಸಿ ಕಡಿಮೆ ಬೆಲೆಗೆ ರೈತರಿಂದ ಭತ್ತ ಕೊಂಡು ಸಂಗ್ರಹ ಮಾಡುವ ಕಾರ್ಯದಲ್ಲಿ ತೊಡಗಿದ್ದಾರೆ. It is psychology paine. ಇಂಥ ಅಪಪ್ರಚಾರಕ್ಕೆ ಯಾರೂ ಮೋಸ ಹೋಗಬಾರದು. ಅದಕ್ಕಾಗಿ ಪತ್ರಿಕೆಗಳಲ್ಲಿ ಪ್ರಕಟಣೆಗಳನ್ನು ಕೊಟ್ಟಿದ್ದೇವೆ. ಭತ್ತದ ಬೆಳೆಗೆ ಸ್ಪ್ರೇ ಮಾಡುವ ವಿಚಾರದಲ್ಲಿ ವಿವರಣೆ ಕೊಟ್ಟು ತಿಳಿಸಿದೆ. ಈಗ ತಡೆಗಟ್ಟುವುದಕ್ಕೆ ಎಲ್ಲ ರೀತಿಯಿಂದ ಕ್ರಮ ತೆಗೆದುಕೊಂಡಿದ್ದೇವೆ. ಏನಾದರೂ ಪರಿಹಾರ ಬೇಕಾದರೆ ಕೊಡುತ್ತೇವೆ. ಆದುದ್ದರಿಂದ ಈ ಭತ್ತದ ರೋಗದ ಬಗ್ಗೆ ಹೆದರುವ ಕಾರಣವಿಲ್ಲ.

ಇನ್ನು ಸಮಾಜಕಲ್ಯಾಣ ವಿಚಾರದಲ್ಲಿ ಒಂದೆರಡು ಮಾತುಗಳನ್ನು ಹೇಳಬೇಕೆಂದಿದ್ದೇನೆ. ಆದರೆ ಸಮಾಜ ಕಲ್ಯಾಣ ವಿಚಾರದಲ್ಲಿ ಮಾನ್ಯ ಸದಸ್ಯರು ಹೆಚ್ಚಾಗಿ ಪ್ರಸ್ತಾಪ ಮಾಡಿಲ್ಲ. ಶ್ರೀ ಶ್ಯಾಮಸುಂದರ್ ಅವರೂ ಶ್ರೀ ರಾಚಯ್ಯನವರೂ ಈ ವಿಷಯ ಪ್ರಸ್ತಾಪ ಮಾಡಿ ಸುಳ್ಳೇ ಸಲಹೆಗಳನ್ನು ಮಾಡಿದ್ದಾರೆ. ಹರಿಜನರ ಪ್ರಗತಿಗಾಗಿ ರಾಜ್ಯಾಂಗಕ್ಕೆ ಅನುಗುಣವಾಗಿ ಏನೂ ಕಾರ್ಯಕ್ರಮ ತೆಗೆದುಕೊಂಡಿಲ್ಲ ಎಂದು ಮುಂತಾಗಿ ಅವರು ತಮ್ಮ ಭಾಷಣದಲ್ಲಿ ಹೇಳಿದ್ದಾರೆ. ಆದರೆ ಅವರು ಹೇಳುವಾಗ ಅತಿಯಾಗಿ ಉತ್ಪ್ರೇಕ್ಷೆ ಮಾಡಿ ಹೇಳಿದ್ದಾರೆ ಇಲ್ಲಿಯವರೆಗೆ ನಾವು ಏನೇನು ಮಾಡುತ್ತಾ ಬಂದಿದ್ದೇವೆಯೋ ಅದನ್ನು ಎಲ್ಲರಿಗೂ ತಿಳಿಸುತ್ತಲೇ ಬಂದಿದ್ದೇವೆ. ಇನ್ನೊಂದು ವಿಚಾರ. ಅವರು ಹೇಳುತ್ತಾ ಹರಿಜನರಿಗೆ ಪ್ರಾತಿನಿಧ್ಯ ಕೊಡುವ ಕಾಲದಲ್ಲಿ ವಯಸ್ಸಿನ ಪರಿಮಿತಿಯನ್ನು ತೆಗೆದು ಹಾಕಬೇಕೆಂದು ಅವರು ಹೇಳಿದ್ದಾರೆ. ನಾವು ಯಾವ ಬಗ್ಗೆಯೂ ತೀರ್ಮಾನ ತೆಗೆದುಕೊಂಡಿಲ್ಲ, ಈ ಎಲ್ಲ ಅಂಶಗಳನ್ನು ಈ ಸಭೆಯಲ್ಲಿ ನಾವೆಲ್ಲರೂ ಯೋಚನೆ ಮಾಡಬೇಕಾಗಿದೆ. ಒಂದು ಮಾತನ್ನು ಮಾತ್ರ ನಾನು ಹೇಳಲು ಇಷ್ಟ ಪಡುತ್ತೇನೆ. ಹರಿಜನರ ಉಮೇದುವಾರರಿಗೆ, ಹಿಂದುಳಿದ ವರ್ಗದ ಉಮೇದುವಾರರಿಗೆ ಪ್ರಾತಿನಿಧ್ಯ ಕೊಡುವಾಗ್ಗೆ ಯಾವ ವಿಧವಾಗಿಯೂ ಅಡ್ಡಿ ಆತಂಕಗಳು ಆಗದ ರೀತಿಯಲ್ಲಿ ಕ್ರಮ ತೆಗೆದುಕೊಳ್ಳುತ್ತೇವೆ ಎಂದು ಇಷ್ಟು ಮಾತ್ರ ಭರವಸೆ ಕೊಡುತ್ತೇನೆ. Copitative examination ಇಡುವುದು ಅಷ್ಟು ಒಳ್ಳೆಯದಲ್ಲ ಎಂದು ಅನಿಸುತ್ತದೆ. ರಾಜ್ಯಾಂಗದಲ್ಲಿ ಹರಿಜನರಿಗೆ ಪರಿಶಿಷ್ಟ ವರ್ಗದವರಿಗೆ, ಗಿರಿಜನರಿಗೆ ಶೇಕಡ 18ರಷ್ಟು ಸ್ಥಳಗಳನ್ನು ಮೀಸಲಾಗಿ ಇಡಬೇಕೆಂದು ಹೇಳಿದೆ. ಪ್ರತಿಯೊಂದು

ಇಲಾಖೆಗಳಲ್ಲಿ ಪ್ರಾತಿನಿಧ್ಯ ಕೊಡಬೇಕಾಗಿದೆ. ಒಂದು ವೇಳೆ ಸಾಕಷ್ಟು ಪ್ರಮಾಣದಲ್ಲಿ ಹಿಂದುಳಿದ ವರ್ಗದಿಂದ ವಿದ್ಯಾರ್ಹತೆಯುಳ್ಳ ವೇಳೆ ಉಮೇದುವಾರರು ಸಿಕ್ಕದೇ ಹೋದ ಪಕ್ಷದಲ್ಲಿ ನೇರವಾದ ನೇಮಕ ಮಾಡಿಕೊಳ್ಳಲಾಗುತ್ತದೆ. ಕೆಲವೊಂದು ಸಂದರ್ಭದಲ್ಲಿ ರಿಜರ್ವೇಷನ್ ಮಾಡಬೇಕಾಗುತ್ತದೆ. ಹಿಂದುಳಿದವರಿಗೆ ವಿದ್ಯಾಭ್ಯಾಸ ಸೌಕರ್ಯ ಒದಗಿಸುವುದು ಆರ್ಥಿಕ ಅಭಿವೃದ್ಧಿ ಮಾಡುವ ವಿಚಾರದಲ್ಲಿ ನಿರ್ದಿಷ್ಟ ಕ್ರಮ ತೆಗೆದುಕೊಳ್ಳಲಾಗುತ್ತಿದೆ. ಈ ವಿಚಾರದಲ್ಲಿ ಇನ್ನು ಹೆಚ್ಚಿಗೆ ಕೂಲಂಕಷವಾಗಿ ಪರಿಶೀಲನೆ ಮಾಡುತ್ತಾ ಇದ್ದೇವೆ. ಆಂಧ್ರಪ್ರದೇಶದಲ್ಲಿ ಈ ಬಗ್ಗೆ ಎಲ್ಲಾ ವಿಚಾರಗಳನ್ನು ಪರಿಶೀಲನೆ ಮಾಡಿ ಕೆಲವು ಕ್ರಮ ತೆಗೆದುಕೊಂಡಿರತಕ್ಕಂಥಾದ್ದನ್ನು ನಾವು ಸಹ ಯೋಚನೆ ಮಾಡುತ್ತೇವೆಂದು ಭರವಸೆ ಕೊಡುತ್ತೇನೆ. ವಿಶೇಷವಾಗಿ ವಿದ್ಯಾಭ್ಯಾಸ ಕ್ಷೇತ್ರದಲ್ಲಿ ಉಳಿದ ಎಲ್ಲಾ ಕ್ಷೇತ್ರಗಳಿಗಿಂತಲೂ ಹೆಚ್ಚಿನ ಪ್ರಮಾಣದಲ್ಲಿ ಅನುಕೂಲ ಮಾಡಿಕೊಡತಕ್ಕಂಥ ವ್ಯವಸ್ಥೆ ಮಾಡಿದ್ದೇವೆ.

**Sri. B. shamasundar:** About two years ago, there was an order issued that unless that quota of resevation is fullfilled no other candidatets should be entertained against those posts. Has that been fullfilled?

**ಶ್ರೀ ಎನ್.ರಾಚಯ್ಯ:** yes ನಮ್ಮ ಸರ್ಕಾರ ಬಂದ ಮೇಲೆ ಏನೇನು ಮಾಡಲಾಗಿದೆ ಎಂಬುವುದನ್ನು ಮುಖ್ಯಮಂತ್ರಿಗಳು ಹೇಳಿದ್ದಾರೆ. ಒಂದು ವೇಳೆ ಯಾವುದಾದರೂ ಒಂದು ಇನ್ನೂ ಕಾರ್ಯಗತವಾಗದೇ ಇದ್ದ ಪಕ್ಷದಲ್ಲಿ ಅದರ ಬಗ್ಗೆ ಪರಿಶೀಲನೆ ಮಾಡಿ ಸೂಕ್ತ ಕ್ರಮ ತೆಗೆದುಕೊಳ್ಳುತ್ತೇವೆಂದು ಭರವಸೆ ಕೊಡುತ್ತೇನೆ.

ಇನ್ನು ಹರಿಜನರ ಪ್ರಗತಿ ವಿಚಾರದಲ್ಲಿ ಹೇಳುವಾಗ ಕೆಲವು ಸದಸ್ಯರು ಟೀಕೆ ಮಾಡಿ ಸೋಷಿಯಲ್ ವೆಲ್‌ಫೇರ್ ಡಿಪಾರ್ಟ್‌ಮೆಂಟ್‌ನಲ್ಲಿ ಬಹಳ ಅನಾಹುತವಾಗಿದೆ ಎಂದು ಹೇಳಿದರು. ಅವರೇನೋ ಚೆನ್ನಾಗಿ ಭಾಷಣ ಮಾಡಿದರು. ಶ್ರೀ ಶಾಮಸುಂದರ್ ಅವರಿಗೆ ಚೆನ್ನಾಗಿಯೇ ಅನುಭವವಿದೆ, ಆದರೆ ಅದನ್ನು ಹೇಳುವಾಗ್ಗೆ ಈ ರೀತಿ ಅವರು ದುಡುಕಬಾರದಾಗಿತ್ತು. ಯಾಕೆಂದರೆ ಸತ್ಯವಾಗಿರುವ ಅಂಕಿಅಂಶಗಳನ್ನು ಅವರು ಕೊಡುವುದಿಲ್ಲ. ಸತ್ಯವಾದ ಅಂಕಿಅಂಶಗಳನ್ನು ಕೊಡಬೇಕಾಗಿತ್ತು ಇಂಥ ನೀತಿಯನ್ನು ಅನುಸರಿಸದೆ ಇದ್ದರೆ ಚೆನ್ನಾಗಿತ್ತು.

## ♦ ಅಸ್ಪೃಶ್ಯತೆಯ ಮಸೂದೆ : ಎನ್. ರಾಚಯ್ಯನವರ ಕಾಳಜಿ

**ಅಸ್ಪೃಶ್ಯತೆಯ ವಿಚಾರ ಬಂದಾಗ ಎನ್. ರಾಚಯ್ಯನವರು ಬುಲ್ಡೋಜರ್‌ನ ಹಾಗೆ ಮುನ್ನುಗ್ಗುತ್ತಿದ್ದರು. ಅಸ್ಪೃಶ್ಯತೆ ಆಚರಣೆಯನ್ನು ಟ್ಯೂಬರ್‌ಕ್ಯುಲೋಸಿಸ್‌ಗೆ ಹೋಲಿಸಿ, ಈ ಕಾಯಿಲೆ ದೇಹ ತಿಂದರೆ, ಅಸ್ಪೃಶ್ಯತೆ ಎಂಬ ಖಾಯಿಲೆ ದೇಶವನ್ನೇ ತಿಂದು ನೊಣೆಯುತ್ತದೆ ಎಂಬುದು ಸಚಿವರ ಮುನ್ನೋಟ. ಗಾಂಧೀಜಿಯ ಕನಸು ನನಸಾಗುವ ದಿನವೇ ಅಸ್ಪೃಸ್ಯತೆ ನಿವಾರಣಾ ಮಸೂದೆ ಜಾರಿಯಾಗುವ ದಿನ ಎಂದು ಭಾವಿಸುವ ರಾಚಯ್ಯನವರು ಅಸ್ಪೃಶ್ಯತೆಯೆಂಬ ರಾಕ್ಷಸ ಬೇರನ್ನು ಕಿತ್ತೊಗೆಯಬೇಕೆಂದು ವಿಧಾನಸೌಧದಲ್ಲಿ ಗುಡುಗಿದ್ದು ಕರುಳಿನ ಆಕ್ರಂದನದ ಮಾತುಗಳವು.**

ಶಾಸನದ ಈ ಸಣ್ಣ ಭಾಗವನ್ನು ಹೃದಯಪೂರ್ವಕವಾಗಿ ಸ್ವಾಗತಿಸುತ್ತೇನೆ. ಇದೇ ಮೊದಲಬಾರಿಗೆ ಸಂಸತ್ತಿನಲ್ಲಿ ಈ ರೀತಿಯ ಸಾಮಾಜಿಕ ಶಾಸನವೊಂದು ನಮ್ಮ ದೇಶದ ನಿಬಂಧನೆಗಳ ಪುಸ್ತಕದಲ್ಲಿ ಸ್ಥಳವನ್ನು ದೊರಕಿಸಿಕೊಂಡಿದೆ. ಈ ಬಿಲ್ಲನ್ನು ಸ್ವಾಗತಿಸುವ ಸಂದರ್ಭದಲ್ಲಿ ತನ್ನ ಇಡೀ ಜೀವನವನ್ನು ಹರಿಜನ ಅಥವಾ ಪರಿಶಿಷ್ಟಜಾತಿಯ ದಾಸ್ಯವಿಮೋಚನೆಗಾಗಿಯೇ ಸವೆಸಿರುವ ಗಾಂಧೀಜಿಯವರಿಗೆ ನಾನು ಋಣೀಯಾಗಿರುತ್ತೇನೆ. ಶ್ರೀ ಸೋಮಣ್ಣ ಅವರು ಹೇಳಿದಂತೆ, ಈ ದೇಶದ 1/3 ಭಾಗಕ್ಕಿಂತಲೂ ಹೆಚ್ಚು ನಾವಿದ್ದೇವೆ. ಆದರೂ ಇದೊಂದು ದೌರ್ಭಾಗ್ಯ ಮತ್ತು ದುಃಖಕರ ವಿಷಯವೆಂದರೆ ಸಾವಿರಾರು ವರ್ಷಗಳಿಂದಲೂ ಈ ಮಾನವ ಸಮುದಾಯವನ್ನು ಸಮಾಜದ ಕೆಳದರ್ಜೆಯವರಂತೆ ಮಾಡಿದ್ದುದು. ಅದೇ ಸಮಾಜದಲ್ಲಿ ಪ್ರಾಣಿಗಳು ಈ ಮನುಷ್ಯರಿಗಿಂತ ಉತ್ತಮ ಸ್ಥಾನವನ್ನು ಪಡೆದಿವೆ.

ನಮ್ಮ ಸಂವಿಧಾನವು, ನಮ್ಮ ಪವಿತ್ರ ಪ್ರಜಾಪ್ರಭುತ್ವದ ದಾಖಲೆಗಳು ತನ್ನ ಎಲ್ಲಾ ನಾಗರಿಕರಿಗೆ ಸಮಾನವಾದ ಸ್ವಾತಂತ್ರ್ಯ, ನ್ಯಾಯ, ಅವಕಾಶಗಳನ್ನು ನೀಡಿದೆ. ಆರ್ಟಿಕಲ್ 15, 17, 25, 29, 38 ಮತ್ತು 46ಗಳು ನ್ಯಾಯಿಕ, ಸಾಮಾಜಿಕ, ಆರ್ಥಿಕ, ರಾಜಕೀಯ ಸಮಾನತೆಗಳನ್ನು ಹೊಂದುವ ಬಗ್ಗೆ

ಗುರಿಯಿಟ್ಟುಕೊಂಡಿವೆ. ಈ ದೇಶದಲ್ಲಿ ಯಾವುದಾದರೂ ಸಾಮಾಜಿಕ ನ್ಯಾಯವಿದೆ ಎಂದು ಹೇಳಲಿಕ್ಕಾಗುವುದೇ?. ನಾನು ಸಾಮಾಜಿಕ ಅಸಮಾನತೆಯನ್ನು ಬಿಟ್ಟು ಯಾವುದೇ ಅಸಮಾನತೆಯನ್ನು ತಡೆದುಕೊಳ್ಳಬಲ್ಲೆ, ಏಕೆಂದರೆ ಸಾಮಾಜಿಕ ಸಮಾನತೆ ಯಾವುದೇ ದೇಶದ ಅಥವಾ ವ್ಯಕ್ತಿಯ ಪ್ರಗತಿಗೆ ತಳಹದಿಯಾಗಿದೆ. ಅಸ್ಪೃಶ್ಯತೆಯ ಕ್ಯಾನ್ಸರ್, ಸಂವಿಧಾನದ ಆರ್ಟಿಕಲ್ 17ರಿಂದ ನಿಷೇಧಕ್ಕೊಳಗಾಗಿರುವ ಇದು ಜೀವನ ಎಂದರೇನು ಎಂದು ತಿಳಿಯದೆಯೇ ತಮ್ಮ ಜೀವನವನ್ನು ನೀಡಿದ ನಮ್ಮ ಕೋಟ್ಯಾಂತರ ಜನರನ್ನು ಮುಕ್ಕಿಹಾಕಿದೆ. ನಮ್ಮ ಕೋಟ್ಯಾಂತರ ಜನರು ಈ ರೀತಿಯ ಟ್ಯೂಬರ್‌ಕ್ಯುಲೋಸಿಸ್‌ಗೆ ಬಲಿಯಾದರು. ನಮಗೆಲ್ಲಾ ತಿಳಿದಿರುವಂತೆ ಈ ಟ್ಯುಬರ್‍ಕ್ಯುಲೋಸಿಸ್ ನಮ್ಮ ದೇಹವನ್ನು ತಿಂದುಬಿಡುತ್ತದೆ. ಹಾಗಾಗಿ ಅಸ್ಪೃಶ್ಯತೆಯ ಈ ಟ್ಯೂಬರ್‍ಕ್ಯುಲೊಸಿಸ್‌ಗೆ ನಾವೇನಾದರೂ ಅವಕಾಶ ಮಾಡಿಕೊಟ್ಟರೆ ದೇಶವನ್ನೇ ತಿಂದುಬಿಡುತ್ತದೆ. ನಾವೀಗ ಏಕತೆ ಬಗ್ಗೆ ಪ್ರಜಾಪ್ರಭುತ್ವದ ಬಗ್ಗೆ ಮಾತನಾಡುತ್ತಿದ್ದೇವೆ. ಸರ್ಕಾರವು ತನ್ನ ಪಂಚವಾರ್ಷಿಕ ಯೋಜನೆಯಲ್ಲಿ ಅಲ್ಲದೆ ತನ್ನ ಮುಂದಿನ ಪಂಚವಾರ್ಷಿಕ ಯೋಜನೆಯಲ್ಲಿಯೂ ಈ ಜನಗಳ ಅಭಿವೃದ್ಧಿಗೆ ಯಾವುದೇ ಹೆಚ್ಚಿನ ಹಣವನ್ನು ನೀಡಿಲ್ಲ. ಗಾಂಧೀಜಿಯು ತಮ್ಮ ಜೀವನವನ್ನೇ ಹರಿಜನಕ್ಕಾಗಿ, ಪರಿಶಿಷ್ಟಜಾತಿಯ ಉದ್ಧಾರಕ್ಕಾಗಿ ಮುಡುಪಾಗಿಟ್ಟವರು. 1933ರಲ್ಲಿ ದೇವಸ್ಥಾನದ ಪ್ರವೇಶದ ಬಗ್ಗೆ ಬಾಂಬೆಯಿಂದ ಜಾರಿಗೊಳಿಸಲಾದ ಒಂದು ಕಾನೂನಿನ ಬಗ್ಗೆ ಹೇಳಿದ್ದೇನೆಂದರೆ, 'ಇಂದಿನ ವರ್ಷದ ಸೆಪ್ಟೆಂಬರ್‌ನಲ್ಲಿ ಎಲ್ಲ ಹಿಂದುಗಳು ಸೇರಿ ಸಮಾವೇಶವನ್ನು ಪ್ರತಿನಿಧಿಸಬೇಕು. ಅಸ್ಪೃಶ್ಯತೆಯನ್ನು ಖಂಡಿಸುವ ಗೊತ್ತುವಳಿಯನ್ನು ಜಾರಿಮಾಡುವ, ಅಂದು ಇದ್ದ ರೆಜಿಮ್‌ನ ಕಾಲದಲ್ಲಿ ಸಾಧ್ಯವಾದರೆ ಕಾನೂನಿನ, ಮೂಲಕ ನಿರ್ಬಂಧಿಸುವುದಕ್ಕೆ ತಾವೇ ನ್ಯಾಸವನ್ನು ಕೈಗೊಳ್ಳಬೇಕೆಂದು ನಿರ್ಣಯಿಸಿದ್ದರು. ಆದರೆ ತಮ್ಮದೇ ಸರ್ಕಾರವಿದ್ದರೂ ಅದನ್ನು ಜಾರಿಗೊಳಿಸುವಲ್ಲಿ ತಪ್ಪಿದ್ದಾರೆ ಎಂದರು.

ಭಾರತದ 36 ಕೋಟಿ ಜನರನ್ನು ಪ್ರತಿನಿಧಿಸುವ ಸಂಸತ್ತಿನ ಈ ವಿಶೇಷ ದಿನ ಈ ಬಿಲ್ಲನ್ನು ಜಾರಿಗೊಳಿಸಲಾಗಿತ್ತಿದೆ. ಇದು ಭಾರತದ ಸಮಾಜದಲ್ಲಿ ಒಂದು ಮೈಲಿಗಲ್ಲಾಗಿದೆ ಎಂಬ ಭರವಸೆ ನನಗಿದೆ. ಇದೊಂದು ಭಾರತೀಯ ಸಮಾಜದಲ್ಲಿನ ಮೈಲಿಗಲ್ಲು ಇದು ಸಂಘಟನೆಯನ್ನು ಬಯಸಿ ಭಾರತೀಯ

ಸಮಾಜವನ್ನು ಒಗ್ಗೂಡಿಸುತ್ತದೆ. ದೇಶದ 80 ಕೋಟಿಗೂ ಅಧಿಕ ಜನರ ಮೋಕ್ಷಕ್ಕೆ ಕಾರಣವಾಗುತ್ತದೆ. ಈ ವಿಷಯಕ್ಕೆ ಸಂಬಂಧಿಸಿದಂತೆ ರೋಮಿನ ಸಮಾಜದಲ್ಲಿ ಪ್ಯಾಟ್ರಿಷಿಯನ್ಸ್ ಮತ್ತು ಪೆಬಿಷಿಯನ್ಸ್ ನಡುವೆ ನಡೆದ ಹೋರಾಟವನ್ನು ನೆನಪಿಸಿಕೊಂಡರೆ, ಆ ಘರ್ಷಣೆ ನಿಲ್ಲುವವರೆಗೆ ರೋಮನ ಚಕ್ರಾಧಿಪತ್ಯ ಸ್ಥಾಪಿಸಲಾಗಲಿಲ್ಲ. ಹರಿಜನ ಮತ್ತು ಹಿಂದುಗಳು ತಮ್ಮ ಘರ್ಷಣೆಯನ್ನು ನಿಲ್ಲಿಸುವವರೆಗೆ ಭಾರತ ಪ್ರಸಿದ್ಧ ದೇಶವಾಗುವುದಿಲ್ಲ. ಪ್ಯಾಟ್ರಿಷಿಯರನ್ನು ಹಿಂದೂ ಜಾತಿಗೆ ಹೋಲಿಸಬಹುದಾದರೆ ಹರಿಜನರನ್ನು ಪ್ಲೇಬಿಯನ್ಸ್‌ಗೆ ಹೋಲಿಸಬಹುದು. ನಮ್ಮ ನಾಯಕರು ಏಕತೆಯ ಬಗ್ಗೆ ಮಾತನಾಡುತ್ತಾರೆ. ಆದರೆ ಎಲ್ಲಿದೆ ಏಕತೆ? ವಸತಿ ನಿಲಯ, ಶಾಲೆಗಳು, ಕಾಲೇಜುಗಳಲ್ಲಿಯೂ ಇದು ಕಾಣುವುದಿಲ್ಲ. ಅಲ್ಲದೆ ಸಮುದಾಯ ವರ್ಗೀಕರಣ ಮತ್ತು ಪ್ರಜಾಪ್ರಭುತ್ವ ಮತ್ತು ರಾಜ್ಯದ ಅಭಿವೃದ್ಧಿಯಲ್ಲಿ ಸರ್ಕಾರವು ಸಮುದಾಯ ಸಂಸ್ಥೆ, ಮಠ ಇತ್ಯಾದಿಗಳನ್ನು ಏಕೆ ತೊಡೆದು ಹಾಕುವುದಿಲ್ಲ. ಈ ಸಂಸ್ಥೆಗಳನ್ನು ಹೀಗೆ ಹೋಗಲು ಬಿಟ್ಟರೆ ಭಾರತದಲ್ಲಿ ಪ್ರಜಾಪ್ರಭುತ್ವ ಇನ್ನು ಉಳಿಯುವುದಿಲ್ಲ. ನಾವು ಹರಿಜನರು ಶಾಂತಿ: ಸಂವಿಧಾನಾತ್ಮಕ : ಸಾಮಾಜಿಕ ಮತ್ತು ಆರ್ಥಿಕ ತ್ವರಿತ ಕ್ರಾಂತಿ ಬಗ್ಗೆ ಒಲವನ್ನು ಇಟ್ಟುಕೊಂಡಿದ್ದೇವೆ. ಆರ್ಥಿಕ ಕ್ರಾಂತಿಯಾಗದೆ ಸಾಮಾಜಿಕ ಕ್ರಾಂತಿ ಎಂದಿಗೂ ಸಾಧ್ಯವಿಲ್ಲ. ಹಾಗೆಯೇ ಆರ್ಥಿಕ ಕ್ರಾಂತಿಯು ಸಾಮಾಜಿಕ ಕ್ರಾಂತಿಯಾಗದೆ ಸಾಧ್ಯವಿಲ್ಲ. ಎರಡೂ ಒಂದಕ್ಕೊಂದು ಗಾಢವಾಗಿ ಹೆಣೆದುಕೊಂಡಿದೆ. ಅವೆರಡೂ ಬೇರೆಯಲ್ಲಯೆಂದು ನನಗೂ ಗೊತ್ತು. ಹಲವು ಸದಸ್ಯರು ಆರ್ಥಿಕ ಕ್ರಾಂತಿಗೆ ಮೊದಲು ಆದ್ಯತೆ ನೀಡಬೇಕೆಂದು ಹೇಳುವರು. ಆದರೆ ಸರ್ಕಾರ ಹರಿಜನರಿಗೆ ಭೂಮಿ ನೀಡಿಲ್ಲ. ಸರ್ಕಾರ ಹರಿಜನರ ನಿಜವಾದ ಸಮಸ್ಯೆಯನ್ನು ಅರಿಯಲು ಪ್ರಯತ್ನಿಸಿದರೆ ಅವರಿಗೆ ಹಲವು ವರ್ಷಗಳಿಂದ ಹಾಗೆಯೇ ಬಿಟ್ಟಿರುವ ಭೂಮಿಯನ್ನು ತೆಗೆದುಕೊಳ್ಳಲು ಬಿಡಬೇಕು. ದೇಶದಲ್ಲಿ ಬಳಸದೆ ಇರುವ ಭೂಮಿ ಇರಲೇಬಾರದು. ಕೊನೆಯ ಪಕ್ಷ ಸರ್ಕಾರವು ಬಳಸಿರದ ಕಾಡಾಗಿರಬಹುದು ಅಥವಾ ಕಾಡಲ್ಲದಿರುವಂತಹ ಸರ್ಕಾರಿ ಭೂಮಿಯನ್ನು ಉಳುಮೆ ಮಾಡಲು ಹರಿಜನರಿಗೆ ನೀಡಬೇಕೆಂದು ಕೇಂದ್ರ ಶಾಸನವನ್ನು ಮಾಡಬಹುದೇ? ಪರಿಶಿಷ್ಟ ಜಾತಿಯ ಆಯುಕ್ತರಾಗಿರುವ ಶ್ರೀ ಶ್ರೀ ಕಂಠ ಅವರ ಮಾತನ್ನು ಒಪ್ಪುತ್ತೇನೆ. ಅವರು ಹೇಳುವಂತೆ ಹರಿಜನರ ಉದ್ಧಾರವು ಸರ್ಕಾರ ಹಾಗು ಜನರ ಪ್ರಾಮಾಣಿಕ

ಪ್ರಯತ್ನದಿಂದ ಮಾತ್ರ ಸಾಧ್ಯ. ಅದೊಂದೇ ಅಲ್ಲ ಈಗ ಹರಿಜನರು ಚಪರಾಸಿ ಕೆಲಸವನ್ನು ತೆಗೆದುಕೊಳ್ಳಲು ಸಾಧ್ಯವೇ ಎಂದು ಯೋಚಿಸುತ್ತಿದ್ದೇನೆ. ಕೆಲವು ಕೆಲಸಗಳಲ್ಲಿ ಮೀಸಲಾತಿಯ ಅರ್ಥವೇನು? ಕೇಂದ್ರ ಸರ್ಕಾರವೆ ಆಗಲಿ ರಾಜ್ಯ ಸರ್ಕಾರವೇ ಆಗಲಿ ಯಾವುದೇ ಅಪ್ಪಣೆ ಮಾಡಿದರೂ ಪರಿಣಾಮವೇನೂ ಆಗುತ್ತಿಲ್ಲ. ಮೈಸೂರಿನಲ್ಲಿ ಹರಿಜನರ ಸೇವೆಯ ಕೆಲಸಕ್ಕಾಗಿ ಮೀಸಲಾತಿಯ ಬಗ್ಗೆ ಕೇಂದ್ರ ಸರ್ಕಾರದಿಂದ ಆದೇಶವನ್ನು ಪಡೆಯಲಾಯಿತು. ಮೈಸೂರಿನ ಜನಸಂಖ್ಯೆಯಲ್ಲಿ 1/6 ಭಾಗ ಹರಿಜನರಿದ್ದರೂ ನಾಗರಿಕ ಸೇವೆಗೆ ಸೇವೆ ಸಲ್ಲಿಸಲು ಯಾರೂ ಪ್ರತಿನಿಧಿಗಳಿಲ್ಲ. ನಾಗರಿಕ ಸೇವಾ ಸಮಿತಿ ಹಿಂದುಜಾತಿಗಳಿಂದಲೇ ರಚಿತವಾಗಿದೆ. ಅವರು (ಮೈಸೂರು ಸರ್ಕಾರ) ಅವರನ್ನು ಕೆಲಸಕ್ಕೆ ತೆಗೆದುಕೊಳ್ಳುವ ಆದೇಶವನ್ನು ಎರಡು ವರ್ಷಗಳ ಕಾಲ ವಿಳಂಬಿಸಿದರು. ಹರಿಜನರನ್ನು ಕೆಲಸಕ್ಕೆ ತೆಗೆದುಕೊಳ್ಳಬೇಕಾಗಿದ್ದ ಸ್ಥಳಗಳಿಗೆ ಹಿಂದುಗಳನ್ನು ತೆಗೆದುಕೊಂಡರು. ಆದೇಶದನ್ವಯ ಹರಿಜನರಿಗೆ ಇರುವ ಉದ್ಯೋಗದಲ್ಲಿ ಶೇ 22ರಷ್ಟು ತುಂಬಬೇಕು. ಇನ್ನು 20 ವರ್ಷಗಳು ಹರಿಜನರು ಯಾವುದೇ ಕೆಲಸವನ್ನು ತೆಗೆದುಕೊಳ್ಳಲಾಗುವುದಿಲ್ಲ. ಯಾಕೆಂದರೆ ಅವರಾಗಲೇ ಹರಿಜನರ ಜಾಗದಲ್ಲಿ ಹರಿಜನೇತರನ್ನು ನೇಮಿಸಿಕೊಂಡಾಗಿದೆ. ಇದೇ ರೀತಿ ಎಲ್ಲ ಕಡೆಯೂ ನಡೆಯುತ್ತಿದೆ. ಈ ರೀತಿಯ ಪರಿಸ್ಥಿತಿಯಿದ್ದರೆ ನಮಗೆ ವಿನಾಯಿತಿ ಬೇಕಿಲ್ಲ. ಈ ಸ್ಥಿತಿಯಲ್ಲೇ ಇದ್ದರೆ ಯಾವುದೇ ಕಾರಣಕ್ಕೂ ಈ ವಿನಾಯಿತಿ ನಾವು ಬಯಸುವುದಿಲ್ಲ. ಈಗಲೂ ಅವರು ಪ್ರಜಾಪ್ರಭುತ್ವದ ಬಗ್ಗೆ, ರಾಜ್ಯದ ಅಭಿವೃದ್ಧಿಯ ಬಗ್ಗೆ ಆಸಕ್ತರಾಗಿದ್ದರೆ ಇದನ್ನು ಸರಿಯಾಗಿ ಮಾಡಬೇಕು. ನಾವು ಸರಿಯಾದ ಕೆಲಸವಾಗಬೇಕೆಂದು ಬಯಸುತ್ತೇವೆ. ಅಸ್ಪೃಶ್ಯತೆಯ ಆಚರಣೆಯು ಪ್ರೀತಿ ಮತ್ತು ಕರುಣೆಯ ಅಸಾಮರಸ್ಯಕ್ಕೆ ಕಾರಣವಾಗುತ್ತದೆಂದು ಗಾಂಧೀಜಿ ಹೇಳಿದ್ದರು. ಒಮ್ಮೆ ಅವರು: 'ನಾನು ಮತ್ತೆ ಹುಟ್ಟಿ ಬರುವುದಾದರೆ ಅಸ್ಪೃಶ್ಯನಾಗಿ ಹುಟ್ಟುತ್ತೇನೆ, ಅವರ ಎಲ್ಲ ದುಃಖ ಹಾಗೂ ಸಂತೋಷಗಳನ್ನು ಹಂಚಿಕೊಳ್ಳುತ್ತೇನೆ, ಅವರಿಗೆ ಆಗುತ್ತಿರುವ ತೊದರೆಗಳನ್ನು ಕೂಡ'. ಇದೊಂದು ಉತ್ತಮ ಹೇಳಿಕೆಯಲ್ವಾ ಸ್ವಾಮಿ?

ಪರಿಶಿಷ್ಟ ಜಾತಿ ಮತ್ತು ಪಂಗಡದ ಆಯುಕ್ತರಾದ ಶ್ರೀ ಶ್ರೀಕಂಠ ಅವರು ತಮ್ಮ ವರದಿಯಲ್ಲಿ ಈ ರೀತಿ ಹೇಳಿದ್ದಾರೆ. 'ಈ ನಿಟ್ಟಿನಲ್ಲಿ ಸಾಗುತ್ತಿರುವ ಅಭಿವೃದ್ಧಿಯು ಇನ್ನೂ ನಿಧಾನವಾಗಿದೆ. ಇದು ಕೆಲವು ಆಳವಾಗಿ ಬೇರೂರಿದ ಪೂರ್ವಕಲ್ಪನೆಯಿಂದ

ಈ ತೊಂದರೆಯನ್ನು ಸಂಪೂರ್ಣವಾಗಿ ನಾಶ ಮಾಡಲು ಸ್ವಲ್ಪ ಕಾಲಬೇಕು. ಇದೊಂದು–ಅಮೆರಿಕಾದಲ್ಲಿರುವ ನೀಗ್ರೋಗಳ ಹಳೆಯ ಆಚರಣೆ ಹವ್ಯಾಸಗಳ ಬಗ್ಗೆ ಅಮೆರಿಕದಲ್ಲಿನ ವಿರೋಧಕ್ಕಿಂತಲೂ ಆಳವಾಗಿದೆ. ಅಮೆರಿಕಾದವರು ಬರೆದಿರುವ ವಿಷಯವೇನು? ಎಂದು ತಿಳಿಸುತ್ತಾ ತಮ್ಮ ಬರೆಹವನ್ನು ಮುಗಿಸುತ್ತಾರೆ.ಯಜಮಾನ ಮತ್ತು ಆಳಿನ ವ್ಯವಹಾರವು ಉತ್ಸಾಹದ ಭಾವೋದ್ರೇಕಯುಕ್ತ ಸಾರ್ವಕಾಲಿಕ ಕೆಲಸವಾದರೆ ಅದು ಒಂದು ಕಡೆ ಅತಿಯಾದ ಮನ್ನಣೆಗೊಳಪಡದ ದಬ್ಬಾಳಿಕೆಯಾದರೆ ಮತ್ತೊಂದೆಡೆ ಅಗೌರವದ ವಿಧೇಯತೆಯಾಗಿದೆ.

ನಮ್ಮದು ನಾವು ಸಹಿಸಲಾಗದಂತಹ ಕೆಳಮಟ್ಟದ ವಿಧೇಯತೆ. ಬಹಳ ಕರುಣಾಮಯಿ ಹಾಗು ವಿಶಾಲ ಹೃದಯಿಯಾಗಿರುವ ಶ್ರೀಕಂಠ ಅವರಿಗೆ ನಾನು ಋಣಿಯಾಗಿರುತ್ತೇನೆ. ಅವರೊಬ್ಬ ನಿಜವಾದ ಗಾಂಧಿ ಅನುಯಾಯಿ. ಹಿಂದುಳಿದ ವರ್ಗಗಳ ಅದರಲ್ಲೂ ಹರಿಜನರ ಉದ್ಧಾರಕ್ಕಾಗಿನ ಆಸಕ್ತಿ ಬಗ್ಗೆ ಸ್ಪಷ್ಟವಾಗಿ ವರದಿಮಾಡಿದ್ದಾರೆ. ಅವರು (ಸರ್ಕಾರ) ತಮ್ಮ ಅಭಿಪ್ರಾಯದ ಬಗ್ಗೆ ನಿಜವಾಗಿಯೂ ಪ್ರಾಮಾಣಿಕರಿದ್ದಾರೆ. ಹರಿಜನರ ಉದ್ಧಾರಕ್ಕಾಗಿ ಯೋಜನೆಗಳ ಕಾರ್ಯದ ಬಗ್ಗೆ ಪರಿಶೀಲಿಸಲು ಆಯುಕ್ತರು ಅಥವಾ ಸಂಸ್ಥೆ ಅಥವಾ ಕಮಿಟಿಯನ್ನು ಸ್ಥಾಪಿಸಬೇಕು. ಅಂದರೆ ಪರಿಶಿಷ್ಟ ಜಾತಿ ಮತ್ತು ಪಂಗಡ. ಅವರು ಅದನ್ನು ಮಾಡಲು ಬಯಸುವುದಿಲ್ಲ. ಹಿಂದುಳಿದ ವರ್ಗಗಳ ಆಯುಕ್ತರ ವರದಿ ಬರುವವರೆಗೆ ಅವರು ಕಾಯಲು ಬಯಸುತ್ತಾರೆ. ಇದು ಏಕೆ?.

ದೇವಸ್ಥಾನಕ್ಕೆ ಸಂಬಂಧಿಸಿದಂತೆ, ಇದನ್ನು ಸೂಚಿಸಲು ನಾನು ಇಷ್ಟಪಡುತ್ತೇನೆ. ಮಂತ್ರಿಗಳು ದೇವಸ್ಥಾನಕ್ಕೆ ಮತ್ತು ಇತರ ಪ್ರದೇಶಗಳಿಗೆ ಹೋಗುವ ಸಂದರ್ಭದಲ್ಲಿ ಹರಿಜನರನ್ನು ತಮ್ಮೊಂದಿಗೆ ಕರೆದುಕೊಂಡು ಹೋಗುವ ಬಗ್ಗೆ ಯಾವುದೇ ಮಾತನಾಡುವುದಿಲ್ಲ. ನನಗೆ ಗೊತ್ತು. ಹೇಗಾದರೂ ಇದೊಂದು ಕ್ಯಾನ್ಸರ್. ದೇಶದಿಂದ ಅಸ್ಪೃಶ್ಯತೆಯ ಈ ರಾಕ್ಷಸ ಬೇರು ಸಹಿತ ಕಿತ್ತೊಗೆಯಲ್ಪಡುತ್ತಾನೆ ಎಂದು ನನಗೆ ಭರವಸೆಯಿದೆ. ಇಂದಿನ ದಿನಗಳಲ್ಲಿ ಹರಿಜನರು ಎಚ್ಚೆತ್ತಿದ್ದಾರೆಂಬ ಭರವಸೆಯಿದೆ. ಆದರು ಸರ್ಕಾರ ಮತ್ತು ಜನರು ಹಿಂದುಗಳಾಗಲೀ ಹಿಂದುಯೇತರರಾಗಲಿ ಒಬ್ಬರಿಗೊಬ್ಬರು ಸಹಕರಿಸಬೇಕು. ಮುಖ್ಯವಾಗಿ ಶಾಸನಾಧಿಕಾರಿಗಳು ಮತ್ತು ನಾಯಕರು.

ಎನ್. ರಾಚಯ್ಯನವರ ವ್ಯಕ್ತಿತ್ವದ ಮಹಾನ್ ದಾಖಲೆ ಈ ವಾಗ್ವಾದಗಳು. ಸದನದಲ್ಲಿ ಸುಮ್ಮನೆ ಕುಳಿತು ತೂಕಡಿಸಿ ನಿದ್ರೆ ಮಾಡಿ, ಮೊಬೈಲ್‌ನಲ್ಲಿ ಆಟವಾಡಿ, ಅಕ್ಕಪಕ್ಕದವರೊಟ್ಟಿಗೆ ಹರಟೆ ಹೊಡೆದು ಕಾಲಕಳೆಯುವ ಎಷ್ಟೋ ರಾಜಕಾರಣಿಗಳ ಉದಾಹರಣೆಗಳು ಪ್ರಸ್ತುತ ನಮ್ಮಲ್ಲಿ ಇವೆ. ಆದರೆ ರಾಚಯ್ಯನವರು ಸದನದಲ್ಲಿ ಸದಾ ಎಚ್ಚರವಾಗಿರುತ್ತಿದ್ದು ಅಂತಹ ಸಮಯಗಳೇ ತಮ್ಮ ರಾಜಕೀಯ ಸೇವೆಗೆ ಅಮೃತಘಳಿಗೆಗಳೆಂದು ಭಾವಿಸಿ ಚರ್ಚೆಯಲ್ಲಿ ಸಕ್ರಿಯವಾಗಿ ಭಾಗವಹಿಸಿದ್ದಾರೆ. ಅವರ ಚರ್ಚೆಗಳು ಕಾಲಹರಣದ ಮಾತುಗಳಾಗಿರದೆ ಪರೀಕ್ಷೆಗೆ ತಯಾರಾಗುವ ಶಿಸ್ತಿನ ಶಾಲಾ ವಿದ್ಯಾರ್ಥಿಯ ಹಾಗೆ ಅಂಕಿ ಅಂಶಗಳ ಸಮೇತ Home Work ಮಾಡಿ ತಯಾರಾಗಿ ಬಂದು ಮಂಡಿಸಿದ ವಿಚಾರಧಾರೆಗಳು, ಕರ್ತವ್ಯಪಾಲನೆಯ ಧ್ಯೋತಕಗಳು. ಸರ್ಕಾರ ಮತ್ತು ಪ್ರಜೆಗಳ ನಡುವಿನ ಕೊಂಡಿಯಾಗಿ ಪ್ರಾಮಾಣಿಕವಾದ ಸೇವೆ ಸಲ್ಲಿಸಿದ ಕುರುಹು ಈ ಮಾತುಗಳು.

ವಿಭಾಗ – ಮೂರು

## ಸಾರ್ವಜನಿಕ ಸಭೆಯಲ್ಲಿ ಎನ್. ರಾಚಯ್ಯ ಅವರ ಚಿಂತನೆಗಳು

- ♦ ಸಂವಿಧಾನದಡಿಯಲ್ಲಿ ಜನಾಂಗದ ಅಭಿವೃದ್ಧಿಗಾಗಿ ಹಕ್ಕೊತ್ತಾಯಗಳು
- ♦ ಸಮಾನತಾ ಸಮಾಜ ಸ್ಥಾಪನೆಗಾಗಿ ಹರಿಜನ – ಗಿರಿಜನರ ಉದ್ಧಾರ
  - ಎ. ಶಿಕ್ಷಣದ ಮಹತ್ವಕ್ಕಾಗಿ ಹರಿದ ಅಭಿವೃದ್ಧಿ ಪ್ರವಾಹಗಳು
  - ಬಿ. ಮಕ್ಕಳ ಶಿಕ್ಷಣದ ಮಹತ್ವದ ಬಗೆಗಿನ ನಿಲುವುಗಳು
  - ಸಿ. ಆರ್ಥಿಕ ಅಭಿವೃದ್ಧಿ ಮತ್ತು ದುಡಿಮೆಯೇ ಗೌರವ ಎಂಬ ನಂಬಿಕೆ
  - ಡಿ. ಸಾಮಾಜಿಕ ಕೆಡುಕುಗಳಾಗಿ ಕುಡಿತದ ಚಟಗಳು
  - ಇ. ಸರಕಾರಿ ಉದ್ಯೋಗದಲ್ಲಿ ಮೀಸಲಾತಿಯ ಪ್ರಶ್ನೆ
  - ಎಫ್. ರಾಜ್ಯದಲ್ಲಿರುವ ಮಹಿಳಾ ಕಲ್ಯಾಣ ಕೇಂದ್ರಗಳು ಮತ್ತು ಶಿಶುವಿಹಾರಗಳು
  - ಜಿ. ಸಮಾಜದ ಕರ್ತವ್ಯಗಳು
- ♦ ಸಮಾಜ ಸೇವೆಯ ಮೂಲತತ್ವಗಳು
- ♦ ಸ್ವಾರ್ಥರಹಿತ ಸೇವೆಯೇ ಅಭ್ಯುದಯದ ಮಂತ್ರಗಳು
- ♦ ಅಂಗವಿಕಲರ ಸಂಕಷ್ಟಗಳನ್ನು ಕಡಿಮೆಗೊಳಿಸುವ ಕಾರ್ಯಕ್ರಮಗಳು
- ♦ ಶಿಕ್ಷಣ ಮತ್ತು ಅದರ ತತ್ವಗಳು
- ♦ ಸಮಾನತೆಯ ಕನಸುಗಳು
- ♦ ಗಿರಿಜನರ ಪುನರ್ವಸತಿ ಮತ್ತು ಅದರ ಆಗುಹೋಗುಗಳು
- ♦ ಪರಸ್ಪರ ಸಹಕಾರ ಮನೋಭಾವದ ಅಗತ್ಯತೆ
- ♦ ಸಮುದಾಯ ಅಭಿವೃದ್ಧಿ ಕನಸುಗಳು
- ♦ ಪಂಚಾಯತ್ ರಾಜ್‌ಗಳ ಮುಖಾಂತರ ಗ್ರಾಮಗಳ ಅಭಿವೃದ್ಧಿ
- ♦ ಪಂಚಾಯತ್ ರಾಜ್‌ಗಳ ಮೂಲಕ ಅಧಿಕಾರ ವಿಕೇಂದ್ರೀಕರಣ
- ♦ ಪಂಚಾಯಿತಿಗಳ ಮೂಲಕ ಯೋಜನೆಗಳ ಸಾಕಾರ
- ♦ ಕೃಷಿ ಅಭಿವೃದ್ಧಿ ಮೂಲಕ ಗ್ರಾಮೀಣಾಭಿವೃದ್ಧಿ

- ಸಹಕಾರಿ ಕೃಷಿಯ ಸಾಧಕ – ಬಾಧಕಗಳು
- ಹಿಂಗಾರು ಕಾರ್ಯಾಚರಣೆ ಹಾಗೂ ಅಭಿವೃದ್ಧಿ
- ತೋಟಗಾರಿಕೆಯಲ್ಲಿ ತರಬೇತಿಯ ಅಗತ್ಯತೆ
- ಹಣ್ಣು ಮತ್ತು ತರಕಾರಿಗಳ ಸಂರಕ್ಷಣೆಯ ಸಾಧ್ಯತೆಗಳು
- ತಂಬಾಕು ಸಂಶೋಧನೆ ಮತ್ತು ಅಭಿವೃದ್ಧಿ
- ಕೃಷಿ ವಿಶ್ವವಿದ್ಯಾನಿಲಯ ಸ್ಥಾಪನೆ ಮೂಲಕ ವ್ಯವಸಾಯ ಪ್ರಗತಿ
- ಕುರಿ ಸಾಕಾಣಿಕೆ ಮೂಲಕ ಆರ್ಥಿಕ ಅಭಿವೃದ್ಧಿ
- ದನಗಳ ರಕ್ಷಣೆಗಾಗಿ ಸರ್ಕಾರದ ಸವಲತ್ತುಗಳು
- ಪಶುಸಂಗೋಪನೆಯ ಕ್ಷೇತ್ರದಲ್ಲಿ ಆಗಬೇಕಾದ ಬದಲಾವಣೆಗಳು
- ಸಾಕುಪ್ರಾಣಿಗಳ ಅಭಿವೃದ್ಧಿಯಲ್ಲಿನ ಮುಖ್ಯ ನೆಲೆಗಳು
- ಮೀನುಸಾಕಣಿಕೆಯನ್ನು ಮುಂದುವರಿಸುವ ದಿಕ್ಕಿನಲ್ಲಿ ಸರ್ಕಾರದ ಯೋಜನೆಗಳು
- ಶಾಂತಿ ಮತ್ತು ಸಮೃದ್ಧಿ ಸ್ಥಾಪನೆಗಾಗಿ ಪ್ರತಿಜ್ಞೆ
- ತೊಟ್ಟಿಲನ್ನು ತೂಗುವ ಕೈ ಲೇಖನಿ ಹಿಡಿಯುವಂತಾಗಲಿ
- ಮನೆಗಳಲ್ಲಿ ಸಂತಸದ ವಾತಾವರಣಕ್ಕಾಗಿ ಮದ್ಯಪಾನ ತ್ಯಜಿಸಿ
- ರೈತರ ಅಭಿವೃದ್ಧಿಗಾಗಿ ಸಮಾಜವಾದ
- ರಷ್ಯಾ ಪ್ರವಾಸ ಮತ್ತು ಕೃಷಿ ಅಭಿವೃದ್ಧಿಗೆ ಸದಾವಕಾಶ

## ಸಾರ್ವಜನಿಕ ಸಭೆಯಲ್ಲಿ ಎನ್. ರಾಚಯ್ಯ ಅವರ ಚಿಂತನೆಗಳು

ಎನ್. ರಾಚಯ್ಯನವರಿಗೆ ಸಾರ್ವಜನಿಕರನ್ನು ಪ್ರಗತಿಪರರನ್ನಾಗಿ ಪ್ರೇರೇಪಿಸುವುದು ಬಹುಮುಖ್ಯ ಕಾಳಜಿ. ಹಾಗಾಗಿ ತಮ್ಮ ಆಲೋಚನೆ, ಹಾಗೂ ಅಭಿಪ್ರಾಯಗಳನ್ನು ಸಭೆ – ಸಮಾರಂಭಗಳಲ್ಲಿ ವ್ಯಕ್ತಪಡಿಸುವುದರ ಮೂಲಕ ಜನರನ್ನು ಎಜುಕೇಟ್ ಮಾಡುವತ್ತ ತೊಡಗಿಸಿಕೊಂಡರು. ಅವರೇ ಹೇಳುವ ಹಾಗೆ "ಪ್ರಜಾಪ್ರಭುತ್ವದಲ್ಲಿ ನಿಜವಾದ ಪ್ರಭುಗಳಾದ ಈ ಮಹಾನ್ ದೇಶದ ಪ್ರಜೆಗಳಲ್ಲಿರುವ ಅವಿದ್ಯಾವಂತರಿಗೆ ಹಾಗೂ ಶೋಷಿತರಿಗೆ ಅವರ ನಾಗರಿಕ ಹಕ್ಕು ಮತ್ತು ಬಾಧ್ಯತೆಗಳನ್ನು ತಿಳಿಸಿಕೊಡುವಂತಹ ಬಹುಮುಖ್ಯವಾದ ಉದ್ದೇಶವನ್ನು ಈ ಭಾಷಣಗಳು ಈಡೇರಿಸಿದರೆ ನನಗೆ ತೃಪ್ತಿ ಹಾಗೂ ಸಂತೋಷವಾಗುತ್ತದೆ" ಎಂಬ ಅವರ ನಿಲುವು, ಅವರ ವೈಚಾರಿಕ ವ್ಯಕ್ತಿತ್ವವನ್ನು ದರ್ಶಿಸುತ್ತದೆ. ರಾಚಯ್ಯನವರಿಗೆ ಭಾಷಣಗಳು ಜನಪ್ರಿಯತೆ, ಕೀರ್ತಿ ಗಳಿಸುವ ಹಾಗೂ ಅದರ ಮೂಲಕ ತಮ್ಮ ರಾಜಕೀಯ ಭವಿಷ್ಯತ್ತನ್ನು ರೂಪಿಸಿಕೊಳ್ಳುವ ಸ್ವಹಿತ ಸಾಧನೆಯ ವೇದಿಕೆ ಮೇಲಿನ ತಂತ್ರಗಳಾಗಿಲ್ಲ. ಶೋಷಿತ ಪರ ಧ್ವನಿಯಾಗಿ ಸಮಷ್ಠಿ ಹಿತಚಿಂತನೆಯ ಕ್ಷೇತ್ರಗಳಾದವು. ಆ ಚಿಂತನೆಗಳಲ್ಲಿರುವ ನಾಡಿಮಿಡಿತವೇ ಇಂದಿಗೂ ಮಿಡಿಯುತ್ತಿರುವ, ದಮನಿತ ದನಿಗಳು. ಅವುಗಳ ಸದ್ದನ್ನು ಈ ಮುಂದಿನ ಭಾಷಣಗಳಲ್ಲಿ ಆಲಿಸೋಣ.

## ♦ ಸಂವಿಧಾನದಡಿಯಲ್ಲಿ ಜನಾಂಗದ ಅಭಿವೃದ್ಧಿಗಾಗಿ ಹಕ್ಕೊತ್ತಾಯಗಳು

**ಸಮುದಾಯದ ಎದುರು ಸ್ವಾಭಿಮಾನ ಮತ್ತು ಸ್ವಾವಲಂಬನೆಯನ್ನು ಪಡೆಯಬೇಕಾದರೆ ದಲಿತರು ಬೆಲೆಕಟ್ಟಲಾಗದ ಶಿಕ್ಷಣದ ಆಸ್ತಿಯನ್ನು ಹೊಂದಲೇಬೇಕಾದ ಅನಿವಾರ್ಯವಿದೆ. ವಿದ್ಯೆ ವಿವೇಕದ ಜೊತೆ ಜೊತೆಗೆ ಅಸ್ತಿತ್ವವನ್ನು ಕಟ್ಟಿಕೊಡುವುದರಿಂದ 'ಪ್ರಜಾಸತ್ತಾತ್ಮಕತೆಯಲ್ಲಿ ಸಮಾನತೆಯ' ಸಾಧನ ಶಿಕ್ಷಣವಾಗುವ ಚಿಂತನೆಗಳನ್ನು ರಾಚಯ್ಯನವರ ಆಲೋಚನೆಗಳಲ್ಲಿ ನೋಡಬಹುದು. 1960ರ ಫೆಬ್ರವರಿ 1 ರಂದು ನವದೆಹಲಿಯ ವಿಜ್ಞಾನ ಭವನದಲ್ಲಿ ನಡೆದ ಹಿಂದುಳಿದ ವರ್ಗಗಳ ಕಲ್ಯಾಣಕ್ಕಾಗಿ ಕಾರ್ಯಸೂಚಿಯನ್ನು ತಯಾರಿಸಲು ಕರೆದಿದ್ದ ರಾಜ್ಯಗಳ ಮಂತ್ರಿಗಳ ಸಮಾವೇಶದಲ್ಲಿ ಮಾಡಿದ ಭಾಷಣ ಇದು.**

ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಮತ್ತು ಇತರ ಹಿಂದುಳಿದ ವರ್ಗಗಳವರ ಸ್ಥಿತಿಗತಿಗಳನ್ನು ಅಭಿವೃದ್ಧಿಪಡಿಸುವ ದಿಸೆಯಲ್ಲಿ ರಾಜ್ಯ ಸರಕಾರಗಳಿಗೆ ಬಹು ಮೌಲ್ಯಯುತ ಸಲಹೆಯನ್ನು ನೀಡಿರುವುದಕ್ಕಾಗಿ ಪಂತ್‌ಜಿಯವರಿಗೆ ನಾನು ಕೃತಜ್ಞನಾಗಿದ್ದೇನೆ. ಸಂವಿಧಾನದ 15(4) ಮತ್ತು 46ನೆಯ ವಿಧಿಗಳ ಪ್ರಕಾರ ದುರ್ಬಲವರ್ಗಗಳೆಂದು ಪರಿಗಣಿಸಲಾಗಿರುವವರ ಉದ್ಧಾರದ ಸಮಸ್ಯೆಯಲ್ಲಿ ಪಂತ್‌ಜಿ ಮತ್ತು ಪಂಡಿತ್‌ಜಿಯವರು ಬಹಳ ಆಸಕ್ತಿಯನ್ನು ಹೊಂದಿದ್ದಾರೆಂಬುದು ನನಗೆ ಚೆನ್ನಾಗಿ ತಿಳಿದ ವಿಷಯವೇ. 43(4) ಮತ್ತು 46ನೆಯ ವಿಧಿಗಳ ಪ್ರಕಾರ, ದುರ್ಬಲವರ್ಗಗಳ ಜನರ, ಅದರಲ್ಲಿಯೂ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಜನರ, ವಿದ್ಯಾಭ್ಯಾಸ ಮತ್ತು ಆರ್ಥಿಕ ಹಿತಾಸಕ್ತಿಗಳನ್ನು ಉತ್ತೇಜಿಸುವುದು ರಾಜ್ಯ ಮತ್ತು ಕೇಂದ್ರ ಸರಕಾರಗಳ ಹೊಣೆಯಾಗಿದೆ. ಆದರೆ, ಈ ಎರಡು ವಿಧಿಗಳು ಮತ್ತು 16(4), 335 ಹಾಗೂ 320(4)ನೆಯ ವಿಧಿಗಳ ಅಡಿಯಲ್ಲಿ ಕೇಂದ್ರ ಹಾಗೂ ರಾಜ್ಯ ಸರಕಾರಗಳು ಎಷ್ಟರ ಮಟ್ಟಿಗೆ ಸಾಂವಿಧಾನಿಕ ರಕ್ಷಣೆಗಳನ್ನು ಜಾರಿಮಾಡಿವೆ ಎಂಬುದು ಪರಿಶೀಲನಾರ್ಹ ಪ್ರಶ್ನೆಯಾಗಿದೆ. ಸ್ವಲ್ಪ

ಹಣವನ್ನು ನೀಡುವುದು ಅಥವಾ ಮೀಸಲಿಡುವುದು, ಹೀಗೆ ನೀಡಿದ ಹಣವನ್ನು ರಾಜ್ಯ ಸರಕಾರಗಳು ಉದ್ದೇಶಿತ ಕಾರ್ಯಗಳಿಗೆ ವಿತರಣೆಯಾಗಿದೆಯೇ ಇಲ್ಲವೇ ಎಂಬುದನ್ನು ಪರಿಶೀಲಿಸುವುದು – ಇವು ಇಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳವರಿಗೆ ಸಂಬಂಧಿಸಿದ ಹಾಗೆ ಮುಖ್ಯವಾದ ಪ್ರಶ್ನೆಯಾಗುವುದಿಲ್ಲವೆಂದು ನನ್ನ ಬಲವಾದ ನಂಬಿಕೆ. ದೇಶದ ಜನಸಂಖ್ಯೆಯಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳವರು ಆರನೆಯ ಒಂದು ಭಾಗದಷ್ಟು ಇದ್ದಾರೆ. ಅವರಿಗೆ ವಿಧಾನ ಮಂಡಲ ಹಾಗೂ ಸಂಸತ್ತಿನಲ್ಲಿ ಪ್ರಾತಿನಿಧ್ಯವೂ ದೊರಕಿದೆ. ಆದರೆ ಈ ಜನರು ಆರ್ಥಿಕವಾಗಿ, ಸಾಮಾಜಿಕವಾಗಿ ಮತ್ತು ಶೈಕ್ಷಣಿಕವಾಗಿ ಎಷ್ಟು ಹಿಂದುಳಿದಿದ್ದಾರೆಂಬುದನ್ನು ಕೇಂದ್ರ ಹಾಗೂ ರಾಜ್ಯ ಸರಕಾರಗಳು ಅರಿತುಕೊಳ್ಳಬೇಕಾಗಿದೆ. ಗಾಂಧೀಜಿಯವರ ಆಶೀರ್ವಾದದಿಂದ, ಸಂವಿಧಾನದ ನಿರ್ಮಾಪಕರು ಈ ಜನತೆಯ ವಿಮೋಚನೆಗಾಗಿ ಸಾಕಷ್ಟು ಆಸಕ್ತಿಯನ್ನು ತೋರಿದ್ದಾರೆ.

ದೇಶದಲ್ಲಿನ ಹಿಂದುಳಿದ ವರ್ಗಗಳವರ ವಿಷಯದಲ್ಲಿ ಕೇಂದ್ರ ಸರಕಾರವು ಒಂದು ನಿರ್ದಿಷ್ಟ ನೀತಿಯನ್ನು ಅನುಸರಿಸುತ್ತಿಲ್ಲ ಕೆಲವು ರಾಜ್ಯಗಳಲ್ಲಿ ಹಿಂದುಳಿದವರ ಸಂಖ್ಯೆಯು ಒಟ್ಟಾರೆ ಜನಸಂಖ್ಯೆಯ ಶೇ 45ರಷ್ಟು ಇದ್ದರೆ, ಕೆಲವು ರಾಜ್ಯಗಳಲ್ಲಿ ಅದು ಶೇ 65ರಿಂದ 70ರಷ್ಟು ಇದೆ. ಕೇಂದ್ರ ಸರಕಾರವು ನಿರ್ದಿಷ್ಟ ನೀತಿಯೊಂದನ್ನು ಅನುಸರಿಸುತ್ತಿಲ್ಲವೆಂದು ನಾನು ಹೇಳುತ್ತಿರುವ ಕಾರಣವೆಂದರೆ, ಕೇಂದ್ರ ಹಾಗೂ ರಾಜ್ಯ ಸರಕಾರಗಳು ತಾವು ಮಾಡಬೇಕಾದುದನ್ನು ಮಾಡಿಲ್ಲ. ರಾಜ್ಯಗಳು ತಮ್ಮ ಪಾಲಿನ ಹಣವನ್ನು ಬಳಸಿಕೊಳ್ಳುತ್ತಿಲ್ಲವೆಂದು ದೂರುವುದರಲ್ಲಿ ಯಾವ ಉಪಯೋಗವೂ ಇಲ್ಲ. ಸ್ಥಳಾಂತರಗೊಂಡವರಿಗಾಗಿ ಮಾಡಿರುವಂತೆ, ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಹಾಗೂ ಹಿಂದುಳಿದ ವರ್ಗಗಳವರಿಗಾಗಿಯೂ ಸಹ ಒಂದು ಸಚಿವ ಖಾತೆಯನ್ನು ಕೇಂದ್ರ ಸರಕಾರವು ಹೊಂದಿರಬೇಕಾಗಿತ್ತು. ದೇಶದಲ್ಲಿ ಸ್ಥಳಾಂತರಗೊಂಡವರ ಸಂಖ್ಯೆ ಕೇವಲ 80ರಿಂದ 90 ಲಕ್ಷ ಮಾತ್ರ. ಇವರ ಸಂಖ್ಯೆ ಒಂದು ಕೋಟಿಯನ್ನೂ ಮುಟ್ಟಿಲ್ಲ. ಆದರೂ ಅವರಿಗಾಗಿ ಪುನರ್ವಸತಿ ಖಾತೆ ಎಂಬ ಹೆಸರಿನಲ್ಲಿ ಒಂದು ಖಾತೆಯಿದೆ ಮತ್ತು ಅಗಾಧವಾದ ಮೊತ್ತವನ್ನು ಖರ್ಚುಮಾಡಲಾಗಿದೆ. ಪರಿಶಿಷ್ಟ ಜಾತಿ ಮತ್ತು ವರ್ಗಗಳವರ ಪರಿಸ್ಥಿತಿಯು ಸ್ಥಳಾಂತರಗೊಂಡವರ ಪರಿಸ್ಥಿತಿಗಿಂತ ಕೆಟ್ಟದ್ದಾಗಿದೆ ಮತ್ತು ಸಾಂವಿಧಾನಿಕ ರಕ್ಷಣೆಗಳನ್ನು ಜಾರಿಗೆ ತರಬೇಕಾದರೆ,

ಪಂತ್‌ಜಿಯವರ ಅಧೀನದಲ್ಲಿ ಕನಿಷ್ಠ ಪಕ್ಷ ಒಬ್ಬ ರಾಜ್ಯ ಸಚಿವನನ್ನಾದರೂ ನೇಮಕಮಾಡಬೇಕೆಂದು ನಾನು ಕೇಂದ್ರಸರಕಾರವನ್ನು ಒತ್ತಾಯಪಡಿಸುತ್ತೇನೆ. ಈ ಹೊಸ ಸಚಿವರು ಹಿಂದುಳಿದ ವರ್ಗಗಳಿಗೆ ಸೇರಿದವರಾಗಿರಬೇಕು, ಏಕೆಂದರೆ ಆ ವರ್ಗಗಳವರ ಪರಿಸ್ಥಿತಿಯನ್ನು ಅನುಭವಿಸಿರುವವರಿಗೆ ಮಾತ್ರ ಅದರ ನಿಜವಾದ ನೋವು ತಿಳಿದಿರುತ್ತದೆ. ಈ ಸಮಸ್ಯೆಯು ಸಂಕೀರ್ಣವಾಗಿದ್ದು ಅದಕ್ಕೆ ಹಲವಾರು ಆಯಾಮಗಳಿರುವುದರಿಂದ ಯಾರು ಬೇಕಾದರೂ ಅದನ್ನು ಪರಿಹರಿಸಬಹುದು ಎಂದು ತೀರ್ಮಾನಿಸುವುದು ಸಾಧ್ಯವಿಲ್ಲ. ಪ್ರಜಾಪ್ರಭುತ್ವದಲ್ಲಿ ಪ್ರತಿಯೊಬ್ಬರೂ ಒಂದೊಂದು ಕೊಂಡಿಗಳಾಗಿರುತ್ತಾರೆಂದು ನಾನು ಭಾವಿಸುತ್ತೇನೆ. ನಮ್ಮಲ್ಲಿ ಈಗ ಅಂತಹ 40 ಕೋಟಿ ಕೊಂಡಿಗಳಿವೆ. ಸಮಾಜವಾದಿ ವ್ಯವಸ್ಥೆಯಲ್ಲಿ ಪ್ರತಿಯೊಂದು ಕೊಂಡಿಯನ್ನೂ ನಾವು ಅದರದರ ಜಾಗದಲ್ಲಿ ಭದ್ರವಾಗಿ ಜೋಡಿಸಬೇಕು. ಸರದಾರ್ ಪಟೇಲರಂತೆಯೇ ಈ ವರ್ಗದ ಜನತೆಯ ಹಿತಾಕಾಂಕ್ಷಿಗಳೂ ಮತ್ತು ನಮಗೆ ಪ್ರೋತ್ಸಾಹವನ್ನು ನೀಡುತ್ತಿರುವವರೂ ಆದ ಪಂತ್‌ಜೀ, ಈ ಉದ್ದೇಶಕ್ಕಾಗಿ ಒಂದು ಪ್ರತ್ಯೇಕ ಸಚಿವ ಖಾತೆಯನ್ನು ಸ್ಥಾಪಿಸಬೇಕೆಂದು ನಾನು ನಿಮ್ಮನ್ನು ವಿನಯಪೂರ್ವಕವಾಗಿ ಬೇಡಿಕೊಳ್ಳುತ್ತಿದ್ದೇನೆ.

ನೀತಿಯ ವಿಷಯವನ್ನು ಕುರಿತು ಹೇಳಬೇಕೆಂದರೆ ಮದರಾಸಿನಲ್ಲಿ ಪ್ರತಿ 10 ಲಕ್ಷ ಜನಸಂಖ್ಯೆಗೆ ಅವರು ರೂ. 50 ಲಕ್ಷವನ್ನು ವಿನಿಯೋಗಿಸುತ್ತಿದ್ದಾರೆ. ಮೈಸೂರಿನಲ್ಲಿ, ಸರಕಾರವು ರೂ. 15 ಲಕ್ಷವನ್ನು ಖರ್ಚುಮಾಡುತ್ತಿದೆ. ಇಂತಹ ವ್ಯತ್ಯಾಸವು ಇತರ ರಾಜ್ಯಗಳಲ್ಲಿಯೂ ಇರಬೇಕು. ಇದೊಂದು ರೀತಿಯ ಅನುಕೂಲಸಿಂಧು ತತ್ತ್ವವಾಗಿಬಿಟ್ಟಿದೆ. ಇದು ಹೀಗಾಗಬಾರದು. ದೇಶದ ಎಲ್ಲಾ ಕಡೆಯಲ್ಲಿಯೂ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಹಾಗೂ ಇತರ ಹಿಂದುಳಿದ ವರ್ಗಗಳವರ ಪರಿಸ್ಥಿತಿ ಒಂದೇ ರೀತಿಯದಾಗಿದ್ದು ಅದನ್ನು ಎದುರಿಸಲು ಒಂದೇ ರೀತಿಯ ನೀತಿಯ ಆವಶ್ಯಕತೆಯಿರುವುದರಿಂದ 10 ಲಕ್ಷಕ್ಕೂ ಹೆಚ್ಚಿನ ಜನಸಂಖ್ಯೆಯಿರುವ ರಾಜ್ಯಗಳಲ್ಲಿ ವಿನಿಯೋಗಿಸುವ ಗರಿಷ್ಠ ಮಿತಿಯು ಎಲ್ಲಾ ರಾಜ್ಯಗಳೂ ಅನುಸರಿಸಬೇಕಾದ ಮಾನದಂಡವಾಗಿರಬೇಕು.

ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಹಾಗೂ ಇತರ ಹಿಂದುಳಿದ ವರ್ಗಗಳವರ ಉದ್ಧಾರಕ್ಕಾಗಿ ನೀಡುತ್ತಿರುವ ವಿಶೇಷ ಸವಲತ್ತುಗಳ ಬಗ್ಗೆ ನನಗೆ ತೀವ್ರವಾದ

ಆತಂಕವಿತ್ತು. ಈ ವಿಷಯದಲ್ಲಿ ಸೂಕ್ತ ಮಾಹಿತಿಯನ್ನು ದಯೆಯಿಟ್ಟು ಗೃಹಸಚಿವರು ನಮಗೆ ನೀಡಿದ್ದಾರೆ. 1952ರಿಂದಲೂ ಅವರು, ಮೊದಲು ಉಪಸಚಿವರಾಗಿ, ಈಗ ರಾಜ್ಯ ಸಚಿವರಾಗಿ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಹಾಗೂ ಇತರ ಹಿಂದುಳಿದ ವರ್ಗಗಳವರ ಖಾತೆಯನ್ನು ನೋಡಿಕೊಳ್ಳುತ್ತಿದ್ದಾರೆ. ಗೃಹಖಾತೆಯು ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಹಾಗೂ ಇತರ ಹಿಂದುಳಿದ ವರ್ಗಗಳವರಿಗೆ ಪ್ರತ್ಯೇಕವಾಗಿ ಹಲವಾರು ಯೋಜನೆಗಳನ್ನು ಪ್ರಾಯೋಜಿಸುತ್ತಿರುವುದರಿಂದ ಈ ವರ್ಗಗಳವರು ಕೇಂದ್ರ ಸಮಾಜ ಕಲ್ಯಾಣ ಮಂಡಳಿಯುತನ್ನ ಯಾವುದೇ ಯೋಜನೆಗಳಿಂದ ಉಪಯೋಗವನ್ನು ಪಡೆದುಕೊಳ್ಳುವುದನ್ನು ನಿಷೇಧಿಸುವ ಒಂದು ವಿಧಿಯುನ್ನು ತನ್ನ ನಿಯಮಾವಳಿಯಲ್ಲಿ ಅಳವಡಿಸಿಕೊಂಡಿರುವುದನ್ನು ನೀವು ಗಮನಿಸಬಹುದು.

ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಆಯುಕ್ತ ಶ್ರೀ ಶ್ರೀಕಾಂತ್: (ಮಧ್ಯಪ್ರವೇಶಿಸಿ) ಈ ವಿಷಯದಲ್ಲಿ ತಿದ್ದುಪಡಿಮಾಡಬೇಕೆಂದು ನಾವು ಸೂಚಿಸಿದುದಕ್ಕೆ ಕೇಂದ್ರ ಸಮಾಜ ಕಲ್ಯಾಣಮಂಡಳಿಯವರು ಒಪ್ಪಿಗೆಯನ್ನು ಸೂಚಿಸಿದ್ದಾರೆ ಎಂದು ತಿಳಿಸಲು ಮಾನ್ಯ ಸದಸ್ಯರ ಭಾಷಣದ ಮಧ್ಯೆ ನಾನು ಪ್ರವೇಶಿಸಬಹುದೆ? ತಾವು ಹೇಳಿದ ನಿಯಮವು ಈಗ ಜಾರಿಯಲ್ಲಿರುವುದಿಲ್ಲ. ಈ ಕ್ರಮ ಇತ್ತೀಚಿನದು.

ಮೈಸೂರು (ಶ್ರೀ ರಾಚಯ್ಯನವರು): ಇದು ಈಗಾಗಲೇ ನೆರವೇರಿರುವುದರಿಂದ ನನಗೆ ಸಂತೋಷವಾಗಿದೆ. ಆದರೆ ಕಳೆದ ಹತ್ತುವರ್ಷಗಳಿಂದ ಜಾರಿಯಲ್ಲಿರುವ ರಾಷ್ಟ್ರೀಯ ವಿಸ್ತರಣಾ ಯೋಜನೆಗಳು (ಎನ್.ಇ.ಎಸ್), ಸಮುದಾಯ ಅಭಿವೃದ್ಧಿ (ಸಿ.ಡಿ.) ಯೋಜನೆಗಳು ಮತ್ತು ಕೇಂದ್ರ ಸಮಾಜ ಕಲ್ಯಾಣ ಮಂಡಲಿಯ ಕಾರ್ಯಕ್ರಮಗಳ ಉಪಯೋಗವನ್ನು ಪಡೆಯಲು ವಿಫಲರಾಗಿರುವುದರಿಂದ ಈ ವರ್ಗಗಳವರಿಗೆ ಆಗಿರುವ ನಷ್ಟದ ಪ್ರಮಾಣವೇನು? ನೀವು ಇದನ್ನು ಪರಿಶೀಲಿಸಬೇಕೆಂದು ನಾನು ನಿಮ್ಮನ್ನು ವಿನಂತಿಸಿಕೊಳ್ಳುತ್ತೇನೆ. ಇದೇ ರೀತಿಯಲ್ಲಿ ಎನ್.ಇ.ಎಸ್. ಮತ್ತು ಸಿ.ಡಿ. ಯೋಜನೆಗಳ ಕೊಡುಗೆಯನ್ನೂ ತಾವು ಗಮನಿಸಬೇಕು.

ಸಂವಿಧಾನವು ಬಲಾತ್ಕಾರದಿಂದ ದುಡಿಸಿಕೊಳ್ಳುವುದನ್ನು ನಿಷೇಧಿಸಿದೆ. ಅದೇ ಸಮಯದಲ್ಲಿ, ಯೋಜನೆಯ ಅನುಷ್ಠಾನದ ಹೆಸರಿನಲ್ಲಿ ಉಚಿತ ದುಡಿಮೆಯನ್ನು

ಜಾರಿಗೆ ತಂದಿದ್ದೀರಿ. ಉಚಿತ ದುಡಿಮೆಯನ್ನು ಯಾವಾಗ ತೆಗೆದುಕೊಳ್ಳಬೇಕಾದರೂ ಅದಕ್ಕೆ ಹಣದ ಮೌಲ್ಯವನ್ನು ಕಟ್ಟಲೇ ಬೇಕು. ಈ ದೇಶದಲ್ಲಿ ನಾವು ದುಡಿಮೆಯ ಗೌರವಕ್ಕೆ ನಾವು ಬೆಲೆಯನ್ನು ನೀಡುತ್ತಿಲ್ಲ. ಇದು ಇಲ್ಲಿರುವ ಸಮಸ್ಯೆ. ದುರ್ಬಲವರ್ಗದವರು ಉಚಿತವಾಗಿ ದುಡಿಯಬೇಕು, ಆದರೆ ಮುಂದುವರಿದ ವರ್ಗದವರು ಇದರಿಂದ ತಪ್ಪಿಸಿಕೊಳ್ಳುತ್ತಾರೆ. ಇದು ನಮ್ಮಲ್ಲಿರುವ ಪದ್ಧತಿ ಹಾಗೂ ಅನುಭವ. ಇದರ ವಿರುದ್ಧ ಈಗ ಜನರು ಹುಯಿಲೆಬ್ಬಿಸುತ್ತಿದ್ದಾರೆ.

ಈ ಯೋಜನೆಗಳಿಂದ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಹಾಗೂ ಇತರ ಹಿಂದುಳಿದ ವರ್ಗಗಳವರಿಗೆ ಯಾವ ಪ್ರಯೋಜನವೂ ಇಲ್ಲ. ಈ ವಿಷಯವನ್ನು ಸಂಸತ್ತಿನ ಮತ್ತು ವಿಧಾನಮಂಡಲಗಳ ಗಮನಕ್ಕೆ ತರಲಾಗಿದೆ. ಈ ಯೋಜನೆಗಳ ಪ್ರಯೋಜನಗಳು ನಮ್ಮ ಜನತೆಯ ದುರ್ಬಲವರ್ಗಗಳವರಿಗೆ ದೊರಕುವಂತೆ ಮಾಡಬೇಕೆನ್ನುವುದು ಇದರ ಉದ್ದೇಶವಾಗಿದೆ ಮತ್ತು ಇದು ಎಲ್ಲರ ಒಕ್ಕೊರಲಿನ ಅಭಿಪ್ರಾಯವೂ ಆಗಿದೆ. ಈ ವರ್ಗದವರು ಪ್ರಯೋಜನವನ್ನು ಪಡೆಯುವಲ್ಲಿ ಎದುರಾಗುವ ಎಲ್ಲಾ ಅಡ್ಡಿ ಆತಂಕಗಳನ್ನೂ ನಿವಾರಿಸಬೇಕು. ಹರಿಜನರನ್ನೂ ಈ ರಾಷ್ಟ್ರದ ಪ್ರಜೆಗಳೆಂದು ಪರಿಗಣಿಸಿದರೆ, ಹರಿಜನ ಸಮಾಜಕ್ಕೆಂದೇ ಪ್ರತ್ಯೇಕವಾದ ಅವಕಾಶಗಳನ್ನು ಕಾನೂನಿನಲ್ಲಿ ಕಲ್ಪಿಸಬೇಕಾದ ಅಗತ್ಯವಾದರೂ ಎಲ್ಲಿರುತ್ತದೆ? ಈ ವರ್ಗದ ಜನರಿಗೆ ಶೇ 18ರ ಮೀಸಲಾತಿಯನ್ನು ಎಲ್ಲಾ ಅಭಿವೃದ್ಧಿ ಕಾರ್ಯಕ್ರಮಗಳಲ್ಲಿಯೂ – ಗೃಹನಿರ್ಮಾಣಕ್ಕಾಗಿ, ಸಣ್ಣ ಪ್ರಮಾಣದ ಉದ್ದಿಮೆಗಳಿಗಾಗಿ, ಅಥವಾ ಇನ್ನಾವುದೇ ಪ್ರಯೋಜನಗಳನ್ನು ಪಡೆಯುವಲ್ಲಾಗಲೀ – ನಿಗದಿಗೊಳಿಸುವಂತಹ ಕೇಂದ್ರ ಸರಕಾರದ ಕಾನೂನಾಗಲೀ ಅಥವಾ ಕಾರ್ಯಾಂಗದ ಆಜ್ಞೆಯಾಗಲೀ ಜಾರಿಗೆ ಬರಬೇಕಾದ ಆವಶ್ಯಕತೆಯಿದೆ. ಆದರೆ ಕೇಂದ್ರ ಸರಕಾರದ ನೀತಿಯು ಹೀಗಿಲ್ಲ. ಈ ನೀತಿಯನ್ನು ಪರಿಶಿಷ್ಟ ಜಾತಿಗಳವರಿಗಾಗಿರುವ ಏಕೈಕ ಅವಕಾಶವೆಂದು ಪರಿಗಣಿಸಬಾರದೆಂದು ಸುಮ್ಮನೆ ಹೇಳುವುದರಿಂದ ಆಗುವ ಪ್ರಯೋಜನವಾದರೂ ಏನು? ಸಾಮಾನ್ಯ ಯೋಜನೆಗಳಿಂದಲೂ ಅವರು ಪ್ರಯೋಜನವನ್ನು ಪಡೆಯುವಂತೆ ಆಗದವರೆಗೆ ಈ ನೀತಿಯಿಂದ ಯಾವ ಪ್ರಯೋಜನವೂ ಸಾಧಿತವಾಗುವುದಿಲ್ಲ. ಕೇಂದ್ರ ಸರಕಾರವು ಈ ಶೇ 18ರ ಪ್ರಯೋಜನವನ್ನು ಈ ವರ್ಗದವರಿಗೆ ವಾಸ್ತವವಾಗಿ ನೀಡಲಾಗುತ್ತಿದೆಯೇ ಎಂಬುದರತ್ತ ಗಮನ ಹರಿಸಬೇಕು. ಹಾಗಾದಾಗ ಮಾತ್ರ

ನಾವು ಭಾವನಾತ್ಮಕ ಸಮಾಧಾನವನ್ನು ಹೊಂದಬಹುದು. ರಾಷ್ಟ್ರೀಯ ಉದ್ಯೋಗ ಯೋಜನೆಯ ಕಾರ್ಯಕ್ರಮದಲ್ಲಿ, ಅಥವಾ ಇನ್ನಾವುದೇ ಕಾರ್ಯಕ್ರಮದ ಅಡಿಯಲ್ಲಿ, ಪ್ರತಿಯೊಂದು ರಾಜ್ಯದಲ್ಲಿಯೂ ಒಂದು ಸಾವಿರ ಬಾವಿಗಳನ್ನು ತೋಡುವ ಅಥವಾ ಕಟ್ಟುವ ಕೆಲಸವನ್ನು ಜಾರಿಗೊಳಿಸುತ್ತಿದ್ದೀರಿ ಎಂದಿಟ್ಟುಕೊಳ್ಳಿ. ಇಂತಹ ಭಾವಿಗಳನ್ನು ಉಳಿದ ಪ್ರದೇಶಗಳಿಗಿಂತ ಪರಿಶಿಷ್ಟ ಜಾತಿಗಳವರು ಇರುವ ಪ್ರದೇಶಗಳಲ್ಲಿ ತೋಡುವುದಕ್ಕೆ ಆದ್ಯತೆಯನ್ನು ನೀಡಬೇಕೆಂದು ನಿಮ್ಮ ನಿರ್ದೇಶನಗಳಲ್ಲಿ ನೀವು ಸೂಚಿಸಬೇಕು. ಸಚಿವನಾದ ನನ್ನಂತಹವನೊಬ್ಬ ತನ್ನ ಮನೆಯಲ್ಲಿ ಐದು ನಲ್ಲಿಗಳನ್ನು ಹೊಂದಬಹುದಾದರೆ ಹರಿಜನರ ವಾಸಪ್ರದೇಶಗಳಲ್ಲಿ ಇಪ್ಪತ್ತು ಅಥವಾ ಹತ್ತು ಮನೆಗಳಿಗೆ ಒಂದು ನಲ್ಲಿಯೂ ಏಕೆ ಇರಬಾರದು? ಸಚಿವರ ಕಳೆದ ಸಮಾವೇಶದಲ್ಲಿ ನಮಗೆ ಕೆಲವು ಶಿಫಾರಸುಗಳನ್ನು ಮಾಡಿದ್ದಿರಿ. ಅದರಲ್ಲಿ, ಹರಿಜನರಿಗಾಗಿ ಪ್ರತ್ಯೇಕವಾದ ವಾಸದ ಪ್ರದೇಶಗಳು, ವಿದ್ಯಾರ್ಥಿನಿಲಯಗಳು ಇರಬಾರದೆಂದು ಹೇಳಿದ್ದಿರಿ. ಇದು ಒಂದು ನಿರ್ಣಾಯಕ ಅಂಶವಾಗಬಾರದು. ಹರಿಜನ ವಿದ್ಯಾರ್ಥಿನಿಲಯಗಳಲ್ಲಿನ ಸ್ಥಳಾವಕಾಶಗಳಲ್ಲಿ ಶೇ. ಹತ್ತರಷ್ಟು ಪರಿಶಿಷ್ಟ ಜಾತಿಗೆ ಸೇರಿಲ್ಲದವರಿಗಾಗಿ ಮೀಸಲಾಗಿರಬೇಕೆಂಬ ತೀರ್ಮಾನವನ್ನು ನಮ್ಮ ರಾಜ್ಯದ ಸಚಿವ ಸಂಪುಟವು ಈಗಾಗಲೇ ತೆಗೆದುಕೊಂಡಿದೆ. ವಾಸಪ್ರದೇಶಗಳ ವಿಷಯಕ್ಕೆ ಬಂದರೆ, ಕೇಂದ್ರ ಸರಕಾರವು ಮೊದಲು ಸಂವಿಧಾನಕ್ಕೆ ತಿದ್ದುಪಡಿಯನ್ನು ತಂದು ಜಾತಿಪದ್ಧತಿಯನ್ನು ರದ್ದುಗೊಳಿಸಬೇಕು. ಎಲ್ಲಾ ಕಡೆಯಲ್ಲಿಯೂ ಜಾತಿಗಳಿಗೆ ಸೀಮಿತವಾದ ದೇವಸ್ಥಾನಗಳು, ವಿದ್ಯಾರ್ಥಿನಿಲಯಗಳು, ಹೋಟೆಲ್‌ಗಳು ಇವೆ. ಹೀಗಿರುವಾಗ ಕಾಗದದ ಮೇಲೆ ನಾವು ಜಾತಿಪದ್ಧತಿಯನ್ನು ನಿರ್ಮೂಲಮಾಡುವುದು ಹೇಗೆ ಎಂಬುದು ನನಗೆ ಅರ್ಥವಾಗುವುದಿಲ್ಲ. 17ನೆಯ ವಿಧಿಯ ಮೂಲಕ ಅಸ್ಪೃಶ್ಯತೆಯನ್ನು ರದ್ದುಮಾಡಿರುವ ಹಾಗೆಯೇ, ಜಾತಿಪದ್ಧತಿಯನ್ನೂ ಸಂವಿಧಾನಕ್ಕೆ ತಿದ್ದುಪಡಿ ಮಾಡುವ ಮೂಲಕ ತೆಗೆದುಹಾಕಬೇಕು. ಇದನ್ನು ಮಾಡದೆ ಇರುವವರೆಗೆ, ಜಾತಿಗಳ ನಿರ್ಮೂಲ ಸಾಧ್ಯವಿಲ್ಲ.

ಶಿಫಾರಸ್ಸನ್ನು ಮಾಡುವಾಗ ಪ್ರತಿಯೊಂದು ನಗರ, ಪಟ್ಟಣ ಮತ್ತು ಹಳ್ಳಿಗಳಲ್ಲಿ ಕನಿಷ್ಠ ಶೇ. 20ರಷ್ಟು ನಿವೇಶನಗಳನ್ನು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳವರಿಗಾಗಿ ಮೀಸಲಿಡಬೇಕೆಂದೂ ಮತ್ತು ಅವರಿಗೆ ಈ ನಿವೇಶನಗಳನ್ನು

ಉಚಿತವಾಗಿ ನೀಡಬೇಕೆಂದೂ ಈ ಗೌರವಾನ್ವಿತ ಸದನದ ಹಾಗೂ ಸಭಾಧ್ಯಕ್ಷರ ಮುಂದೆ ನಾನು ವಿನಯಪೂರ್ವಕವಾಗಿ ಸಲಹೆಯನ್ನು ಮಾಡಿದ್ದೆ. ಹೀಗೆ ಮಾಡುವುದರಿಂದ ಮಾತ್ರ ನಾವು ಪ್ರತ್ಯೇಕ ವಾಸಪ್ರದೇಶಗಳ ಅಸ್ತಿತ್ವವನ್ನು ಕೊನೆಗಾಣಿಸಬಹುದು ಮತ್ತು ಮುಂದೆ ಇಂತಹ ಪ್ರದೇಶಗಳು ನಿರ್ಮಾಣವಾಗದ ಹಾಗೆ ನೋಡಿಕೊಳ್ಳಬಹುದು. ಪರಿಶಿಷ್ಟ ಜಾತಿಯವರಿಗೆಂದೇ ನಾನು ಪ್ರತ್ಯೇಕವಾಗಿ ಜಮೀನನ್ನು ಕೊಂಡುಕೊಳ್ಳಲಿದ್ದೇನೆ. ಅಲ್ಲಿ ನಾನು ಶೇ. 10ರಷ್ಟನ್ನು ಮೀಸಲಾಗಿರಿಸಬಹುದು. ಆದರೆ ಇತರ ಬಡಾವಣೆಗಳಲ್ಲಿನ ಪರಿಸ್ಥಿತಿ ಹೇಗಿದೆ? ಈ ಜನರು ಅಲ್ಲಿ ನಿವೇಶನಗಳನ್ನು ಖರೀದಿಸಲು ಇತರರು ಅವಕಾಶವನ್ನು ಕೊಡುವುದಿಲ್ಲ. ಅವಕಾಶವು ದೊರೆತರೂ ನಿವೇಶನಗಳು ದುಬಾರಿಯಾಗಿರುವುದರಿಂದ ಖರೀದಿಸಲು ಸಾಧ್ಯವಾಗುವುದಿಲ್ಲ. ಈ ಕಾರಣದಿಂದಾಗಿ ಪರಿಶಿಷ್ಟೇತರ ಜಾತಿಗಳು ವಾಸಿಸುವ ಜನರ ಮಧ್ಯದಲ್ಲಿ ಪರಿಶಿಷ್ಟ ಜಾತಿಯವರ ಪ್ರಯತ್ನ ಸಫಲವಾಗುವುದೇ ಇಲ್ಲ. ಆದುದರಿಂದ, ಸರ್, ನಾನು ತಮ್ಮನ್ನು ಪ್ರಾರ್ಥಿಸುವುದೇನೆಂದರೆ, ಪ್ರತಿಯೊಂದು ಹಳ್ಳಿ, ಪಟ್ಟಣ ಅಥವಾ ನಗರದಲ್ಲಿ ಕನಿಷ್ಠ ಶೇ. 10ರಷ್ಟಾದರೂ (ಅಥವಾ ಒಟ್ಟು ಜನಸಂಖ್ಯೆಯಲ್ಲಿನ ಈ ಜನರ ಪ್ರಮಾಣವನ್ನನುಸರಿಸಿಯಾಗಲೀ) ನಿವೇಶನಗಳನ್ನು ಮೀಸಲಿಡಬೇಕೆಂದು ಸೂಚಿಸುವ ಸುತ್ತೋಲೆಯೊಂದನ್ನು ಎಲ್ಲಾ ರಾಜ್ಯಗಳಿಗೂ ಕಳುಹಿಸಬೇಕು. ಇದರಿಂದ ಪರಿಶಿಷ್ಟ ಜಾತಿಯ ಜನರು ಇತರ ಜಾತಿಗಳವರ ನಡುವೆ ವಾಸಿಸಲು, ಅವರೊಡನೆ ಬೆರೆಯಲು ಸಹಾಯವಾಗುವುದು. ಇದೇ ರೀತಿಯಲ್ಲಿ ಈ ವರ್ಗದ ಜನರಿಗೆ ಹರಿಜನೇತರ ಅಥವಾ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳವರದಲ್ಲದ ವಿದ್ಯಾರ್ಥಿನಿಲಯಗಳಲ್ಲಿ ಶೇ. 10ರಿಂದ 15ರವರೆಗಿನ ಮೀಸಲಾತಿಯನ್ನು ನೀಡಬೇಕು. ಸರ್, ಇಲ್ಲಿರುವ ನನ್ನ ಮಾನ್ಯ ಮಿತ್ರರು ವಿದ್ಯಾರ್ಥಿವೇತನಗಳನ್ನು ಶೀಘ್ರವಾಗಿ ವಿತರಣೆಮಾಡಬೇಕೆಂದು ಒತ್ತಾಯವನ್ನು ಮಾಡುತ್ತಿದ್ದಾರೆ. ಅದಕ್ಕೆ ನನ್ನ ಸಹಮತಿಯೂ ಇದೆ. ಇದಕ್ಕಿಂತ ಒಂದು ಹೆಜ್ಜೆ ಮುಂದೆ ಹೋಗಿ ನಾನು ಇನ್ನೂ ಒಂದು ಸಲಹೆಯನ್ನು ತಮಗೆ ನೀಡಲು ಬಯಸುತ್ತೇನೆ. ಅದೆಂದರೆ, ನಿಮ್ಮಿಂದ ಮಂಜೂರಾಗುವ ವಿದ್ಯಾರ್ಥಿವೇತನದ ನಿರೀಕ್ಷೆಯಲ್ಲಿ ನಮ್ಮ ಸರಕಾರದಿಂದ ಈ ಹಣವನ್ನು ವಿತರಣೆ ಮಾಡುತ್ತೇವೆ. ಇದರಿಂದ ಕಾಲೇಜುಗಳಲ್ಲಿ ಅಭ್ಯಾಸಮಾಡುತ್ತಿರುವ ನಮ್ಮ ವಿದ್ಯಾರ್ಥಿಗಳಿಗೆ

ಆಗಬಹುದಾದ ತೊಂದರೆಯನ್ನು ತಪ್ಪಿಸಬಹುದು. ಕೇಂದ್ರಸರಕಾರವು ಧನಸಹಾಯವನ್ನು ನಂತರ ನೀಡಬಹುದು. ಇದರಿಂದ ವಿದ್ಯಾರ್ಥಿಗಳಿಗೆ ಬಹಳ ಉಪಕಾರವಾಗುವುದು. ವಾಸ್ತವವಾಗಿ ಈಗ ನಮ್ಮ ರಾಜ್ಯದಲ್ಲಿ ವಿದ್ಯಾರ್ಥಿವೇತನಗಳನ್ನು ವಿತರಿಸುತ್ತಿಲ್ಲ. ವಿತರಿಸುತ್ತಿದ್ದರೂ, ಅದು ವಿದ್ಯಾರ್ಥಿಗಳನ್ನು ತಲುಪುತ್ತಿಲ್ಲ. ಕೆಲವು ವಿದ್ಯಾರ್ಥಿಗಳು ಈಗಾಗಲೇ ವಿದ್ಯಾರ್ಥಿನಿಲಯಗಳನ್ನು ತೊರೆದು ಹೋಗುತ್ತಿದ್ದಾರೆ. ಮುಂದಿನ ವರ್ಷದಿಂದಲಾದರೂ ಅವರಿಗೆ ಈ ಬವಣೆ ಪುನರಾವೃತ್ತಿಯಾಗಬಾರದು. ಕಾಲೇಜು ವಿದ್ಯಾರ್ಥಿಗಳ ವಿಷಯದಲ್ಲಿ ನೀವು ಅನುಕಂಪವನ್ನು ತೋರಿದ್ದೀರಿ. ಆದರೆ, ಪ್ರಾಥಮಿಕ ಶಾಲಾ ವಿದ್ಯಾರ್ಥಿಗಳ ವಿಷಯಕ್ಕೆ ಬಂದರೆ, ಕಬ್ಬು ಇಲ್ಲದಿದ್ದರೆ ಸಕ್ಕರೆಯ ಕಾರ್ಖಾನೆ ಇರುವುದಿಲ್ಲವೆಂಬ ಸಾಮ್ಯದ ಮೇಲೆ, ಈ ಕಿರಿಯ ಬಾಲಕ, ಬಾಲಕಿಯರಿಗೆ ಇಂತಹುದೇ ಅವಕಾಶಗಳನ್ನು ಕಲ್ಪಿಸುವತ್ತ ಆಲೋಚಿಸಬೇಕು ಎಂದು ಕೇಳಿಕೊಳ್ಳುತ್ತೇನೆ. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳವರು ಹಿಂದುಳಿದಿರುವ ಕಾರಣವೇನು? ಅದಕ್ಕೆ ಕಾರಣ, ಅವರು ಅವಿದ್ಯಾವಂತರಾಗಿರುವುದು ಮತ್ತು ಅಜ್ಞಾನಿಗಳಾಗಿರುವುದು. ವಿದ್ಯೆಯು ದೊರಕದ ಕಾರಣ ಅವರು ಅಜ್ಞಾನಿಗಳಾಗಿದ್ದಾರೆ ಮತ್ತು ಅಜ್ಞಾನಿಗಳಾಗಿರುವುದರಿಂದ ವಿದ್ಯೆಯಿಂದ ಅವರು ದೂರವಿದ್ದಾರೆ. ಇವೆರಡೂ ಅವರ ಹಿಂದುಳಿದಿರುವಿಕೆಗೆ ಕಾರಣವಾಗಿವೆ. ಅವರಿಗೆ ಗೃಹಸೌಲಭ್ಯವನ್ನು ಒದಗಿಸುವ ಬದಲು ಅವರು ತಮ್ಮ ಗುಡಿಸಿಲನಲ್ಲಿಯೇ ಇರಲಿ. ಇನ್ನೂ ಹತ್ತು ವರ್ಷಗಳ ಕಾಲ ಅವರು ಅಲ್ಲಿಯೇ ಇರುವಂತೆ ನಾನು ಅವರನ್ನು ಕೇಳಿಕೊಳ್ಳುತ್ತೇನೆ. ಅವರಿಗೆ ಅನುದಾನವನ್ನು ನೀಡುವುದಕ್ಕೆ ಬದಲಾಗಿ ಪ್ರತಿ ವಿದ್ಯಾರ್ಥಿಗೂ ತಿಂಗಳಿಗೆ ರೂ. 2ರಂತೆ ನೀಡಿದರೆ, ಇನ್ನು ಹತ್ತು ವರ್ಷಗಳಲ್ಲಿ ತೋಟಿವೃತ್ತಿ ಅವರಲ್ಲಿ ಇರುವುದಿಲ್ಲವೆಂಬ ಭರವಸೆ ನನಗಿದೆ.

ಸಭಾಧ್ಯಕ್ಷರು: ಇನ್ನೂ ಹಲವಾರು ಮಾನ್ಯ ಮಂತ್ರಿಗಳು ಮಾತನಾಡಬೇಕಾಗಿರುವುದರಿಂದ, ಶೀಘ್ರವಾಗಿ ತಮ್ಮ ಭಾಷಣವನ್ನು ಮುಗಿಸಬೇಕೆಂದು ತಮ್ಮನ್ನು ಕೇಳಿಕೊಳ್ಳಬಹುದೇ?

ಶ್ರೀ ಬಿ.ಎನ್. ದಾತಾರ್: ಮಾನ್ಯ ಮಂತ್ರಿಗಳು ತಮ್ಮ ಮಾತನ್ನು ಶೀಘ್ರವಾಗಿ ಮುಗಿಸಬೇಕೆಂದು ಕೇಳಿಕೊಳ್ಳುತ್ತೇನೆ. ಇನ್ನೂ ಹಲವಾರು ಮಾನ್ಯ ಮಂತ್ರಿಗಳು ಮಾತನಾಡುವವರಿದ್ದಾರೆ.

ಮುಂದಿನ ವಿಷಯವೆಂದರೆ, ಈ ವರ್ಗಗಳಲ್ಲಿನ ಜನರಲ್ಲಿರುವ ನಿರುದ್ಯೋಗ, ಬಡತನ ಮತ್ತು ಹಿಂದುಳಿದಿರುವಿಕೆಯನ್ನು ತೊಡೆದುಹಾಕುವುದು. ಅದರ ನಂತರದ ವಿಷಯಗಳು ಎಂದರೆ, ಶಿಕ್ಷಣ ಮತ್ತು ಭೂಮಿ. ಇವುಗಳಲ್ಲದೆ ಬೇರೆ ಏನಾದರೂ ಉಳಿದಿದ್ದರೆ, ನೀವು ರಾಜ್ಯ ಸರಕಾರಗಳಿಗೆ ಏನನ್ನಾದರೂ ನೀಡುವುದಿದ್ದರೆ ಗೃಹಸೌಲಭ್ಯಗಳನ್ನು ಒದಗಿಸುವುದನ್ನು ಬಿಟ್ಟು – ನಾನು ಮನೆಗಳನ್ನು ಕಟ್ಟಿಕೊಡುವುದರ ಬಗ್ಗೆ ತಲೆಯನ್ನು ಅಷ್ಟೊಂದು ಕೆಡಿಸಿಕೊಳ್ಳುವುದಿಲ್ಲ – ಅದರ ಜೊತೆಗೆ ಶಿಕ್ಷಣ, ಭೂಮಿ, ಹಾಗೂ ಸ್ತ್ರೀಯರೂ ಸೇರಿದಂತೆ ಎಲ್ಲರೂ ತೊಡಗಿಕೊಳ್ಳಬಹುದಾದ ಸಣ್ಣ ಪ್ರಮಾಣದ ಕೈಗಾರಿಕೆಗಳು, ಕುಟೀರ ಉದ್ಯಮಗಳು ಮತ್ತು ಗ್ರಾಮೀಣ ಉದ್ಯಮಗಳು – ಇವುಗಳಿಗಾಗಿ ನಾವು ಹಣವನ್ನು ಖರ್ಚುಮಾಡಲು ಸಿದ್ಧರಿದ್ದೇವೆ. ಇನ್ನೂ ಏನಾದರೂ ಹಣವು ಉಳಿದಿದ್ದರೆ, ಅದನ್ನು ಕೋಳಿಸಾಕಣೆ, ಪಶುಸಂಗೋಪನೆ ಮತ್ತು ಅಭಿವೃದ್ಧಿ ಹಾಗೂ ಕೃಷಿ ಅಭಿವೃದ್ಧಿಗೆ ನೀಡಬೇಕು. ನಾನು ಹೇಳುವುದು ಇನ್ನೂ ಬಹಳಷ್ಟು ಇದ್ದರೂ, ತಾವು ನನಗೆ ಶೀಘ್ರವಾಗಿ ನನ್ನ ಮಾತನ್ನು ಮುಗಿಸಲು ಹೇಳಿದ್ದರಿಂದ, ಕೊನೆಯದಾಗಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಆಯುಕ್ತರಾದ ನಮ್ಮ ಶ್ರೀ ಶ್ರೀಕಾಂತ್ ಅವರು ಹಲವಾರು ವರದಿಗಳನ್ನು ಸಲ್ಲಿಸಿದ್ದಾರೆ. ನೀವು ಅವುಗಳನ್ನು ಜಾರಿಗೆ ತಂದರೆ, ಅಧಿಕಾರಿಗಳ ಸಮಾವೇಶವನ್ನು ಕರೆಯುವ ಅಗತ್ಯವೇ ಇಲ್ಲವಾಗುತ್ತದೆ. ಅವರು ಸಲ್ಲಿಸಿದ ವರದಿಯನ್ನು ನಾನು ಸಂಸತ್ತಿನ ಸದಸ್ಯನಾಗಿದ್ದಾಗ, ಬಹುಶಃ 1953ರಲ್ಲಿ ಅಥವಾ ಅದರ ಆಸುಪಾಸಿನಲ್ಲಿ, ಓದಿದ್ದೆ. ಅದರಲ್ಲಿ ಅವರು 'ಅಮೆರಿಕದಲ್ಲಿ ನಿಗ್ರೋಗಳು ಅಲ್ಲಿನ ಬಿಳಿಯರ ನಡುವೆ ಇರುವ ಪ್ರತಿಕೂಲಕರ ಅಭಿಪ್ರಾಯಕ್ಕಿಂತ ಹರಿಜನರ ಬಗ್ಗೆ ಹರಿಜನೇತರರ ಪ್ರತಿಕೂಲಕರ ಅಭಿಪ್ರಾಯಗಳು ನಮ್ಮ ಸಮಾಜದಲ್ಲಿ ಬಹಳ ಆಳವಾಗಿ ಬೇರುಬಿಟ್ಟಿದೆ' ಎಂದು ಹೇಳಿದ್ದಾರೆ. ನಾನು ಅವರ ಎಲ್ಲಾ ವರದಿಗಳನ್ನೂ ಬಲವಾಗಿ ಸಮರ್ಥಿಸುತ್ತೇನೆ. ಅವರ ವರದಿಗಳಲ್ಲಿನ ಶಿಫಾರಸ್ಸುಗಳಲ್ಲಿ ಶೇ. 10ರಷ್ಟನ್ನೂ, ಮೊದಲು ಕೇಂದ್ರ ಸರಕಾರ, ನಂತರ ರಾಜ್ಯ ಸರಕಾರಗಳು ಜಾರಿಗೆ ತಂದಿಲ್ಲವೆಂಬ ಅಂಶವನ್ನು ತಮ್ಮ ಗಮನಕ್ಕೆ ತರುತ್ತಿದ್ದೇನೆ. ಸಂಸತ್ತಿನಲ್ಲಿ ಮತ್ತು ಹೊರಗೆ ತಾವು ನಡೆಸುತ್ತಿರುವ ಚರ್ಚೆಯನ್ನು ನಾನು ಬಹಳ ಎಚ್ಚರಿಕೆಯಿಂದ ಗಮನಿಸುತ್ತಿದ್ದೇನೆ. ನೀವು ಅನಗತ್ಯವಾಗಿ ನಮ್ಮನ್ನು, ಅಂದರೆ ರಾಜ್ಯ

ಸರಕಾರಗಳನ್ನು, ನಿಂದಿಸಬಾರದು. ಎಷ್ಟಾದರೂ, ನಿಮ್ಮ ನೀತಿ ಮತ್ತು ಆದೇಶಗಳನ್ನು ಅನುಷ್ಠಾನಗೊಳಿಸುವುದಕ್ಕಾಗಿಯೇ ಇರುವವರು. ನೀವು ಆಸಕ್ತರಾಗಿದ್ದರೆ, ದಯವಿಟ್ಟು ಎಲ್ಲಾ ಸಾಂವಿಧಾನಕ ರಕ್ಷಣಾಸೂತ್ರಗಳನ್ನೂ ಜಾರಿಗೆ ತನ್ನಿ. ಈ ವಿಷಯದಲ್ಲಿ ರಾಜ್ಯಗಳ ಮುಖ್ಯಮಂತ್ರಿಗಳನ್ನು ಹೊಣೆಗಾರರನ್ನಾಗಿ ಮಾಡಿ. ನಿಮ್ಮ ಮೂಲಕ ಕೇಂದ್ರ ಸರಕಾರವನ್ನು, ನೀವು ನಮ್ಮ ರಾಜ್ಯದವರೇ ಆಗಿರುವುದರಿಂದ ನಿಮ್ಮನ್ನೂ, ನಾನು ಶ್ರದ್ಧೆಯಿಂದ ಮತ್ತು ವಿನಯಪೂರ್ವಕವಾಗಿ ಕೇಳಿಕೊಳ್ಳುವುದೇನೆಂದರೆ, ಈ ವಿಷಯವನ್ನು ಜಾರಿಗೊಳಿಸದ ರಾಜ್ಯಗಳ ಮುಖ್ಯಮಂತ್ರಿಗಳನ್ನು ವೈಯಕ್ತಿಕವಾಗಿ ಜವಾಬ್ದಾರರನ್ನಾಗಿ ಮಾಡಿ. ಮುಖ್ಯಮಂತ್ರಿಗಳಿಗೆ ಎರಡನೆಯವರಾಗಿರುವವರು, ಕೇಂದ್ರ ಸರಕಾರದಿಂದ ನೇಮಕವಾಗಿರುವ ಐ.ಸಿ.ಎಸ್ ಅಥವಾ ಐ.ಎ.ಎಸ್. ಅಧಿಕಾರಿಯಾದ ಮುಖ್ಯ ಕಾರ್ಯದರ್ಶಿಯುವರು. ಸಾಮಾನ್ಯವಾಗಿ ಐ.ಸಿ.ಎಸ್. ಅಧಿಕಾರಿಗಳು ಉತ್ತಮರಾಗಿಯೇ ಇರುತ್ತಾರೆ. ಅವರು ಅತ್ಯುತ್ತಮರೂ, ಅತಿ ಬುದ್ಧಿವಂತರೂ ಆಗಿರುತ್ತಾರೆ, ಅವರ ಬಗ್ಗೆ ನನಗೆ ಗೌರವವಿದೆ. ಅವರಿಗೆ ನೀಡಬೇಕಾದ ಸಂಬಳ ಮೂರು ಸಾವಿರವಲ್ಲ, ನೀಡಬೇಕಾದುದು ಆರು ಸಾವಿರ. ಆದರೆ ಅವರು ಯಾವ ಕೆಲಸವನ್ನೂ ಮಾಡಬೇಕಾಗಿಲ್ಲ, ಸುಮ್ಮನೆ ಕುಳಿತಿರಬೇಕು.

ಶ್ರೀ ಬಿ.ಎನ್. ದಾತಾರ್: – ಮಾನ್ಯ ಮಂತ್ರಿಗಳು ಈಗಲಾದರೂ ತಮ್ಮ ಮಾತನ್ನು ಮುಗಿಸಬೇಕು.

ಮೈಸೂರಿನ ಮಂತ್ರಿಗಳು (ಶ್ರೀ ರಾಚಯ್ಯನವರು): ನನಗೆ ದಯವಿಟ್ಟು 5 ಅಥವಾ 10 ನಿಮಿಷಗಳನ್ನು ನೀಡಿ. ನಾನು ಮುಗಿಸುತ್ತಿದ್ದೇನೆ. ಅವರು ಸಂಸತ್ತಿನ ಮತ್ತು ರಾಜ್ಯ ಸರಕಾರಗಳ ನೀತಿಯನ್ನು ಅನುಸರಿಸಬೇಕು ಮತ್ತು ಕಾನೂನುಗಳನ್ನು ಅನುಷ್ಠಾನಮಾಡಬೇಕು. ಪರಿಶಿಷ್ಟ ಜಾತಿಗಳ, ಪರಿಶಿಷ್ಟ ಪಂಗಡಗಳ ಮತ್ತು ಇತರ ಹಿಂದುಳಿದ ವರ್ಗಗಳ ಇಲಾಖೆಯು ಮುಖ್ಯ ಕಾರ್ಯದರ್ಶಿಯ ಅಧೀನದಲ್ಲಿರಬೇಕು. ಕೇಂದ್ರ ಸರಕಾರದ ನಿರ್ದೇಶನಗಳನ್ನು ಮತ್ತು ರಾಜ್ಯ ಸರಕಾರದ ಆಜ್ಞೆಗಳನ್ನು ಜಾರಿಗೆ ತರದೆಹೋದರೆ ಆತನನ್ನು ತಕ್ಷಣ ವಜಾಮಾಡಬೇಕು. ನಾನು ಸಚಿವನಾಗಿರಲಿ, ಇಲ್ಲದಿರಲಿ, ಈ ವಿಷಯದ ಬಗ್ಗೆ ಗಂಭೀರವಾಗಿದ್ದೇನೆ. ಸರಕಾರದ ಆಜ್ಞೆಯಿದ್ದಾಗ, ಸಂವಿಧಾನದ ವ್ಯವಸ್ಥೆಯಲ್ಲಿ ಅವಕಾಶಗಳಿರುವಾಗ, ಕೇಂದ್ರ ಸರಕಾರದ ನಿರ್ದೇಶನವಿರುವಾಗ, ಅವರು ಅದನ್ನು

ಕಾರ್ಯಗತಗೊಳಿಸದಿದ್ದರೆ ತರಲಿಲ್ಲವೆಂದರೆ ಏನು ಅರ್ಥ? ಅವರು ಈ ವಿಷಯಗಳಲ್ಲಿ ವಿಫಲರಾದರೆ, ಅವರ ಸಂಬಳದಲ್ಲಿನ ವಾರ್ಷಿಕ ವೃದ್ಧಿಯನ್ನು ತಡೆಹಿಡಿಯಲಾಗುವುದು ಎಂದು ಒಂದು ಸುತ್ತೋಲೆಯನ್ನು ಎಲ್ಲಾ ಅಧಿಕಾರಗಳಿಗೂ ದಯವಿಟ್ಟು ಕಳುಹಿಸಿಕೊಡಿ. ಅವರು ಮತ್ತೆ ಮತ್ತೆ ಅದೇ ಜಾಡನ್ನು ತುಳಿಯುತ್ತಿದ್ದರೆ, ಅವರನ್ನು ಕೆಲಸದಿಂದ ವಜಾಮಾಡಬೇಕು.

ಮೀಸಲಾತಿಯ ವಿಷಯಕ್ಕೆ ಬಂದರೆ, ಕೇಂದ್ರ ಹಾಗೂ ರಾಜ್ಯ ಸರಕಾರೀ ಸೇವೆಯಲ್ಲಿ ಹುದ್ದೆಗಳನ್ನು ಮೀಸಲಿಡುವುದಕ್ಕೆ ಸಂವಿಧಾನದ 320 (4) ಮತ್ತು 335ನೆಯ ವಿಧಿಗಳ ಪ್ರಕಾರ ಕೇಂದ್ರ ಮತ್ತು ರಾಜ್ಯ ಸರಕಾರಗಳು ಬದ್ಧವಾಗಿರುತ್ತವೆ. ಆದರೆ ಇವುಗಳನ್ನು ನಾವು ಎಣಿಸಿದ ಮಟ್ಟದವರೆಗೆ ಕಾರ್ಯಗತಗೊಳಿಸಿಲ್ಲವೆಂದು ನಾನು ಪ್ರಾಮಾಣಿಕವಾಗಿ ಒಪ್ಪಿಕೊಳ್ಳಲೇಬೇಕು. ಇದು ಜಾರಿಗೆ ಬಂದಿಲ್ಲ. ಈ ವೈಫಲ್ಯಕ್ಕೆ ರಾಜ್ಯ ಸರಕಾರಗಳು ಮತ್ತು ಕೇಂದ್ರ ಸರಕಾರವು ನಿಯಮಗಳನ್ನು ರೂಪಿಸಿಲ್ಲವೆಂದು ನಾನು ಹೇಳುವುದಿಲ್ಲ. ಈ ನಿಯಮಗಳು ಸಾಂವಿಧಾನಿಕ ರಕ್ಷಣಾಸೂತ್ರಗಳ ಬಲಕ್ಕಿಂತ ಹೆಚ್ಚಾಗಿ ಬಲವಂತವಾಗಿ ಹೇರಲಾಗುತ್ತಿದೆ. ಯಾವ ಕಾನೂನಿಗಾಗಲೀ, ನಿಯಮಕ್ಕಾಗಲೀ ಸಾಂವಿಧಾನಿಕ ರಕ್ಷಣಾಸೂತ್ರಗಳನ್ನು ಮೀರಲು ಸಾಧ್ಯವಿಲ್ಲ. ಸರ್, ಈ ಮುಂದಿನದನ್ನು ಜಾರಿಗೊಳಿಸಲಾಗಿಲ್ಲವೆಂಬುದು ನಿಮ್ಮ ಅರಿವಿಗೆ ಬಂದಿದೆಯೋ ಅಥವಾ ಇಲ್ಲವೋ ಎಂಬುದು ನನಗೆ ತಿಳಿದಿಲ್ಲ. ಅದೆಂದರೆ, ರಾಜ್ಯ ಸರಕಾರಗಳು ಮತ್ತು ಕೇಂದ್ರ ಸರಕಾರವು ಭರ್ತಿಮಾಡುವ ಎಲ್ಲಾ ಸರಕಾರೀ ಹುದ್ದೆಗಳನ್ನೂ ಪಬ್ಲಿಕ್ ಸರ್ವಿಸ್ ಕಮೀಷನ್‌ನೊಡನೆ ಚರ್ಚಿಸಿ ಮಾಡಬೇಕು ಎಂದು ಸಂವಿಧಾನದ 320 (4) ವಿಧಿಯು ಹೇಳುತ್ತದೆ. ಆದರೆ, 332 ಮತ್ತು 335ನೆಯ ವಿಧಿಗಳನ್ನು ಕಾರ್ಯಗತಗೊಳಿಸುವಾಗ ರಾಜ್ಯ ಸರಕಾರಗಳು ಮತ್ತು ಕೇಂದ್ರಸರಕಾರವು ಪಬ್ಲಿಕ್ ಸರ್ವಿಸ್ ಕಮೀಷನ್‌ನೊಡನೆ ಚರ್ಚಿಸಬೇಕಾದ ಅಗತ್ಯವಿಲ್ಲ. ಆದರೆ ಇದು ಮೈಸೂರು ರಾಜ್ಯದಲ್ಲಿ ತಿರುವುಮುರುವಾಗಿದೆ. ಯೋಜನೆ ಮತ್ತು ಅಭಿವೃದ್ಧಿ ಇಲಾಖೆಯಲ್ಲಿನ ಹುದ್ದೆಗಳಿಗೆ, ಗೆಜೆಟೆಡ್ ಹುದ್ದೆಗಳನ್ನೂ ಒಳಗೊಂಡಂತೆ, ಪರಿಶಿಷ್ಟ ಜಾತಿಗಳವರನ್ನು ನೇಮಕಮಾಡಿಕೊಳ್ಳುವಾಗಿ ಸರಕಾರವು ಪಬ್ಲಿಕ್ ಸರ್ವಿಸ್ ಕಮೀಷನ್‌ನೊಂದಿಗೆ ಚರ್ಚಿಸಬೇಕಾದ ಅಗತ್ಯವಿಲ್ಲವೆಂದು ಒಂದು ಸರಕಾರೀ ಆಜ್ಞೆಯನ್ನು ಹೊರಡಿಸಲಾಗಿದೆ. ಈಗ ಈ ಇಲಾಖೆಯಲ್ಲಿ ಶೇ. 99ಕ್ಕೂ ಹೆಚ್ಚಿನ ಪರಿಶಿಷ್ಟ

ಜಾತಿಗಳವರ ಹುದ್ದೆಗಳಿಗೆ ಇತರ ಜಾತಿಗಳವರನ್ನು ನೇಮಕಮಾಡಿಕೊಳ್ಳಲಾಗಿದೆ. ಅಂದರೆ, ಪರಿಶಿಷ್ಟ ಜಾತಿಗಳವರ ಹುದ್ದೆಗೆ ಪಬ್ಲಿಕ್ ಸರ್ವಿಸ್ ಕಮೀಷನ್‌ಗೆ ಸಂಬಂಧಿಸದೆ ನೇರವಾಗಿ ಆಯ್ಕೆಮಾಡಿಕೊಳ್ಳಬಹುದು ಎಂಬ ಸಂವಿಧಾನದ 320 (4) ವಿಧಿಯು ಇರುವುದಾದರೂ ಏತಕ್ಕೆ? ಅದನ್ನು ಎಲ್ಲಿ ಅನುಸರಿಸಲಾಗುತ್ತಿದೆ? ಕೇಂದ್ರ ಸರಕಾರವು ಇದನ್ನು ಅನುಸರಿಸುತ್ತಿದೆಯೇ? ರಾಜ್ಯ ಸರಕಾರಗಳಿಗೆ ಈ ಬಗ್ಗೆ ಯಾವುದಾದರೂ ಸುತ್ತೋಲೆಯನ್ನು ನೀಡಿದ್ದೀರಾ?

(ಶ್ರೀ ರಾಜಯ್ಯನವರು ಮುಂದುವರಿಸುತ್ತಾ ಹೇಳಿದರು): ನಿಮಗೆ ಸಮಸ್ಯೆಗಳೇನು ಎಂಬುದು ತಿಳಿಯದಿದ್ದರೆ, ಅವುಗಳ ಪ್ರಮಾಣವೇನು ಎಂಬುದು ಗೊತ್ತಿಲ್ಲದಿದ್ದರೆ, ನೀಡಬೇಕಾದ ಸೌಲಭ್ಯಗಳ ಬಗ್ಗೆ ಅರಿವಿಲ್ಲದಿದ್ದರೆ, ಈ ಉದ್ದೇಶಕ್ಕಾಗಿ ಎಷ್ಟು ಹಣವನ್ನು ಮೀಸಲಿಡಬೇಕು ಎಂಬುದು ಗೊತ್ತಿಲ್ಲದಿದ್ದರೆ, ನೀವು ಸಮಸ್ಯೆಗಳನ್ನು ಬಗೆಹರಿಸಲಾರಿರಿ.

ಆರ್ಥಿಕ, ಸಾಮಾಜಿಕ, ಶೈಕ್ಷಣಿಕ ಕ್ಷೇತ್ರಗಳಲ್ಲಿ ಹಾಗೂ ಹುದ್ದೆಗಳಿಗೆ ನೇಮಕಾತಿಯನ್ನು ಮಾಡಿಕೊಳ್ಳುವಾಗ ಸಾಂವಿಧಾನಿಕ ರಕ್ಷಣಾಸೂತ್ರಗಳು ಎಷ್ಟರಮಟ್ಟಿಗೆ ಅನುಷ್ಠಾನಗೊಂಡಿವೆ ಎಂಬುದನ್ನು ಅಧ್ಯಯನಮಾಡಲು ಕೇಂದ್ರ ಸರಕಾರದ ಮಟ್ಟದಲ್ಲಿ ಒಂದು ಸಮಿತಿಯನ್ನು ನೇಮಕಮಾಡಬೇಕು ಎಂದು ನಾನು ತಮ್ಮನ್ನು ಪ್ರಾರ್ಥಿಸುತ್ತೇನೆ. ಸಾಂವಿಧಾನಿಕ ರಕ್ಷಣಾ ಸೂತ್ರಗಳು ಸಂಪೂರ್ಣವಾಗಿ ಕಾರ್ಯಗತವಾಗಿದೆಯೇ ಎಂಬುದನ್ನು ಆ ಸಮಿತಿಯು ಪರಿಶೀಲಿಸಬೇಕು ಎಂದು ನಾನು ಸಲಹೆಯನ್ನು ನೀಡುತ್ತೇನೆ. ನನಗೆ ಇದರಲ್ಲಿ ಯಾರಿಗೂ ಅಗೌರವವನ್ನು ತೋರಿಸುವ ಉದ್ದೇಶವಿಲ್ಲ. ಅವುಗಳು ಕಾರ್ಯಗತವಾಗಿಲ್ಲದಿದ್ದ ಪಕ್ಷದಲ್ಲಿ ಈ ವೈಫಲ್ಯಕ್ಕೆ ನಾನು ರಾಜ್ಯ ಸರಕಾರಗಳನ್ನಾಗಲೀ, ಕೇಂದ್ರ ಸರಕಾರವನ್ನಾಗಲೀ ದೂರುವುದಿಲ್ಲ, ಅಥವಾ ಯಾರ ಬಗ್ಗೆಯೂ ನನಗೆ ಪೂರ್ವಗ್ರಹವಿಲ್ಲ. ನಾನು ಇಲ್ಲಿ ಒತ್ತಿ ಹೇಳುತ್ತಿರುವುದೇನೆಂದರೆ, ಮುಂದಿನ ಹತ್ತು ವರ್ಷಗಳಲ್ಲಿ, ಅಂದರೆ, 1970ರ ಜನವರಿ26ರ ಒಳಗೆ, ಈ ಎಲ್ಲಾ ವೈಫಲ್ಯಗಳನ್ನೂ ಕೇಂದ್ರ ಹಾಗೂ ರಾಜ್ಯ ಸರಕಾರಗಳ ಹದ್ದಿನ ಕಣ್ಣಿನ ಕಾವಲಿನಲ್ಲಿ ಸುಲಭವಾಗಿ ಸರಿಪಡಿಸಬಹುದು. ಇಂತಹ ಕಣ್ಗಾವಲು ಹಿಂದುಳಿದ ವರ್ಗಗಳವರ ರಕ್ಷಣೆಗೆ ಅತ್ಯಂತ ಅಗತ್ಯವಾದುದು. ಬೇರೆ ವಿಧವಾದ ಧನಸಹಾಯ, ಗೃಹಸೌಲಭ್ಯ ಇತ್ಯಾದಿಗಳನ್ನು ನೀಡುವುದಕ್ಕಿಂತ

ಮುಖ್ಯವಾಗಿ ಅವರನ್ನು ಶೋಷಣೆಯಿಂದ ಮುಕ್ತಗೊಳಿಸಬೇಕಾದುದು ಹೆಚ್ಚಿನ ಪ್ರಾಮುಖ್ಯವನ್ನು ಹೊಂದಿದೆಯೆಂಬುದು ನನ್ನ ಅಭಿಪ್ರಾಯ. 46ನೆಯ ವಿಧಿಯನ್ವಯ ಅವರನ್ನು ಅವರ ಹಿತಾಸಕ್ತಿಗಳನ್ನು ರಕ್ಷಿಸಬೇಕಾಗಿದೆ.

ಇನ್ನು ಉಳಿದಿರುವುದು ಎರಡೇ ಅಂಶಗಳು: ಬಲವಂತದ ದುಡಿಮೆ ಹಾಗೂ ಉಚಿತವಾದ ದುಡಿಮೆ. ನಮ್ಮ ಗ್ರಾಮೀಣ ಪ್ರದೇಶಗಳಲ್ಲಿ ಶೇ. 99 ಭಾಗ ಬಲವಂತದ ದುಡಿಮೆಗೆ ತುತ್ತಾಗಿದ್ದಾರೆ. ಈ ವಿಷಯವನ್ನು ತಾವು (ಕೇಂದ್ರ ಸರಕಾರವು) ಕೈಗೆತ್ತಿಕೊಳ್ಳಬೇಕು. ನಾನು ಹೀಗೆ ಹೇಳುತ್ತಿರುವ ಕಾರಣವೆಂದರೆ, ನಾನು ಈಗಾಗಲೇ ಈ ವಿಷಯದಲ್ಲಿ ರಾಜ್ಯ ಸರಕಾರದೊಂದಿಗೆ ಚರ್ಚಿಸಿದ್ದೇನೆ. ಅವರ ಪ್ರಕಾರ ಈ ವಿಷಯವು ಕೇಂದ್ರ ಸರಕಾರದ ವ್ಯಾಪ್ತಿಯಲ್ಲಿ ಬರುತ್ತಿದ್ದು, ಕೇಂದ್ರ ಸರಕಾರಕ್ಕೆ ಈ ದಿಕ್ಕಿನಲ್ಲಿ ಆಸಕ್ತಿಯಿದ್ದರೆ, ಅದು ಸೂಕ್ತ ಕಾನೂನನ್ನು ರಚಿಸಬೇಕು. ಇದು ನಮ್ಮ ಕಾನೂನು ಇಲಾಖೆಯ ಅಭಿಪ್ರಾಯ. ಮತ್ತೊಂದು ಅಂಶವೆಂದರೆ ದುರ್ಬಲವರ್ಗದವರನ್ನು ಹಿಂಡಿ ಹಿಪ್ಪೆಮಾಡುತ್ತಿರುವ ಗ್ರಾಮೀಣ ಸಾಲಗಳು. ಲೇವಾದೇವಿಗಾರರ, ಭೂಮಾಲಿಕರ ಹಾಗೂ ಬಂಡವಾಳಗಾರರ ಕಪಿಮುಷ್ಟಿಯಿಂದ ಈ ವರ್ಗದವರನ್ನು ಹೆಚ್ಚಿನ ವಿಳಂಬವಿಲ್ಲದೆ ಬಿಡುಗಡೆಮಾಡಬೇಕಾಗಿದೆ. ಇಷ್ಟು ಹೇಳಿ ನಾನು ನನ್ನ ಮಾತನ್ನು ಮುಗಿಸುತ್ತೇನೆ.

## ◆ ಸಮಾನತಾ ಸಮಾಜ ಸ್ಥಾಪನೆಗಾಗಿ ಹರಿಜನ-ಗಿರಿಜನರ ಉದ್ಧಾರ

**ಈ ಸಮಾಜಕ್ಕೆ ಅಂಟಿರುವ ಕಪ್ಪುಚುಕ್ಕೆ ಎಂದರೆ ಅಸ್ಪೃಶ್ಯ ಆಚರಣೆ. ಹರಿಜನ ಮತ್ತು ಗಿರಿಜನರನ್ನು ಮನುಷ್ಯರೆಂದು ಭಾವಿಸದೇ ಬಿಟ್ಟಿರುವ ಶತಮಾನಗಳಿಂದ ಸುಧಾರಕರು ಪ್ರಯತ್ನಿಸುತ್ತಲೇ ಇದ್ದಾರೆ. ಇದರ ಮುಂದುವರಿಕೆಯಾಗಿ ರಾಚಯ್ಯನವರು 1961 ಫೆಬ್ರವರಿ 6 ರಂದು ಹೈದರಾಬಾದ್‌ನಲ್ಲಿ "ಅಖಿಲ ಭಾರತ ಹರಿಜನ ಮತ್ತು ಗಿರಿಜನ ಕೆಲಸಗಾರರ ವಿಚಾರಗೋಷ್ಠಿ"ಯಲ್ಲಿ ಮಾಡಿದ ಭಾಷಣ ಇದು.**

ಅಖಿಲಭಾರತ ಹರಿಜನ ಮತ್ತು ಗಿರಿಜನ ಕೆಲಸಗಾರರನ್ನು ಕುರಿತ ವಿಚಾರಗೋಷ್ಠಿಯ ಅಧ್ಯಕ್ಷತೆ ವಹಿಸಲು ಅವಕಾಶ ಮಾಡಿಕೊಟ್ಟಿರುವುದಕ್ಕೆ ನನ್ನ ಧನ್ಯವಾದಗಳು. ನಾನು ಕೂಡ ಕೃಷಿಕ ಕುಟುಂಬದಿಂದ ಬಂದಿರುವುದರಿಂದ ಕೂಲಿಕಾರರ ಮತ್ತು ಕಾರ್ಮಿಕರ ಸಮಸ್ಯೆಗಳ ಅನುಭವ ನನಗಿದೆ. ನಾನು ಬಡತನ, ಕಾಯಿಲೆ, ನಿರ್ಲಕ್ಷ್ಯ ಇವುಗಳಿಗೆ ಹೊಸಬರಲ್ಲಾ. ನಿಮ್ಮಂತೆಯೇ ಸಹಭಾಗಿ. ಭಾರತದಲ್ಲಿ ಇಂದು ಅತಿ ಹೆಚ್ಚು ಕೃಷಿ ಕಾರ್ಮಿಕರಿಂದ ಕೂಡಿದೆ. ಅದರಲ್ಲೂ ವಿಶೇಷವಾಗಿ ಕೃಷಿ ಕೂಲಿಕಾರರಲ್ಲಿ ಹರಿಜನ ಮತ್ತು ಗಿರಿಜನ ಹಾಗೂ ಇತರೆ ಕೆಳವರ್ಗದ ಕೆಲಸಗಾರರ ಸ್ಥಿತಿಗತಿಗಳನ್ನು ಕುರಿತು ವಿಚಾರ ಹಂಚಿಕೊಳ್ಳಲು ಎಲ್ಲರೂ ಭಾಗವಹಿಸಿರುವುದು ನನಗೆ ಸಂತೋಷವಾಗಿದೆ.

ಭಾರತದ ಜನಸಂಖ್ಯೆಯಲ್ಲಿ ಹರಿಜನ ಮತ್ತು ಗಿರಿಜನರ ಸಂಖ್ಯೆ $^1/_6$ರಷ್ಟಿದೆ. ಒಂದು ಪ್ರಭಾವಕಾರಿ ದೇಶವನ್ನು ಮರು ಕಟ್ಟಲು ಇಷ್ಟು ಸಂಖ್ಯೆಯಲ್ಲಿರುವ ಎಲ್ಲರೂ ಒಟ್ಟಿಗೆ ಸೇರಿ ಯೋಜಿಸಬೇಕಾಗಿದೆ. ಭೌತಿಕ ಮತ್ತು ಬೌದ್ಧಿಕ ಜ್ಞಾನವನ್ನು ಪಡೆಯುವುದಕ್ಕೆ ಅವರಿಗೆ ಅವಕಾಶ ಕಲ್ಪಸಿಕೊಡಬೇಕಾಗಿದೆ.

ಅಖಿಲ ಭಾರತ ಹರಿಜನ ಮತ್ತು ಗಿರಿಜನ ಕೂಲಿಕಾರರ ವಿಚಾರಗೋಷ್ಠಿ ಫೆಬ್ರವರಿ 6, 1961ರಂದು ಹೈದರಾಬಾದ್ ಇಲ್ಲಿ ಮಾಡಿದ ಭಾಷಣ.

ವಾಸ್ತವವಾಗಿ, ನಮ್ಮ ಸಂವಿಧಾನದ ಸದಾಶಯದ ಪ್ರಕಾರ ಮೊದಲು ಅವರಿಗೆ ಗಮನವನ್ನು ನೀಡಬೇಕು. ಅವರಿಗೆ ನ್ಯಾಯವನ್ನು ಒದಗಿಸುವಲ್ಲಿ

ವಿಳಂಬವಾಗಿದೆ. ಎಲ್ಲರಿಗೂ ತಿಳಿದಿರುವಂತೆ ನ್ಯಾಯವಿತರಣೆಯಲ್ಲಿನ ವಿಳಂಬವೇ ನ್ಯಾಯವಿರತಣೆಯ ವೈಫಲ್ಯಕ್ಕೆ ಕಾರಣವಾಗುತ್ತದೆ. ಇದು ಅವರ ಹಣೆಯ ಬರಹ.

ದೇಶದಲ್ಲಿನ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡಗಳವರ ಬದುಕಿನ ಪರಿಸ್ಥಿತಿಯನ್ನು ಯೋಚಿಸುತ್ತಿರುವಾಗ, ನನ್ನ ನೆನಪುಗಳು ಹಿಂದಕ್ಕೆ ಜಾರಿ, ಇವರ ಪರಿಸ್ಥಿತಿಯನ್ನು ಉತ್ತಮಗೊಳಿಸಲು ಸತತವಾಗಿ ಪ್ರಯತ್ನಿಸಿದ ರಾಷ್ಟ್ರಪಿತ ಮಹಾತ್ಮ ಗಾಂಧಿ, ದಿವಂಗತ ಸರ್ದಾರ್ ಪಟೇಲ್, ಡಾ. ಅಂಬೇಡ್ಕರ್, ಪ್ರಸಾದ್, ಪಂಡಿತ್ ನೆಹ್ರೂ ಮತ್ತು ಜಗಜೀವನ ರಾಮ್ ಇವರನ್ನು ಕೃತಜ್ಞತಾಪೂರ್ವಕವಾಗಿ ನೆನೆಸಿಕೊಳ್ಳುತ್ತೇನೆ. ಇಂತಹ ನಾಯಕರ ದೂರದೃಷ್ಟಿಯ ಫಲವಾಗಿ, ಭಾರತದ ಸಂವಿಧಾನದಲ್ಲಿ ಹಿಂದುಳಿದ ವರ್ಗಗಳು, ಪರಿಶಿಷ್ಟ ಜಾತಿಗಳು, ಪರಿಶಿಷ್ಟ ಪಂಗಡಗಳು ಹಾಗೂ ಇತರ ದುರ್ಬಲವರ್ಗದವರ ಹಿತಾಸಕ್ತಿಗಳ ರಕ್ಷಣೆಗಾಗಿ, ಈ ಜನರ ಏಳಿಗೆಗಾಗಿ ಮತ್ತು ಅವರನ್ನು ಸಮಾಜದ ಇತರ ವರ್ಗಗಳವರೊಡನೆ ಹೆಗಲೆಣೆಯಾಗಿ ಆತ್ಮವಿಶ್ವಾಸದೊಡನೆ ನಿಂತುಕೊಳ್ಳುವಂತೆ ಮಾಡುವುದಕ್ಕಾಗಿ ಸಾಕಷ್ಟು ವಿಧಿ, ನಿಯಮಗಳನ್ನು ಅಳವಡಿಸಲು ಸಾಧ್ಯವಾಗಿದೆ. ಮೂಲಭೂತ ಹಕ್ಕುಗಳ ಮತ್ತು ದೇಶದ ಜನತೆಯ ನಡುವಿನ ತಾರತಮ್ಯದ ನಿವಾರಣೆಯ ವಿಷಯಕ್ಕೆ ಬಂದಾಗ ಸಂವಿಧಾನದ 15ನೆಯ ವಿಧಿಯ ಅಡಿಯಲ್ಲಿ ಸೇರಿಸಿರುವ 4ನೆಯ ಪರಿಚ್ಛೇದದಲ್ಲಿ ಹೀಗೆ ಹೇಳಲಾಗಿದೆ:

"ಸಾಮಾಜಿಕವಾಗಿ, ಶೈಕ್ಷಣಿಕವಾಗಿ ಹಿಂದುಳಿದವರ್ಗಗಳವರ, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳವರ ಮೇಲ್ಮೆಗಾಗಿ ವಿಶೇಷವಾದ ಯಾವುದೇ ಕ್ರಮಗಳನ್ನು ತೆಗೆದುಕೊಳ್ಳುವ, ನಿಯಮಗಳನ್ನು ರೂಪಿಸುವ ವಿಷಯದಲ್ಲಿ ಈ ವಿಧಿಯು ಸರಕಾರಕ್ಕೆ ಯಾವುದೇ ರೀತಿಯ ಪ್ರತಿಬಂಧವನ್ನೂ ವಿಧಿಸುವುದಿಲ್ಲ."

ಮತ್ತೆ, ಮೂಲಭೂತ ಹಕ್ಕುಗಳ ಅಡಿಯಲ್ಲಿ ಎಲ್ಲರಿಗೂ ಸಮಾನಾವಕಾಶಗಳನ್ನು ನೀಡುವ ಸಂವಿಧಾನದ 16ನೆಯ ವಿಧಿಯ 4ನೆಯ ಪರಿಚ್ಛೇದದಲ್ಲಿ ಹೀಗೆ ಹೇಳಲಾಗಿದೆ:

"ಯಾವುದಾದರೂ ಸೇವಾ ವಿಭಾಗದಲ್ಲಿ ಹಿಂದುಳಿದ ವರ್ಗಗಳಿಗೆ ಸೇರಿದ ಜನಗಳಿಗೆ ಸಾಕಷ್ಟು ಪ್ರಾತಿನಿಧ್ಯ ದೊರೆತಿಲ್ಲವೆಂಬುದನ್ನು ಸರಕಾರವು ಮನಗಂಡರೆ,

ಅದನ್ನು ಸರಿಪಡಿಸಿ, ಈ ವರ್ಗದ ಜನರಿಗೆ ಸಾಕಷ್ಟು ಪ್ರಾತಿನಿಧ್ಯವನ್ನು ದೊರಕಿಸಿಕೊಡುವ ಉದ್ದೇಶದಿಂದ ಸೂಕ್ತ ನಿಯಮಗಳನ್ನು ರೂಪಿಸಲು ಈ ವಿಧಿಯು ಸರಕಾರಕ್ಕೆ ಯಾವುದೇ ರೀತಿಯ ಪ್ರತಿಬಂಧವನ್ನೂ ವಿಧಿಸುವುದಿಲ್ಲ."

ಇವುಗಳ ಹೊರತಾಗಿಯೂ ಕೆಲವು ವಿಧಿಗಳು ಸಂವಿಧಾನದಲ್ಲಿ ಅಡಕವಾಗಿವೆ. ಅವುಗಳನ್ನು ಕಾರ್ಯಗತಗೊಳಿಸಿದರೆ ದೇಶದಲ್ಲಿನ ದುರ್ಬಲವರ್ಗಗಳವರ ಜೀವನದಲ್ಲಿನ ಪರಿಸ್ಥಿತಿಯು ಉತ್ತಮಗೊಳ್ಳುತ್ತದೆ. ನನ್ನ ಭಾಷಣದಲ್ಲಿ ಮುಂದೆ, ಪ್ರಮುಖವಾದ ಮತ್ತು ಸಂಗತವಾದ ಕೆಲವು ವಿಧಿಗಳನ್ನು ನಾನು ಪ್ರಸ್ತಾಪಿಸುತ್ತೇನೆ. ಅವುಗಳ ಬಗ್ಗೆ ವಿಚಾರಮಾಡುವ ಮೊದಲು ನಾವು ಈ ವಿಚಾರಗೋಷ್ಠಿಯ ಉಪಯೋಗವನ್ನು ಎಷ್ಟರ ಮಟ್ಟಿಗೆ ಪಡೆದುಕೊಳ್ಳಬಹುದು ಎಂಬುದರ ಬಗ್ಗೆ ಯೋಚಿಸೋಣ.

ಹರಿಜನ ಮತ್ತು ಗಿರಿಜನರ ಸ್ಥಿತಿಗತಿಗಳನ್ನು ಉದ್ಧರಿಸುವಷ್ಟಕ್ಕೇ ಸೀಮಿತಗೊಳಿಸಿಕೊಳ್ಳದೆ, ಇಡೀ ರಾಷ್ಟ್ರದ ಹಿತದೃಷ್ಟಿಯಿಂದ ನಾವು ಈ ವಿಚಾರಗೋಷ್ಠಿಯ ಉಪಯೋಗವನ್ನು ಮಾಡಿಕೊಳ್ಳುವ ಬಗೆಯನ್ನು ಯೋಚಿಸಬೇಕು. ದೇಶದಲ್ಲಿನ ಬಹುಸಂಖ್ಯಾತರು ಹರಿಜನ, ಗಿರಿಜನ ಮತ್ತು ಇತರ ಹಿಂದುಳಿದ ವರ್ಗಗಳಿಗೆ ಸೇರಿದ್ದಾರೆ. ಇವರ ಅಭಿವೃದ್ಧಿಯೆಂದರೆ, ದೇಶದ ಬಹುಸಂಖ್ಯಾತ ಜನರ ಅಭಿವೃದ್ಧಿಯೇ ಆಗುತ್ತದೆ. ಇದು ರಾಷ್ಟ್ರದ ಜನರ ತಿಳಿವನ್ನು ಹೆಚ್ಚಿಸುತ್ತದೆ ಮತ್ತು ರಾಷ್ಟ್ರದ ಅಭಿವೃದ್ಧಿಗೆ ಕಾರಣವಾಗುತ್ತದೆ. ಬಡತನವು ಎಲ್ಲೇ ಇದ್ದರೂ, ಅದು ಇತರ ಎಲ್ಲಾ ಕಡೆಯಲ್ಲಿನ ಅಭಿವೃದ್ಧಿಗೆ ಮಾರಕವಾಗಿರುತ್ತದೆ. ಈ ಕಾರಣದಿಂದ, ಜನತೆಯಲ್ಲಿನ ದುರ್ಬಲವರ್ಗಗಳವರ ಸಾಮಾಜಿಕ ಮತ್ತು ಆರ್ಥಿಕ ಪರಿಸ್ಥಿತಿಯುನ್ನು ಉತ್ತಮಗೊಳಿಸಲು ಮಾರ್ಗೋಪಾಯಗಳನ್ನು ಕಂಡುಹಿಡಿಯಲು ಹಮ್ಮಿಕೊಂಡಿರುವ ಈ ವಿಚಾರಗೋಷ್ಠಿಯು ಒಂದು ರೀತಿಯಲ್ಲಿ ರಾಷ್ಟ್ರೀಯ ಸಮಸ್ಯೆಯೊಂದಕ್ಕೆ ಪರಿಹಾರವನ್ನು ಕಂಡುಹಿಡಿಯುವ ನಿಟ್ಟಿನಲ್ಲಿ ಕಾರ್ಯೋನ್ಮುಖವಾಗಿದೆ. ಇಂತಹ ವಿಶಾಲವಾದ ದೃಷ್ಟಿಯಿಂದ ನಾವೆಲ್ಲರೂ ಈ ಗೋಷ್ಠಿಯನ್ನು ನೋಡಬೇಕಾಗಿದೆ.

ಮೊದಲ ಹೆಜ್ಜೆಯಾಗಿ ನಾವು ನಮ್ಮ ಉದ್ದೇಶಗಳನ್ನು ಸರಿಯಾಗಿ ಅರ್ಥಮಾಡಿಕೊಳ್ಳಬೇಕು. ಈ ವಿಚಾರಗೋಷ್ಠಿಯಿಂದ ನಾವು ಸಾಧಿಸುವುದಾದರೂ

ಏನು? ಪ್ರಕೃತ ನಮಗೆ ತೀವ್ರವಾಗಿ ಎದುರಾಗಿರುವ ಸಮಸ್ಯೆಗಳೇನು? ನಾವು ಎಲ್ಲಿಂದ ಪ್ರಾರಂಭಿಸಬೇಕು? ನಮ್ಮೆದುರಿಗೆ ನಿರ್ದಿಷ್ಟ ಯೋಜನೆಗಳನ್ನು ಇಟ್ಟುಕೊಳ್ಳದಿದ್ದರೆ, ಅದಕ್ಕಾಗಿ ನಿರ್ದಿಷ್ಟ ಕಾರ್ಯಕ್ರಮಗಳನ್ನು ರೂಪಿಸಿಕೊಳ್ಳದಿದ್ದರೆ ಮತ್ತು ಅವುಗಳನ್ನು ಕಾರ್ಯಗತಗೊಳಿಸಲು ಸರಿಯಾಗಿ ಪ್ರಯತ್ನಿಸದಿದ್ದರೆ, ನಾವು ಇದ್ದಲ್ಲಿಯೇ ಇರುತ್ತೇವೆ. ಅಂತಹ ಜಡತ್ವದಿಂದಾಗಿ, ಈ ವಿಚಾರಗೋಷ್ಠಿಯಿಂದಾಗಲೀ, ಇಂತಹ ಇನ್ನೆಷ್ಟೇ ಗೋಷ್ಠಿಗಳನ್ನು ನಡೆಸುವುದರಿಂದಗಲೀ ಯಾವ ಪ್ರಯೋಜನವೂ ಆಗುವುದಿಲ್ಲ.

ಮೊದಲನೆಯದಾಗಿ ನಾವು ನಮ್ಮ ನಮ್ಮ ಜವಾಬ್ದಾರಿಯನ್ನು ಅರ್ಥಮಾಡಿಕೊಳ್ಳಬೇಕು. ಎರಡನೆಯದಾಗಿ ನಮ್ಮ ಕಲ್ಯಾಣಕ್ಕಾಗಿ ಭಾರತದ ಸಂವಿಧಾನವು ಏನನ್ನು ನೀಡುತ್ತಿದೆ ಎನ್ನುವುದನ್ನು ಅರಿತುಕೊಳ್ಳಬೇಕು. ನಂತರ ಈ ಸಾಂವಿಧಾನಿಕ ವಿಧಿಗಳನ್ನು ಎಷ್ಟರ ಮಟ್ಟಿಗೆ ಕಾರ್ಯಗತಗೊಳಿಸಲಾಗಿದೆ ಎಂಬುದನ್ನು ವಿಶ್ಲೇಷಿಸಬೇಕು. ಇಲ್ಲಿಯವರೆಗಿನ ಸಾಧನೆಗಳು ತೃಪ್ತಿಕರವಾಗಿಲ್ಲದಿದ್ದರೆ, ಆ ಹಾದಿಯಲ್ಲಿರುವ ಅಡೆತಡೆಗಳೇನು ಮತ್ತು ಅದನ್ನು ನಿವಾರಿಸಲು ಮಾಡಬೇಕಾದ ಅಗತ್ಯವಾದ ಮಾರ್ಗೋಪಾಯಗಳೇನು ಎಂಬುದರ ಬಗ್ಗೆ ವಿಚಾರಮಾಡಬೇಕು. ಪರಿಸ್ಥಿತಿಯನ್ನು ಉತ್ತಮಗೊಳಿಸಲು ಕೇಂದ್ರ ಮತ್ತು ರಾಜ್ಯ ಸರಕಾರಗಳು ಕೈಗೊಂಡಿರುವ ವಿವಿಧ ಕ್ರಮಗಳ ಮೌಲ್ಯಮಾಪನಮಾಡಬೇಕು.

ಎಲ್ಲವೂ ತಮ್ಮ ಹಣೆಯ ಬರಹವೆನ್ನುವ ನಿವೃತ್ತಿಯ ಮನೋಭಾವದ ಕಾಲ ಎಂದೋ ಮುಗಿದುಹೋಯಿತು. ಇದೇ ನಮ್ಮನ್ನು ಈಗಲೂ ಮುಂದುವರೆಯಲು ಬಿಡದೆ ಹಿಂದಕ್ಕೇ ಎಳೆಯುತ್ತಿದೆ ಎಂಬುದನ್ನು ನಾವು ಈಗ ನಂಬುವುದಿಲ್ಲ. ನಮ್ಮ ಹಿಂದುಳಿದಿರುವಿಕೆಯಲ್ಲಿ ನಮ್ಮ ಪಾಲು ಎಷ್ಟು ಎಂಬುದನ್ನು ನಾವಿನ್ನೂ ಅರಿತಿಲ್ಲ. ನಮ್ಮ ಹಿಂದುಳಿದಿರುವಿಕೆಗೆ ನಮ್ಮ ಔದಾಸೀನ್ಯ, ಸೋಮಾರಿತನ ಮತ್ತು ಅಲಕ್ಷ್ಯಗಳು ನೀಡಿರುವ ಕಾಣಿಕೆ ಅಲ್ಪವಾದುದೇನಲ್ಲ. ನಮ್ಮನ್ನು ನಾವೇ ಪರೀಕ್ಷೆಗೊಳಪಡಿಸಿಕೊಂಡು ನಮ್ಮಲ್ಲಿರುವ ದೋಷಗಳನ್ನು ಪತ್ತೆಹಚ್ಚಿಕೊಳ್ಳುವುದಕ್ಕೆ ಹಿಂಜರಿಯುತ್ತಿದ್ದೇವೆ.

ಸ್ವಾತಂತ್ರ್ಯಪೂರ್ವದಲ್ಲಿ, ನಮ್ಮ ಅಂಧ ಹಾಗೂ ಸಂಪ್ರದಾಯವಾದೀ ಮನೋವೃತ್ತಿ, ಪರಂಪರಾಗತವಾಗಿ ಬಂದಿರುವ ಮುಂದುವರಿದ ವರ್ಗಗಳವರ

ನೀತಿಗಳಿಂದ ರಾಜಕೀಯ, ಶೈಕ್ಷಣಿಕ, ಸಾಮಾಜಿಕ ಮತ್ತು ಆರ್ಥಿಕ ನ್ಯಾಯಗಳನ್ನು ಪಡೆಯುವಲ್ಲಿ ನಮಗೆ ಮೋಸವಾಗಿದೆ. ಆದರೆ ಸ್ವಾತಂತ್ರ್ಯದ ನಂತರ ಈ ಪರಿಸ್ಥಿತಿಯು ನಿಧಾನವಾಗಿ ಬದಲಾಗುತ್ತಿದೆ.

ಸಂವಿಧಾನದ 14ನೆಯ ವಿಧಿಯ ಪ್ರಕಾರ 'ಸರಕಾರವು ಭಾರತ ದೇಶದಲ್ಲಿ ಕಾನೂನಿನ ಮುಂದೆ ಎಲ್ಲಾ ಪ್ರಜೆಗಳೂ ಸಮಾನರು ಮತ್ತು ಎಲ್ಲರಿಗೂ ಒಂದೇ ವಿಧವಾದ ರಕ್ಷಣೆಯನ್ನು ನೀಡುತ್ತದೆ ಮತ್ತು ಇದರಲ್ಲಿ ವ್ಯಕ್ತಿ ವ್ಯಕ್ತಿಗಳ ನಡುವೆ ಯಾವುದೇ ತಾರತಮ್ಯವನ್ನೂ ಮಾಡುವುದಿಲ್ಲ'.

ತನ್ನ ಪ್ರಸ್ತಾವನೆಯಲ್ಲಿ ಹೇಳಿರುವ ಹಾಗೆ, ನಮ್ಮ ಸಂವಿಧಾನವು ರಾಷ್ಟ್ರದ ಎಲ್ಲಾ ನಾಗರಿಕರಿಗೂ – "ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ನ್ಯಾಯವನ್ನು; ವಿಚಾರ, ಅಭಿವ್ಯಕ್ತಿ, ನಂಬಿಕೆ, ಧರ್ಮ ಮತ್ತು ಆರಾಧನೆಯ ಸ್ವಾತಂತ್ರ್ಯವನ್ನು; ತಾರತಮ್ಯವಿಲ್ಲದೆ ಸಮಾನಾವಕಾಶಗಳನ್ನು ನೀಡಿ; ವೈಯಕ್ತಿಕ ಘನತೆಗೆ ಕುಂದುಬಾರದಂತೆ ಸಹೋದರತ್ವವನ್ನು ಬೆಳೆಸುವ, ದೇಶದ ಏಕತೆಯನ್ನು ಕಾಪಾಡುವ" ಆಶ್ವಾಸನೆಯನ್ನು ನೀಡುತ್ತದೆ.

ನಮ್ಮಲ್ಲಿ ಕಾನೂನುಕಟ್ಟಳೆಗಳಿವೆ, ಆದರೆ ವಾಸ್ತವದಲ್ಲಿ, ಈ ದೇಶದಲ್ಲಿ ನಿಜವಾದ ನ್ಯಾಯದೊರಕಿದೆಯೇ? ಸ್ಥಾನಮಾನದಲ್ಲಿ ಸಮಾನತೆ ದೊರೆತಿದೆಯೇ? ಸಮಾನಾವಕಾಶಗಳು ಎಲ್ಲರಿಗೇ ತೆರೆದಿಡಲ್ಪಟ್ಟಿವೆಯೇ? ಪ್ರತಿಯೊಬ್ಬರಿಗೂ ಸಮಾನ ಘನತೆ ಸಿಕ್ಕಿದೆಯೇ?

ನ್ಯಾಯ, ಸ್ವಾತಂತ್ರ್ಯ ಮತ್ತು ಸಮಾನತೆಯ ವಿಷಯದಲ್ಲಿ ಮಹಾನ್ ವ್ಯಕ್ತಿಗಳು ಏನೆಂದು ಹೇಳಿದ್ದಾರೆಂದು ನೋಡೋಣ. 'ದೈವೀಗುಣವನ್ನುಳ್ಳ ನ್ಯಾಯದಷ್ಟು ದೊಡ್ಡದು ಈ ಪ್ರಪಂಚದಲ್ಲಿ ಯಾವುದೂ ಇಲ್ಲ' ಎಂದು ಅಡಿಸನ್ ನ್ಯಾಯದ ಬಗ್ಗೆಹೇಳಿದ್ದಾನೆ. ಮನುವಿನ ಪ್ರಕಾರ ನ್ಯಾಯವನ್ನು ನಾವು ನಾಶಮಾಡಿದರೆ, ಅದು ನಮ್ಮನ್ನು ನಾಶಪಡಿಸುತ್ತದೆ, ಮತ್ತು ನಾವು ಅದನ್ನು ಕಾಪಾಡಿದರೆ, ಅದು ನಮ್ಮನ್ನು ಕಾಪಾಡುತ್ತದೆ'.

"ಎಲ್ಲಾ ಮನುಷ್ಯರೂ ಹುಟ್ಟಿನಿಂದ ಒಂದೇ ರೀತಿಯವರಿರುವಂತೆ ಆ ಒಬ್ಬನೇ ಸೃಷ್ಟಿಕರ್ತ ಮಾಡಿದ್ದಾನೆ. ದೇವರಿಗೆ ಹತ್ತಿರದವರು ಎಂದುಕೊಂಡು

ನಾವು ನಮ್ಮನ್ನೇ ಮೋಸಗೊಳಿಸಿಕೊಳ್ಳುತ್ತಿದ್ದೇವೆ. ಶೂರನಾದ ರಾಜನಿಗಿಂತ ಬಡವ ಮತ್ತು ರೈತನೇ ದೇವರಿಗೆ ಅತ್ಯಂತ ಪ್ರಿಯರಾಗಿರುತ್ತಾರೆ" ಎಂದು ಪ್ಲೇಟೋ ಸಮಾನತೆಯ ಬಗ್ಗೆ ಹೇಳಿದ್ದಾನೆ.

"ಗುಲಾಮಗಿರಿಯಿರುವೆಡೆಯಲ್ಲಿ ಸ್ವಾತಂತ್ರ್ಯವು ಇರಲು ಸಾಧ್ಯವಿಲ್ಲ ಮತ್ತು ಸ್ವಾತಂತ್ರ್ಯವಿರುವ ಕಡೆ ಗುಲಾಮಗಿರಿಯು ಇರಲು ಎಡೆಯಿರುವುದಿಲ್ಲ" ಎಂದು ಅಬ್ರಹಾಂ ಲಿಂಕನ್ ಸ್ವಾತಂತ್ರ್ಯದ ಬಗ್ಗೆ ಹೇಳಿದ್ದಾನೆ.

ಎಲ್ಲಾ ಮಹಾನ್ ವ್ಯಕ್ತಿಗಳ ಆಲೋಚನೆಯೂ ಒಂದೇ ರೀತಿಯಲ್ಲಿರುತ್ತದೆ. ದೊಡ್ಡ ಕವಿಯೂ, ತತ್ತ್ವಜ್ಞಾನಿಯೂ ಆದ ಇಕ್ಬಾಲ್‌ನ ನುಡಿಗಳಲ್ಲಿ 'ಬಡತನವು ಗುಲಾಮಗಿರಿಯ ಕೊಡುಗೆ, ಗುಲಾಮಗಿರಿಯು ಬಡತನದ ಪರಿಣಾಮ'. ಇವೆರಡೂ ಒಂದು ವಿಷವೃತ್ತವನ್ನು ನಮ್ಮ ಸುತ್ತ ಹೆಣೆದಿರುತ್ತವೆ. ವಿದೇಶೀ ಆಕ್ರಮಣಗಳನ್ನು ಪ್ರಬಲವಾಗಿ ನಿರೋಧಿಸಿದ ಈ ದೇಶದ ಬಡಜನತೆಯ ನಾಶಕ್ಕೆ ಈ ವಿಷವೃತ್ತವೇ ಕಾರಣವಾಗಿದೆ. ಮೊಘಲರನ್ನು, ಡಚ್ಚರನ್ನು, ಫ್ರೆಂಚರನ್ನು ಮತ್ತು ಇಂಗ್ಲಿಷರನ್ನು ಈ ದೇಶದಿಂದ ಓಡಿಸಿದವರು ಈ ಬಡವರು, ಹರಿಜನರು ಮತ್ತು ಗಿರಿಜನರೇ. ನಮ್ಮ ಸಮಾಜದಲ್ಲಿರುವ ಅನಕ್ಷರತೆ, ಮೂಢನಂಬಿಕೆ, ದುರಾಸೆ, ಜಾತೀಯತೆ ಮತ್ತು ಅಸ್ಪೃಶ್ಯತೆಗಳನ್ನು ತೂತುಗಳಿರುವ ಕಾಲ್ಚೆಂಡಿನ ರಬ್ಬರ್ ಚೀಲಕ್ಕೆ ಹೋಲಿಸಬಹುದು. ಈ ತೂತುಗಳನ್ನು ಮುಚ್ಚುವ ತನಕ ಚೆಂಡಿನ ಚೀಲಕ್ಕೆ ಗಾಳಿಯನ್ನು ತುಂಬುವುದು ನಿಷ್ಫಲವಾದ ಕೆಲಸ. ಹಾಗೆಯೇ, ಸಮಾಜದಲ್ಲಿರುವ ಅನಕ್ಷರತೆ, ಮೂಢನಂಬಿಕೆ, ಜಾತೀಯತೆ, ಪ್ರಾಂತೀಯತೆ, ಭಾಷಾಂಧತೆ, ಮೊದಲಾದ ತೂತುಗಳನ್ನು ಮುಚ್ಚುವವರೆಗೆ, ಯಾವ ಅಭಿವೃದ್ಧಿಯನ್ನೂ ನಮಗೆ ಸಾಧಿಸಲು ಸಾಧ್ಯವಾಗುವುದಿಲ್ಲ. ಸ್ವಾರ್ಥರಾಹಿತ್ಯ, ತ್ಯಾಗ, ಬಡವರನ್ನು, ದುರ್ಬಲರನ್ನು ಮೇಲೆತ್ತಲು ಮಾಡುವ ಕಾರ್ಯದಲ್ಲಿನ ತತ್ಪರತೆ ಇವು ಭೂಮಿಯಲ್ಲಿನ ಎಲ್ಲಾ ಘನತೆ, ಮಹಿಮೆಗಳಿಗಿಂತ ಹೆಚ್ಚಿನ ಮೌಲ್ಯವನ್ನು ಹೊಂದಿವೆ ಮತ್ತು ಎಲ್ಲರಿಂದಲೂ ಗೌರವವನ್ನು ತಾನಾಗಿಯೇ ತಂದುಕೊಡುತ್ತದೆ ಎಂಬುದನ್ನು ಬುದ್ಧ, ಬಸವಣ್ಣ, ಅಂಬೇಡ್ಕರ್ ಮತ್ತು ಆಚಾರ್ಯ ವಿನೋಬ ಭಾವೆಯವರಂತಹ ಮಹಾನ್ ಪುರುಷರ ಜೀವನವನ್ನು ನೋಡಿದಾಗ ನಮಗೆ ತಿಳಿಯುತ್ತದೆ. ನಮ್ಮ ರಾಷ್ಟ್ರಾಧ್ಯಕ್ಷರು, ಪ್ರಧಾನ ಮಂತ್ರಿಗಳಂತಹ ದೊಡ್ಡ

ದೊಡ್ಡ ನಾಯಕರೆಲ್ಲರೂ ವಿನೋಬಾ ಭಾವೆಯವರ ಬಳಿಗೆ ಹೋಗಿ, ಬೇರೆ ಬೇರೆ ವಿಷಯಗಳ ಜೊತೆಗೇ, ಭೂದಾನ, ಸರ್ವೋದಯ ಮೊದಲಾದ ವಿಷಯಗಳಲ್ಲಿ ಅವರ ಸಲಹೆಯನ್ನು ಪಡೆಯುತ್ತಾರೆ.

ಎ. ಶಿಕ್ಷಣದ ಮಹತ್ವಕ್ಕಾಗಿ ಹರಿದ ಅಭಿವೃದ್ಧಿ ಪ್ರವಾಹಗಳು : ದಲಿತವರ್ಗಗಳವರ ಪ್ರಪ್ರಥಮ ಅಗತ್ಯವೆಂದರೆ ಆಹಾರ ಮತ್ತು ಶಿಕ್ಷಣ. ಅವರು ಸಭ್ಯ ಜೀವನವೊಂದನ್ನು ನಡೆಸಬೇಕಾದರೆ ಈ ಎರಡು ತುರ್ತು ಅಗತ್ಯಗಳನ್ನು ನಾವು ಪೂರೈಸಬೇಕು. ಎಲ್ಲರಿಗೂ ವ್ಯಕ್ತಿಗತ ಶಿಕ್ಷಣವನ್ನು ನೀಡಲು ಭೂಮಿಕೆಯನ್ನು ಸಿದ್ಧಪಡಿಸಲು ಆರೋಗ್ಯಪೂರ್ಣವಾದ ಸಾಮಾಜಿಕ ಪರಿಸರವನ್ನು ನಿರ್ಮಿಸಬೇಕು. ಇದಕ್ಕೆ ಮೊಟ್ಟಮೊದಲು ಆಗಬೇಕಾಗಿರುವ ಕೆಲಸವೆಂದರೆ ಪ್ರತಿವ್ಯಕ್ತಿಯಲ್ಲಿಯೂ ತಾನು ರಾಷ್ಟ್ರಕ್ಕಾಗಿ ಇದ್ದೇನೆಂಬ, ರಾಷ್ಟ್ರೀಯತೆಯ ಭಾವನೆಯನ್ನು ಮೂಡಿಸುವುದು. ಕೌಟುಂಬಿಕ ಹಾಗೂ ಶಾಲೆಯ ವಾತಾವರಣದಲ್ಲಿ ಬೆಳೆಯುತ್ತಿರುವ ಹಂತದಲ್ಲಿ ವ್ಯಕ್ತಿಯಲ್ಲಿ ಅವನ ದೇಶದ ಸಾಂಸ್ಕೃತಿಕ, ಆರ್ಥಿಕ ಮತ್ತು ಇವೆಲ್ಲಕ್ಕಿಂತಲೂ ಮಿಗಿಲಾಗಿ ರಾಜಕೀಯ ಅರಿವೆಯನ್ನು ಮನದಟ್ಟು ಮಾಡಿದರೆ, ಅದರಿಂದ – ಅದರಿಂದ ಮಾತ್ರ – ಅವನಲ್ಲಿ ತನ್ನ ದೇಶದ ಬಗ್ಗೆ ಹೆಮ್ಮೆ ಮೂಡಲು ಸಾಧ್ಯ. ನಾನು ಪ್ರೀತಿಸುವುದರ ಪರವಾಗಿ ಮಾತ್ರ ನಾನು ಹೋರಾಡಲು ಸಾಧ್ಯ. ನಾನು ಗೌರವಿಸುವುದನ್ನು ಮಾತ್ರ ಪ್ರೀತಿಸಲು ನನಗೆ ಸಾಧ್ಯ. ಗೌರವಿಸಬೇಕಾದರೆ, ಗೌರವಿಸಲ್ಪಡಬಹುದಾದ ವಸ್ತುವಿನ ಬಗ್ಗೆ ನನಗೆ ಸ್ವಲ್ಪವಾದರೂ ಗೊತ್ತಿರಬೇಕು. ಪ್ರತಿಯೊಬ್ಬ ವ್ಯಕ್ತಿಯೂ ತನ್ನ ದೇಶದ ಬಗ್ಗೆ ಹೆಮ್ಮೆಯನ್ನು ಹೊಂದಿರಬೇಕು ಮತ್ತು ಅದರ ಮೇಲಿನ ಪ್ರೀತಿಗಾಗಿ ಎಲ್ಲವನ್ನೂ ತ್ಯಾಗಮಾಡಲು ಸಿದ್ಧನಿರಬೇಕು. ನಮ್ಮ ದೇಶದ ಬಗ್ಗೆ ತಿಳಿದುಕೊಳ್ಳದೆ, ನಮ್ಮ ಪ್ರಜಾಪ್ರಭುತ್ವದ ಬಗ್ಗೆ ಅರಿತುಕೊಳ್ಳದೆ, ನಮ್ಮ ಹಕ್ಕು, ಬಾಧ್ಯತೆಗಳೇನು ಎಂಬುದರ ಜ್ಞಾನವಿಲ್ಲದೆ, ಇವೆಲ್ಲಕ್ಕಿಂತಲೂ ಹೆಚ್ಚಾಗಿ ಪ್ರಾಮಾಣಿಕವಾಗಿ ಮತ್ತುಕಷ್ಟಪಟ್ಟು ದುಡಿಯದೆ ದಲಿತವರ್ಗವನ್ನು ಮೇಲಕ್ಕೆ ಎತ್ತುತ್ತೇವೆಂಬುದು ಮಾನವರಿಗೆ ಅಸಾಧ್ಯವಾದ ಕೆಲಸ. ಸಂವಿಧಾನದ ಅಡಿಯಲ್ಲಿ ಅವರ ಸ್ಥಾನಮಾನಗಳು ಏನು ಮತ್ತು ಸಂವಿಧಾನವು ಅವರಿಗೆ ನೀಡಿರುವ ರಕ್ಷಣೆ ಮತ್ತು ರಕ್ಷಣಾಸಾಧನಗಳು ಯಾವುವು ಎಂಬುದನ್ನು ದಲಿತವರ್ಗಗಳವರಿಗೆ ತಿಳಿಯಹೇಳುವುದು ನಮ್ಮ ಕರ್ತವ್ಯ. ಸಹಿಷ್ಣುತೆ ಮತ್ತು ಸಹೋದರತ್ವವಿರುವ, ಒಬ್ಬರನ್ನೊಬ್ಬರು ಅರ್ಥಮಾಡಿಕೊಳ್ಳುವ, ಪರಸ್ಪರ

ಸಹಾಯವನ್ನು ನೀಡುವ ವಾತಾವರಣವನ್ನು ಸೃಷ್ಟಿಸುವುದು ನಮ್ಮ ಕರ್ತವ್ಯವಾಗಿರಬೇಕು.

ಪರಿಶಿಷ್ಟ ಜಾತಿ ಮತ್ತು ಪಂಗಡಗಳವರ ಎಲ್ಲಾ ಸಮಸ್ಯೆಗಳನ್ನೂ ಮೂರು ವರ್ಷದಿಂದ ಹದಿನೆಂಟು ವರ್ಷಗಳವರೆಗಿನ ಅವರ ಎಲ್ಲಾ ಮಕ್ಕಳಿಗೂ ಶಿಕ್ಷಣವನ್ನು ನೀಡುವುದರ ಮೂಲಕ ಬಗೆಹರಿಸಬಹುದು. ಹಾಗಾದಾಗ ಮಾತ್ರ ನಾವು ಈ ಜನರ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಯನ್ನು ಉತ್ತಮಗೊಳಿಸಬಹುದು. ನಿಮಗೆ ಗೊತ್ತಿರುವ ಹಾಗೆ, ಸಂವಿಧಾನವು ಕಡ್ಡಾಯ ಶಿಕ್ಷಣವನ್ನು ನೀಡಲು ಅವಕಾಶವನ್ನು ಮಾಡಿಕೊಟ್ಟಿದೆ. ಇವಲ್ಲದೆ ಹಲವಾರು ವಿಶೇಷ ರಕ್ಷಣಾಸಾಧನಗಳನ್ನು ಮತ್ತು ಸಂರಕ್ಷಣೆಯನ್ನು ಸಂವಿಧಾನವು ಕೊಟ್ಟಿದೆ. ಇವೆಲ್ಲವೂ ಜಾರಿಯಲ್ಲಿರುವವರೆಗೆ, ನೀವು ವಿಶೇಷ ಶ್ರದ್ಧೆಯನ್ನು ಮತ್ತು ಲಕ್ಷ್ಯವನ್ನು ಕೊಟ್ಟು ಅವುಗಳನ್ನು ಅಭ್ಯಸಿಸಿ, ಅರ್ಥಮಾಡಿಕೊಂಡು, ನಂತರ ಸರಕಾರಗಳ ಮೂಲಕ ಅವೆಲ್ಲವುಗಳ ಸಂಪೂರ್ಣ ಉಪಯೋಗವನ್ನು ಪಡೆದುಕೊಳ್ಳಲು ನೀವು ಪ್ರಯತ್ನ ಪಡಬೇಕು.ಯಾವುದೇ ಕಾರಣದಿಂದಲಾದರೂ ಈ ಸೌಲಭ್ಯಗಳನ್ನು ಕಾರ್ಯಗತಗೊಳಿಸದಿದ್ದರೆ ಕೇವಲ ಸಂವಿಧಾನದ 'ಹಕ್ಕುಗಳ ಅಧ್ಯಾಯ'ದಲ್ಲಿ ಕುಳಿತಿರುವಷ್ಟರಿಂದ ಅವುಗಳು ತಮ್ಮ ಉದ್ದೇಶವನ್ನು ಸಾಧಿಸುವುದಿಲ್ಲ ಎಂದು ನನ್ನ ಭಾವನೆ. ಮುಂದಿನ ಒಂಬತ್ತು ವರ್ಷಗಳ ಕಾಲದವರೆಗೆ ಮಾತ್ರ ಇವು ಜಾರಿಯಲ್ಲಿರುವುದರಿಂದ, ಅಷ್ಟರೊಳಗೆ ಅವುಗಳನ್ನು ಸಂಪೂರ್ಣವಾಗಿ ಕಾರ್ಯಗತವಾಗುವಂತೆ ನಾವು ನೋಡಿಕೊಳ್ಳಬೇಕು.

ಹಲವಾರು ಮಹಾನ್ ನಾಯಕರು ಮತ್ತು ಸಮಾಜಸುಧಾರಕರು ಪ್ರಯತ್ನಪಡುತ್ತಿದ್ದಾಗ್ಯೂ, ಹರಿಜನ ಮತ್ತು ಗಿರಿಜನರ ಪರಿಸ್ಥಿತಿಯಲ್ಲಿ ಅಷ್ಟೇನೂ ಮಹತ್ತರವಾದ ಸುಧಾರಣೆಗಳು ಕಂಡುಬರುತ್ತಿಲ್ಲ. ಇದಕ್ಕೆ ಕಾರಣವಾದರೂ ಏನು? ಮೂಲತಃ ಇದಕ್ಕೆ ಅನಕ್ಷರತೆಯೇ ಕಾರಣ. ಶಿಕ್ಷಣವೆನ್ನುವುದು ಅಮೂಲ್ಯವಾದ ರತ್ನ, ಬೆಲೆಕಟ್ಟಲಾಗದ ಆಸ್ತಿ. ಎಷ್ಟೇ ಕಷ್ಟವಾದರೂ ಅದನ್ನು ಪಡೆಯಲೇ ಬೇಕು. ಬೇರೆ ಯಾವುದೇ ಸಂಪತ್ತಾದರೂ ಕಳವಾಗಬಹುದು, ಅಥವಾ ನಾವೇ ಕಳೆದುಕೊಳ್ಳಬಹುದು. ನಾವು ಗಳಿಸಿದ ಶಿಕ್ಷಣವನ್ನು ಯಾರೂ ನಮ್ಮಿಂದ ಕಿತ್ತುಕೊಳ್ಳಲಾರರು ಮತ್ತು ನಾಶಮಾಡಲಾರರು. ಕಾಲವು ಬಂದಾಗ

ಅನು ತನ್ನ ಫಲವನ್ನು ನಮಗೆ ಕೊಡುತ್ತದೆ. ರಸ್ಕಿನ್‌ನ ಪ್ರಕಾರ, 'ಶಿಕ್ಷಣವು ಮಾನವನನ್ನು ಉತ್ತಮ ಗುರಿಯತ್ತ ಕೊಂಡೊಯ್ಯುತ್ತದೆ ಮತ್ತು ಅವನಿಗೆ ಅತ್ಯುತ್ತಮವಾದ ಫಲವನ್ನು ನೀಡುತ್ತದೆ. ಗುರಿ ಮತ್ತು ಫಲ ಇವೆರಡನ್ನೂ ಒಟ್ಟಿಗೇ ಮತ್ತು ಒಂದೇ ಸಾಧನದಿಂದ ಗಳಿಸಬಹುದು. ವ್ಯಕ್ತಿಗಳನ್ನು ಸಂತುಷ್ಟಗೊಳಿಸುವ ಶಿಕ್ಷಣವು ಅವರು ಬೇರೆಯವರಿಗೂ ಅಷ್ಟೇ ಸಂತುಷ್ಟಿಯನ್ನು ತಂದುಕೊಂಡುವಂತಹ ಸೇವೆಯನ್ನು ನೀಡಲು ಅವರನ್ನು ಸಿದ್ಧಗೊಳಿಸುತ್ತದೆ.' ಎಲ್ಲಾ ಕಾಲದ, ಎಲ್ಲಾ ದೇಶದ ವಿಚಾರವಂತರಾದ ಜನರು ಶಿಕ್ಷಣಕ್ಕೆ ಹೆಚ್ಚಿನ ಮಹತ್ವವನ್ನು ನೀಡಿದ್ದಾರೆ. ಈ ಕಾರಣದಿಂದ, ನಾನು ತಮ್ಮಲ್ಲಿ ವಿನಂತಿಸಿಕೊಳ್ಳುವುದೇನೆಂದರೆ, ನಿಮ್ಮ ಮಕ್ಕಳಿಗೆ ವಿದ್ಯಾಭ್ಯಾಸವನ್ನು ಕೊಡಿ, ಮತ್ತು ದುರ್ಬಲವರ್ಗದವರ ಮಕ್ಕಳನ್ನೂ ವಿದ್ಯಾವಂತರನ್ನಾಗಿ ಮಾಡಿ. ಇದಕ್ಕಾಗಿ ಎಂತಹ ತ್ಯಾಗಮಾಡಬೇಕಾದರೂ, ನೀವು ಅದನ್ನು ಮಾಡಲೇಬೇಕು. ಮಕ್ಕಳು ದೇಶದ ನಿಜವಾದ ಆಸ್ತಿ. ಅವರು ನಮ್ಮ ಸಮಾಜದ ತಳಪಾಯ, ನಮ್ಮ ಜೀವನದ ಊರುಗೋಲು. ವಾಸ್ತವವಾಗಿ, ಅವರು ನಮಗೆ ಎಲ್ಲವೂ ಆಗಿರುತ್ತಾರೆ. ಆದ್ದರಿಂದ ಅವರನ್ನು ಚೆನ್ನಾಗಿ ನೋಡಿಕೊಳ್ಳಿ, ಅವರನ್ನು ಭೂಮಿಯ ಮೇಲಿರುವ ದೇವರು ಎಂಬ ಭಾವನೆಯಿಂದ ನೋಡಿಕೊಳ್ಳುವುದಕ್ಕೆ ಹಿಂದೆಮುಂದೆ ನೋಡಬೇಡಿ.

ಸಂವಿಧಾನವು ದುರ್ಬಲವರ್ಗಗಳವರಿಗೆ, ಅದರಲ್ಲೂ ಹರಿಜನ ಮತ್ತು ಗಿರಿಜನರಿಗೆ ನೀಡಿರುವ ಸಂರಕ್ಷಣೆಯ ಸೌಲಭ್ಯಗಳನ್ನೆಲ್ಲಾ ನೀವು ಅರಿತಿರಲಾರಿರಿ. ನಮ್ಮಲ್ಲಿ ಪ್ರತಿಯೊಬ್ಬರೂ ಸಂವಿಧಾನವು ನಮಗೆ ಏನನ್ನು ನೀಡಿದೆ ಎಂದು ಅರಿತುಕೊಳ್ಳಬೇಕು ಎಂಬ ವಿಷಯವನ್ನು ನಾನು ಒತ್ತಿ ಹೇಳುತ್ತೇನೆ. ಸಂವಿಧಾನದ 338(1)ನೆಯ ವಿಧಿಯ ಪ್ರಕಾರ – "ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳವರಿಗಾಗಿ ರಾಷ್ಟ್ರಪತಿಯಿಂದ ನೇಮಿಸಲ್ಪಟ್ಟ ವಿಶೇಷಾಧಿಕಾರಿಯೊಬ್ಬನು ಇರತಕ್ಕದ್ದು. ಹಾಗೆ ನೇಮಿಸಲ್ಪಟ್ಟ ವಿಶೇಷಾಧಿಕಾರಿಯು, ಸಂವಿಧಾನವು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳವರಿಗೆ ಕೊಡಮಾಡಿರುವ ವಿಶೇಷ ಸೌಲಭ್ಯಗಳಿಗೆ ಸಂಬಂಧಿಸಿದ ಎಲ್ಲಾ ವಿಷಯಗಳನ್ನೂ ತನಿಖೆಮಾಡಿ, ರಾಷ್ಟ್ರಪತಿಗಳು ಆತನಿಗೆ ಸೂಚಿಸುವ ನಿಯತ ಕಾಲಾವಧಿಯಲ್ಲಿ ರಾಷ್ಟ್ರಪತಿಗಳಿಗೆ ವರದಿಯನ್ನು ಸಲ್ಲಿಸುವುದು ಆತನ ಕರ್ತವ್ಯವಾಗಿರುತ್ತದೆ ಹಾಗೂ ಅಂತಹ ವರದಿಯನ್ನು ಸಂಸತ್ತಿನ ಎರಡೂ

ಸದನಗಳಲ್ಲಿ ಮಂಡಿಸಬೇಕೆಂದು ಆದೇಶವನ್ನು ನೀಡಿ, ಅದನ್ನು ಮಂಡಿಸುವಂತೆ ಮಾಡಬಹುದು ಎಂದು 338 (2)ನೆಯ ವಿಧಿಯು ಅವಕಾಶವನ್ನು ಕಲ್ಪಿಸಿಕೊಟ್ಟಿದೆ’.

ಈ ವಿಧಿಗಳಿಗೆ ಅನುಸಾರವಾಗಿ, ಭಾರತದ ರಾಷ್ಟ್ರಪತಿಗಳು ಸಂವಿಧಾನವು ಕೊಡಮಾಡಿರುವ ಸೌಲಭ್ಯಗಳ ವಿಷಯವನ್ನು ಪರಿಶೀಲಿಸಿ ತಮಗೆ ವರದಿ ಮಾಡುವ ಸಲುವಾಗಿ ಒಬ್ಬ ವಿಶೇಷಾಧಿಕಾರಿಯನ್ನು ‘ಪರಿಶಿಷ್ಟ ಜಾತಿಗಳ ಮತ್ತು ಪರಿಶಿಷ್ಟ ಪಂಗಡಗಳ ಆಯುಕ್ತ’ರೆಂದು ನೇಮಿಸಿದ್ದಾರೆ.

ಪರಿಶಿಷ್ಟ ಜಾತಿಗಳ ಮತ್ತು ಪರಿಶಿಷ್ಟ ಪಂಗಡಗಳ ಆಯುಕ್ತರ ಇತ್ತೀಚಿನ, ಅಂದರೆ 1958–59ನೆಯ ಸಾಲಿನ, ವರದಿಯ ಪ್ರಕಾರ, ಇತರ ಹಲವು ವಿಷಯಗಳ ಜೊತೆಯಲ್ಲಿ ಅವರು ಹೀಗೆ ವರದಿಮಾಡಿದ್ದಾರೆ: ಮೆಟ್ರಿಕ್ ನಂತರದ ಪರಿಶಿಷ್ಟ ಜಾತಿಗಳ ಮತ್ತು ಪರಿಶಿಷ್ಟ ಪಂಗಡಗಳ ಅರ್ಹ ವಿದ್ಯಾರ್ಥಿಗಳಿಗೆ ನೀಡಬೇಕಾದ ವಿದ್ಯಾರ್ಥಿವೇತನಕ್ಕಾಗಿ ಕೆಲವು ರಾಜ್ಯಗಳಿಗೆ ಅಧಿಕ ಹಣದ ಅಗತ್ಯವಿದೆ. ಆದರೆ ಕೆಲವು ರಾಜ್ಯಗಳಿಗೆಇದೇ ಉದ್ದೇಶಕ್ಕಾಗಿ ತಮಗೆ ನೀಡಿರುವ ಹಣದ ಸಂಪೂರ್ಣ ವಿತರಣೆಯನ್ನು ಮಾಡಲು ಕಾರಣಾಂತರಗಳಿಂದ ಸಾಧ್ಯವಾಗಿಲ್ಲ.

ದೇಶದ ಎಲ್ಲಾ ರಾಜ್ಯಗಳೂ ವಿದ್ಯಾರ್ಥಿವೇತನವನ್ನು ನೀಡಲು ತಮಗೆ ಅಗತ್ಯವಾಗಿರುವಷ್ಟು ಹಣವನ್ನು ಪಡೆಯಲು ಮತ್ತು ಹಾಗೆ ಹಣವನ್ನು ಪಡೆದ ಮೇಲೆ ಇನ್ನು ಮುಂದೆ ಅದನ್ನು ಸಂಪೂರ್ಣವಾಗಿ ಉಪಯೋಗಿಸಿಕೊಳ್ಳಬೇಕು ಎಂದು ರಾಜ್ಯಗಳನ್ನು ಒತ್ತಾಯಪಡಿಸಲು ಸೂಕ್ತ ಕಾರ್ಯಸೂಚಿಯನ್ನು ಈ ವಿಚಾರಗೋಷ್ಠಿಯು, ತನಗೆ ಸರಿದೋರಿದ ರೀತಿಯಲ್ಲಿ, ರಚಿಸಬೇಕು.

ವಾಸ್ತವಾಂಶಗಳನ್ನು ನೀಡುವುದರ ಜೊತೆಗೆ, ಆಯುಕ್ತರು ಹಲವಾರು ಶಿಫಾರಸುಗಳನ್ನು ಮಾಡಿದ್ದಾರೆ. ಉದಾ. ಪರಿಶಿಷ್ಟ ಜಾತಿಗಳ ಮತ್ತು ಪರಿಶಿಷ್ಟ ಪಂಗಡಗಳವರ ವಿದ್ಯಾಭ್ಯಾಸಕ್ಕೆ ಅಗತ್ಯವಾದ ಹಲವು ಸೌಲಭ್ಯಗಳನ್ನು ಒದಗಿಸುವುದು, ದೇಶದ ಒಳಗೆ ಮತ್ತು ವಿದೇಶಗಳಲ್ಲಿ ವಿದ್ಯಾಭ್ಯಾಸವನ್ನು ಮಾಡುತ್ತಿರುವವರಿಗೆ ವಿದ್ಯಾರ್ಥಿವೇತನಗಳನ್ನು ನೀಡುವುದು, ಪಬ್ಲಿಕ್ ಶಾಲೆಗಳಲ್ಲಿ ಶಿಕ್ಷಣವನ್ನು ಪಡೆಯಲು ನೆರವು ನೀಡುವುದು, ಶುಲ್ಕದಲ್ಲಿ ವಿನಾಯತಿ, ವಿದ್ಯಾರ್ಥಿನಿಲಯಗಳನ್ನು ಮತ್ತು ತಾಂತ್ರಿಕ ತರಬೇತಿ ಶಾಲೆಗಳನ್ನು ಪ್ರಾರಂಭಿಸುವುದು, ಸಾಮಾನ್ಯ ಶಾಲೆಗಳಲ್ಲಿ ಮತ್ತು ತಾಂತ್ರಿಕ ಶಾಲೆಗಳಲ್ಲಿ ಸ್ಥಾನಗಳನ್ನು ಮೀಸಲಿಡುವುದು, ಶಾಲಾ ದಾಖಲಾತಿಗೆ

ಅಗತ್ಯವೆಂದು ಈಗ ನಿಗದಿಮಾಡಿರುವ ಮಟ್ಟವನ್ನು ಕಡಿಮೆಮಾಡುವುದು, ಶಾಲಾ ಕಾಲೇಜುಗಳಲ್ಲಿ ಪ್ರವೇಶಕ್ಕೆ ನಿಗದಿತವಾಗಿರುವ ವಯೋಮಿತಿಯನ್ನು ಹೆಚ್ಚಿಸುವುದು, ಕೆಲವೊಂದು ನಿರ್ದಿಷ್ಟ ಸ್ಥಳಗಳಲ್ಲಿ ಕೆಲಸಮಾಡುತ್ತಿರುವ ಶಿಕ್ಷಕರಿಗೆ ಅಲ್ಪಕಾಲಾವಧಿಯ ತರಬೇತಿಯನ್ನು ನೀಡುವುದು, ಇತ್ಯಾದಿ.

ನಮ್ಮ ಸಂವಿಧಾನವು ತನ್ನ 46ನೆಯ ವಿಧಿಯ ಅಡಿಯಲ್ಲಿ, ಪರಿಶಿಷ್ಟ ಜಾತಿಗಳವರ, ಪರಿಶಿಷ್ಟ ಪಂಗಡಗಳವರ ಹಾಗೂ ಇತರ ದುರ್ಬಲ ವರ್ಗಗಳವರ ಶೈಕ್ಷಣಿಕ ಹಾಗೂ ಆರ್ಥಿಕ ಹಿತಾಸಕ್ತಿಗಳನ್ನು ರಕ್ಷಿಸಲು ಅವಕಾಶವನ್ನು ನೀಡಿದೆ. ಈ ವಿಧಿಯು ಹೀಗಿದೆ:

"ದುರ್ಬಲವರ್ಗದವರ, ಅದರಲ್ಲಿಯೂ ವಿಶೇಷವಾಗಿ ಪರಿಶಿಷ್ಟ ಜಾತಿಗಳವರ ಮತ್ತು ಪರಿಶಿಷ್ಟ ಪಂಗಡಗಳವರ, ಶೈಕ್ಷಣಿಕ ಮತ್ತು ಆರ್ಥಿಕ ಹಿತಾಸಕ್ತಿಗಳ ಮೇಲ್ಮೆಯನ್ನು ಸರಕಾರವು ವಿಶೇಷ ಆಸಕ್ತಿಯಿಂದ ಸಾಧಿಸಲು ನೆರವಾಗಬೇಕು ಮತ್ತು ಅವರು ಸಾಮಾಜಿಕ ಅನ್ಯಾಯ ಮತ್ತು ಎಲ್ಲಾ ವಿಧವಾದ ಶೋಷಣೆಗಳಿಂದ ಮುಕ್ತರಾಗಿರುವಂತೆ ನೋಡಿಕೊಳ್ಳಬೇಕು".

ಆದರೆ, ಈ ಎಲ್ಲಾ ಸಾಂವಿಧಾನಿಕ ಸೌಲಭ್ಯಗಳು ಮತ್ತು ರಕ್ಷಣೆಗಳು ಆಚರಣೆಗೆ ಇಳಿದಿವೆಯೇ?

ಬಿ. ಮಕ್ಕಳ ಶಿಕ್ಷಣದ ಮಹತ್ವದ ಬಗೆಗಿನ ನಿಲುವುಗಳು : ನಾವು ಇಂದು ಸಮಾಜದಲ್ಲಿ ಕಾಣುತ್ತಿರುವ ಅಸಮಾನತೆಯನ್ನು ತೊಲಗಿಸಬೇಕಾದರೆ, ಮೊದಲು ನಾವು ನಮ್ಮ ಮಕ್ಕಳಿಗೆ ಶಿಕ್ಷಣವನ್ನು ನೀಡುವುದು ಅತ್ಯಗತ್ಯ. ಏಕೆಂದರೆ, ಪ್ರತಿ ಮಗುವೂ ಈ ಪ್ರಪಂಚದಲ್ಲಿ ಯಾವುದೇ ವಸ್ತುವಿಗಿಂತ ಅತ್ಯಂತ ಮೌಲ್ಯಯುತವಾದದ್ದಾಗಿದೆ. ಅಣುವಿನ ರಹಸ್ಯವನ್ನು ಅದರಲ್ಲಿ ಹುದುಗಿರುವ ಪ್ರಚಂಡ ಶಕ್ತಿಯನ್ನು ಕಂಡುಹಿಡಿದದ್ದು ಮನುಷ್ಯನ ಬುದ್ಧಿಶಕ್ತಿಯಲ್ಲವೇ? ಹರಿಜನ, ಗಿರಿಜನರ ಮಕ್ಕಳಲ್ಲಿ ಅನರ್ಘ್ಯ ರತ್ನಗಳು ಹುದುಗಿರಬಹುದು ಮತ್ತು ಅವರು ಮುಂದೊಂದು ದಿನ ಐನ್‌ಸ್ಟಿನ್‌ನಂತಹ ಮಹಾನ್ ವಿಜ್ಞಾನಿಗಳಾಗಬಹುದು, ಬುದ್ಧ, ಬಸವಣ್ಣ,ಗಾಂಧೀಜಿಯಂತಹ ಮಹಾನ್ ಸಮಾಜಸುಧಾರಕರಾಗಬಹುದು. ಈ ಸತ್ಯವನ್ನು ನೀವು ಅರಿತುಕೊಂಡು, ನಿಮ್ಮ ಮಗುವು ತನ್ನತನವನ್ನು ಕಂಡುಕೊಳ್ಳುವುದಕ್ಕೆ ಅಗತ್ಯವಾದ ಅವಕಾಶಗಳನ್ನು ನೀಡುತ್ತಿರುವಿರಾ? ಸರಕಾರವು

ನಿಮಗೆ ನೀಡುತ್ತಿರುವ ಸವಲತ್ತುಗಳನ್ನೇ ನೀವು ಸಂಪೂರ್ಣವಾಗಿ ಬಳಸಿಕೊಳ್ಳುತ್ತಿಲ್ಲ. ಇದರಲ್ಲಿ ನೀವೇ ತಪ್ಪಿತಸ್ಥರು. ನಿಮಗೆ ದೊರಕುವ ಎಲ್ಲಾ ಸೌಲಭ್ಯಗಳ ಉತ್ತಮ ಪ್ರಯೋಜನವನ್ನು ಪಡೆದುಕೊಳ್ಳಿ. ನಾನು ಲೋಯರ್ ಸೆಕೆಂಡರಿ ಪರೀಕ್ಷೆಯಲ್ಲಿ ತೇರ್ಗಡೆಯಾದ ಮೇಲೆ, ನನ್ನ ತಂದೆಯ ವೃತ್ತಿಯನ್ನೇ ಅನುಸರಿಸಬೇಕೆಂದು ಅವರು ಬಯಸಿದರು. ಏಕೆಂದರೆ ಅವರು ಗಳಿಸುತ್ತಿದ್ದುದಕ್ಕಿಂತ ಹೆಚ್ಚಿಗೆ ಗಳಿಸುವ ಸಾಮರ್ಥ್ಯವನ್ನು ನನ್ನ ತಂದೆ ನನ್ನಲ್ಲಿ ಕಂಡುಕೊಂಡಿದ್ದು, ನಾನು ಅವರ ವೃತ್ತಿಯನ್ನೇ ಅನುಸರಿಸಿದರೆ ತಮ್ಮ ಆರ್ಥಿಕ ಬವಣೆಯಿಂದ ಸ್ವಲ್ಪವಾದರೂ ಮುಕ್ತಿ ದೊರಕುತ್ತದೆ ಎಂದು ಅವರು ಯೋಚಿಸುತ್ತಿದ್ದರು. ಆದರೆ, ನಿರಕ್ಷರಕುಕ್ಷಿಯಾದರೂ ದೂರದೃಷ್ಟಿಯಿದ್ದ ನನ್ನ ತಾಯಿ, ನಾನು ಪಕ್ಕದ ಮನೆಯ ಹುಡುಗನಷ್ಟಾದರೂ ಓದಬೇಕೆಂದು ಒತ್ತಾಯಮಾಡುತ್ತಿದ್ದರು. ತನ್ನ ಪುಡಿಗಾಸು ಸಂಪಾದನೆಯಿಂದಲೇ ನನ್ನ ಓದಿನ ಖರ್ಚನ್ನು ಸರಿದೂಗಿಸಲು ಆಕೆ ತಯಾರಿದ್ದರು. ನನ್ನ ತಾಯಿಯ ತ್ಯಾಗ ಮತ್ತು ವಿವೇಕದ ದೂರದೃಷ್ಟಿಯಿಂದಾಗಿ ನಾನು ವಿದ್ಯಾವಂತನಾದೆ, ಅದಿಲ್ಲದಿದ್ದರೆ ನಾನು ಇಂದು ಏನಾಗಿದ್ದೇನೆಯೋ ಅದು ಆಗಲು ನನಗೆ ಸಾಧ್ಯವಾಗುತ್ತಿರಲಿಲ್ಲ.

ಹರಿಜನ, ಗಿರಿಜನ ಹಾಗೂ ಇತರ ಹಿಂದುಳಿದ ವರ್ಗದವರ ಕಲ್ಯಾಣಕ್ಕಾಗಿ ಮತ್ತು ಅಭಿವೃದ್ಧಿಗಾಗಿ ನಾನು ಶಿಕ್ಷಣಕ್ಕೆ ಇಷ್ಟೆಲ್ಲಾ ಪ್ರಾಮುಖ್ಯವನ್ನು ಕೊಟ್ಟು ಹೇಳುತ್ತಿದ್ದೇನೆ. ಈ ವರ್ಗಗಳ ಪ್ರತಿಯೊಬ್ಬರೂ ಸರಕಾರವು ನೀಡುತ್ತಿರುವ ಎಲ್ಲಾ ಸೌಲಭ್ಯಗಳನ್ನೂ, ರಿಯಾಯತಿಗಳನ್ನೂ ಬಳಸಿಕೊಂಡು ತಮ್ಮ ಮಕ್ಕಳಿಗೆ ವಿದ್ಯಾಭ್ಯಾಸವನ್ನು ನೀಡುವ ಜವಾಬ್ದಾರಿಯನ್ನು ತಮ್ಮ ಪವಿತ್ರ ಕರ್ತವ್ಯವೆಂದು ಭಾವಿಸಬೇಕು.

ಸಿ. ಆರ್ಥಿಕ ಅಭಿವೃದ್ಧಿ ಮತ್ತು ದುಡಿಮೆಯ ಗೌರವ ಎಂಬ ನಂಬಿಕೆ : ನನ್ನ ದೃಷ್ಟಿಯಲ್ಲಿ ಶಿಕ್ಷಣದ ನಂತರ ಮಹತ್ವವನ್ನು ಪಡೆಯುವ ವಿಷಯವೆಂದರೆ ಆರ್ಥಿಕ ಅಭಿವೃದ್ಧಿ. ಮಾನವನ ಸ್ವಾರ್ಥ ಮತ್ತು ದುರಾಸೆ ಹಲವಾರು ಸಾಮಾಜಿಕ ಮತ್ತು ಆರ್ಥಿಕ ಕಾಯಿಲೆಗಳಿಗೆ ಕಾರಣವಾಗಿವೆ. ಕೈಗಾರಿಕೆಗಳಲ್ಲಿ ದುಡಿಯುವವರು ಸಂಪಾದಿಸುವಷ್ಟು ಹಣವನ್ನು ಕೃಷಿಯಲ್ಲಿ ತೊಡಗಿಕೊಂಡಿರುವ ನೀವು ಗಳಿಸಲಾರಿರಿ. ಆಹಾರೋತ್ಪಾದನೆಗಾಗಿ ತಮ್ಮ ರಕ್ತ ಮತ್ತು ಬೆವರನ್ನು ಬಸಿಯುವ

ನೇಗಿಲೊಡೆಯರಿಗೆ ಅವರ ಸ್ವಂತ ಅಗತ್ಯವನ್ನು ಪೂರೈಸುವಷ್ಟು ಆಹಾರವೂ ದೊರಕದಿರುವುದು ಎಂತಹ ವಿರೋಧಾಭಾಸ?

ಪ್ರಪಂಚದೆಲ್ಲೆಡೆ ದುಡಿಮೆಯು ಗೌರವಕ್ಕೆ ಪಾತ್ರವಾಗಿದ್ದರೆ, ನಮ್ಮ ದೇಶದಲ್ಲಿ ಕಾರ್ಮಿಕರು ಅದರಲ್ಲೂ ಮೈಬಗ್ಗಿಸಿ ದುಡಿಯುವವರು ಎಂದರೆ ಎಲ್ಲರಿಗೂ ಒಂದು ಬಗೆಯ ತಾತ್ಸಾರ. ದುಡಿಮೆಯ ಗೌರವವು ಕಾಗದದ ಮೇಲಿನ ಘೋಷಣೆಯಾಗಷ್ಟೇ ನಮ್ಮಲ್ಲಿ ಉಳಿದಿದೆ. ಪ್ರೋತ್ಸಾಹವನ್ನು ನೀಡದಿದ್ದರೂ, ಸೋಮಾರಿತನವನ್ನು ನಾವು ಸಹಿಸಿಕೊಳ್ಳುತ್ತೇವೆ. ಸಮಾನ ಕೆಲಸಕ್ಕೆ ಸಮಾನ ವೇತನವೆಂದು ಸಂವಿಧಾನದ 39 (ಡಿ) ವಿಧಿಯು ವಿಧಿಸಿದರೂ, ಗಂಡಸರು ಮತ್ತು ಹೆಂಗಸರ ನಡುವೆ ಇದನ್ನು ನಾವು ಪಾಲಿಸುತ್ತಿಲ್ಲ. ಸಮಾನ ವೇತನ ಹೋಗಲಿ, ಕೃಷಿಕಾರ್ಮಿಕರಿಗೆ ನಿಗದಿಗೊಳಿಸಿರುವ ಕನಿಷ್ಠ ವೇತನವೂ, ಬಿಡತಿಯಿಲ್ಲದೆ ಗಳಿಸುವ ಅವಕಾಶವೂ ದೊರೆಯುತ್ತಿಲ್ಲ. ಕೈಗಾರಿಕೆಗಳಲ್ಲಿ ದುಡಿಯುವವರಿಗೆ, ವೈದ್ಯಕೀಯ ನೆರವು, ಭವಿಷ್ಯ ನಿಧಿ ಯೋಜನೆ, ವಿಮಾಯೋಜನೆ, ಗೃಹಭತ್ಯೆ, ಮತ್ತಿತರ ಭತ್ಯೆ, ಇವುಗಳಲ್ಲದೆ ನೌಕರಿಯಲ್ಲಿನ ಅವಿಚ್ಛಿನ್ನತೆ ಮತ್ತು ಅಪಘಾತಗಳ ವಿರುದ್ಧ ಪರಿಹಾರ – ಈ ಎಲ್ಲಾ ಸೌಲಭ್ಯಗಳಿವೆ. ಅವನ ದುಡಿಮೆಯ ಅವಧಿಯು ನಿಗದಿತವಾಗಿರುತ್ತದೆ. ಹೆಚ್ಚಿನ ವೇಳೆ ದುಡಿದರೆ, ಅವನಿಗೆ ಅದಕ್ಕೆ ಪ್ರತ್ಯೇಕ ಭತ್ಯೆಸಿಗುತ್ತದೆ. ಆದರೆ, ಕೃಷಿಕಾರ್ಮಿಕರ ಪಾಡು ಏನಾಗಿದೆ? ಅವರು ಬೆಳಗಿನಿಂದ ಸಂಜೆಯವರೆಗೂ ದುಡಿದರೂ, ಅವರಿಗೆ ಸಿಗುವುದು ಅವರ ಎರಡು ಹೊತ್ತಿನ ಊಟಕ್ಕೂ ಸಾಲದಷ್ಟಿರುತ್ತದೆ. ಸಂವಿಧಾನದ 23ನೆಯ ವಿಧಿಯು ಮಾನವರ ವಿಕ್ರಯವನ್ನು ಮತ್ತು ಎಲ್ಲಾ ವಿಧದ ಬಲವಂತದ ದುಡಿಮೆಯನ್ನು ನಿಷೇಧಿಸಿದ್ದರೂ, ಪರಿಸ್ಥಿತಿಯಲ್ಲಿ ಯಾವ ಸುಧಾರಣೆಯೂ ಕಂಡುಬರದಿರುವುದು ದುರ್ದೈವದ ಸಂಗತಿಯಾಗಿದೆ. ಅವರಿಗೆ ಸಿಗುತ್ತಿರುವ ವೇತನವೂ ಅತ್ಯಲ್ಪ. ಆದರೆ, ರಾಜಕೀಯ, ಸಾಮಾಜಿಕ ಅಥವಾ ಆರ್ಥಿಕ ಶೋಷಣೆಯ ದಿನಗಳು ಈಗ ಕಡಿಮೆಯಾಗುತ್ತಿವೆ. ನೀವು ಆರ್ಥಿಕವಾಗಿ ದುರ್ಬಲರಾಗಿದ್ದರೂ, ನಿಮ್ಮ ಸ್ಥಿತಿಯು ಶೋಚನೀಯವಾಗಿದ್ದರೂ, ಪ್ರಾಮಾಣಿಕ ಹಾಗೂ ಶ್ರಮಪೂರ್ಣ ದುಡಿಮೆಯಿಂದ ಸಂತೋಷವಾಗಿ, ತೃಪ್ತಿಯಿಂದ ಬದುಕುವುದು ನಿಮ್ಮ ಆಜನ್ಮ ಹಕ್ಕು ಎಂಬುದನ್ನು ನೀವು ಜ್ಞಾಪಕದಲ್ಲಿಟ್ಟುಕೊಳ್ಳಬೇಕು.

ನಿಮ್ಮ ಹಾಗೂ ನಿಮ್ಮನ್ನು ಅವಲಂಬಿಸಿರುವವರ ಜೀವನಾವಶ್ಯಕತೆಗಳನ್ನು ಪೂರೈಸಿಕೊಳ್ಳುವ ನಿಮ್ಮ ನ್ಯಾಯಬದ್ಧವಾದ ಹಕ್ಕಿನಲ್ಲಿ ನೀವು ಅಗಾಧವಾದ ನಂಬಿಕೆಯನ್ನಿರಿಸಿಕೊಂಡು, ಆರ್ಥಿಕ ಸಮಸ್ಯೆಗಳನ್ನು ಬಿಡಿಸಿಕೊಳ್ಳುವುದಕ್ಕೆ ಪ್ರಯತ್ನಿಸಬೇಕು. ನಮ್ಮ ಸಮಾಜದಂತಹ ಸಂಕೀರ್ಣವಾದ ಸಮಾಜದಲ್ಲಿ ಪ್ರತಿಯೊಬ್ಬರೂ ತಮ್ಮ ತಮ್ಮ ಬದುಕಿಗಾಗಿ ಹೋರಾಟವನ್ನು ನಡೆಸುತ್ತಿರುತ್ತಾರೆ. ಅದರಲ್ಲಿ ಶಕ್ತಿವಂತನಿಗೇ ಜಯವಾಗುವುದು. ನೀವು ಶಕ್ತಿವಂತರಾಗುವುದಕ್ಕೆ ಪ್ರಯತ್ನಿಸದೇ ಇದ್ದರೆ, ಸುಮಾರಾಗಿ ನೆಮ್ಮದಿಯಾದ ಬದುಕನ್ನು ನಡೆಸುವುದು ನಿಮಗೆ ಸಾಧ್ಯವಾಗದು.

ನಿಮ್ಮ ಪರಿಸ್ಥಿತಿಯನ್ನು ಉತ್ತಮಗೊಳಿಸಿಕೊಳ್ಳಲು, ಕೃಷಿ, ಪಶುಸಂಗೋಪನೆ, ತೋಟಗಾರಿಕೆ ಮತ್ತು ಒಳನಾಡಿನ ಮೀನುಗಾರಿಕೆ ಇವುಗಳಲ್ಲಿ ನವೀನ ಪದ್ಧತಿಗಳನ್ನು ಸ್ವಾಗತಿಸಿ ಅವನ್ನು ಉಪಯೋಗಿಸಿಕೊಳ್ಳುವ ಮನೋಭಾವವನ್ನು ಹೊಂದಿರಬೇಕು. ನೀವಾಗಿಯೇ ಇದನ್ನು ಒಪ್ಪಿ ಬಳಸಿಕೊಂಡರೆ, ನಿಮ್ಮ ಉತ್ಪಾದನೆಯ ಮಟ್ಟ ಹಾಗೂ ಉತ್ಪಾದಿತ ಪದಾರ್ಥಗಳ ಗುಣಮಟ್ಟವನ್ನು ಹೆಚ್ಚಿಸುವುದಷ್ಟೇ ಅಲ್ಲದೆ, ದೇಶದ ಆಹಾರಸಮಸ್ಯೆಯನ್ನು ಪರಿಹರಿಸುವಲ್ಲಿಯೂ ಸಹಾಯವನ್ನು ಮಾಡಬಲ್ಲಿರಿ.

ರಷ್ಯಾದಲ್ಲಿ ಒಂದು ಹಸುವು ದಿನಕ್ಕೆ ನಲವತ್ತರಿಂದ ಐವತ್ತು ಸೇರು ಹಾಲನ್ನು ಕರೆಯುವುದನ್ನು ನಾನು ನೋಡಿದ್ದೇನೆ. ನಾವು ನಮ್ಮ ಹಸುಗಳ ತಳಿಯನ್ನು ಅಭಿವೃದ್ಧಿಪಡಿಸಲು ಸಾಧ್ಯವಿರುವ ಎಲ್ಲಾ ಪ್ರಯತ್ನವನ್ನೂ ಮಾಡಬೇಕು. ಹೀಗೆ ಮಾಡಿದರೆ ಮಾತ್ರ ಮಕ್ಕಳೂ ಸೇರಿದಂತೆ ನಮ್ಮೆಲ್ಲಾ ಜನತೆಯ ಸಮತೂಕದ ಆಹಾರಕ್ಕಾಗಿ ಸಾಕಷ್ಟು ಹಾಲನ್ನು ಪಡೆಯಬಹುದು. ಇದರಿಂದ ಅಪೌಷ್ಟಿಕತೆಯ ತಾಂಡವವನ್ನು ಹೊಡೆದೋಡಿಸಬಹುದು. ವಾಸ್ತವವಾಗಿ, ಸಂವಿಧಾನದ 47ನೆಯ ವಿಧಿಯ ಅಡಿಯಲ್ಲಿ "ಪೌಷ್ಟಿಕತೆಯ ಪ್ರಮಾಣವನ್ನು ಹೆಚ್ಚಿಸುವುದನ್ನು ಮತ್ತು ತನ್ನ ನಾಗರಿಕರ ಜೀವನದ ಮಟ್ಟವನ್ನು ಏರಿಸುವುದನ್ನು, ಸಾರ್ವಜನಿಕ ಆರೋಗ್ಯಕ್ಕೆ ಹೆಚ್ಚಿನ ಗಮನವನ್ನು ನೀಡುವುದನ್ನು ಸರಕಾರವು ತನ್ನ ಪ್ರಾಥಮಿಕ ಕರ್ತವ್ಯಗಳಲ್ಲಿ ಒಂದೆಂದು ಭಾವಿಸಬೇಕು.

ಗ್ರಾಮಾಂತರ ಪ್ರದೇಶಗಳ ಜನರಿಗೆ ಹೆಚ್ಚಿನ ಉದ್ಯೋಗಾವಕಾಶಗಳನ್ನು ನೀಡಬಲ್ಲ ಪೂರಕ ಕೈಗಾರಿಕೆಗಳನ್ನು ಸ್ಥಾಪಿಸಲು ಅವಕಾಶಗಳನ್ನು ಸಂವಿಧಾನವು

ನೀಡಿದೆ. ನಮ್ಮ ಕಲ್ಪನೆಯು ಕಲ್ಯಾಣ ರಾಜ್ಯವು ತೃಪ್ತ ಹಾಗೂ ಸಮಾನಸ್ಕಂಧರಾಗಿರುವಂತಹವರಿಂದ ಕೂಡಿದ ಸಮಾಜವಾಗಿದೆ.

ಸರಕಾರದ ನಿರ್ದೇಶಕ ನೀತಿಗಳು ಹೀಗೆ ಹೇಳುತ್ತವೆ – 'ಸರಕಾರವು ತನ್ನ ನೀತಿಯನ್ನು ವಿಶೇಷವಾಗಿ

- ಪ್ರತಿಯೊಬ್ಬ ಮನುಷ್ಯನು – ಹೆಂಗಸಾಗಲೀ, ಗಂಡಸಾಗಲೀ – ತನ್ನ ಜೀವನಾವಶ್ಯಕ ಸಾಧನಗಳನ್ನು ಸಾಕಷ್ಟು ಹಾಗೂ ಸಮಾನ ಪ್ರಮಾಣದಲ್ಲಿ ಹೊಂದಿರಬೇಕು;
- ಸಮಾಜದ ಭೌತಿಕಾವಶ್ಯಕತೆಯನ್ನು ಪೂರೈಸುವ ಸಾಧನಗಳ ಒಡೆತನ ಮತ್ತು ನಿಯಂತ್ರಣಾಧಿಕಾರವು ಸರ್ವಜನಹಿತವನ್ನು ಸಾಧಿಸಲು ಅನುಕೂಲವಾಗುವಂತೆ ವಿತರಣೆಯಾಗಿರಬೇಕು;
- ಆರ್ಥಿಕ ನಿರ್ವಹಣಾ ವ್ಯವಸ್ಥೆಯು ಸಂಪತ್ತು ಮತ್ತು ಉತ್ಪಾದನಾ ಸಾಧನಗಳು ಕೆಲವರಲ್ಲಿಯೇ ಕೇಂದ್ರೀಕೃತವಾಗಿ ಬಹುಜನರ ಹಿತಾಸಕ್ತಿಗಳಿಗೆ ಮಾರಕವಾಗುವಂತೆ ಮಾಡಬಾರದು;
- ಮಹಿಳೆಯರು ಮತ್ತು ಪುರುಷರ ನಡುವೆ ಸಮಾನರೀತಿಯ ಕೆಲಸಗಳಿಗೆ ಸಮಾನ ವೇತನವಿರಬೇಕು.

**ಸಂವಿಧಾನದ 43ನೆಯ ವಿಧಿಯು ಈ ರೀತಿ ಹೇಳುತ್ತದೆ –**

- ಸರಕಾರವು ಸೂಕ್ತ ಕಾನೂನಿನ ಮೂಲಕವಾಗಲೀ, ಆರ್ಥಿಕ ವ್ಯವಸ್ಥೆಯ ಮೂಲಕವಾಗಲೀ, ಅಥವಾ ಇನ್ನಾವುದೇ ರೀತಿಯಲ್ಲಾಗಲೀ, ಕೃಷಿ, ಕೈಗಾರಿಕೆ ಅಥವಾ ಇನ್ನಾವುದೇ ಕಾರ್ಮಿಕರಿಗೆ ಕೆಲಸ, ಜೀವನ ನಿರ್ವಹಣೆಗೆ ಸಾಲುವಷ್ಟು ವೇತನ, ಕೆಲಸದ ವಾತಾವರಣ, ಸಾಕಷ್ಟು ವಿರಾಮ, ಸಾಂಸ್ಕೃತಿಕ ಅವಕಾಶಗಳು, ಇತ್ಯಾದಿಗಳು ದೊರಕುವ ಹಾಗೆ ಮತ್ತು ವಿಶೇಷವಾಗಿ ವೈಯಕ್ತಿಕ ಅಥವಾ ಸಹಕಾರೀ ಸಂಘಗಳ ಮಟ್ಟದಲ್ಲಿ ಕುಟೀರ ಕೈಗಾರಿಕೆಗಳು ಅಭಿವೃದ್ಧಿಯನ್ನು ಹೊಂದುವ ಹಾಗೆ ಪ್ರಯತ್ನಪಡಬೇಕು.

ನೀವು ಭಾರತದ ನಾಗರಿಕರಾಗಿ, ನಿಮ್ಮ ಆರ್ಥಿಕ ಹಕ್ಕುಗಳ ಬಗ್ಗೆ, ನಿಮ್ಮ ಸಾಮಾಜಿಕ ಮತ್ತು ರಾಜಕೀಯ ಹಕ್ಕುಗಳ ಬಗ್ಗೆ ಅರಿವನ್ನು ಪಡೆಯುತ್ತೀರಿ

ಎಂಬ ಕಾರಣಕ್ಕಾಗಿ, ನಾನು ಈ ಸಾಂವಿಧಾನಿಕ ಸೌಲಭ್ಯಗಳ ಬಗ್ಗೆ ಮತ್ತೆ ಮತ್ತೆ ಹೇಳುತ್ತಿದ್ದೇನೆ. ಸರಕಾರವು ನಿಮಗೆ ಸಾಕಷ್ಟು ಅನುಕೂಲವುಳ್ಳ ಜೀವನಕ್ಕೆ ಮಾತ್ರ ಅವಕಾಶ ಮಾಡಿಕೊಡುವುದಲ್ಲ. ಜೊತೆಗೆ, ಸಾಕಷ್ಟು ಮನರಂಜನೆ, ವಿರಾಮ ಹಾಗೂ ಸಾಂಸ್ಕೃತಿಕ ಮತ್ತು ಸಾಮಾಜಿಕ ಅವಕಾಶಗಳಿಗೂ ಎಡೆಮಾಡಿಕೊಡಬೇಕು. ನಿಮ್ಮ ಜೀವನವನ್ನು ಸುಖಮಯ ಮಾಡಿಕೊಳ್ಳುವುದಕ್ಕಾಗಿ ಸರಕಾರವು ನೀಡುತ್ತಿರುವ ಸೌಲಭ್ಯಗಳನ್ನು ಎಷ್ಟರಮಟ್ಟಿಗೆ ನೀವು ಉಪಯೋಗಿಸಿಕೊಂಡಿದ್ದೀರಿ ಎಂಬುದನ್ನು ಪರೀಕ್ಷಿಸಿಕೊಳ್ಳಿ. ನೀವು ಸಾಕಷ್ಟು ಉಪಯೋಗವನ್ನು ಈ ಸೌಲಭ್ಯಗಳಿಂದ ಪಡೆಯುತ್ತಿಲ್ಲದಿದ್ದರೆ, ಅದು ನಿಮ್ಮ ನಿರ್ಲಕ್ಷ್ಯದಿಂದಲೇ, ಅಜ್ಞಾನದಿಂದಲೇ ಅಥವಾ ಔದಾಸೀನ್ಯದಿಂದಲೇ ಅಥವಾ ಅದಕ್ಕೆ ಸರಕಾರೀ ಸಂಸ್ಥೆಗಳು ಈ ಸೌಲಭ್ಯಗಳನ್ನು ನೀಡುವಲ್ಲಿನ ಬೇಜವಾಬ್ದಾರಿ ಕಾರಣವೇ ಎಂಬುದನ್ನೂ ನೀವು ವಿಚಾರಿಸಿಕೊಳ್ಳಬೇಕು. ಕೃಷಿ ಕೆಲಸಗಳಿಂದ ದೊರಕುವ ಗಳಿಕೆಗೆ ಪೂರಕವಾಗಿ ಇನ್ನಷ್ಟು ಹಣವನ್ನು ಗಳಿಸಲು ಸರಕಾರವು ವೈಯಕ್ತಿಕ ಅಥವಾ ಸಹಕಾರೀ ಸಂಘಗಳ ಮಟ್ಟದಲ್ಲಿ ಪ್ರಾರಂಭಿಸಿರುವ ಕುಟೀರ ಕೈಗಾರಿಕೆಗಳ ಪ್ರಯೋಜನವನ್ನು ನಿಮ್ಮಲ್ಲಿ ಎಷ್ಟು ಜನ ಪಡೆದಕೊಂಡಿದ್ದೀರಿ? ನಿಮ್ಮ ಕಲ್ಯಾಣಕ್ಕಾಗಿ, ನಿಮ್ಮನ್ನು ಅವಲಂಬಿಸಿರುವವರ ಕಲ್ಯಾಣಕ್ಕಾಗಿ ಹಾಗೂ ಸಮಾಜದ ಕಲ್ಯಾಣಕ್ಕಾಗಿ ನಿಮ್ಮ ಪ್ರಜ್ಞೆಯನ್ನು ಜಾಗೃತಗೊಳಿಸಲು, ನಿಮಗೆ ನಾನು ಈ ಪ್ರಶ್ನೆಗಳನ್ನು ಕೇಳುತ್ತಿದ್ದೇನೆ.

ಸಂವಿಧಾನದಲ್ಲಿ ರೂಪಿಸಿರುವ ಎಲ್ಲಾ ಹಕ್ಕು ಮತ್ತು ಸೌಲಭ್ಯಗಳನ್ನು ನೀವು ನಿಮ್ಮ ಪ್ರಯತ್ನ ಮತ್ತು ಆತ್ಮಸಮರ್ಥನೆಯಿಂದ ಪಡೆದುಕೊಳ್ಳಬೇಕು. ಪ್ರಯತ್ನದ ಪ್ರಾರಂಭ ನಿಮ್ಮಿಂದಲೇ ಆಗಬೇಕು. ನಿಮ್ಮ ಹಕ್ಕುಗಳನ್ನು, ಜವಾಬ್ದಾರಿಗಳನ್ನು ಅರಿತುಕೊಂಡರೆ ಮಾತ್ರನೀವು ನಿಮ್ಮ ಮನದಾಳದ ಆಸೆ ಮತ್ತು ಗುರಿಯನ್ನು ಸಾಕಾರಗೊಳಿಸಿಕೊಳ್ಳಲು ಬೇಕಾದ ಧೈರ್ಯ ಮತ್ತು ಆತ್ಮವಿಶ್ವಾಸವನ್ನು ಗಳಿಸಿಕೊಳ್ಳಲು ಸಮರ್ಥರಾಗುತ್ತೀರಿ. ಸರಕಾರವು ಸಾಕಷ್ಟು ಯೋಚನೆ ಮಾಡಿ ರೂಪಿಸಿರುವ ಯೋಜನೆಗಳು ನಿಮ್ಮ ಜೀವನದ ಮಟ್ಟವನ್ನು ಸುಧಾರಿಸಲು ನಿಮಗೆ ಸಹಾಯವನ್ನು ಮಾಡುತ್ತವೆ. ಆದರೆ ನಿಮ್ಮ ಏಳಿಗೆಯು, ನೀವು ಈ ಸೌಲಭ್ಯಗಳನ್ನು ಸಂಪೂರ್ಣವಾಗಿ ಬಳಸಿಕೊಳ್ಳುವುದನ್ನು ಅವಲಂಬಿಸಿರುತ್ತದೆ.

ನಮ್ಮ ಮಹಾನ್ ನಾಯಕರುಗಳಾದ ಬಾಬು ರಾಜೇಂದ್ರ ಪ್ರಸಾದ್‌ಜಿ. ಪಂಡಿತ್ ಜವಹರ್‌ಲಾಲ್ ನೆಹ್ರೂಜಿ, ಗೋವಿಂದ್ ವಲ್ಲಭ್ ಪಂತ್‌ಜಿ. ಜಗಜೀವನ್‌ರಾಮ್‌ಜಿ ಮುತ್ತಿತರರು ತಮ್ಮಲ್ಲಿ ದಲಿತವರ್ಗಗಳವರ ಬಗೆಗಿದ್ದ ಕಾಳಜಿಯಿಂದ ದುರ್ಬಲವರ್ಗಗಳವರ, ಅದರಲ್ಲಿಯೂ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡಗಳವರ ಮೇಲ್ಮೆಗಾಗಿ ಸಂವಿಧಾನದಲ್ಲಿ ವಿಶೇಷ ಸವಲತ್ತುಗಳನ್ನು ನೀಡುವಂತಹ ವಿಧಿಗಳನ್ನು ಅಳವಡಿಸಿರುವುದಕ್ಕಾಗಿ ನಾವು ಅವರಿಗೆ ಕೃತಜ್ಞತೆಯನ್ನು ಸಲ್ಲಿಸಬೇಕು. ಈಗಿರುವ ನಾಯಕರ ಜೊತೆಯಲ್ಲಿಯೇ ದಿವಂಗತ ಸರ್ದಾರ್ ವಲ್ಲಭ್ ಭಾಯ್ ಪಟೇಲರಿಗೂ ಹಾಗೂ ಅಂಬೇಡ್ಕರ್‌ಜಿಯವರಿಗೂ ನಮ್ಮ ಗೌರವವನ್ನು ಅರ್ಪಿಸಬೇಕು. ಪ್ರಸಾದ್‌ಜಿ, ಪಂಡಿತ್‌ಜಿ, ಪಂತ್‌ಜಿ, ಜಗಜೀವನ್‌ರಾಮ್‌ಜಿ ಹಾಗೂ ದುರ್ಬಲವರ್ಗದವರನ್ನು ಎಚ್ಚರಿಕೆಯಿಂದ ರಕ್ಷಿಸುತ್ತಿರುವ ಎಲ್ಲಾ ಮುಖಂಡರ ನಾಯಕತ್ವದಲ್ಲಿ ನಮಗೆ ಸಂಪೂರ್ಣ ನಂಬಿಕೆಯಿದೆ. ಆದರೆ, ನಮ್ಮ ನಡುವೆಯೇ ಕೆಲವು ಶಕ್ತಿಗಳು, ಹಿತಾಸಕ್ತರು ದುರ್ಬಲವರ್ಗದವರಿಗೆ ಅನನುಕೂಲವಾಗುವಂತೆ, ಅವರಿಗೆ ಸವಲತ್ತುಗಳನ್ನು ನೀಡಿರುವ ವಿಧಿಗಳನ್ನು ತಪ್ಪಾಗಿ ಅರ್ಥೈಸುತ್ತಾರೆ ಹಾಗೂ ಕಲ್ಯಾಣರಾಜ್ಯದ ಉದ್ದೇಶಗಳಿಗೆ ವಿರುದ್ಧವಾಗಿ ತಮ್ಮ ಹಿತಾಸಕ್ತಿಗಳನ್ನು ಕಾಪಾಡಿಕೊಳ್ಳಲು ಜನತೆಯಲ್ಲಿರುವ ಅಜ್ಞಾನವನ್ನು ಬಳಸಿಕೊಂಡು. ಅಧಿಕಾರದಲ್ಲಿರುವವರಿಗೆ ತಪ್ಪು ಮಾರ್ಗದರ್ಶನವನ್ನು ಮಾಡುತ್ತಾರೆ ಎಂಬುದನ್ನು ನಾವು ನೆನಪಿನಲ್ಲಿಟ್ಟುಕೊಂಡಿರಬೇಕು. ಸಂವಿಧಾನದಲ್ಲಿ ನೀಡಿರುವ ಸವಲತ್ತುಗಳು. ಅದರಲ್ಲಿಯೂ ರಕ್ಷಣಾ ಸೂತ್ರಗಳು ಉದಾರಚಿಂತನೆಯ ಫಲವಾಗಿ ಮೂಡಿಬಂದಿವೆ. ಆದ್ದರಿಂದ. ಅವುಗಳನ್ನು ದೇಶದ ಜನತೆಯಲ್ಲಿ ಬಹುದೊಡ್ಡ ಸಂಖ್ಯೆಯಲ್ಲಿರುವ ದುರ್ಬಲವರ್ಗಗಳವರಿಗೆ ಅನುಕೂಲಕರವಾಗಿರುವಂತೆ ಅರ್ಥೈಸಬೇಕು. ಹೀಗೆ ಮಾಡುವುದು ನ್ಯಾಯ ಮತ್ತು ವೈಚಾರಿಕತೆಗಳಿಗೆ ಸಲ್ಲುತ್ತದೆ. ಇದನ್ನು ಸಾಧಿಸಲು. ಈ ವಿಷಯವನ್ನು ಸದ್ಭಾವನೆಯಿಂದ. ಸರಿಯಾದ ದೃಷ್ಟಿಕೋನದಿಂದ ನೋಡಬೇಕು. ಸಾಂವಿಧಾನಿಕ ವಿಧಿ. ನಿಯಮಗಳಿಗೆ ಗೌರವವನ್ನು ತೋರಿ, ಸಂವಿಧಾನದ ಪಾವಿತ್ರ್ಯವನ್ನು ಕಾಪಾಡಬೇಕು ಎಂದು ನಾವು ಸಂಬಂಧಪಟ್ಟ ಎಲ್ಲರನ್ನೂ ಗಾಂಧೀಮಾರ್ಗವನ್ನು ಅನುಸರಿಸಿ ಪ್ರಾರ್ಥಿಸೋಣ. ರಾಷ್ಟ್ರಪಿತ ಮಹಾತ್ಮ ಗಾಂಧಿಯವರು ಸರ್ವೋದಯ ನೀತಿಯ

ಆಧಾರದ ಮೇಲೆ ಕಟ್ಟಬೇಕೆಂದಿದ್ದ ನಮ್ಮ ದೇಶ ಮತ್ತು ಸಮಾಜದಲ್ಲಿ ಎಲ್ಲಾ ಒಂಬತ್ತು ಕೋಟಿ ಹರಿಜನರು ಮತ್ತು ಗಿರಿಜನರನ್ನು ಸಮಾನ ಪಾಲುಗಾರರು ಎಂಬ ಸೋದರ ಭಾವದಿಂದ ನಡೆಸಿಕೊಳ್ಳಬೇಕು ಎಂಬುದು ನನ್ನ ಆಶಯ. ದೇಶವನ್ನು ಕಾಪಾಡುವುದರಲ್ಲಿ, ದೇಶದ ಸಮಗ್ರತೆಯನ್ನು ಕಾಯ್ದುಕೊಳ್ಳುವಲ್ಲಿ, ಮತ್ತು ದೇಶದಲ್ಲಿ ತಾಂಡವವಾಡುತ್ತಿರುವ ಬಡತನವನ್ನು ಸಮೃದ್ಧಿಯನ್ನಾಗಿ ಪರಿವರ್ತಿಸುವ ಪ್ರಕ್ರಿಯೆಯನ್ನು ತ್ವರಿತಗೊಳಿಸುವಲ್ಲಿ ಹರಿಜನ ಗಿರಿಜನರೂ ಇತರರಿಗೆ ಭುಜಕ್ಕೆ ಭುಜವನ್ನು ಕೊಟ್ಟು ನಿಲ್ಲಬೇಕೆಂದೂ ನಾನು ಬಯಸುತ್ತೇನೆ. ಹರಿಜನ ಗಿರಿಜನರು ಹಕ್ಕು ಮತ್ತು ಬಾಧ್ಯತೆಗಳನ್ನು ಇತರರೊಂದಿಗೆ ಸಮಾನವಾಗಿ ಹಂಚಿಕೊಳ್ಳಬೇಕು, ಹಾಗೂ ಅಧಿಕಾರ ಮತ್ತು ಸಂಪತ್ತನ್ನು ತಮ್ಮ ಜನಸಂಖ್ಯೆಗೆ ಅನುಗುಣವಾಗಿಯಾದರೂ ಹಂಚಿಕೊಳ್ಳಲು ಪ್ರಯತ್ನಿಬೇಕು. ಅವರ ಪಾಲಿನ ಅಧಿಕಾರ, ಸಂಪತ್ತು ಮತ್ತು ಸ್ಥಾನಗಳನ್ನು ಅವರು ಗಳಿಸಿಕೊಳ್ಳದಿದ್ದರೆ ಇತರರ ಮಟ್ಟಕ್ಕೆ ಏರುವುದು ಅವರಿಗೆ ಸಾಧ್ಯವಾಗುವುದಿಲ್ಲ. ಹೀಗಾದರೆ, ಅವರು ಇತರರೊಡನೆ ಸಮಾನರಾಗಿ, ಸ್ಥಾನಮಾನಗಳೊಡನೆ ಇತರರ ಪಾಲುದಾರರಾಗಿ ಬದುಕಲಾಗದೆ, ಗುಲಾಮರಾಗಿಯೇ ಉಳಿಯಬೇಕಾಗುತ್ತದೆ. ತಮ್ಮ ಈ ಗುರಿಯನ್ನು, ಸಂವಿಧಾನದತ್ತ ಹಕ್ಕುಗಳನ್ನು ಪಡೆಯಲು, ಪ್ರಾಮಾಣಿಕ ಹಾಗೂ ಶ್ರಮಪೂರ್ಣ ದುಡಿಮೆಯಲ್ಲಿ ತೊಡಗಿರುವ ಎಲ್ಲರೂ, ತಮ್ಮ ಜಾತಿ, ಪಂಗಡಗಳ ಭೇದವನ್ನು ತೊರೆದು, ಒಂದೇ ದಿಕ್ಕಿನತ್ತ, ನಾವು ವಿಶ್ವಾಸವನ್ನು ಇಟ್ಟಿರುವ ನಮ್ಮ ನಾಯಕರು ತೋರಿರುವ ದಿಕ್ಕಿನತ್ತ, ಮುನ್ನಡೆಯಬೇಕು ಮತ್ತು ಸಾಂವಿಧಾನಿಕ ಸಾಧನಗಳನ್ನು ಉಪಯೋಗಿಸಿಕೊಂಡು ಶೋಷಣೆಯನ್ನು ಮಾಡುವಎಲ್ಲಾ ರೀತಿಯ ಪ್ರಯತ್ನಗಳಿಗೂ ಮಂಗಳವನ್ನು ಹಾಡಬೇಕು.

ಸಂವಿಧಾನವು ಯಾವುದೇ ವಿಶೇಷ ಸವಲತ್ತುಗಳನ್ನು ನೀಡದಿದ್ದರೂ, ಮುಂದುವರಿದ ಜನರು ಹೇಗೆ ರಾಜ್ಯ ಸರಕಾರಗಳಿಂದ ಎಲ್ಲಾ ಬಗೆಯ ಪ್ರೋತ್ಸಾಹ ಮತ್ತು ಬೆಂಬಲಗಳನ್ನು ಪಡೆದುಕೊಳ್ಳುತ್ತಾರೆ ಎಂಬುದು ನನಗೆ ಆಶ್ಚರ್ಯದ ವಿಷಯವಾಗಿದೆ. ಶೈಕ್ಷಣಿಕ, ತಾಂತ್ರಿಕ ಮತ್ತು ಕೈಗಾರಿಕಾ ಕ್ಷೇತ್ರಗಳಲ್ಲಿ ಇರುವ ತಮ್ಮ ಸೇವಾಸಂಸ್ಥೆಗಳ ಹೆಸರಿನಲ್ಲಿ ಅವರು ಸಾರ್ವಜನಿಕ ಖಜಾನೆಯಿಂದ ದೊಡ್ಡ ದೊಡ್ಡ ಮೊತ್ತದ ಅನುದಾನಗಳನ್ನು ಪಡೆಯುವಲ್ಲಿ ಸಫಲರಾಗುತ್ತಾರೆ.

ದುರ್ಬಲ ವರ್ಗಗಳವರ, ಅದರಲ್ಲಿಯೂ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳವರ ಆರ್ಥಿಕಾಭಿವೃದ್ಧಿಗಾಗಿ, ಸಾಮಾಜಿಕ ಮತ್ತು ಶೈಕ್ಷಣಿಕ ಮುನ್ನಡೆಯನ್ನು ಸಾಧಿಸಲಿಕ್ಕಾಗಿ ಇಷ್ಟೊಂದು ಸಾಂವಿಧಾನಿಕ ರಕ್ಷಣೆಗಳಿದ್ದರೂ, ಸಾರ್ವಜನಿಕ ಅನುದಾನವು, ಸಹಾಯಧನವು ಅವರ ದಿಕ್ಕಿನತ್ತ, ಕನಿಷ್ಠಪಕ್ಷ ಅವರ ಜನಸಂಖ್ಯೆಗೆ ಅನುಗುಣವಾಗಿಯಾದರೂ, ಏಕೆ ಹರಿದುಬರುತ್ತಿಲ್ಲ ಎಂಬುದು ನನಗೆ ಅರ್ಥವಾಗುತ್ತಿಲ್ಲ. ಗೃಹಖಾತೆ ಹಾಗೂ ಕೇಂದ್ರದ ಸಮಾಜಕಲ್ಯಾಣ ಇಲಾಖೆಯು ಈ ಉದ್ದೇಶಗಳಿಗಾಗಿ ನೀಡುತ್ತಿರುವ ಧನಸಹಾಯವು ಬೇಕಾದಷ್ಟು ಆಗಿದೆಯೆಂದು ಪಟ್ಟಭದ್ರ ಹಿತಾಸಕ್ತಿಗಳು ಹೇಳುತ್ತಿರುವುದನ್ನು ನಾನು ಕೇಳಿದ್ದೇನೆ. ಆದರೆ ನಾನು ಹೇಳುತ್ತೇನೆ, ಪರಿಶಿಷ್ಟ ಜಾತಿ ಮತ್ತು ಪಂಗಡಗಳ ಆವಶ್ಯಕತೆ ಶೇ. 20 ಇದ್ದರೆ, ಈಗ ಕೇಂದ್ರ ಸರಕಾರವು ನೀಡುತ್ತಿರುವುದು ಶೇ. 2ರಷ್ಟು. ಹಣದ ಕೊಡುಗೆಯು ಇಷ್ಟು ಅಲ್ಪವಾಗಿರುವುದರಿಂದಲೇ, ಈ ವರ್ಗದ ಜನರು ಇತರ ಸಾಮಾನ್ಯ ಜನತೆಯ ಅಭಿವೃದ್ಧಿಯೋಜನೆಗಳಲ್ಲಿ ತಮಗೆ ಅರ್ಹವಾಗಿ ಸಿಗಬೇಕಾಗಿದ್ದ ಶೇ. 20ರ ಪಾಲಿನಿಂದ ವಂಚಿತರಾಗಿದ್ದಾರೆ. ಅಂದರೆ, ವಾಸ್ತವವಾಗಿ, ಸರಕಾರವು ಶೇ 2ರಷ್ಟು ಧನಸಹಾಯವನ್ನು ಪರಿಶಿಷ್ಟ ಜಾತಿ ಮತ್ತು ವರ್ಗಗಳವರತ್ತ ಧರ್ಮಾರ್ಥದ ದೃಷ್ಟಿಯಿಂದ ಎಸೆಯುವುದರ ಮೂಲಕ ಅವರು ತಮ್ಮ ನ್ಯಾಯಬದ್ಧ ಹಕ್ಕಾದ ಶೇ.20ರ ಅನುದಾನವನ್ನು ಕಳೆದುಕೊಳ್ಳುವಂತೆ ಮಾಡಿದೆ. ಸಂವಿಧಾನದ ಸವಲತ್ತುಗಳಿಂದ ಪರಿಶಿಷ್ಟ ಜಾತಿ/ಪಂಗಡಗಳವರು ಏನಾದರೂ ಉಪಯೋಗವನ್ನು ಪಡೆದುಕೊಂಡಿದ್ದಾರೆಯೇ ಇಲ್ಲವೇ ಎಂಬುದನ್ನು ನೀವೇ ಪರಿಶೀಲಿಸಿ ಒಂದು ತೀರ್ಮಾನಕ್ಕೆ ಬನ್ನಿ. ತಮ್ಮ ಅಪರಾಧವೇನೂ ಇಲ್ಲದಿದ್ದರೂ ಅವರು ಶೇ. 18ರಷ್ಟನ್ನು ಕಳೆದುಕೊಳ್ಳುತ್ತಿದ್ದಾರೆಂಬುದನ್ನು ನೀವು ನೋಡಬಹುದು. ಇದು ವಿರೋಧಾಭಾಸದಿಂದ ಕೂಡಿದ ಪರಿಸ್ಥಿತಿ ಮತ್ತು ಇದಕ್ಕಾಗಿ ಹಲವು ಕುತರ್ಕದ ವಾದಗಳನ್ನು ಮುಂದಿಡಲಾಗುತ್ತಿದೆ. ಇವೆಲ್ಲವನ್ನೂ ನೀವೇ ವಿಶ್ಲೇಷಿಸಿ. ಈಗಲಾದರೂ ಎಲ್ಲಾ ರಾಜ್ಯ ಸರಕಾರಗಳಿಗೂ ಸಮಾನವಾಗಿ ಅನ್ವಯವಾಗುವಂತಹ, ಸಮಾನ ಧೋರಣೆಯಿಂದ ಅನುಸರಿಸಬೇಕಾದಂತಹ ಯೋಜನೆಗಳನ್ನು ರೂಪಿಸಬೇಕೆಂದು ಕೇಂದ್ರ ಸರಕಾರವನ್ನು ಒತ್ತಾಯಪಡಿಸಬೇಕಾದಂತಹ ಪರಿಸ್ಥಿತಿ ಈಗ ನಮಗೆ ಬಂದಿದೆ. ಹೀಗೆ ಮಾಡುವುದರಿಂದ ದುರ್ಬಲವರ್ಗದವರು ರಾಜ್ಯ ಸರಕಾರಗಳ ದಯೆಯ

ಭಿಕ್ಷೆಯಲ್ಲಿ, ಮತ್ತು ಪಟ್ಟಭದ್ರ ಹಿತಾಸಕ್ತಿಗಳ ದುರಾಸೆಯ ನೆರಳಿನಲ್ಲಿ ಬದುಕುವಂತಹ ದಾರುಣಸ್ಥಿತಿಯನ್ನು ತಡೆಗಟ್ಟಬಹುದು. ಕೆಳಕ್ಕೆ ತುಳಿಯಲ್ಪಟ್ಟವರಿಗಾಗಿ ರಾಜ್ಯ ಸರಕಾರಗಳು ಸಾಕಷ್ಟು ಕ್ರಮಗಳನ್ನು ತೆಗೆದುಕೊಂಡಿವೆಯೆಂಬುದು ನನಗೆ ತಿಳಿದಿದೆ. ಈ ನಿಟ್ಟಿನಲ್ಲಿ ಇಲ್ಲಿಯವರೆಗೆ ಮಾಡಬಹುದಾಗಿದ್ದಷ್ಟನ್ನು ಮಾಡಿಲ್ಲವೆಂಬುದೂ, ಮಾಡಬೇಕಾದದ್ದು ಬಹಳಷ್ಟು ಇರುವುದೂ ನನಗೆ ಗೊತ್ತು. ನಮ್ಮ ಪವಿತ್ರ ಸಂವಿಧಾನದ ಆಶಯಗಳನ್ನು ಅರ್ಥಮಾಡಿಕೊಳ್ಳುವ ಮನೋಭಾವದ ಅಭಾವ ಹಾಗೂ ನಮ್ಮ ಘೋಷಿತ ಗುರಿಯಾದ ಸಮಾಜವಾದೀ ವ್ಯವಸ್ಥೆಯ ನಿರ್ಮಾಣದಲ್ಲಿ ಅಧಿಕಾರಿಗಳ ಕಾರ್ಯನಿರ್ವಹಣೆಯಲ್ಲಿ ಇರಬೇಕಾಗಿದ್ದ ಉತ್ಸಾಹ, ಉತ್ಕಟತೆ ಇಲ್ಲದಿರುವುದೇ ಇದಕ್ಕೆ ಕಾರಣ. ಈಗ ಮಾಡಿರುವುದಾದರೂ, ಒಂದು ಬಗೆಯ ಅನುಕಂಪದ ದೃಷ್ಟಿಯಿಂದ ಮಾಡಿದುದಾಗಿದೆಯೇ ಹೊರತುಇವನ್ನು ಸರಕಾರವು ತನ್ನ ಪ್ರಜೆಗಳ, ಅದರಲ್ಲಿಯೂ ದುರ್ಬಲವರ್ಗಗಳವರ, ಬಗ್ಗೆ ಇರಬೇಕಾಗಿದ್ದ ಹೊಣೆಯಿಂದ ಮಾಡಿದುದಲ್ಲ.

ಡಿ. ಸಾಮಾಜಿಕ ಕೆಡುಕುಗಳಾಗಿ ಕುಡಿತದ ಚಟಗಳು : ನೀವು ನಿಮ್ಮಲ್ಲಿರುವ ಸಾಮಾಜಿಕ ಕೆಡುಕುಗಳನ್ನು ಗುರುತಿಸಿ ನಾಶಮಾಡಿದರೆ, ನಿಮ್ಮ ವಿದ್ಯಾಭ್ಯಾಸದ ಹಾಗೂ ನಿಮ್ಮ ಆರ್ಥಿಕಪರಿಸ್ಥಿತಿಯ ಮಟ್ಟಗಳನ್ನು ಅನುಸರಿಸಿ ನಿಮ್ಮ ಸಾಮಾಜಿಕ ಸ್ಥಿತಿಗತಿಗಳು ಉತ್ತಮಗೊಳ್ಳುತ್ತಾ ಹೋಗುತ್ತದೆ.

ನಮ್ಮ ಜನಾಂಗದವರಲ್ಲಿ ಹಲವರು ಕುಡಿತದ ಕೆಟ್ಟ ಚಟಕ್ಕೆ ದಾಸರಾಗಿರುವುದು ದುರದೃಷ್ಟ. ಮತ್ತುಬರಿಸುವ ಮದ್ಯವನ್ನು ಸೇವಿಸುವುದು ಭಾರತದಲ್ಲಿ ಪ್ರಾಚೀನ ಕಾಲದಿಂದ ರೂಢಿಯಲ್ಲಿದೆ. ಆದರೂ ಅದನ್ನು ಹಿಂದೂ ಶಾಸ್ತ್ರಗ್ರಂಥಗಳು ಹಾಗೂ ಸಮಾಜವು ತಿರಸ್ಕಾರದ ದೃಷ್ಟಿಯಿಂದ ನೋಡುತ್ತಲೇ ಬಂದಿವೆ. ಮೇಲ್ವರ್ಗದವರೆಂದು ಕರೆದುಕೊಳ್ಳುವವರ ಮೇಲೆ ಮದ್ಯಪಾನಮಾಡುವುದಕ್ಕೆ ಕಟ್ಟುನಿಟ್ಟಿನ ನಿಷೇಧವನ್ನು ಹೇರಲಾಗಿತ್ತು. ಇದರ ಪರಿಣಾಮವಾಗಿ, ಕುಡಿತದ ಚಟವು ಶಿಕ್ಷಣವು ಅಷ್ಟಾಗಿ ಇಲ್ಲದಿದ್ದ ದಲಿತವರ್ಗದ ಜನರಲ್ಲಿ ಕೇಂದ್ರೀಕೃತವಾಯಿತು. ಗಾಂಧೀಜಿ ಒಮ್ಮೆ ಹೇಳಿದ್ದರು: 'ನನಗೇನಾದರೂ ಒಂದು ಗಂಟೆಯಮಟ್ಟಿಗೆ ಸರ್ವಾಧಿಕಾರವು ದೊರೆತರೆ, ದೇಶದೆಲ್ಲೆಡೆ ಮತ್ತುಬರಿಸುವ ಮದ್ಯವನ್ನು ನಿಷೇಧಿಸುವುದೇ ನನ್ನ ಮೊದಲ ಕಾರ್ಯವಾಗುತ್ತದೆ.' ಈ ಸಾಮಾಜಿಕ ಕೆಡುನ್ನು ಮೂಲೋತ್ಪಾಟನ ಮಾಡಲು ಅವರಲ್ಲಿ ಉರಿಯುತ್ತಿದ್ದ

ಉದ್ರೇಕವನ್ನು ಇದು ತೋರಿಸುತ್ತದೆ. ಬಡವರು ಸುಲಭವಾಗಿ ಚಟಕ್ಕೆ ತುತ್ತಾಗಿ, ಇನ್ನೂ ಬಡವರಾಗುತ್ತಲೇ ಹೋಗುತ್ತಿರುತ್ತಾರೆ, ಅದೇ ಸಮಯದಲ್ಲಿ ಅವರ ಈ ದೌರ್ಬಲ್ಯವನ್ನು ಉಪಯೋಗಿಸಿಕೊಂಡು ಅವರನ್ನು ಶೋಷಿಸುವವರು ಶ್ರೀಮಂತರಾಗುತ್ತಲೇ ಹೋಗುತ್ತಾರೆ. ಇಷ್ಟೇ ಅಲ್ಲದೆ ಈ ಕೆಡುಕಿನ ಬಲೆಯಲ್ಲಿ ಸಿಕ್ಕಿಕೊಂಡವರು ತಮ್ಮ ಹೆಂಡತಿ ಮಕ್ಕಳ ಆಹಾರ ಮತ್ತು ಬಟ್ಟೆಗಳಂತಹ ಮೂಲಭೂತ ಅಗತ್ಯಗಳನ್ನೂ ನಿರ್ಲಕ್ಷಿಸಿ ತಮ್ಮ ಕುಡಿತದ ಸ್ವರ್ಗದಲ್ಲಿಯೇ ತೃಪ್ತಿಯನ್ನು ಪಡೆಯುತ್ತಾರೆ. ಕುಡಿತಕ್ಕೆ ದಾಸರಾಗಿ ದೈಹಿಕ, ಮಾನಸಿಕ ಮತ್ತು ನೈತಿಕ ದೃಷ್ಟಿಯಿಂದ ಹೀನಾಯವಾದ ಬದುಕನ್ನು ನಡೆಸುತ್ತಿರುವ ಹರಿಜನರ ಕುಟುಂಬಗಳನ್ನು ಹಲವಾರು ಬಾರಿ ನೋಡಿದ್ದೇನೆ. ಈ ದುಷ್ಟ ಚಟವನ್ನು ತ್ಯಜಿಸಿ ನಂತರ ಉತ್ತಮ ಆಹಾರ, ಉತ್ತಮ ಬಟ್ಟೆಬರೆಗಳನ್ನು ಪಡೆಯಲು ಶಕ್ತರಾಗಿ ಹಸನಾದ ಬದುಕನ್ನು ನಡೆಸುತ್ತಿರುವವರನ್ನೂ ನೋಡಿದ್ದೇನೆ. ಆದ್ದರಿಂದ, ನೀವು ನಿಮ್ಮ ದೈಹಿಕ, ಮಾನಸಿಕ ಮತ್ತು ನೈತಿಕ ಗುಣಗಳನ್ನು ಸುಧಾರಿಸಿಕೊಳ್ಳಬೇಕೆಂದು ಬಯಸಿದರೆ, ಈ ಹೇಯವಾದ ಚಟವನ್ನು ತ್ಯಜಿಸಲೇಬೇಕು. ನಿಮ್ಮ ಮನಸ್ಸಿನಾಳದಲ್ಲೆಲ್ಲಾದರೂ ಮದ್ಯಪಾನಾಸಕ್ತಿಯು ಅವಿತುಕೊಂಡು ಕುಳಿತಿದ್ದರೆ ಅದನ್ನು ನೀವು ಹೊಡೆದೋಡಿಸಿ, ಆರೋಗ್ಯಕರ ಮತ್ತು ಸಂತಸ ತುಂಬಿದ ಬದುಕನ್ನು ನಿಮ್ಮದಾಗಿಸಿಕೊಳ್ಳಿ.

ನಮ್ಮ ದಿನನಿತ್ಯದ ಬದುಕಿನಲ್ಲಿ ಬಹುಮುಖ್ಯವಾದ ಇನ್ನೊಂದು ಸಂಗತಿಯೆಂದರೆ, ನೀವು ಶುಚಿತ್ವದ ಕಡೆಗೆ ಗಮನವನ್ನು ನೀಡಬೇಕು. ಶುಚಿತ್ವವೇ ದೈವತ್ವವೆಂದು ಹೇಳುತ್ತಾರೆ. ಬಾಹ್ಯ ಶುಚಿತ್ವವು ಮನಸ್ಸಿನ ನೈರ್ಮಲ್ಯವನ್ನು ಬಿಂಬಿಸುತ್ತದೆ ಎನ್ನಬಹುದು. 'ಶುಚಿತ್ವದ ಮಹತ್ವವು ಎಷ್ಟೆಂದರೆ ಅದು ಮಾನವನ ನೈತಿಕ ಚಾರಿತ್ರ್ಯದ ಮೇಲೂ ತನ್ನ ಪ್ರಭಾವವನ್ನು ಬೀರುತ್ತದೆ. ಸದ್ಗುಣಗಳು ಕೊಳಕಿನ ಸಂಗಡ ಬಹುದೂರ ಹೋಗುವುದಿಲ್ಲ. ಅತ್ಯಂತ ಸೂಕ್ಷ್ಮವಾಗಿ ತನ್ನ ಶುಚಿತ್ವದ ಕಡೆಗೆ ಗಮನಕೊಡುವವನು ಪಕ್ಕಾ ದುಷ್ಟನಾಗಿರುವುದನ್ನು ನಾನು ಊಹಿಸಿಕೊಳ್ಳಲಾರೆ.' ಎಂದು ರಮ್‌ಫ್ಲರ್ಡ್ ಹೇಳುತ್ತಾರೆ. ನಿಮ್ಮ ಒಳಿತಿಗಾಗಿ ಮತ್ತು ನೀವು ಒಡನಾಟವನ್ನಿರಿಸಿಕೊಂಡಿರುವ ಮತ್ತು ನೀವು ಕೆಲಸಮಾಡುವ ಸಮಾಜದ ಒಳಿತಿಗಾಗಿ ನೀವು ಶುಚಿತ್ವವನ್ನು ಕಾಪಾಡಿಕೊಳ್ಳಬೇಕು. ಇದರಿಂದ ನಿಮ್ಮ ಗೌರವ ಮತ್ತು ನಡವಳಿಕೆಯಲ್ಲಿನ ಸಭ್ಯತೆ ಹೆಚ್ಚಾಗುತ್ತದೆ ಮತ್ತು ಎಂತಹ

ಪವಿತ್ರಸ್ಥಳಕ್ಕಾದರೂ ನೀವು ಹೋಗಬಹುದು. ಮೇಲ್ವರ್ಗವೆಂದು ಕರೆಸಿಕೊಳ್ಳುತ್ತಿರುವವರ ಮಧ್ಯೆ ನಿಮ್ಮ ಘನತೆಯನ್ನು ಅದು ಹೆಚ್ಚುಮಾಡುತ್ತದೆ. ನಿಮ್ಮ ಜೀವನದಲ್ಲಿ ಈ ಸಾಮಾಜಿಕ ಅಂಶಕ್ಕೆ ಹೆಚ್ಚಿನ ಮಹತ್ವವನ್ನು ನೀಡುತ್ತೀರೆಂದು ನಾನು ನಂಬಿದ್ದೇನೆ.

ಹರಿಜನ ಜನಾಂಗದವರಲ್ಲಿ ಇರುವ ಇನ್ನೊಂದು ಸಾಮಾಜಿಕ ಪಿಡುಗೆಂದರೆ ದೇವದಾಸಿ ಪದ್ಧತಿ. ಹಲವು ಪ್ರದೇಶಗಳಲ್ಲಿ ಈ ಪದ್ಧತಿ ಇನ್ನೂ ಜೀವಂತವಾಗಿದೆ. ದೇವರ ಹೆಸರಿನಲ್ಲಿ ಚಿಕ್ಕವಯಸ್ಸಿನ ಹೆಣ್ಣುಮಕ್ಕಳನ್ನು, ಯುವತಿಯರನ್ನು ವೇಶ್ಯಾಪದ್ಧತಿಯ ಕೂಪಕ್ಕೆ ತಳ್ಳಲಾಗುತ್ತಿದೆ. ಇದು ದೇವರಿಗಾಗಿ ಮಾಡುವ ಕೆಲಸವೇ? ಇಲ್ಲ, ಇದು ದೇವರ ಹೆಸರಿನಲ್ಲಿ ಬಡ ಹಾಗೂ ಅವಿದ್ಯಾವಂತ ಜನರನ್ನು ಶೋಷಿಸುವ ಹುನ್ನಾರವಾಗಿದೆ. ಬುದ್ಧ, ರಾಮಾನುಜ ಮತ್ತು ಬಸವೇಶ್ವರರು ನಮ್ಮ ಸಮಾಜವನ್ನು ತಿದ್ದಲು ಪ್ರಯತ್ನಿಸಿದರು. ಅಭಿವೃದ್ಧಿಯನ್ನು ಸಹಿಸದ, ಪ್ರತಿರೋಧವನ್ನು ಒಡ್ಡುವ ಬಣಗಳು ತಮ್ಮ ಸ್ವಾರ್ಥಸಾಧನೆಗೋಸ್ಕರ ಇದಕ್ಕೆ ತಡೆಯನ್ನು ಒಡ್ಡಿದ್ದರಿಂದ ಈ ಸುಧಾರಕರ ಪ್ರಯತ್ನವು ಬಹಳ ದೂರದವರೆಗೆ ನಡೆಯಲಿಲ್ಲ.

ಈ ವಿಚಾರಗೋಷ್ಠಿಯು ತನ್ನ ದನಿಯನ್ನು ಎತ್ತಬೇಕಾಗಿರುವುದು ಇನ್ನೊಂದು ಅಪಾಯದ ವಿರುದ್ಧವಾಗಿ. ಅದೇನೆಂದರೆ, ಕೆಲವು ಕಡೆಯಿಂದ 'ಪರಿಶಿಷ್ಟ ಜಾತಿ', 'ಪರಿಶಿಷ್ಟ ಪಂಗಡ' ಮೊದಲಾದಜಾತಿ/ಪಂಗಡಗಳ ಹೆಸರನ್ನು ತೆಗೆದುಹಾಕಬೇಕೆಂಬ ಪ್ರಯತ್ನ ನಡೆಯುತ್ತಿದೆ. ಇವರ ಉದ್ದೇಶವೆಂದರೆ ವರ್ಗರಹಿತ ಸಮಾಜವನ್ನು ನಿರ್ಮಾಣಮಾಡುವುದು. ಸಾಮಾನ್ಯವಾಗಿ ಈ ವಾದವು ಹೀಗೆ ಕೇಳಿಬರುತ್ತಿದೆ – 'ಸ್ವತಂತ್ರ ರಾಷ್ಟ್ರದಲ್ಲಿರುವ ನಾವು, ಜಾತಿ, ಪಂಗಡಗಳ ಬಗ್ಗೆ ಏಕೆ ಮಾತನಾಡಬೇಕು? ಈ ಎಲ್ಲಾ ಹೆಸರುಗಳೂ ಇಲ್ಲವಾಗಬೇಕು. ನಾವೆಲ್ಲಾ ಭಾರತೀಯರು ಮಾತ್ರ ಪರಿಶಿಷ್ಟ ಜಾತಿ ಮತ್ತು ಪಂಗಡಗಳವರೂ ಸಹ ಭಾರತೀಯರೇ'. ಅವರ ವಾದಗಳಲ್ಲಿ ಹುರುಳಿಲ್ಲವೆಂದು ಹೇಳಲಾಗುವುದಿಲ್ಲ. ಎಲ್ಲಾ ಜನಗಳ ಮಧ್ಯೆ ಸಮಾನತೆಯನ್ನು ಹೊಂದಿರುವ ಸಮಾಜವನ್ನು ಸೃಷ್ಟಿಸುವ ಹಾದಿಯಲ್ಲಿ ಜಾತಿಗಳು ದೊಡ್ಡ ಅಡಚಣೆಗಳೆಂಬ ವಿಷಯವನ್ನು ಯಾರೂ ಅಲ್ಲಗಳೆಯಲಾರರು. ಈಗಿನ ಜನಗಣತಿಯಲ್ಲಿ ನಾವು ನಮ್ಮನ್ನು ಪರಿಶಿಷ್ಟ ಜಾತಿ/ಪಂಗಡಗಳವರೆಂದು ಹೇಳಿಕೊಳ್ಳದಿದ್ದರೆ, ಸಂವಿಧಾನವು ನೀಡುತ್ತಿರುವ ಸೌಲಭ್ಯವನ್ನು ನಾವು ಪಡೆಯುವುದಾದರೂ ಹೇಗೆ? ಮೊಟ್ಟಮೊದಲು

ನಾವು ಭಾರತೀಯರೆಂಬುದನ್ನು ಒಪ್ಪಿಕೊಳ್ಳಲೇಬೇಕೆಂಬುದರಲ್ಲಿ ವಿವಾದವಿಲ್ಲ. ಆದರೆ, ಅದರ ಜೊತೆಗೇ, ಇನ್ನೂ ಸ್ವಲ್ಪ ಕಾಲ ನಮ್ಮನ್ನು ಪರಿಶಿಷ್ಟ ಜಾತಿ/ಪಂಗಡಗಳವರು ಎಂದು ಪರಿಗಣಿಸುವುದುನ್ನು ಮುಂದುವರಿಸಬೇಕು.

ಇ. ಸರಕಾರಿ ಉದ್ಯೋದಲ್ಲಿ ಮೀಸಲಾತಿಯ ಪ್ರಶ್ನೆ : ಹರಿಜನ, ಗಿರಿಜನ ಮತ್ತು ಇತರ ದುರ್ಬಲವರ್ಗಗಳಲ್ಲಿನ ಈಗಿನ ತಲೆಮಾರಿನವರು .ತಮ್ಮನ್ನು ಅದೃಷ್ಟವಂತರೆಂದು ಕರೆದುಕೊಳ್ಳಲು ಎಲ್ಲಾ ಕಾರಣಗಳೂ ಇವೆ. ಮೊದಲನೆಯದಾಗಿ, ದೇಶದ ಆಡಳಿತದ ಚುಕ್ಕಾಣಿಯನ್ನು ಹಿಡಿದಿರುವವರು, ಮುಖಂಡರು ಅವರ ಬಗ್ಗೆ ಅನುಕಂಪವನ್ನು ಹೊಂದಿದ್ದಾರೆ. ಈ ಮುಂದಾಳುಗಳು ದೇಶದ ಆರ್ಥಿಕ ಹಾಗೂ ಸಾಮಾಜಿಕ ಪರಿಸ್ಥಿತಿಗಳನ್ನು ಅಭಿವೃದ್ಧಿಪಡಿಸುವುದಕ್ಕೆ ಕಾತರರಾಗಿದ್ದಾರೆ. ನಮ್ಮ ಸಂವಿಧಾನವು ನಮ್ಮನ್ನು ವಿಶೇಷರೀತಿಯಲ್ಲಿ ನಡೆಸಿಕೊಳ್ಳುತ್ತಿದೆ ಮತ್ತು ವಿಶೇಷ ಸವಲತ್ತುಗಳನ್ನು ನಮಗೆ ನೀಡಿದೆ. ಆದರೆ, ನಾನು ಈ ಮೊದಲೇ ಹೇಳಿದಂತೆ ಸಂವಿಧಾನವು ನಮಗೆ ನೀಡಿರುವ ಸ್ಥಾನ ಮತ್ತು ಸವಲತ್ತುಗಳನ್ನು ಅರಿತುಕೊಳ್ಳದಿದ್ದರೆ, ದೇಶದ ಪ್ರತಿಯೊಂದು ರಾಜ್ಯದಲ್ಲಿಯೂ ಅದನ್ನು ಕಾರ್ಯಗತಗೊಳಿಸುವ ಹಾಗೆ ನೋಡಿಕೊಳ್ಳದಿದ್ದರೆ, ನಮ್ಮ ಮಟ್ಟಿಗೆ ಸಂವಿಧಾನವು ಕೇವಲ ನಿರ್ಜೀವವಸ್ತುವಾಗುತ್ತದೆ. ಆದ್ದರಿಂದ, ನೀವು ನಿಮ್ಮ ಹಕ್ಕುಗಳ ಬಗ್ಗೆ, ನಿಮ್ಮ ಕರ್ತವ್ಯ ಹಾಗೂ ಬಾಧ್ಯತೆಗಳ ಬಗಗೆ ಬಹಳ ಎಚ್ಚರದಿಂದ ಇರಬೇಕು.

ಕೇಂದ್ರ ಹಾಗೂ ರಾಜ್ಯ ಸರಕಾರಗಳ ಸಾರ್ವಜನಿಕ ಸೇವೆಗಳಲ್ಲಿನ ಹುದ್ದೆಗಳಿಗೆ ನಡೆಯುವ ನೇಮಕಾತಿಯನ್ನು ಕುರಿತು ಹೇಳಬೇಕೆಂದರೆ, ಸಾಂವಿಧಾನಿಕವಾಗಿ ತಮ್ಮ ಸ್ಥಾನವೇನೆಂಬುದರ ಬಗಗೆ ಹರಿಜನ ಮತ್ತು ಗಿರಿಜನರು ಖಚಿತಪಡಿಸಿಕೊಳ್ಳುವುದು ಆವಶ್ಯಕ. ಅದು ತಿಳಿದ ನಂತರವಷ್ಟೇ ಅವರು ತಮ್ಮ ಹಕ್ಕನ್ನು ಸಮರ್ಥಿಸಿಕೊಳ್ಳಲು ಸಾಧ್ಯ. ನೇಮಕಾತಿಯ ಪ್ರಶ್ನೆಗೆ ಸಂಬಂಧಿಸಿದಂತೆ ಸಂವಿಧಾನದಲ್ಲಿ ಇರುವ ವಿಧಿಗಳನ್ನು ಇಲ್ಲಿ ಉದ್ಧರಿಸುವುದು ನನ್ನ ಕರ್ತವ್ಯವೆಂದು ನಾನು ಭಾವಿಸಿದ್ದೇನೆ.

- ನೇಮಕಾತಿಯ ವಿಷಯದಲ್ಲಿ ಅಥವಾ ಯಾವುದೇ ಸರಕಾರೀ ಹುದ್ದೆಯನ್ನು ಭರ್ತಿಮಾಡುವಾಗ ಎಲ್ಲಾ ನಾಗರಿಕರಿಗೂ ಸಮಾನವಾದ ಅವಕಾಶವಿರತಕ್ಕದ್ದು ಎಂದು ಭಾಗ ಮೂರರಲ್ಲಿನ 16(1)ನೆಯ ವಿಧಿಯು

(ಮೂಲಭೂತ ಹಕ್ಕನ್ನು ಕುರಿತು) ಹೇಳಿದ್ದರೂ, ನೇಮಕಾತಿಯ ವಿಷಯದಲ್ಲಿ ವಿಶೇಷ ಅವಕಾಶಗಳು ಇಲ್ಲವೆಂದು ಹೇಳಲಾಗುವುದುದಿಲ್ಲ. ಇದೇ ವಿಧಿಯ 4ನೆಯ ಪರಿಚ್ಛೇದವು ಹೀಗೆ ಹೇಳುತ್ತದೆ.

- ಹಿಂದುಳಿದ ವರ್ಗಗಳವರಿಗೆ ಸರಕಾರೀ ಸೇವೆಯಲ್ಲಿ ಸಾಕಷ್ಟು ಪ್ರಾತಿನಿಧ್ಯವು ದೊರೆತಿಲ್ಲವೆಂದು ಸರಕಾರವು ಮನಗಂಡರೆ, ಅದು ನೇಮಕಾತಿಯಲ್ಲಿ ಹಿಂದುಳಿದ ವರ್ಗಗಳವರಿಗಾಗಿ ಮೀಸಲಾತಿಯನ್ನು ಕಲ್ಪಿಸಲು ಯಾವುದೇ ಕಾನೂನನ್ನಾಗಲೀ, ನಿಯಮವನ್ನಾಗಲೀ ಮಾಡಬಹುದು ಮತ್ತು ಈ ವಿಧಿಯು ಅದಕ್ಕೆ ಅಡ್ಡಿಬರುವುದಿಲ್ಲ.

ಸಂವಿಧಾನದ ವಿವಿಧ ನಿಯಮಗಳನ್ನು ಅರ್ಥಮಾಡಿಕೊಳ್ಳಬೇಕಾದರೆ ಅದರಲ್ಲಿರುವ ಎಲ್ಲಾ ವಿಧಿಗಳನ್ನೂ ಸಂಪೂರ್ಣವಾಗಿ ಅಭ್ಯಾಸಮಾಡಲೇಬೇಕು. ಉದಾಹರಣೆಗೆ, ಕೇಂದ್ರ ಮತ್ತು ರಾಜ್ಯಗಳ ಸೇವೆಗಳ ಅಡಿಯಲ್ಲಿ ಹದಿನಾಲ್ಕನೆಯ ವಿಭಾಗದಲ್ಲಿರುವ 320ನೆಯ ವಿಧಿಯು ಲೋಕಸೇವಾ ಆಯೋಗದ ಬಗ್ಗೆ ಹೇಳುತ್ತದೆ. 320ನೆಯ ವಿಧಿಯ 3ನೆಯ ಪರಿಚ್ಛೇದವು ಹೀಗೆ ಹೇಳುತ್ತದೆ

- ಕೆಳಕಂಡ ವಿಷಯಗಳಲ್ಲಿ ಸಂದರ್ಭವನ್ನನುಸರಿಸಿ ಕೇಂದ್ರ ಲೋಕಸೇವಾ ಆಯೋಗ ಅಥವಾ ರಾಜ್ಯ ಲೋಕಸೇವಾ ಆಯೋಗದ ಸಲಹೆಯನ್ನು ಪಡೆಯತಕ್ಕದ್ದು

  (ಅ) ಸಿವಿಲ್ ಸೇವೆಗಳಿಗೆ ಮತ್ತು ಸಿವಿಲ್ ಹುದ್ದೆಗಳಿಗೆ ನೇಮಕಾತಿಯನ್ನು ಮಾಡುವ ವಿಧಾನಕ್ಕೆ ಸಂಬಂಧಿಸಿದಂತೆ ಎಲ್ಲಾ ವಿಷಯಗಳಲ್ಲಿ,

  (ಆ) ಸಿವಿಲ್ ಸೇವೆಗಳಿಗೆ ಮತ್ತು ಹುದ್ದೆಗಳಿಗೆ ನೇಮಕಾತಿಯನ್ನು ಮಾಡುವಾಗ, ಒಂದು ಸೇವಾ ವಿಭಾಗದಿಂದ ಮತ್ತೊಂದು ಸೇವಾ ವಿಭಾಗಕ್ಕೆ ವರ್ಗಾಯಿಸುವಾಗ, ಮತ್ತು ಅಂತಹ ನೇಮಕಾತಿಗೆ, ವರ್ಗಾವಣೆಗೆ ಸಂಬಂಧಿಸಿದಂತೆ, ಹಾಗೂ ಅಭ್ಯರ್ಥಿಗಳ ಅರ್ಹತೆಯ ಬಗ್ಗೆ ಅನುಸರಿಸಬೇಕಾದ ನೀತಿಗಳ ವಿಷಯದಲ್ಲಿ.

ಆದರೆ, ಇದರ ಅರ್ಥ ಪರಿಶಿಷ್ಟ ಜಾತಿಗಳವರ ಹಗೂ ಪರಿಶಿಷ್ಟ ಪಂಗಡಗಳವರ ಹಾಗೂ ಇತರ ಹಿಂದುಳಿದವರ್ಗಗಳವರ ನೇಮಕಾತಿಯಲ್ಲಿ ಅವರಿಗೆ ಯಾವ

ವಿಧವಾದ ವಿಶೇಷ ಸವಲತ್ತುಗಳೂ ಇಲ್ಲವೆಂದಲ್ಲ. 320ನೆಯ ವಿಧಿಯ ನಾಲ್ಕನೆಯ ಪರಿಚ್ಛೇದವು ಈ ವಿಷಯದಲ್ಲಿ ಮತ್ತಷ್ಟು ಸ್ಪಷ್ಟನೆಯನ್ನು ನೀಡುತ್ತದೆ

- 16ನೆಯ ವಿಧಿಯ 4ನೆಯ ಪರಿಚ್ಛೇದದ ಪ್ರಕಾರ ಮಾಡುವ ನೇಮಕಾತಿಗಳಿಗೆ ಸಂಬಂಧಪಟ್ಟಂತೆ 3ನೆಯ ಪರಿಚ್ಛೇದದಲ್ಲಿ ಹೇಳಿರುವಂತೆ ಲೋಕಸೇವಾ ಆಯೋಗವನ್ನು ಬೇಡಿಕೊಳ್ಳುವ ಆವಶ್ಯಕತೆಯಿಲ್ಲ ಮತ್ತು 335ನೆಯ ವಿಧಿಯ ಪ್ರಕಾರ ನೇಮಕಾತಿಗಳನ್ನು ಮಾಡಬಹುದು.

16(4)ನೆಯ ವಿಧಿಯ ಪ್ರಕಾರ, ಹಿಂದುಳಿದ ವರ್ಗಗಳವರಿಗೆ ಸರಕಾರೀ ಸೇವೆಯಲ್ಲಿ ಸಾಕಷ್ಟು ಪ್ರಾತಿನಿಧ್ಯವು ದೊರೆತಿಲ್ಲವೆಂದು ಸರಕಾರವು ಮನಗಂಡರೆ, ಅದು ನೇಮಕಾತಿಯಲ್ಲಿ ಹಿಂದುಳಿದ ವರ್ಗಗಳವರಿಗಾಗಿ ಮೀಸಲಾತಿಯನ್ನು ಕಲ್ಪಿಸಲು ಯಾವುದೇ ಕಾನೂನನ್ನಾಗಲೀ, ನಿಯಮವನ್ನಾಗಲೀ ಮಾಡಬಹುದು ಮತ್ತು 16(1)ನೆಯ ವಿಧಿಯು ಅದಕ್ಕೆ ಅಡ್ಡಿಬರುವುದಿಲ್ಲ. 335ನೆಯ ವಿಧಿಯು 'ಕೇಂದ್ರ ಅಥವಾ ರಾಜ್ಯಗಳ ಸೇವೆಗಾಗಿ ನೇಮಕಾತಿಯನ್ನು ಮಾಡುವಾಗ, ಆಡಳಿತದಲ್ಲಿನ ದಕ್ಷತೆಗೆ ಕುಂದುಬಾರದಂತೆ, ಪರಿಶಿಷ್ಟ ಜಾತಿ ಮತ್ತು ಪಂಗಡಗಳವರ ಹಕ್ಕನ್ನು ಗಮನದಲ್ಲಿಟ್ಟುಕೊಂಡಿರಬೇಕು' ಎಂದು ಹೇಳುತ್ತದೆ.

ನಾನು ಉದ್ಧರಿಸಿದ ಸಂವಿಧಾನದ ಎಲ್ಲಾ ವಿಧಿಗಳನ್ನೂ ಎಚ್ಚರಿಕೆಯಿಂದ ಅಧ್ಯಯನ ಮಾಡಿದಾಗ, ನೇಮಕಾತಿಯ ವಿಷಯದಲ್ಲಿ ಸಂವಿಧಾನವು ನಮಗೆ ವಿಶೇಷ ಸೌಲಭ್ಯಾವಕಾಶಗಳನ್ನು ನೀಡಿದೆ ಎಂಬುದನ್ನು ಅರಿತುಕೊಳ್ಳಬಹುದು.

ಆದರೆ ಈ ಸೌಲಭ್ಯಾವಕಾಶಗಳು ಆಚರಣೆಗೆ ಬಂದಿವೆಯೇ? ನಾವು 1958–59ನೆಯ ಸಾಲಿನ ಪರಿಶಿಷ್ಟ ಜಾತಿಗಳ ಮತ್ತು ಪರಿಶಿಷ್ಟ ಪಂಗಡಗಳ ಆಯುಕ್ತರ ವರದಿಯನ್ನು ನೋಡಿದರೆ, ನಮಗೆ ಕೇಂದ್ರ ಸರಕಾರದ ಸೇವೆಗಳಲ್ಲಿ ಪರಿಶಿಷ್ಟ ಜಾತಿಗಳ ಮತ್ತು ಪರಿಶಿಷ್ಟ ಪಂಗಡಗಳ ಜನರಿಗೆ ನೀಡಿರುವ ಉದ್ಯೋಗಾವಕಾಶಗಳು ಸಂತೋಷದಾಯಕವಾದ ಚಿತ್ರಣವನ್ನೇನೂ ಕೊಡುವುದಿಲ್ಲ. ಉದಾಹರಣೆಗೆ, ಒಂದನೆಯ ವರ್ಗದಲ್ಲಿನ ಖಾಯಂ ಮಾಡಲ್ಪಟ್ಟಿರುವ 5,492 ಹುದ್ದೆಗಳಲ್ಲಿ 45 ಹುದ್ದೆಗಳಲ್ಲಿ ಪರಿಶಿಷ್ಟ ಜಾತಿಗಳವರೂ, 14 ಹುದ್ದೆಗಳಲ್ಲಿ ಪರಿಶಿಷ್ಟ ಪಂಗಡಗಳವರೂ ಇದ್ದಾರೆ. ಆದರೆ ಮೂರನೆಯ ಹಾಗೂ ನಾಲ್ಕನೆಯ ವರ್ಗಗಳಲ್ಲಿ ಸ್ವಲ್ಪ ಮಟ್ಟಿನ ಪ್ರಗತಿಯನ್ನು ಕಾಣಬಹುದು. ಉದಾಹರಣೆಗೆ, ಇದೇ ವರ್ಷದಲ್ಲಿನ ಮೂರನೆಯ

ವರ್ಗದ ಒಟ್ಟು4,53,042 ಹುದ್ದೆಗಳಲ್ಲಿ, 32,130 ಹುದ್ದೆಗಳಲ್ಲಿ ಪರಿಶಿಷ್ಟ ಜಾತಿಯವರೂ, 2,879 ಹುದ್ದೆಗಳಲ್ಲಿ ಪರಿಶಿಷ್ಟ ಪಂಗಡಗಳವರೂ ಇದ್ದಾರೆ. ಹಾಗೆಯೇ, 1957ರಲ್ಲಿದ್ದ ನಾಲ್ಕನೆಯ ವರ್ಗದ ಒಟ್ಟು 6,47,695 ಹುದ್ದೆಗಳಲ್ಲಿ ಪರಿಶಿಷ್ಟ ಜಾತಿಯವರು ಮತ್ತು ಪರಿಶಿಷ್ಟ ಪಂಗಡಗಳವರು ಕ್ರಮವಾಗಿ 1,32,547 ಮತ್ತು 16,044 ಹುದ್ದೆಗಳಲ್ಲಿದ್ದಾರೆ.

ಇದೇ ವಿಷಯದಲ್ಲಿ ಮೈಸೂರು ರಾಜ್ಯದಲ್ಲಿನ ಚಿತ್ರಣವು ಹೀಗಿದೆ:

| ವರ್ಷ | ಹುದ್ದೆಯ ದರ್ಜೆ | ಪ.ಜಾತಿಗಳವರು | ಪ.ಪಂಗಡಗಳವರು | |
|---|---|---|---|---|
| 1958 | | ಗೆಜೆಟೆಡ್ | 60 | 5 |
| | ನಾನ್ ಗೆಜೆಟೆಡ್ | 3475 | 186 | |
| | ನಾಲ್ಕನೆಯ ವರ್ಗ | 3761 | 285 | |
| | ಒಟ್ಟು | 7296 | 476 | |
| 1959 | | ಗೆಜೆಟೆಡ್ | 115 | 15 |
| | ನಾನ್ ಗೆಜೆಟೆಡ್ | 6417 | 345 | |
| | ನಾಲ್ಕನೆಯ ವರ್ಗ | 4124 | 303 | |
| | ಒಟ್ಟು | 10656 | 663 | |

ಅಂದರೆ, ಹೊಸ ಸರಕಾರವು ಅಧಿಕಾರವನ್ನು ವಹಿಸಿಕೊಂಡ ಮೇಲೆ, ಗಮನಾರ್ಹ ಪ್ರಗತಿಯಾಗಿದೆ.

ನಿಮಗೆ ತಿಳಿದಿರುವ ಹಾಗೆ, ಸಮಾಜದಲ್ಲಿನ ದುರ್ಬಲವರ್ಗದವರ ಸಾಮಾಜಿಕ, ಆರ್ಥಿಕ ಮತ್ತು ಶೈಕ್ಷಣಿಕ ಪರಿಸ್ಥಿತಿಗಳಲ್ಲಿ ಪ್ರಗತಿಯನ್ನು ಸಾಧಿಸಲು ಮೈಸೂರು ಸರ್ಕಾರವು ತನ್ನೆಲ್ಲಾ ಪ್ರಯತ್ನಗಳನ್ನೂ ಮಾಡುತ್ತಿದೆ. ಈ ವರ್ಗದ ಸಾಕಷ್ಟು ಸಂಖ್ಯೆಯ ಜನರಿಗಾಗಿ ಮನೆಗಳನ್ನು ಕಟ್ಟಿಕೊಳ್ಳಲು, ಶಿಕ್ಷಣವನ್ನು ಹೊಂದಲು, ಮತ್ತು ಕೃಷಿಗಾಗಿ, ಹಾಗೂ ಕುಟೀರ ಕೈಗಾರಿಕೆಗಳಿಗಾಗಿ ಸೌಲಭ್ಯಗಳನ್ನು ಒದಗಿಸಲು ಸರಕಾರವು ಹಲವಾರು ಯೋಜನೆಗಳನ್ನು ಕಾರ್ಯಗತಗೊಳಿಸಿದೆ. ಸಾಮಾನ್ಯ ಹಾಗೂ ತಾಂತ್ರಿಕ ಶಾಲೆಗಳಲ್ಲಿ ವಿದ್ಯಾಭ್ಯಾಸವನ್ನು ಮುಂದುವರಿಸಲು, ವಿದ್ಯಾರ್ಥಿ ಮತ್ತು ವಿದ್ಯಾರ್ಥಿನಿಯರಿಗಾಗಿ ಹೆಚ್ಚು ಹೆಚ್ಚು ವಿದ್ಯಾರ್ಥಿ ನಿಲಯಗಳನ್ನು ಸ್ಥಾಪಿಸಲಾಗುತ್ತಿದೆ.

ಪರಿಶಿಷ್ಟ ಜಾತಿಗಳ ವಿದ್ಯಾರ್ಥಿಗಳ ಕಲ್ಯಾಣಕ್ಕಾಗಿ ಕಳೆದ ಎರಡು ವರ್ಷಗಳಲ್ಲಿ ಸರಕಾರವು 116 ಹೆಚ್ಚುವರಿ ವಿದ್ಯಾರ್ಥಿನಿಲಯಗಳನ್ನು ಪ್ರಾರಂಭಿಸಿದೆ. ಇವುಗಳಲ್ಲಿ 35 ಬಾಲಕಿಯರಿಗಾಗಿರುವ ವಿದ್ಯಾರ್ಥಿನಿ ನಿಲಯಗಳು. ಈ ನಿಲಯಗಳಲ್ಲಿ ಆಶ್ರಯ ಪಡೆದಿರುವವರ ಒಟ್ಟು ಸಂಖ್ಯೆ 2,887. ಇವುಗಳ ಜೊತೆಗೆ, ಸರಕಾರೇತರ ಸಂಸ್ಥೆಗಳು ರಾಜ್ಯದ ವಿವಿಧ ಭಾಗಗಳಲ್ಲಿ 34 ವಿದ್ಯಾರ್ಥಿನಿಲಯಗಳನ್ನು ಪ್ರಾರಂಭಿಸಿವೆ. ಇವುಗಳಲ್ಲಿರುವ ಒಟ್ಟು ವಿದ್ಯಾರ್ಥಿಗಳ ಸಂಖ್ಯೆ 887.

ಎಫ್. ರಾಜ್ಯದಲ್ಲಿರುವ ಮಹಿಳಾ ಕಲ್ಯಾಣ ಕೇಂದ್ರಗಳು ಮತ್ತು ಶಿಶುವಿಹಾರಗಳು: ಪರಿಶಿಷ್ಟ ಜಾತಿಯ ಮಹಿಳೆಯರ ಮತ್ತು ಮಕ್ಕಳ ಉಪಯೋಗಕ್ಕಾಗಿ, ಸರಕಾರವು ರಾಜ್ಯದಾದ್ಯಂತ ಮಹಿಳಾ ಕಲ್ಯಾಣ ಕೇಂದ್ರ ಶಿಶುವಿಹಾರಗಳನ್ನು ಪ್ರಾರಂಭಿಸಿದೆ. ಇಲ್ಲಿಯವರೆಗೆ ಪ್ರಾರಂಭಿಸಲಾಗಿರುವ ಮಹಿಳಾ ಕಲ್ಯಾಣ ಕೇಂದ್ರಗಳ ಒಟ್ಟು ಸಂಖ್ಯೆ 165. ಇಲ್ಲಿ ಮೂರರಿಂದ ಆರು ವರ್ಷಗಳವರೆಗಿನ ಮಕ್ಕಳನ್ನು ಅವರ ತಂದೆತಾಯಿಗಳು ಇಲ್ಲದಿರುವಾಗ ನೋಡಿಕೊಳ್ಳಲಾಗುತ್ತಿದೆ. ಈ ಮಕ್ಕಳಿಗೆ ಮಧ್ಯಾಹ್ನದ ಊಟವನ್ನು ನೀಡಲಾಗುತ್ತಿದೆ. ಆಟವಾಡುತ್ತಲೇ ಕಲಿಯುವ ಸೌಲಭ್ಯವನ್ನು ಅಲ್ಲಿ ಅವರಿಗೆ ನೀಡಲಾಗಿದೆ. ಈ ಯೋಜನೆಯ ಲಾಭವನ್ನು 7,500 ಮಕ್ಕಳು ಪಡೆಯುತ್ತಿದ್ದಾರೆ. ಇಂತಹ ಶಿಶುವಿಹಾರಗಳ ಉದ್ದೇಶ, ಈ ಮಕ್ಕಳು ಪ್ರಾಥಮಿಕ ಶಾಲೆಗೆ ಪ್ರವೇಶವನ್ನು ಪಡೆಯುವ ಮೊದಲೇ, ಶಿಕ್ಷಣಕ್ಕೆ ಬೇಕಾದ ಸೂಕ್ತ ವಾತವರಣದಲ್ಲಿ ಅವರು ಬೆಳೆಯುವಂತೆ ಮಾಡುವುದು.

ಮಧ್ಯಾಹ್ನದ ವೇಳೆಯಲ್ಲಿ ಬಿಡುವಿದ್ದಾಗ, ಪರಿಶಿಷ್ಟ ಜಾತಿಗೆ ಸೇರಿದ ಮಹಿಳೆಯರು ಮಹಿಳಾ ಕೇಂದ್ರಗಳಿಗೆ ಬಂದು ಬಟ್ಟೆ ಹೊಲಿಯುವುದು, ಕಸೂತಿ, ಹೆಣಿಗೆ ಮತ್ತು ನೂಲುವುದು ಮೊದಲಾದವುಗಳಲ್ಲಿ ತರಬೇತಿಯನ್ನು ಪಡೆಯುತ್ತಾರೆ. ಅವರಿಗೆ ಅಲ್ಲಿ ಮನರಂಜನಾ ಕಾರ್ಯಕ್ರಮಗಳನ್ನೂ ವ್ಯವಸ್ಥೆಮಾಡಲಾಗಿದೆ. ಮಹಿಳಾ ಕಲ್ಯಾಣ ವ್ಯವಸ್ಥಾಪಕಿಯರು ಕೆಲವು ನಿರ್ವಾಹಕಿಯರ ಸಹಾಯದಿಂದ ಇಲ್ಲಿನ ಕೆಲಸಗಳನ್ನು ನೋಡಿಕೊಳ್ಳುತ್ತಿದ್ದಾರೆ.

ಪರಿಶಿಷ್ಟ ಜಾತಿಯ ಹೆಂಗಸರಿಗಾಗಿ ರಾಜ್ಯದ ಎಲ್ಲಾ ಜಿಲ್ಲಾ ಕೇಂದ್ರಗಳಲ್ಲಿ 1960–61ರಲ್ಲಿ ಒಟ್ಟು ಹತ್ತೊಂಬತ್ತು ಹೊಲಿಗೆ ಕೇಂದ್ರಗಳನ್ನು ಆರಂಭಿಸಲಾಗಿದೆ.

ಪ್ರತಿ ಕೇಂದ್ರದಲ್ಲಿಯೂ ಹನ್ನೆರಡು ಜನ ಪರಿಶಿಷ್ಟ ಜಾತಿಯ ಹೆಂಗಸರು ತರಬೇತಿಯನ್ನು ಪಡೆಯುತ್ತಿದ್ದಾರೆ. ಅಲ್ಲಿ ಅವರಿಗೆ ಒಂದು ವರ್ಷದ ತರಬೇತಿಯನ್ನು ನೀಡಲಾಗುತ್ತಿದೆ. ತರಬೇತಿಯ ಸಮಯದಲ್ಲಿ ಪ್ರತಿಯೊಬ್ಬರಿಗೂ ಮಾಸಿಕ 25 ರೂಗಳ ತರಬೇತಿ ಭತ್ಯವನ್ನು ನೀಡಲಾಗುತ್ತಿದೆ. ತರಬೇತಿಯ ಕೊನೆಯಲ್ಲಿ ಪ್ರತಿಯೊಬ್ಬರಿಗೂ ಹೊಲಿಗೆಯಂತ್ರವನ್ನು ಕೊಂಡುಕೊಳ್ಳಲು 100 ರೂಗಳ ಸಹಾಯಧನವನ್ನು ಕೊಡುತ್ತೇವೆ. ಅದಕ್ಕೆ ತಮ್ಮ ಕಡೆಯಿಂದ ಉಳಿದ ಹಣವನ್ನು ಹಾಕಿ ಅವರು ಹೊಲಿಗೆಯಂತ್ರವನ್ನು ಕೊಂಡುಕೊಳ್ಳಬೇಕು. ಈ ಕೇಂದ್ರಗಳು ಬಹಳ ಜನಪ್ರಿಯವಾಗಿದ್ದು, ರಾಜ್ಯದಲ್ಲಿ ಇನ್ನೂ ಹೆಚ್ಚಿನ ಕೇಂದ್ರಗಳನ್ನು ತೆರೆಯಲು ಬೇಡಿಕೆ ಬರುತ್ತಿದೆ.

ಹಿಂದುಳಿದ ವರ್ಗಗಳವರ ಕಲ್ಯಾಣಕ್ಕಾಗಿ ರಾಜ್ಯ ಸರಕಾರವು ಮೂರನೆಯ ಪಾಂಚವಾರ್ಷಿಕ ಯೋಜನೆಯ ಅವಧಿಯಲ್ಲಿ 440 ಲಕ್ಷ ರೂಗಳನ್ನು ತೆಗೆದಿರಿಸಿದೆ. ಈ ಮೊತ್ತವು ಎರಡನೆಯ ಯೋಜನೆಯ ಅವಧಿಯಲ್ಲಿ ಈ ಉದ್ದೇಶಕ್ಕಾಗಿ ತೆಗೆದಿರಿಸಿದ್ದ ಹಣಕ್ಕಿಂತ ಸುಮಾರು ಮೂರು ಪಟ್ಟು ಅಧಿಕವಾಗಿದೆ.

ಇದೇ ಸಂದರ್ಭದಲ್ಲಿ ಒಂದು ವಿಷಯವನ್ನು ಹೇಳಿದರೆ ಅದು ಸಂದರ್ಭಕ್ಕೆ ವಿರೋಧವಾಗುವುದಿಲ್ಲವೆಂದು ತಿಳಿದಿದ್ದೇನೆ. ಇತ್ತೀಚಿಗೆ ಹಿಂದುಳಿದ ವರ್ಗಗಳ ಖಾತೆಯ ಸಚಿವರುಗಳ ಸಮಾವೇಶವು ದೆಹಲಿಯಲ್ಲಿ ಜರುಗಿತು. ಅದರಲ್ಲಿ ಹಾಜರಿರುವ ಯೋಗವು ನನ್ನದಾಗಿತ್ತು. ಅದರಲ್ಲಿ ಬಹಳ ದೂರಗಾಮಿ ಪ್ರಭಾವವನ್ನು ಬೀರುವ ಕೆಲವು ನಿರ್ಣಯಗಳನ್ನು ತೆಗೆದುಕೊಳ್ಳಲಾಯಿತು. ಅವುಗಳನ್ನು ರಾಜ್ಯ ಸರಕಾರಗಳು ಸಂಪೂರ್ಣವಾಗಿ ಅನುಸರಿಸಿದರೆ, ಇಡೀ ರಾಷ್ಟ್ರದಲ್ಲಿ ಹಿಂದುಳಿದ ವರ್ಗಗಳವರಿಗೆ ಸಾಕಷ್ಟು ಅನುಕೂಲಗಳು ದೊರಕುತ್ತವೆ.

ಅಲ್ಲಿ ತೆಗೆದುಕೊಂಡ ಮುಖ್ಯವಾದ ನಿರ್ಣಯಗಳಲ್ಲಿ ಒಂದು – ಈಗ ಕೇಂದ್ರ ಹಾಗೂ ರಾಜ್ಯ ಸರಕಾರಗಳು ತಮ್ಮ ಸಮಾಜ ಕಲ್ಯಾಣ ಇಲಾಖೆಯ ಮೂಲಕ ನೀಡುತ್ತಿರುವ ಸೌಲಭ್ಯಗಳ ಜೊತೆಗೆ, ಸರಕಾರದ ಎಲ್ಲಾ ಅಭಿವೃದ್ಧಿ ಇಲಾಖೆಗಳ ಯೋಜಿತ ಬಜೆಟ್‌ನಲ್ಲಿ ಒಂದು ಪಾಲನ್ನು ಹಿಂದುಳಿದ ವರ್ಗಗಳವರ ಅನುಕೂಲಕ್ಕೆಂದೇ ಪ್ರತ್ಯೇಕವಾಗಿ ತೆಗೆದಿರಿಸಬೇಕು. ಅಂದರೆ, ಈ ವರ್ಗದ ಜನರು, ಇತರರೊಡನೆ ಎಲ್ಲಾ ಯೋಜನೆಯ ಲಾಭವನ್ನೂ ಹಂಚಿಕೊಳ್ಳುವುದರ ಜೊತೆಗೆ,

ಎಲ್ಲಾ ಯೋಜನೆಗಳಲ್ಲಿಯೂ, ಅವರು ಆರ್ಥಿಕವಾಗಿ, ಸಾಮಾಜಿಕವಾಗಿ ಮತ್ತು ಶೈಕ್ಷಣಿಕವಾಗಿ ಹಿಂದುಳಿದಿರುವುದರಿಂದ, ವಿಶೇಷ ಪಾಲನ್ನು ಕೂಡ ಪಡೆಯಬಹುದು.

ಜಿ. ಸಮಾಜದ ಕರ್ತವ್ಯಗಳು : ಇದೇ ಸಂದರ್ಭದಲ್ಲಿ ಒಂದು ಎಚ್ಚರಿಕೆಯ ಮಾತನ್ನೂ ನಾನು ಹೇಳಬೇಕು. ಪರಿಶಿಷ್ಟ ಜಾತಿ ಹಾಗೂ ಇತರ ಹಿಂದುಳಿದ ವರ್ಗಗಳವರ ಅಭಿವೃದ್ಧಿಯ ಕಾರ್ಯಕ್ರಮದಲ್ಲಿ ಅತ್ಯಂತ ಉತ್ಸಾಹಿತರಾಗಿ ಇತರ ಮುಂದುವರೆದ ವರ್ಗಗಳವರ ವಿರುದ್ಧ ಯಾವುದೇ ಬಗೆಯ ದುರಭಿಪ್ರಾಯವನ್ನು ಇಟ್ಟುಕೊಳ್ಳಕೂಡದು. ಬಡತನವಿಲ್ಲದ, ರೋಗ–ರುಜಿನಗಳಿಂದ ಮುಕ್ತವಾದ ಮತ್ತು ಅಜ್ಞಾನ–ಅವಿದ್ಯೆಗಳಿಲ್ಲದ ರಾಷ್ಟ್ರವನ್ನು ಕಟ್ಟುವುದು ಮುಂದುವರಿದ ಹಾಗೂ ಹಿಂದುಳಿದ ಎಲ್ಲಾ ವರ್ಗಗಳವರ ಒಟ್ಟು ಹೊಣೆಯೆಂಬ ಭಾವನೆಯನ್ನು ಪ್ರತಿಯೊಬ್ಬರೂ ಮನಸ್ಸಿನಲ್ಲಿಟ್ಟುಕೊಂಡಿರಬೇಕು. ಆದ್ದರಿಂದ ಎಲ್ಲಾ ರಾಜ್ಯಗಳ ಎಲ್ಲಾ ವರ್ಗಗಳವರಲ್ಲೂ ನಾನು ಮಾಡಿಕೊಳ್ಳುವ ವಿನಂತಿಯೆಂದರೆ, ಪ್ರತಿಯೊಬ್ಬನೂ ಮೊದಲಿಗೆ ತಾನು ಭಾರತೀಯ ಮತ್ತು ಓಜಸ್ವಿಯಾದ ರಾಷ್ಟ್ರವನ್ನು ಕಟ್ಟಲು, ರಾಷ್ಟ್ರದ ದುರ್ಬಲವರ್ಗದವರನ್ನು ಮೇಲೆತ್ತಲು ತಮ್ಮ ಸಹಾಯಹಸ್ತವನ್ನು ನೀಡುವುದು ಅಗತ್ಯ ಮತ್ತು ಈ ಸಹಾಯಹಸ್ತವನ್ನು ನೀಡುವುದು ತಮ್ಮ ಕರ್ತವ್ಯವೆಂದು ಭಾವಿಸಬೇಕೆ ಹೊರತು ಅನುಕಂಪದ ಕೊಡುಗೆ ಅಥವಾ ದಯಾಭಿಕ್ಷೆಯೆಂದು ತಿಳಿಯಬಾರದು.

ಯಾವುದೇ ರಾಷ್ಟ್ರಕ್ಕೆ ಇರುವ ಭದ್ರವಾದ ತಳಪಾಯವೆಂದರೆ, ಅದರ ಜನತೆ. ಸಾಮಾಜಿಕ ಮತ್ತು ರಚನಾತ್ಮಕ ಕೆಲಸಗಾರರು ಆ ಅಗಾಧವಾದ ಭವ್ಯ ಸೌಧದ ಆಧಾರಸ್ಥಂಭಗಳು. ನಾಯಕರೆಂದರೆ ಆ ಸೌಧದ ತಾರಸಿಯಿದ್ದ ಹಾಗೆ, ಅವರು ಇತರರನ್ನು ಮಳೆ, ಬಿಸಿಲುಗಳಿಂದ ರಕ್ಷಿಸುತ್ತಾರೆ. ಆದರೆ ಅವರಿಗೆ ಬೆಂಬಲವಾಗಿ ಕೆಳಗೆ ನಿಂತಿರುವವರು ಮೇಲೆ ಹೇಳಿದ ಆಧಾರಸ್ಥಂಭಗಳು. ಈ ಆಧಾರಸ್ಥಂಭಗಳು ಸುಭದ್ರವಾಗಿದ್ದರೆ ಮಾತ್ರ ಅದರ ಮೇಲಿನ ಕಟ್ಟಡ ಮತ್ತು ತಾರಸಿಗಳೂ ಭದ್ರವಾಗಿರುತ್ತವೆ. ಇಲ್ಲದಿದ್ದರೆ, ಯಾವಾಗ ಬೇಕಾದರೂ ಕುಸಿದುಬೀಳುವ ಅಪಾಯದಲ್ಲಿ ಆ ಸೌಧವು ಇರುತ್ತದೆ. ಆದ್ದರಿಂದ, ನನ್ನ ಅಭಿಪ್ರಾಯದ ಪ್ರಕಾರ, ಸಾಮಾಜಿಕ ಕಾರ್ಯಕರ್ತರ ಸ್ಥಾನವನ್ನು ನಾವು ಮಾನ್ಯಮಾಡಬೇಕು ಮತ್ತು ಅದಕ್ಕೆ ಮತ್ತಷ್ಟು ಬಲವನ್ನು ತುಂಬಬೇಕು. ಹಾಗಾದಾಗ ವ್ಯಕ್ತಿಗತವಾಗಿ ಕೆಳಹಂತದ

ಕಾರ್ಯಕರ್ತನು ರಾಷ್ಟ್ರಕ್ಕೆ ಸಾಮಾಜಿಕವಾಗಿ, ಶೈಕ್ಷಣಿಕವಾಗಿ ಮತ್ತು ಆರ್ಥಿಕವಾಗಿ ಪ್ರಯೋಜನಕಾರಿಯಾಗಬಹುದು. ನಿಮ್ಮಲ್ಲಿರುವ ಸಮಾಜ ಕಾರ್ಯಕರ್ತರಿಗೆ ನಾನು ಪ್ರಾರ್ಥಿಸುವುದೇನೆಂದರೆ ನೀವು ಕಷ್ಟಪಟ್ಟು, ದಿನಕ್ಕೆ ಕನಿಷ್ಠ ಹನ್ನೆರಡು ಗಂಟೆಗಳಷ್ಟು ಕಾಲ ಕೆಲಸಮಾಡಿ, ಜನರಲ್ಲಿ ಶಿಸ್ತಿನ ಮನೋಭಾವ, ದೇಶದ ಬಗ್ಗೆ ಪ್ರೇಮ ಮತ್ತು ತಮ್ಮ ಜವಾಬ್ದಾರಿಯ ಬಗ್ಗೆ ಸೂಕ್ತ ಪ್ರಜ್ಞೆಗಳನ್ನು ಮೂಡಿಸಬೇಕು.

ನನ್ನ ಮಾತನ್ನು ಮುಗಿಸುವ ಮೊದಲು, ಭಾರತ ಸರಕಾರವು 1956ರಲ್ಲಿ ಪ್ರಕಟಿಸಿರುವ ಹಿಂದುಳಿದ ವರ್ಗಗಳವರ ಆಯುಕ್ತರ ವರದಿಯ ಮೂರನೆಯ ಸಂಪುಟದಿಂದ ಕೆಲವು ವಾಕ್ಯಗಳನ್ನು ಇಲ್ಲಿ ಉದ್ಧರಿಸುತ್ತೇನೆ. ಈ ವಾಕ್ಯಗಳು ಆ ಸಂಪುಟದ 21ನೆಯ ಪುಟದಲ್ಲಿ, 'ಮುಕ್ತಾಯ' ಎಂಬ ಶೀರ್ಷಿಕೆಯ ಅಡಿಯಲ್ಲಿ ಇವೆ.

ಈ ಸಂದರ್ಭದಲ್ಲಿ ನಾನು ಒಂದು ನೀತಿಯನ್ನು ಶಿಫಾರಸು ಮಾಡುತ್ತೇನೆ. ಅದೆಂದರೆ, ಅದರ ಪರಿಣಾಮವಾಗಿ ಉಂಟಾಗಬಹುದಾದ ತೊಂದರೆಗಳನ್ನು ಸೂಕ್ಷ್ಮವಾಗಿ ಗಮನದಲ್ಲಿಟ್ಟುಕೊಂಡು, ಅನುಷ್ಠಾನದಲ್ಲಿ ತರುವಾಗ ಉಂಟಾಗಬಹುದಾದ ವಿಳಂಬವನ್ನೂ ಮನಸ್ಸಿನಲ್ಲಿಟ್ಟುಕೊಂಡು, ಹಿಂದುಳಿದ ವರ್ಗಗಳವರನ್ನು ಹೆಚ್ಚು ಹೆಚ್ಚಾಗಿ ದೇಶದ ರಾಜಕೀಯ ಮತ್ತು ಆಡಳಿತಾತ್ಮಕ ಪ್ರಕ್ರಿಯೆಗಳಲ್ಲಿ ತೊಡಗಿಸಿಕೊಳ್ಳಬೇಕು ಏಕೆಂದರೆ ಅವರು ಈ ದೇಶದ ಅವಿಭಾಜ್ಯ, ಅನಿವಾರ್ಯ ಅಂಗವಾಗಿದ್ದಾರೆ. ನಿಧಾನವಾಗಿ ಎಲ್ಲಾ ಜಾತಿ, ವರ್ಣಗಳನ್ನೂ ಒಂದುಗೂಡುವ ಹಾಗೆ ಬೆಸೆಯುವುದೊಂದೆ ನಮಗಿರುವ ಮಾರ್ಗ. ಅದು ಸಾಧ್ಯವಾದಾಗ ಮಾತ್ರ ಶಾಂತಿಯುತವಾದ ಭವಿಷ್ಯವು ನಮ್ಮದಾಗುತ್ತದೆ. ಈ ಹಾದಿಯಲ್ಲಿ ಸಾಗುವುದುಕ್ಕೆ ನಮಗೆ ಸಮಚಿತ್ತ, ಪಟ್ಟುಬಿಡದೆ ಮುನ್ನಡೆಯುವ ಚಲ ಇವುಗಳನ್ನು ದಿನದಿಂದ ದಿನಕ್ಕೆ ನವೀಕರಿಸಿಕೊಂಡು ಹೋಗುವ ಗುಣ, ಎಲ್ಲರ ಸಹಯೋಗ, ಭಿನ್ನಾಭಿಪ್ರಾಯುಗಳನ್ನು ಚರ್ಚೆಗಳ ಮೂಲಕ ಪರಿಹರಿಸಿಕೊಳ್ಳುವ ಪ್ರವೃತ್ತಿ ಮತ್ತು ಕೊಡುಕೊಳ್ಳುವ ಮನೋಭಾವ – ಇವೆಲ್ಲವುಗಳ ಅಗತ್ಯವಿದೆ. ಈ ಸಹಯೋಗವನ್ನು ಸಾಧಿಸುವುದು ಸುಲಭದ ಕೆಲಸವಲ್ಲ. ಒಂದು ಪಕ್ಷದವರು, ಅವರ ಹುಟ್ಟಿನಿಂದ ಬಂದ ಜಾತಿಯ ಅಥವಾ ವರ್ಣದ ಮೇಲರಿಮೆಯ ಅಹಂಭಾವವನ್ನು ತ್ಯಜಿಸಬೇಕು. ಈ ಅಹಂಭಾವ

ರಾಜಕೀಯದಲ್ಲಿನ ಪಾರಮ್ಯಕ್ಕೆ ಸದೃಶವಾಗಿರುತ್ತದೆ ಹಾಗೂ ಓಬೀರಾಯನ ಕಾಲದ ನಂಬಿಕೆಗಳ ಮೇಲೆ ನಿಂತಿದೆ ಮತ್ತು ಇದಕ್ಕೆ ಆಧುನಿಕ ಸಮಾಜವು ಮತ್ತು ಆಧುನಿಕ ಸಂಸ್ಕೃತಿಯು ಕವಡೆಯ ಕಾಸಿನ ಬೆಲೆಯನ್ನೂ ನೀಡುವುದಿಲ್ಲ. ಇನ್ನೊಂದು ಪಕ್ಷವು ಸಂವಿಧಾನದಲ್ಲಿ ಹೇಳಿರುವ ಭ್ರಾತೃತ್ವ ಮತ್ತು ಸಮಾನತೆಯ ಆಶಯಗಳು ಐಂದ್ರಜಾಲಿಕನ ದಂಡದಿಂದ ಮೂಡಿಬರುವಂತೆ ಬಂದು ದೇಶದಲ್ಲಿ ಸ್ಥಾಪಿತವಾಗುವುದಿಲ್ಲ ಎಂಬುದನ್ನು ಮನವರಿಕೆ ಮಾಡಿಕೊಳ್ಳಬೇಕು.

ಸಂಖ್ಯಾದೃಷ್ಟಿಯಿಂದ ಹೆಚ್ಚಿಗೆ ಇರುವ ಹಿಂದುಳಿದ ವರ್ಗಗಳವರು ಮುಂದೆ ಒಂದಲ್ಲ ಒಂದು ದಿನ ತಮ್ಮಿಂದ ಅಧಿಕಾರವನ್ನು ಕಸಿದುಕೊಳ್ಳುತಾರೆಂಬುದನ್ನು ಮುಂದುವರಿದ ವರ್ಗಗಳವರು ತಿಳಿದುಕೊಳ್ಳಬೇಕು. ಆಗ ಈ ಎರಡೂ ಪಂಗಡಗಳ ಮಧ್ಯೆ ಕಹಿಯ ಭಾವನೆಯು ಮೂಡುವುದು ಖಚಿತ. ಹಿಂದುಳಿದ ವರ್ಗಗಳವರು ಹಾಗೆ ಮಾಡುವುದಕ್ಕೆ ಮನಸ್ಸು ಮಾಡುವ ಮೊದಲೇ, ಮೇಲ್ವರ್ಗದವರು ತಮ್ಮ ರಾಜಕೀಯ ಹಾಗೂ ಆಡಳಿತಾತ್ಮಕ ಅಧಿಕಾರವನ್ನು ಹಿಂದುಳಿದ ವರ್ಗಗಳವರ ಸಂಗಡ ಶಾಂತಿಯುತವಾಗಿ ಸಹಬಾಳ್ವೆಯ ತತ್ತ್ವದ ಆಧಾರದ ಮೇಲೆ ಹಂಚಿಕೊಳ್ಳಬೇಕು.

ನಮಗೆ ದೊರೆತಿರುವ ಸವಲತ್ತುಗಳೆಲ್ಲವನ್ನೂ, ಹಾಗೂ ಹಲವಾರು ವರ್ಷಗಳಿಂದ ಸಮಾಜದಿಂದ ನಿರ್ಲಕ್ಷಿತವಾಗಿರುವ ನಮಗೆ ನಮ್ಮ ಕರ್ತವ್ಯ ಮತ್ತು ಜವಾಬ್ದಾರಿಗಳನ್ನು ನಿಮಗೆ ತಿಳಿಸುವ ಆತುರದಲ್ಲಿ, ಅಷ್ಟೇ ಅಲ್ಲದೆ, ನನ್ನ ಸಹೋದರ ಸಹೋದರಿಯರನ್ನು ಬಡತನದ ಸಿಕ್ಕಿನಿಂದ ಪಾರುಮಾಡುವ ಉತ್ಸುಕತೆಯಲ್ಲಿ ನಾನು ನಿಮಗೆ ಉದ್ದವಾದ ಭಾಷಣವನ್ನು ಮಾಡಿ ಹಿಂಸಿಸಿದ್ದೇನೆ ಎಂಬುದು ನನ್ನ ಅರಿವಿನಲ್ಲಿದೆ. ಆದರೆ ನಾವು ಇಂದು ಇಲ್ಲಿ ನೆರೆದಿರುವ ಕಾರಣವು ದುರ್ಬಲವರ್ಗಗಳವರಿಷ್ಟೇಅಲ್ಲದೆ ಇಡೀ ರಾಷ್ಟ್ರಕ್ಕೇ ಅಷ್ಟು ಮಹತ್ವಪೂರ್ಣ ಪ್ರಾಮುಖ್ಯವನ್ನು ಹೊಂದಿದೆ. ಹಲವಾರು ತಲೆಮಾರುಗಳಿಂದ ದುರವಸ್ಥೆಯಲ್ಲಿಯೇ ಜೀವನವನ್ನು ಸಾಗಿಸಿದ ಮನೆಗಳಲ್ಲಿ ಶಾಂತಿ, ತೃಪ್ತಿ ಮತ್ತು ಸಂತೋಷಗಳನ್ನು ಬೆಳಗಿಸುವಂತಹ ಕಾರ್ಯಕ್ರಮಗಳನ್ನು ಈ ವಿಚಾರಗೋಷ್ಠಿಯು ಹಮ್ಮಿಕೊಳ್ಳಲಿ.

## ◆ ಸಮಾಜಸೇವೆಯ ಮೂಲತತ್ತ್ವಗಳು :

**ಭಾರತ ಸ್ವಾತಂತ್ರ್ಯ ಪಡೆದ ನಂತರ ದೇಶವನ್ನು ಕಟ್ಟುವ ಸುಂದರ ಕನಸು ನಾಡಿನ ನಾಯಕರುಗಳಗಿತ್ತು. ಸಮಾನತೆಯ ನಾಡನ್ನು ಪುನಃ ಕಟ್ಟುವ ನೆಲೆಯಲ್ಲಿ ಎಲ್ಲಾ ಜನರಲ್ಲಿರಬೇಕಾದ ಸೇವಾ ಮನೋಭಾವವನ್ನು ಕುರಿತ ಎನ್. ರಾಚಯ್ಯನವರ ಜಿಜ್ಞಾಸೆ ಇಲ್ಲಿದೆ. ಬೆಂಗಳೂರಿನ ಟೌನ್‌ಹಾಲ್‌ನಲ್ಲಿ 1959ರ ಸೆಪ್ಟೆಂಬರ್ 11ರಂದು ಮೈಸೂರು ಶಾಖೆಯ ಸಮಾಜ ಕಾರ್ಯಕರ್ತರ ಸಮ್ಮೇಳನದ ಸದಸ್ಯರನ್ನು ಕುರಿತು ಮಾಡಿದ ಸ್ವಾಗತ ಭಾಷಣವಿದು.**

ನಿಮ್ಮೆಲ್ಲರನ್ನೂ ಈ ಸುಂದರ ಬೆಂಗಳೂರು ನಗರಕ್ಕೆ ಸ್ವಾಗತಿಸಲು ನನಗೆ ಸಂತೋಷವಾಗುತ್ತಿದೆ. ಈ ಸಂತಸದ ಸಂದರ್ಭದಲ್ಲಿ ನಿಮಗೆಲ್ಲರಿಗೂ ನನ್ನ ಶುಭಕಾಮನೆಗಳು.

ತಮ್ಮ ಹತ್ತು ಹಲವು ಕರ್ತವ್ಯಗಳ ಮಧ್ಯದಲ್ಲಿ ಬಿಡುವುಮಾಡಿಕೊಂಡು, ನಮ್ಮ ರಾಜ್ಯದಲ್ಲಿ ಮೊಟ್ಟಮೊದಲ ಬಾರಿಗೆ ನಡೆಯುತ್ತಿರುವ ಈ ಸಮಾವೇಶವನ್ನು ಉದ್ಘಾಟಿಸಲು ಬಂದಿರುವ ಉತ್ತರಪ್ರದೇಶದ ರಾಜ್ಯಪಾಲ ಶ್ರೀ ವಿ.ವಿ. ಗಿರಿಯವರು ಇಂದು ನಮ್ಮೊಡನೆ ಇರುವುದು ನಮ್ಮ ಮೈಸೂರು ರಾಜ್ಯದ ಜನತೆಯ ಸೌಭಾಗ್ಯ. ಸರ್, ನೀವು ಸಾಮಾಜಿಕ, ಶೈಕ್ಷಣಿಕ ಮತ್ತು ಕಾರ್ಮಿಕ ಕ್ಷೇತ್ರಗಳಲ್ಲಿ ಅದ್ಭುತವಾದ ಸೇವೆಯನ್ನು ಸಲ್ಲಿಸಿದ್ದೀರಿ. ನಂತರ ತಾವು ಮದರಾಸು ರಾಜ್ಯದಲ್ಲಿ ಕೈಗಾರಿಕೆ ಮತ್ತು ಸಹಕಾರ ಸಚಿವರಾಗಿ ಕೂಡ ಸೇವೆಯನ್ನು ಮಾಡಿದ್ದೀರಿ. ಈ ನಿಮ್ಮ ಸೇವೆಯಲ್ಲಿ ನೀವು ತೋರಿದ ಸಾಮರ್ಥ್ಯ ಮತ್ತು ಸ್ಫಟಿಕ-ಶುದ್ಧ ಆಲೋಚನೆಗಳಿಂದ ನಿಮ್ಮನ್ನು ಸಿಲೋನ್‌ಗೆ ನಮ್ಮ ದೇಶದ ರಾಯಭಾರಿಯನ್ನಾಗಿ ನೇಮಕಮಾಡಲಾಗಿತ್ತು. ರಾಯಭಾರಿಯ ಕರ್ತವ್ಯದಲ್ಲಿ ಹಾಗೂ ಸಂದಿಗ್ಧ ಸಮಯದಲ್ಲಿ ಭಾರತ ಮತ್ತು ಸಿಲೋನ್ ಎರಡೂ ರಾಷ್ಟ್ರಗಳ ನಡುವಿನ ಸ್ನೇಹ ಸಂಬಂಧವನ್ನು ಉತ್ತಮಗೊಳಿಸುವಲ್ಲಿ ತಾವು ಅನನುಕರಣೀಯರಾಗಿದ್ದಿರಿ. ತದನಂತರ ಕೇಂದ್ರ ಸರಕಾರದಲ್ಲಿ ಮಂತ್ರಿಯ ಹುದ್ದೆಯನ್ನು ಅಲಂಕರಿಸಲು ತಮ್ಮನ್ನು ಅಲ್ಲಿಂದ ಹಿಂದಕ್ಕೆ ಕರೆಸಿಕೊಳ್ಳಲಾಯಿತು. ಕಾರ್ಮಿಕ ಸಚಿವರಾಗಿ

ಎಲ್ಲಾ ಸಂಕಷ್ಟಗಳನ್ನೂ ನಿಭಾಯಿಸಿದಿರಿ ಮತ್ತು ದೇಶದಲ್ಲಿನ ಕಾರ್ಮಿಕರನ್ನು ಮಾಲಿಕರ ಕಠೋರ ಹಿಡಿತದಿಂದ ಬಿಡುಗಡೆಗೊಳಿಸಿದಿರಿ. 1957ರಿಂದ ನೀವು ಉತ್ತರ ಪ್ರದೇಶದ ರಾಜ್ಯಪಾಲರಾಗಿರುವುದು ನಮಗೆ ಅತೀವ ಸಂತೋಷವನ್ನು ನೀಡಿದೆ. ಅಖಿಲ ಭಾರತ ಸಮಾಜ ಸೇವಾ ಸಮಾವೇಶಕ್ಕೆ ತಮ್ಮನ್ನು ಅಧ್ಯಕ್ಷರನ್ನಾಗಿ ಮಾಡಿಕೊಂಡಿರುವುದಕ್ಕೆ ನಮಗೆ ಸಂತೋಷವಾಗಿದೆ ಮತ್ತು ಇದನ್ನು ನಮ್ಮ ಭಾಗ್ಯವೆಂದು ನಾವು ಭಾವಿಸುತ್ತೇವೆ. ಸರ್, ನಾನು ತಮ್ಮನ್ನು ಈ ಸಮಾವೇಶವನ್ನು ಉದ್ಘಾಟಿಸಲು ಹೃತ್ಪೂರ್ವಕವಾಗಿ ಸ್ವಾಗತಿಸುತ್ತೇನೆ.

ಎರಡನೆಯದಾಗಿ, ನಾನು ನಮ್ಮ ಪ್ರೀತಿಯ ಮುಖ್ಯಮಂತ್ರಿ ಮಾನ್ಯ ಶ್ರೀ ಬಿ.ಡಿ. ಜತ್ತಿಯವರನ್ನು ಸ್ವಾಗತಿಸುತ್ತೇನೆ. ಅವರ ಅಸಮಾನವಾದ ಸಾಧನೆಯನ್ನು ನೀವೆಲ್ಲರೂ ಅರಿತಿದ್ದೀರಿ. ಅವರು ಮುಖ್ಯಮಂತ್ರಿ ಪದಗ್ರಹಣ ಮಾಡಿದ ಕೂಡಲೆ ಎಲ್ಲಾ ಇಲಾಖೆಗಳ ಆಡಳಿತಕ್ಕೆ ಹೊಸ ಜೀವವನ್ನು ಎರೆದರು. ಬಡವರು ಮತ್ತು ದಲಿತರ ಉದ್ಧಾರಕ್ಕಾಗಿ ಅವರು ಮಾಡಿರುವ ಸೇವೆಯು ಅಮೋಘವಾದದ್ದು. ತಮ್ಮ ಪಕ್ಷಪಾತರಹಿತ ಸೇವೆಯ ಮೂಲಕ ತಮ್ಮ ಆಳ್ವಿಕೆಯ ಕೇವಲ ಹದಿನೈದು ತಿಂಗಳಿನಲ್ಲಿಯೇ ಅವರು ಎಲ್ಲರ ಪ್ರೀತಿ ಮತ್ತು ವಿಶ್ವಾಸವನ್ನು ಗಳಿಸಿದ್ದಾರೆ. ಸರ್, ತಮ್ಮನ್ನು ಈ ಸಮಾವೇಶದ ಅಧ್ಯಕ್ಷತೆಯನ್ನು ವಹಿಸಿ ಕಾರ್ಯಕ್ರಮಗಳನ್ನು ನಡೆಸಿಕೊಟ್ಟು ನಮಗೆ ಮಾರ್ಗದರ್ಶನ ಮಾಡಬೇಕೆಂದು ಕೋರುತ್ತಾ ತಮ್ಮನ್ನೂ ಸ್ವಾಗತಿಸುತ್ತೇನೆ.

ನನ್ನ ಮುಂದೆ ಸಮಾಜಸೇವೆಯಲ್ಲಿ ಮಹತ್ತಾದುದನ್ನು ಸಾಧಿಸಿರುವ ಮತ್ತು ಅನುಭವದಲ್ಲಿ ಶ್ರೀಮಂತರಾಗಿರುವ ಹಲವಾರು ಶ್ರೇಷ್ಠ ಹಾಗೂ ಪ್ರಸಿದ್ಧ ವ್ಯಕ್ತಿಗಳು ಕುಳಿತಿದ್ದಾರೆ. ಈ ಸಮಾವೇಶಕ್ಕೆ ಅತ್ಯಗತ್ಯವಾಗಿರುವ ವ್ಯವಸ್ಥಿತವಾದ ಪ್ರಯತ್ನ ಮತ್ತು ಪ್ರವರ್ತನ ಶಕ್ತಿಯನ್ನು ಅದಕ್ಕೆ ಧಾರೆಯೆರೆದು ತಮ್ಮ ಪರಿಣತಿಯಿಂದ ಮತ್ತು ಸಮಾಜಸೇವೆಯಲ್ಲಿರುವ ತಮ್ಮ ಉತ್ಸಾಹದಿಂದ ಈ ಸಮಾವೇಶವನ್ನು ಬೆಂಬಲಿಸಿ ಅದು ಅದರ ಉದ್ದೇಶವನ್ನು ಸಾಧಿಸುವಂತೆ ಮಾಡುತ್ತಾರೆಂಬು ನನಗೆ ನಂಬಿಕೆಯಿದೆ. ನಮ್ಮ ದೇಶದಲ್ಲಿ ಕನಿಷ್ಠ ಮಟ್ಟಕ್ಕಿಂತ ಕಡಿಮೆ ಇದ್ದ ಜೀವನದ ಗುಣಮಟ್ಟವು ಮಹಾತ್ಮಜೀ ಮತ್ತು ಪಂಡಿತ್‌ಜೀಯವರಂತಹ ಮುಂದಾಳುಗಳ ಮಹಾನ್ ತ್ಯಾಗದ ಮತ್ತು ಶ್ರಮದ ಪರಿಣಾಮವಾಗಿ ಈಗ

ನಿಧಾನವಾಗಿ, ಆದರೆ ಒಂದೇ ಸಮನಾಗಿ, ಮೇಲೇರುತ್ತಿದೆ. ನಮ್ಮ ಸಂವಿಧಾನದ ಕರ್ತೃಗಳು ಮುಂದಾಲೋಚನೆಯಿಂದ ಸಂವಿಧಾನದ 46ನೆಯ ವಿಧಿಯಲ್ಲಿ ಒಂದು ನಿರ್ದೇಶಕ ತತ್ತ್ವವನ್ನು ಅಳವಡಿಸಿದ್ದಾರೆ. ಅದರ ಪ್ರಕಾರ ರಾಜ್ಯ ಸರಕಾರವು ತನ್ನ ನಾಗರಿಕರನ್ನು ಸಾಮಾಜಿಕ ಅನ್ಯಾಯದಿಂದ ಮತ್ತು ಎಲ್ಲ ರೀತಿಯ ಶೋಷಣೆಯಿಂದ ರಕ್ಷಿಸಬೇಕು. ಮಾನವ ಹಕ್ಕಿನ ಈ ವಿಧಿಯನ್ನು ನಮ್ಮ ರಾಜ್ಯ ಸರಕಾರವು ಅನುಷ್ಠಾನಕ್ಕೆ ತಂದಿದೆ. ಅನಕ್ಷರತೆ, ಅಜ್ಞಾನ, ಮೂಢನಂಬಿಕೆ, ಬಡತನ, ಮೊದಲಾದವುಗಳು ಸಮಾಜದ ಬಹುಸಂಖ್ಯಾತರಲ್ಲಿ ತಾಂಡವವಾಡುತ್ತಿರುವಂತಹ ಹಾಗೂ ಕೆಲವೇ ಅದೃಷ್ಟವಂತ ಜನರ ಕೈನಲ್ಲಿರುವ ಸಾಧನಗಳಾಗಿರುವ ದುರಾಸೆ, ಶೋಷಣೆಗಳೇ ಮೇಲುಗೈಯಾಗಿರುವಂತಹ ನಮ್ಮ ದೇಶದಲ್ಲಿ ಪ್ರಗತಿಯು ಇಲ್ಲಿಯವರೆಗೆ ಕಣ್ಣಿಗೆ ರಾಚುವಷ್ಟು ವೇಗದಲ್ಲಿ ಸಾಗಿಲ್ಲ. ಆದರೆ ಸ್ವಾತಂತ್ರ್ಯಾನಂತರ, ಎಲ್ಲ ಅವ್ಯವಸ್ಥೆಗಳನ್ನೂ ಒಂದು ಕ್ರಮಕ್ಕೆ ತರಲಾಗುತ್ತಿದೆ ಮತ್ತು ರಾಷ್ಟ್ರದ ಪುನರ್ನಿರ್ಮಾಣದ ಚಳವಳಿಯು ಪ್ರಾರಂಭವಾಗಿದೆ. ಮಾನವನ ಘನತೆಯನ್ನು ಎತ್ತಿಹಿಡಿಯಲಾಗಿದೆ, ಸಮಾನತೆಯ ಕಲ್ಪನೆಯನ್ನು ಬಹುಸಂಖ್ಯೆಯ ಜನರು ಒಪ್ಪಿಕೊಂಡಿದ್ದಾರೆ, ಮತ್ತು ಅನ್ಯಾಯದ ಕ್ರಮಗಳು ನಮಗೆ ತೊಡಿಸಿದ್ದ ಸಂಕೋಲೆಯನ್ನು ಮುರಿದು ಹಾಕಲಾಗುತ್ತಿದೆ. ನಾವು ಅಸಮಾನತೆಯನ್ನು ಒಪ್ಪಿಕೊಳ್ಳಬಹುದು ಆದರೆ ಸಾಮಾಜಿಕ ಅಸಮಾನತೆಯನ್ನಲ್ಲ. ಒಮ್ಮೆ ಅರಿವು ಮೂಡಿದ ಮೇಲೆ, ವೈಚಾರಿಕತೆಯು ತನ್ನ ಸ್ಥಾನದಲ್ಲಿ ಸ್ಥಾಪಿತವಾದಮೇಲೆ, ಸಾಮಾಜಿಕ ಅಸಮಾನತೆ ಮತ್ತು ಅನ್ಯಾಯಗಳು ತಾವಾಗಿಯೇ ಮರೆಯಾಗುತ್ತವೆ. ಅಗ ಸಮಾನಸ್ಕಂಧರ ಸಮಾಜವನ್ನು ನಾವು ಸ್ಥಾಪಿಸಬಹುದು. ಇದು ಸಾಮಾಜಿಕ ಸ್ಥಿರತೆ. ಇದನ್ನು ಸಾಧಿಸಿದ ಮೇಲೆ, ಇದನ್ನು ಅನುಸರಿಸಿ ಆರ್ಥಿಕ, ರಾಜಕೀಯ ಸ್ಥಿರತೆಗಳು ತಾವಾಗಿಯೇ ಬರುತ್ತವೆ. ಆಗ ರಾಷ್ಟ್ರೀಯ ಹೆಮ್ಮೆ, ರಕ್ಷಣೆ, ಐಕ್ಯತೆ ಮತ್ತು ಪ್ರಗತಿಗಳು ಖಚಿತವಾಗಿ ನಮ್ಮದಾಗುತ್ತವೆ. ಅಂದರೆ, ಇವೆಲ್ಲಕ್ಕೂ ಸಾಮಾಜಿಕ ನ್ಯಾಯ ಮತ್ತು ಸಮಾನತೆಗಳ ಮೇಲೆ ನಿಂತಿರುವ ಸಾಮಾಜಿಕ ಕಲ್ಯಾಣವು ಅಡಿಗಲ್ಲಾಗಿರುತ್ತದೆ.

ಈ ಕ್ಷೇತ್ರದಲ್ಲಿ ಇಲ್ಲಿಯವರೆಗೆ ಸಾಧಿಸಿರುವುದನ್ನು ಮತ್ತು ಇನ್ನೂ ಸಾಧಿಸಬೇಕಾಗಿರುವುದನ್ನು ವಿಮರ್ಶಿಸಲು ನಾವು ಇಲ್ಲಿ ಸೇರಿದ್ದೇವೆ. ಸಾಮಾಜಿಕ ಸಮಸ್ಯೆಗಳ ಅಧ್ಯಯನವನ್ನು ಕೈಗೆತ್ತಿಕೊಳ್ಳುವ, ಬೆಳೆಸುವ ನಮ್ಮ ಉದ್ದೇಶಗಳಿಗೆ ಹೊಸ

ಬಲವನ್ನು ತುಂಬಲು, ಹೊಸ ಜೀವವನ್ನು ತುಂಬಲು ಮತ್ತು ಅದಕ್ಕೆ ಹೊಸ ಪ್ರಾರಂಭವನ್ನು ನೀಡಲು ನಾವಿಲ್ಲಿ ಸೇರಿದ್ದೇವೆ. ವೈಜ್ಞಾನಿಕವಾಗಿ ನಡೆಸುವ ಸಾಮಾಜಿಕ ಕೆಲಸಕಾರ್ಯಗಳ ಬಗೆಗಿನ ಜ್ಞಾನವನ್ನು ಮತ್ತು ಮಾಹಿತಿಯನ್ನು ಎಲ್ಲೆಡೆ ಬಿತ್ತರಿಸಲು, ತನ್ಮೂಲಕ ಸಾರ್ವಜನಿಕ ಅಭಿಪ್ರಾಯಕ್ಕೆ ಶೈಕ್ಷಣಿಕ ನಿಲುವನ್ನು ನೀಡಲು ನಾವಿಲ್ಲಿ ಸೇರಿದ್ದೇವೆ. ಮೇಲೆ ಹೇಳಿದ ನಮ್ಮ ಉದ್ದೇಶಗಳನ್ನು ಸಾಧಿಸಲು ಅಗತ್ಯವಾದ ಸಾಮಾಜಿಕ ಕೆಲಸಗಳ ಬಗ್ಗೆ ಕಾರ್ಯಕರ್ತರಿಗೆವೃತ್ತಿ–ತರಬೇತಿಯನ್ನು ಮತ್ತು ಎಲ್ಲಾ ಬಗೆಯ ಸಾಂದರ್ಭಿಕ ಹಾಗೂ ಪೂರಕ ಕ್ರಿಯೆಗಳನ್ನು ಮಾಡಲು ಅಗತ್ಯವಾದ ಜ್ಞಾನವನ್ನು ನೀಡಲು ನಾವು ಇಲ್ಲಿ ಸೇರಿದ್ದೇವೆ.

ಸರಕಾರೀ ಸಂಸ್ಥೆಗಳು, ಸ್ಥಳೀಯ ಸಂಸ್ಥೆಗಳು ಮತ್ತು ಸ್ವಯಂಸೇವಾ ಸಂಸ್ಥೆಗಳು ತಮ್ಮ ಮುಂದೆ ಜನತೆಯ ಸಂಕಷ್ಟಗಳನ್ನು ನಿವಾರಿಸುವ ಒಂದು ಸಾಮಾನ್ಯ ಗುರಿಯನ್ನು ಇಟ್ಟುಕೊಂಡಿವೆ. ಸಾಮಾಜಿಕ ಕರ್ತವ್ಯಗಳಲ್ಲಿ ತೊಡಗಿಕೊಂಡಿರುವವರೆಲ್ಲ ವ್ಯಕ್ತಿಗಳ ಹಾಗೂ ಸಂಸ್ಥೆಗಳ ನಡುವೆ ಸಹಕಾರ, ಸಹಯೋಗ ಇರಬೇಕು. ನಮ್ಮ ಸಮಾಜದಲ್ಲಿ ಎಲ್ಲರೂ ದುರಾಸೆಯಿಂದ ಗಳಿಸಬಹುದಾದುವೆಲ್ಲವೂ ಇವೆ, ಆದರೆ ವೈಯಕ್ತಿಕವಾದ ಅಗತ್ಯಗಳ ಪೂರೈಕೆ ಮಾತ್ರ ಇಲ್ಲ. ಈ ಕಾರಣದಿಂದಲೇ, ಅಹಿಂಸಾತ್ಮಕವಾದ, ಶಾಂತಿಯುತವಾದ ಸಾಮಾಜಿಕ ಮತ್ತು ಆರ್ಥಿಕ ಕ್ರಾಂತಿ ನಮ್ಮ ದೇಶದಲ್ಲಿ ನಡೆಯುತ್ತಿದೆ. ಪ್ರಜಾಪ್ರಭುತ್ವವೆಂದರೆ ಸೇವೆ ಮತ್ತು ತ್ಯಾಗ ಎಂದೇ ಅರ್ಥ. ಸಮಾಜವನ್ನು ಶೋಷಿಸುವ ಪಟ್ಟಭದ್ರ ಹಿತಾಸಕ್ತಿಗಳಿಗೆ ಇಲ್ಲಿ ಸ್ಥಳವಿಲ್ಲ. ಆದ್ದರಿಂದ, ನೀವು ಶ್ರಮದ ದುಡಿಮೆಗೆ, ತ್ಯಾಗಕ್ಕೆ ಸಿದ್ಧರಾಗಿರಬೇಕೆಂದು ನಾನು ಒತ್ತಿ ಹೇಳುತ್ತೇನೆ. ಸಂಕಷ್ಟಗಳ ಸರಮಾಲೆ ತನ್ನ ಕರಿಯ ನೆರಳನ್ನು ಹರಡಿರುವ ಪ್ರತಿ ಮನೆಗೂ ನೀವು ಶಾಂತಿ ಮತ್ತು ಸಂತೋಷವೆಂಬ ಬೆಳಕನ್ನು ತೆಗೆದುಕೊಂಡು ಹೋಗಬೇಕು. ನೀವು ಸಾಮಾಜಿಕ ನ್ಯಾಯವನ್ನು ಜನತೆಗೆ ನೀಡುವಲ್ಲಿ, ಶಾಂತಿ, ಸತ್ಯ, ಧೈರ್ಯ ಮತ್ತು ಆತ್ಮವಿಶ್ವಾಸಗಳ ರಾಯಭಾರಿಗಳಾಗಬೇಕು. ಬುದ್ಧನು ಹೇಳಿರುವ ಈ ಕೆಳಕಂಡ ಮಾತುಗಳಿಂದ ನಿಮ್ಮನ್ನು ನೀವೇ ಅಣಿಗೊಳಿಸಿಕೊಳ್ಳಲು ಬೇಕಾದ ಸ್ಫೂರ್ತಿಯನ್ನು ಪಡೆಯಬೇಕು: –

ತಾಯಿಯು ಇರುವ ತನ್ನ ಒಂದೇ ಮಗುವಿನ ಯೋಗಕ್ಷೇಮವನ್ನು ತನ್ನ ಜೀವವಿರುವವರೆಗೆ ನೋಡಿಕೊಳ್ಳುವ ಹಾಗೆ ನಮ್ಮ ಸುತ್ತ ಇರುವ ಎಲ್ಲಾ ಪ್ರಾಣಿಗಳಿಗೆ, ಅಣು ಮಹತ್ತುಗಳ ಭೇದವಿಲ್ಲದೆ, ಸಂಕೋಚರಹಿತ ಬುದ್ಧಿಯ, ಹೃದಯವೈಶಾಲ್ಯದ

ಪ್ರೀತಿಯನು ನಾವೆರೆಯೋಣ ದ್ವೇಷರಹಿತವಾಗಿ ಅನಿರ್ಬಂಧಿತ, ಸ್ವೇಚ್ಛೆಯ ಸ್ರೋತದಿಂದ ಹೊಮ್ಮುವ ಪ್ರೀತಿಯ ಧಾರೆಯ ನೆರೆಯೋಣ ನಮ್ಮ ಸುತ್ತಲಿನ ಪ್ರಪಂಚಕ್ಕೆ, ನಮ್ಮ ಮೇಲಿರುವ, ಕೆಳಗಿರುವ ಹಾಗೂ ಎಲ್ಲೆಲ್ಲೂ ಇರುವ ಲೋಕಕ್ಕೆ.

ಇದು ನಮ್ಮ ಸಮಾಜಸೇವೆಯ ಮೂಲತತ್ತ್ವ. ನಿಮಗೆಲ್ಲರಿಗೂ ನಾನು ಮತ್ತೊಮ್ಮೆ ಹೃತ್ಪೂರ್ವಕ ಸ್ವಾಗತವನ್ನು ಕೋರುತ್ತೇನೆ.

## ♦ ಸ್ವಾರ್ಥರಹಿತ ಸೇವೆಯೇ ಅಭ್ಯುದಯದ ಮಂತ್ರಗಳು

**ವಸಾಹತುಶಾಹಿ ಆಡಳಿತವು ಭಾರತಕ್ಕೆ ಕಲಿಸಿದ ದೊಡ್ಡಪಾಠ ಸಮಾಜಸೇವೆ. ಕ್ರಿಶ್ಚಿಯನ್ನರಲ್ಲಿದ್ದ ಮಾನವತಾವಾದದ ಗುಣ ಅನುಕರಣೀಯವಾದುದು. ಸ್ವಾತಂತ್ರ್ಯ ನಂತರ 1959ರ ಆಗಸ್ಟ್ 5ರಂದು ಬೆಂಗಳೂರಿನ ವಿಧಾನಸೌಧದ ತಮ್ಮ ಕಛೇರಿಯಲ್ಲಿ ಸೇರಿದ್ದ ಸಾಮಾಜಿಕ ಕಾರ್ಯಕತರ ಮೊದಲ ಸಭೆಯಲ್ಲಿ ಮಾಡಿದ ಭಾಷಣ.**

ಮಹತ್ವಪೂರ್ಣ ಮತ್ತು ವಿಶೇಷ ಸಂಗತಿಗಳನ್ನೊಳಗೊಂಡ ಕಾರ್ಯಕ್ರಮವನ್ನು ಕೈಗೆತ್ತಿಕೊಂಡಿರುವ ನಿಮ್ಮನ್ನು ಅಭಿನಂದಿಸಬೇಕಾಗಿದೆ. ಸಮಾಜ ಸೇವೆಯು ಸರಳವಾದ ಕೆಲಸವಲ್ಲ. ಬಹುಪಾಲು ಜನರು ಬಡತನದ ಅನಕ್ಷರತೆಯ, ಅಜ್ಞಾನದ ಹಾಗೂ ಮೂಢನಂಬಿಕೆಯ ಕೂಪದಲ್ಲಿ ಮುಳುಗಿರುವ ನಮ್ಮ ದೇಶದಲ್ಲಿ ಸಮಾಜ ಸೇವೆಯ ವ್ಯಾಪ್ತಿ ವಿಶಾಲವಾಗಿದೆ. ದೇವರ ಹೆಸರಿನಲ್ಲಿ, ಮತಧರ್ಮ, ಸಂಸ್ಕೃತಿ ಮುಂತಾದವುಗಳ ಹೆಸರಿನಲ್ಲಿ ದೇಶದ ಬಹುಸಂಖ್ಯೆಯ ಜನರ ಮೇಲೆ ಕೆಲವೇ ಜನರಿಂದ ಸಾಮಾಜಿಕ ದ್ರೋಹವು ಎಸಗಲ್ಪಡುತ್ತಿದೆ. ಅಸಹಾಯಕರಿಗೆ, ಅಲಕ್ಷಿತರಿಗೆ ಮತ್ತು ಶೋಷಿತರಿಗೆ ಮತ್ತೆ ಹೊಸ ಜೀವನವನ್ನು ನೀಡುವ ದಿಕ್ಕಿನಲ್ಲಿ ನೀವು ನಿರ್ಣಾಯಕ ಪಾತ್ರವನ್ನು ವಹಿಸಬೇಕಾಗಿದೆ. ಸಾಮಾಜಿಕ ಕಾರ್ಯಕರ್ತನು ಶ್ರದ್ಧಾವಂತನಾಗಿದ್ದರೆ, ಕಷ್ಟಪಟ್ಟು ದುಡಿಯುವವನಾಗಿದ್ದರೆ, ಧೈರ್ಯವಂತ, ಪಕ್ಷಪಾತರಹಿತ ಹಾಗೂ ಪ್ರಾಮಾಣಿಕನಾಗಿದ್ದರೆ, ಆತ ಅತ್ಯುನ್ನತವಾದ, ಪವಿತ್ರವಾದ ಪಾತ್ರವನ್ನು ವಹಿಸಬಲ್ಲ. ನಿಮ್ಮಿಂದ ನಿರೀಕ್ಷಿಸುತ್ತಿರುವ ಸಹಾಯಕ್ಕೆ ಆರ್ಥಿಕ, ಸಾಮಾಜಿಕ, ಶೈಕ್ಷಣಿಕ, ಆರೋಗ್ಯ ಮತ್ತು ಸಾಂಸ್ಕೃತಿಕ ಮೊದಲಾದ ಹಲವು ಆಯಾಮಗಳಿವೆ. ಸಹಾಯವನ್ನು ಪಡೆಯಬೇಕಾಗಿರುವ ಜನತೆಯಲ್ಲಿ ಅನುಕೂಲಕರ ಮಾನಸಿಕ ಹಿನ್ನೆಲೆಯನ್ನು ನಿರ್ಮಿಸಿದರೆ ನೀವು ಸಾರ್ಥಕ ಸೇವೆಯನ್ನು ಅವರಿಗೆ ಸಲ್ಲಿಸಬಹುದು. ಅವರಿಗೆ ನೀವು ಶ್ರದ್ಧಾವಂತ, ಪ್ರಾಮಾಣಿಕ ಕಾರ್ಯಕರ್ತರು ಎನ್ನುವುದನ್ನು ಮನಗಾಣಿಸಬೇಕು. ಇದಕ್ಕಾಗಿ ನೀವು ಪಕ್ಷಪಾತ, ರಾಜಕೀಯ ಹಾಗೂ ವೈಯಕ್ತಿಕವಾಗಿ ಮಾಡುವ ಸಮಾಜ ಸೇವೆ ಬೇರೆ, ವ್ಯವಸ್ಥಿತ ರೂಪದಲ್ಲಿ ಮಾಡುವ ಸಮಾಜ ಸೇವೆ ಬೇರೆ. ಎರಡನೆಯದು ಅರ್ಥಪೂರ್ಣ ಹಾಗೂ

ಪರಿಣಾಮಕಾರಿಯಾಗಿರುತ್ತದೆ. ಹಣಕಾಸಿನ ಅಭಾವ ನಿಮಗೆ ಎದುರಾಗುವುದು ಸಹಜವೇ. ಆದರೆ, ಈ ನಿಟ್ಟಿನಲ್ಲಿ ಪ್ರಾಮಾಣಿಕವಾಗಿ ಕೆಲಸಮಾಡುವ ಸಂಸ್ಥೆಯಿದೆಯೆಂದರೆ, ತಾವು ನೀಡಿದ ಹಣವು ಮುಟ್ಟಬೇಕಾದವರನ್ನು ಮುಟ್ಟುತ್ತದೆ, ಉದ್ದೇಶಿತ ಪರಿಣಾಮವನ್ನು ಸಾಧಿಸುತ್ತದೆ ಎಂದರೆ, ರಾಜ್ಯದಲ್ಲಿ ಇಂತಹ ಪ್ರಯತ್ನಗಳಿಗೆ ಉದಾರವಾಗಿ ಧನಸಹಾಯಮಾಡುವ ದಾನಿಗಳು ಇದ್ದಾರೆ. ನೀವು ನಿಮ್ಮ ಜನಗಳನ್ನು ಸರಿಯಾದ ದಿಕ್ಕಿನಲ್ಲಿ, ರೀತಿಯಲ್ಲಿ ನಡೆಸಿದರೆ, ನಿಮಗೆ ಅಗತ್ಯವಾದ ಸಹಾಯ, ಮಾರ್ಗದರ್ಶನ ದೊರೆಯುತ್ತದೆ. ಇಂದು ನಮ್ಮ ಸಮಾಜವನ್ನು ಮಲಿನಗೊಳಿಸುತ್ತಿರುವ ಅನೇಕ ಕೆಡುಕುಗಳನ್ನು ಕಾಲ ಕಳೆದಂತೆ ಯೋಗ್ಯ ಶಿಕ್ಷಣವು ನಾಶಮಾಡುತ್ತದೆ. ಜನತೆಯಿಂದ ಸೂಕ್ತ ಪ್ರತಿಕ್ರಿಯೆಯು ದೊರಕುವವರೆಗೆ ಸಂವಿಧಾನದ ನಿರ್ದೇಶಕ ಸೂತ್ರಗಳನ್ನೂ ಜಾರಿಗೊಳಿಸುವುದು ಅಸಾಧ್ಯವಾಗುತ್ತದೆ. ಆದ್ದರಿಂದ ಶಿಕ್ಷಣವು, ಅದರಲ್ಲಿಯೂ, ಗ್ರಾಮಾಂತರ ಪ್ರದೇಶದ ಜನರಿಗೆ ಅಗತ್ಯವಾದ ಶಿಕ್ಷಣವು ಬಹು ಮುಖ್ಯವಾದದ್ದಾಗಿರುತ್ತದೆ. ಪ್ರತಿಯೊಬ್ಬ ಸಾಮಾಜಿಕ ಕಾರ್ಯಕರ್ತನೂ/ಕಾರ್ಯಕರ್ತೆಯೂ ತಾನು ಸಮಾಜಕ್ಕೆ ಎಷ್ಟು ಪ್ರಯೋಜನಕಾರಿಯಾಗಿದ್ದೇನೆ ಎಂಬುದರ ಮೇಲೆ ತನ್ನ ಸಾಮರ್ಥ್ಯವನ್ನು ಅಳೆದುಕೊಳ್ಳಬಹುದು. ಬಿಡುವಿನ ವೇಳೆಯಲ್ಲಿ ಮಾಡುವ ಸಮಾಜಸೇವೆಯು ಕೂಡ, ಅದು ಪ್ರಾಮಾಣಿಕವಾಗಿದ್ದರೆ, ಸ್ವಾಗತಾರ್ಹವಾಗುತ್ತದೆ. ನಿಮ್ಮಂತಹ ಕಾರ್ಯಕರ್ತರನ್ನೆಲ್ಲಾ ಸೇರಿಸಿಕೊಂಡು ಬಲವಾದ, ಸಮಾಜ ಸೇವೆಗೆ ತುಡಿಯುವಂತೆ ವ್ಯವಸ್ಥಿತರಾಗಿರಿ. ಈ ಪ್ರಾಥಮಿಕ ಹಂತದಲ್ಲಿ ವಿಚಾರಗೋಷ್ಠಿಯನ್ನು ಏರ್ಪಡಿಸುವುದು ಅಗತ್ಯವಿಲ್ಲ. ಮೊದಲು ನಾವುಸಂಘಟಿತರಾಗೋಣ, ನಂತರ ಸಮಾವೇಶವನ್ನು ನಡೆಸುವ ಬಗ್ಗೆ ಯೋಚಿಸೋಣ. ಇತರ ರಾಜ್ಯಗಳಲ್ಲಿ ಈ ನಿಟ್ಟಿನಲ್ಲಿ ನಡೆದಿರುವ ಕಾರ್ಯಗಳ ವರದಿಯು ನಮಗೆ ಸಹಾಯಮಾಡುತ್ತದೆ. ರಸೀದಿ ಪುಸ್ತಕಗಳನ್ನು ಮುದ್ರಿಸಿ ಸಿದ್ಧಪಡಿಸಿಕೊಂಡು, ಧನಸಹಾಯವನ್ನು ಪಡೆಯಲು ಗಂಭೀರ ಪ್ರಯತ್ನಗಳನ್ನು ನಡೆಸಿ. ಕೆಲವು ರೀತಿಗಳಲ್ಲಿ ಸರಕಾರವೂ ನಿಮಗೆ ಸಹಾಯವನ್ನು ಮಾಡುತ್ತದೆ. ಆದರೆ ಇದು ಬಹಳ ಕಾಲ ನಡೆಯುವಂತಹುದೂ ಅಲ್ಲ, ನಿಮ್ಮನ್ನು ಬಹುದೂರ ಕೊಂಡೊಯ್ಯುವುದೂ ಇಲ್ಲ. ಈಗ ಅಗತ್ಯವಾಗಿರುವುದು ನಿಮ್ಮ ಕಾಲಮೇಲೆ ನೀವು ನಿಲ್ಲುವಂತೆ ಮಾಡಬಲ್ಲ ಬಲ. ಧನಸಹಾಯವನ್ನು ಸಂಗ್ರಹಿಸಲು ಶ್ರಮಪಡಿ ಮತ್ತು ಸಂಗ್ರಹಿಸಿದ ಹಣವನ್ನು

ಜನತೆಯ ಕಲ್ಯಾಣಕ್ಕಾಗಿ ಉಪಯೋಗಿಸಿ. ಆಗ ನಿಮ್ಮ ಪ್ರಾಮಾಣಿಕ ಪ್ರಯತ್ನ ಹಾಗೂ ನಿಸ್ವಾರ್ಥ ಸೇವೆ ಎಲ್ಲಾ ವಿವೇಕವಂತರಿಂದಲೂ ಅನುಮೋದನೆ ಮತ್ತು ಶ್ಲಾಘನೆಯನ್ನು ಪಡೆಯಲು ಅರ್ಹವಾಗುತ್ತದೆ. ನಿಮ್ಮ ಪ್ರಯತ್ನದಲ್ಲಿ ನಿಮಗೆ ಯಶಸ್ಸು ಸಿಗಲಿ.

## ♦ ಅಂಗವಿಕಲರ ಸಂಕಷ್ಟಗಳನ್ನು ಕಡಿಮೆಗೊಳಿಸುವ ಕಾರ್ಯಕ್ರಮಗಳು

**1960ರ ಸೆಪ್ಟೆಂಬರ್ 14ರಂದು ಬೆಂಗಳೂರಿನ ಟೌನ್ ಹಾಲ್‌ನಲ್ಲಿ ಬೆಂಗಳೂರು ಅಂಗವಿಕಲರ ಸಂಸ್ಥೆಯ ತರಬೇತಿ ಕಾರ್ಯಕ್ರಮದಲ್ಲಿ ಮಾಡಿದ ಉದ್ಘಾಟನಾ ಭಾಷಣದಲ್ಲಿ "ಅಂಗವಿಕಲ ಮಕ್ಕಳ ಬಗೆಗಿನ ಮಾನವೀಯ ನೆಲೆಯನ್ನು ಎನ್. ರಾಚಯ್ಯನವರ ದೃಷ್ಟಿಯಲ್ಲಿ ಹಪಾಹಪಿಸುತ್ತದೆ. ಅಂಗವಿಕಲರಿಗೂ ಸಾಮಾಜಿಕವಾಗಿ ಸಬಲರನ್ನಾಗಿ ಮಾಡುವಲ್ಲಿ ಅವರ ಸರ್ವತೋಮುಖ ಬೆಳವಣಿಗೆಗೆ ಸರ್ಕಾರದ ಕಾನೂನಾತ್ಮಕ ನಡಾವಳಿಗಳನ್ನು ಈ ಭಾಷಣದಲ್ಲಿ ನೋಡಬಹುದು.**

ನಿಮಗೆಲ್ಲಾ ತಿಳಿದಿರುವಂತೆ ನನ್ನ ಸಹೋದ್ಯೋಗಿ ಮುಖ್ಯಮಂತ್ರಿ ಶ್ರೀ ಬಿ.ಡಿ. ಜತ್ತಿಯವರು ಈ ಸಂಜೆಯ ಕಾರ್ಯಕ್ರಮವನ್ನು ಉದ್ಘಾಟಿಸಬೇಕಾಗಿತ್ತು. ಅನಿವಾರ್ಯವಾಗಿ ಈ ಸಮಾರಂಭಕ್ಕೆ ಹಾಜರಾಗಲು ಸಾಧ್ಯವಾಗದ ಕಾರಣ ಅವರು ನನ್ನನ್ನು ಅಂಗವಿಕಲರ ಸಂಸ್ಥೆಯ ತರಬೇತಿ ಕಾರ್ಯಕ್ರಮವನ್ನು ಉದ್ಘಾಟಿಸಲು ಕೇಳಿಕೊಂಡರು. ಹಾಗಾಗಿ, ಅವರ ಪರವಾಗಿ ನಾನು ಈಗ ಇಲ್ಲಿ ನಿಂತಿದ್ದೇನೆ.

ದುರದೃಷ್ಟದಿಂದ ನರಳುತ್ತಿರುವ ನಮ್ಮ ಸೋದರ ಸೋದರಿಯರ ಸಂಕಷ್ಟಗಳನ್ನು ಕಡಿಮೆ ಮಾಡುವಲ್ಲಿ ಅಮೋಘವಾದ ಸೇವೆಯನ್ನು ಸಲ್ಲಿಸುತ್ತಿರುವ ನಿಮ್ಮ ಸಂಸ್ಥೆಯ ಈ ಕಾರ್ಯಕ್ರಮದಲ್ಲಿ ನಿಮ್ಮೊಡನೆ ಇರುವುದು ನನಗೆ ಅತೀವ ಸಂತೋಷವನ್ನು ಕೊಡುವಂತಹುದಾಗಿದೆ.

ಈ ಮಾನವೀಯ ಸೇವೆಯಲ್ಲಿ ನಿರತವಾಗಿರುವ ಇಂತಹ ಕೆಲವು ಸಂಸ್ಥೆಗಳು ರಾಜ್ಯದಲ್ಲಿವೆ. ಆದರೆ, ರಾಜ್ಯದಲ್ಲಿ ಇದೇ ಮೊದಲ ಬಾರಿಗೆ ಸಾರ್ವಜನಿಕ ಸೇವೆಗಾಗಿ ತುಡಿಯುತ್ತಿರುವ, ಜೀವನದಲ್ಲಿ ಮಹತ್ವದ ಸ್ಥಾನಗಳನ್ನು ಹೊಂದಿರುವ, ವ್ಯಕ್ತಿಗಳು ಮುಂದೆಬಂದು ಅಂಗವಿಕಲರ ಪುನರ್ವಸತಿ ಕಾರ್ಯಗಳಲ್ಲಿ ವ್ಯವಸ್ಥಿತ ರೂಪದಲ್ಲಿ ನಡೆಸಲು ಯೋಜಿಸುತ್ತಿದ್ದಾರೆ. ಸಂಘವು ಹೊಲಿಗೆ ಮತ್ತು ಪುಸ್ತಕಗಳಿಗೆ ರಟ್ಟುಕಟ್ಟುವ ವಿಭಾಗಗಳನ್ನು ಪ್ರಾರಂಭಿಸಲಿರುವುದು ನನಗೆ ಸಂತೋಷವನ್ನು

ನೀಡುತ್ತಿದೆ. ಇನ್ನು ಅನತಿಕಾಲದಲ್ಲಿಯೇ, ನಮ್ಮ ಜನತೆಯ ಸಹಕಾರದಿಂದ ಸಂಘವು ಇನ್ನೂ ಹಲವು ಪ್ರಯೋಜನಕಾರಿ ವಿಭಾಗಗಳನ್ನು ಪ್ರಾರಂಭಿಸುತ್ತದೆಯೆಂಬ ವಿಶ್ವಾಸ ನನಗಿದೆ. ಸ್ಥೂಲವಾದ ಒಂದು ಅಂದಾಜಿನ ಪ್ರಕಾರ ಭಾರತವೊಂದರಲ್ಲಿಯೇ ಸುಮಾರು ಎರಡು ದಶಲಕ್ಷ ಅಂಧರು ಇದ್ದಾರೆಂದು ತಿಳಿದುಬಂದಿದೆ. ಇವರಲ್ಲದೆ, ಮೂಗರು, ಕಿವುಡರು ಮತ್ತಿತರ ಅಂಗವಿಕಲರೂ ಇದ್ದಾರೆ. ರಾಜ್ಯದಲ್ಲಿರುವ ಅಥವಾ ಇಡೀ ದೇಶದಲ್ಲಿರುವ ಅಂಗವಿಕಲರ ಸಂಖ್ಯೆಯ ಬಗ್ಗೆ ನಮಗೆ ನಿಖರವಾದ ಅಂಕಿಅಂಶಗಳು ನಮ್ಮ ಬಳಿ ಇಲ್ಲ. ಆದರೆ ಇತರ ದೇಶಗಳಲ್ಲಿರುವುದಕ್ಕಿಂತ ನಮ್ಮ ದೇಶದಲ್ಲಿ ಅಂಗವಿಕಲರ ಸಂಖ್ಯೆ ಹೆಚ್ಚು ಎಂಬುದು ನನ್ನ ಖಚಿತವಾದ ನಂಬಿಕೆ. ಈಗ ಅಸ್ತಿತ್ವದಲ್ಲಿರುವ ಸಂಘ ಸಂಸ್ಥೆಗಳು ಸಂಘಟಿತ ಮತ್ತು ಪರಿಣಾಮಕಾರಿ ಕ್ರಮಗಳನ್ನು ತೆಗೆದುಕೊಳ್ಳುವವರೆಗೂ, ಮತ್ತು ತಮ್ಮ ಅಸಹಾಯಕ ಬಂಧುಗಳ ಬಗ್ಗೆ ಸಮಾಜದ ನಾಗರಿಕರ ಪ್ರಜ್ಞೆ ಎಚ್ಚರಗೊಳ್ಳುವವರೆಗೂ, ಅಂಗವಿಕಲರ ಅಗಾಧವಾದ ಸಮಸ್ಯೆಯನ್ನು ಪರಿಹರಿಸುವಲ್ಲಿ ಸಾಕಷ್ಟು ಪ್ರಗತಿಯನ್ನು ಸಾಧಿಸಲು ಸಾಧ್ಯವಾಗುವುದಿಲ್ಲ. ಅಭಿವೃದ್ಧಿಯನ್ನು ಹೊಂದಿರುವ ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿ ರಾಷ್ಟ್ರೀಯ ಅಂಗವಿಕಲ ಸಂಸ್ಥೆಗಳು ಉತ್ಕೃಷ್ಟವಾದ ಸೇವೆಯನ್ನು ಸಲ್ಲಿಸುತ್ತಿವೆ. ಆ ದೇಶಗಳಲ್ಲಿ ಜಾರಿಯಲ್ಲಿರುವ ಸಾಮಾಜಿಕ ಭದ್ರತಾ ಕಾನೂನುಗಳು ಅಂಗವಿಕಲರ ಶಿಕ್ಷಣಕ್ಕೆ, ತರಬೇತಿಗೆ ಮತ್ತು ಸಂಪಾದನೆಗೆ ಅವಕಾಶಗಳನ್ನು ಕಲ್ಪಿಸಿ ಸಮಾಜದಲ್ಲಿ ಸೂಕ್ತ ಸ್ಥಾನಗಳನ್ನು ಗಳಿಸಿಕೊಳ್ಳಲು ಅವರಿಗೆ ಸಹಾಯಮಾಡುತ್ತವೆ. ನಮ್ಮ ದೇಶದಲ್ಲಿಯೂ ಅಂಗವಿಕಲರಿಗಾಗಿ ಅಂತಹ ಶಾಸನಗಳನ್ನು ಜಾರಿಗೆ ತರಲು ಇದು ಸೂಕ್ತಕಾಲವಾಗಿದೆ. ಇದರ ಮೂಲಕ ಸಂವಿಧಾನದಲ್ಲಿ ನೀಡಿರುವ ಮೂಲಭೂತ ಹಕ್ಕುಗಳನ್ನು ಪರಿಣಾಮಕಾರಿಯಾಗಿ ಅನ್ವಯಮಾಡಬಹುದು.

ಮೈಸೂರು ಸರಕಾರವು ಈ ಪರಿಸ್ಥಿತಿಯನ್ನು ಸಂಪೂರ್ಣವಾಗಿ ಅರಿತುಕೊಂಡಿದೆ ಮತ್ತು ಅಂಗವಿಕಲ ಮಕ್ಕಳ ವಿದ್ಯಾಭ್ಯಾಸಕ್ಕೆ ಅಗತ್ಯವಾದ ಶಕ್ತಿಯನ್ನು ತುಂಬಲು ಸರಕಾರವು ಶಿಕ್ಷಣ ಇಲಾಖೆಯಲ್ಲಿ ಉಪ ನಿರ್ದೇಶಕರ ಮಟ್ಟದಲ್ಲಿ ವಿಶೇಷ ಅಧಿಕಾರಿಯನ್ನು ನೇಮಿಸಲು ನಿರ್ಧಾರ ಮಾಡಿದೆ. ಹಾಲಿ ಇರುವ ಹಾಗೂ ಹೊಸದಾಗಿ ಪ್ರಾರಂಭವಾಗುವ ಶಾಲೆಗಳಲ್ಲಿ ಅಂಗವಿಕಲ ಮಕ್ಕಳಿಗೆ ನೀಡುವ ತರಬೇತಿ ಕಾರ್ಯಕ್ರಮಗಳು ಸುಸಂಘಟಿತವಾಗಿ ನಡೆಯುವಂತೆ ಅವರು

ನೋಡಿಕೊಳ್ಳುತ್ತಾರೆ. ಈ ನತದೃಷ್ಟ ಮಕ್ಕಳಿಗೆ ಅನುಕೂಲಕರ ಉದ್ಯೋಗಗಳನ್ನು ಒದಗಿಸಿ ಅವರು ಜೀವನಾವಶ್ಯಕ ವಸ್ತುಗಳನ್ನು ಪಡೆಯಲು ಸಾಕಷ್ಟು ಸಂಪಾದನೆಯನ್ನು ಗಳಿಸಲು ನಾವು ಮಾಡುವ ಸಹಾಯವು ನಾವು ಅವರಿಗೆ ತೋರಿಸುವ ಅನುಕಂಪವಲ್ಲ, ಬದಲಿಗೆ ಅದು ನಮ್ಮ ಕರ್ತವ್ಯ. ಇದರಿಂದ ಅವರಿಗೆ ಸ್ವತಂತ್ರವಾಗಿ, ಸಮಾಜದಲ್ಲಿನ ಇತರರಿಗೆ ಸಮಾನವಾಗಿ ಆತ್ಮಗೌರವದಿಂದ ಬಾಳಲು ಅನುವಾಗುತ್ತದೆ.

ಶ್ರೀಮಂತ ವರ್ಗದ ಜನರು ತಮ್ಮ ನತದೃಷ್ಟ ಸಹೋದರರ ಆವಶ್ಯಕತೆಗಳನ್ನು ಕಡೆಗಣಿಸುವುದನ್ನು ಮುಂದುವರೆಸಿಕೊಂಡು ಹೋಗುವುದು ವಿವೇಕಯುತವಾದ ಪರಿಜ್ಞಾನವೆನಿಸಿಕೊಳ್ಳುವುದಿಲ್ಲ. ಮುಂದುವರಿದ ಇಂತಹ ದಿನಗಳಲ್ಲಿಯೂ ಇದೆಲ್ಲಾ ದೈವೇಚ್ಛೆ ಎಂದು ತಮ್ಮ ನಿಸ್ಸಹಾಯಕತೆಯನ್ನು ತೋರಿಸಿಕೊಳ್ಳುವ ಹಲವರಿದ್ದಾರೆ. ಅನಾದಿಕಾಲದಿಂದಲೂ ಸಮಾಜದಲ್ಲಿ ತಾರತಮ್ಯ ಮತ್ತು ಅಂಗವಿಕಲತೆಯು ಇದೆ ಎಂದು ಅವರು ಹೇಳುತ್ತಾರೆ. ಅವರು ಹಾಗೆ ನರಳಬೇಕಾಗಿರುವುದೂ ಮತ್ತು ದೇವರ ದಯೆಯಿದ್ದವರು ಹಾಯಾದ ಜೀವನವನ್ನು ನಡೆಸಬೇಕೆನ್ನುವುದೂ ದೇವರಿಂದ ನಿಯಾಮಕವಾಗಿದೆ. ನಾವು ಜಗತ್ತಿನಲ್ಲಿ ಕಾಣುತ್ತಿರುವ ಅಂಗವಿಕಲರ ಕಷ್ಟಗಳಿಗೆ ಮತ್ತು ಸಾಮಾಜಿಕ ಸಂಕಷ್ಟಗಳಿಗೆ ಸ್ಪಂದಿಸದಿರಲು ಕರ್ಮಸಿದ್ಧಾಂತವು ಅವರಿಗೆ ಅನುಕೂಲಕರ ಸಾಧನವಾಗಿದೆ.

'ಆದ್ದರಿಂದ ಇವರ ಬಗ್ಗೆ ನಾವೇಕೆ ತಲೆಯನ್ನು ಕೆಡಿಸಿಕೊಳ್ಳಬೇಕು? ಎಲ್ಲವನ್ನೂ ದೇವರಿಗೆ ಬಿಟ್ಟುಬಿಡೋಣ' ಎನ್ನುತ್ತಾರೆ ಅವರು.

ನನಗೆ ಒಂದು ಕಥೆ ಜ್ಞಾಪಕಕ್ಕೆ ಬರುತ್ತಿದೆ. ಬಹುಶಃ ಅದು ಹೇಗ್‌ನಲ್ಲಿದ್ದ ಇಂಗ್ಲೆಂಡಿನ ರಾಯಭಾರಿಗೆ ಸಂಬಂಧಿಸಿದ್ದು. ತನ್ನ ದೇಶದಲ್ಲಿನ ಪರಿಸ್ಥಿತಿಯ ಬಗ್ಗೆ ಆತಂಕಗೊಂಡಿದ್ದ ಆತ ತನ್ನ ಕೊಟಡಿಯಲ್ಲಿ ಅತ್ತಿಂದ ಇತ್ತ, ಇತ್ತಿಂದ ಅತ್ತ ಶತಪಥ ಹಾಕುತ್ತಿದ್ದ. ಅವನ ಬಳಿಯಿದ್ದ ಒಬ್ಬ ವೃದ್ಧ ಸೇವಕನು ಅವನನ್ನು ಉದ್ದೇಶಿಸಿ ಹೀಗೆ ಕೇಳಿದ: 'ಸರ್, ನಿಮ್ಮನ್ನೊಂದು ಪ್ರಶ್ನೆಯನ್ನು ಕೇಳಲೇ?' 'ಖಂಡಿತವಾಗಿ' ಎಂದ ರಾಯಭಾರಿ. 'ಸರ್, ನೀವು ಹುಟ್ಟುವ ಮೊದಲು ದೇವರು ಈ ಪ್ರಪಂಚವನ್ನು ಚೆನ್ನಾಗಿ ಆಳುತ್ತಿರಲಿಲ್ಲವೇ?' 'ನಿಸ್ಸಂಶಯವಾಗಿಯೂ ದೇವರು ಹಾಗೆ ಆಳುತ್ತಿದ್ದ'. 'ನೀವು ಈ ಭೂಮಿಯಿಂದ

ನಿರ್ಗಮಿಸದ ಮೇಲೂ ಅವನು ಹಾಗೆಯೇ ಆಳುತ್ತಿರುತ್ತಾನೆಯಲ್ಲವೆ?' 'ಖಂಡಿತವಾಗಿಯೂ' ಎಂದ ರಾಯಭಾರಿ. 'ಹಾಗಿದ್ದರೆ, ಸರ್, ನೀವು ಭೂಮಿಯ ಮೇಲಿರುವಾಗಲೂ ಆತ ಆಳುತ್ತಾ ಇರುತ್ತಾನೆಂಬ ನಂಬಿಕೆಯನ್ನು ನೀವು ಇಟುಕೊಳ್ಳಬಹುದಲ್ಲವೇ?' ಇದು ಆ ಸೇವಕನ ಪ್ರಶ್ನೆ. ಬಹಳ ಬಳಲಿದ್ದ ರಾಯಭಾರಿ ಹಾಸಿಗೆಯಲ್ಲಿ ಬಿದ್ದುಕೊಂಡು ಹಾಯಾಗಿ ನಿದ್ದೆಹೋದ. ಹಲವಾರು ಜನರು ಈ ವೃದ್ಧ ಸೇವಕನಂತೆಯೇ ದೇವರಲ್ಲಿ, ಮತಧರ್ಮದಲ್ಲಿ, ಸಿದ್ಧಾಂತಗಳಲ್ಲಿ ಮತ್ತು ಮತದ ತತ್ತ್ವಗಳಲ್ಲಿ ಆಶ್ರಯವನ್ನು ಪಡೆಯುತ್ತಾರೆ. ಆದರೆ, ವಿದ್ಯಾವಂತರಾದವರು, ವಿವೇಕಿಗಳಾದವರು ತಮ್ಮಷ್ಟು ಅದೃಷ್ಟಶಾಲಿಗಳಲ್ಲದವರ ವಿಷಯದಲ್ಲಿ ಕಾಳಜಿಯನ್ನು ತೋರಿಸುತ್ತಾರೆ, ಮತ್ತು ಅದರಲ್ಲಿ ತಮ್ಮನ್ನು ತಾವು ತೊಡಗಿಸಿಕೊಳ್ಳುತ್ತಾರೆ. ನಾವು ಅನುಸರಿಸಬೇಕಾದ ಉತ್ತಮ ನೀತಿಯೆಂದರೆ, 'ನೀನು ಮಾಡಬೇಕಾದುದನ್ನು ಮಾಡು, ಉಳಿದುದನ್ನು ದೇವರಿಗೆ ಬಿಟ್ಟುಬಿಡು' ಎನ್ನುವುದು. ನಮ್ಮ ಹಲವಾರು ಸಾಮಾಜಿಕ ಕೆಡುಕುಗಳಿಗೆ ನಾವು ದೇವರನ್ನು ದೂಷಿಸದಿರೋಣ. ಬದಲಿಗೆ ನಮ್ಮನ್ನು ನಾವು ದೂಷಿಸಿಕೊಳ್ಳಬೇಕು. ಮಹಾತ್ಮ ಗಾಂಧಿಯವರು ಹೇಳಿದ ಹಾಗೆ 'ಶ್ರೀಮಂತರು ತಮ್ಮನ್ನು ತಾವು ಬಡಜನತೆಯ ಧರ್ಮದರ್ಶಿಗಳು' ಎಂದು ಭಾವಿಸಿಕೊಳ್ಳಬೇಕು.

ನನಗೆ ಮಾನವೀಯತೆಯಲ್ಲಿ ಅಗಾಧವಾದ ನಂಬಿಕೆಯಿದೆ. ಮೋಡವು ಸೂರ್ಯನನ್ನು ಮರೆಮಾಡಬಹುದು, ನಂದಿಸಲಾರದು. ಹಾಗೆಯೇ ಈ ನಂಬಿಕೆಯು ಕೆಲವೊಮ್ಮೆ ಮಂಕಾಗಬಹುದು ಆದರೆ ನಮ್ಮಿಂದ ದೂರವಾಗದು. ರಾಜ್ಯದಲ್ಲಿರುವ ಅಂಗವಿಕಲರ ಭವಿಷ್ಯವು ಮುಂದೆ ಬೆಳಗಲಿದೆ ಎಂಬುದಕ್ಕೆ ನಿಮ್ಮ ಸಂಸ್ಥೆಯ ಕಾರ್ಯಚಟುವಟಿಕೆಗಳೇ ಪುರಾವೆಯನ್ನು ಒದಗಿಸುತ್ತವೆ. ತನ್ನ ಜನತೆಯ ದಾನಶೀಲತೆಗಾಗಿ ಮತ್ತು ದೇಶಪ್ರೇಮಕ್ಕಾಗಿ ಹೆಸರುವಾಸಿಯಾಗಿರುವವರ ನಾಡುಮೈಸೂರು ರಾಜ್ಯ. ನಿಮ್ಮ ಸಂಸ್ಥೆಯು ನೀಡುವ ಕರೆಗೆ ಓಗೊಟ್ಟು, ತಮ್ಮ ನತದೃಷ್ಟ ಸೋದರರ ನೆರವಿಗಾಗಿ ಈ ರಾಜ್ಯದ ಜನತೆ ಸಂತೋಷದಿಂದ ಪ್ರತಿಕ್ರಿಯಿಸುತ್ತಾರೆ ಎಂಬ ಸಂಪೂರ್ಣ ನಂಬಿಕೆ ನನಗಿದೆ.

ಈ ಪ್ರಪಂಚದಲ್ಲಿರುವವರೆಲ್ಲರೂ ಸುಖ ಸಂತೋಷದಿಂದ ಇರಲು ಬಯಸುತ್ತಾರೆ. ಆದರೆ ಸುಖಸಂತೋಷವೆನ್ನುವುದು ಒಂದುಬಗೆಯ ಮಾಯಾಜಿಂಕೆ.

ಅದರ ಹಿಂದೆ ಓಡುವವರು ಬಡವರಿಗಿಂತ ಹೆಚ್ಚಾಗಿ ಐಶ್ವರ್ಯವಂತರೇ. 'ನೀವು ಉತ್ಪಾದಿಸುವ ಐಶ್ವರ್ಯಕ್ಕಿಂತ ಹೆಚ್ಚಿನದನ್ನು ನೀವು ಅನುಭವಿಸಲು ನಿಮಗೆ ಹಕ್ಕಿಲ್ಲದಿರುವಂತೆಯೇ, ನೀವು ಗಳಿಸಿದುದಕ್ಕಿಂತ ಹೆಚ್ಚಿನ ಸುಖಸಂತೋಷಗಳನ್ನು ಕೂಡ ಅನುಭವಿಸಲು ನಿಮಗೆ ಹಕ್ಕು ಇರುವುದಿಲ್ಲ' ಎಂಬ ಹೇಳಿಕೆಯಿದೆ. ಬೇರೆಯವರನ್ನು ದುಃಖದಲ್ಲಿಟ್ಟು, ನಾವು ನಮಗಾಗಿ ಸಂತೋಷವನ್ನು ಗಳಿಸುವುದಾದರೂ ಹೇಗೆ? ಮಾನವ ಜನಾಂಗವು ಬೇಕೆಂದು ಬಯಸುತ್ತಿರುವ ಸುಖ ಸಂತೋಷಗಳನ್ನು ನಿಮ್ಮ ಸಂಸ್ಥೆಯ ಸದಸ್ಯರು ತಮ್ಮ ಶ್ರಮದಿಂದ ಇತರರಿಗಾಗಿ ಸಂಪಾದಿಸುತ್ತಿದ್ದಾರೆ. ಇದಕ್ಕಾಗಿ ಅವರಿಗೆ ನನ್ನ ಅಭಿನಂದನೆಗಳು.

## ♦ ಶಿಕ್ಷಣ ಮತ್ತು ಅದರ ತತ್ತ್ವಗಳು

**ಜ್ಞಾನ ಎಂಬುದು ಒಂದು ಬೌದ್ಧಿಕ ಅಸ್ತ್ರ. ಅದು ವಸಾಹತು ಆಡಳಿತದಲ್ಲಿ ಶಿಕ್ಷಣ ಎಂಬ ಅಂಕಿತ ಪಡೆಯಿತು. ಶಿಕ್ಷಣ ದೇಶದ ಪ್ರಗತಿಯ ಸಾಧನವಾಗಿ ಪರಿಗಣಿಸಲ್ಪಟ್ಟಿತು. ಇಂತಹ ಶಿಕ್ಷಣ ಈ ಸಮಾಜದ ಕಟ್ಟಕಡೆಯ ವ್ಯಕ್ತಿಗೂ ಸಿಗಬೇಕೆನ್ನುವ ಹಪಾಹಪಿ ರಾಚಯ್ಯನವರದು. ಬೆಂಗಳೂರಿನ ಪುರಭವನದಲ್ಲಿ 1959ರ ಮೇ 22 ರಂದು ನಡೆದ ಹರಿಜನ ಶಿಕ್ಷಣ ಸಪ್ತಾಹದಲ್ಲಿ ಮಾಡಿದ ಉದ್ಘಾಟನಾ ಭಾಷಣ ಈ ಲೇಖನ.**

ನಮ್ಮ ರಾಜ್ಯಪಾಲ ಮಾನ್ಯ ಶ್ರೀ ಮಂಗಳ್‌ದಾಸ್ ಮಂಚರಾಮ್ ಪಕ್ವಾಸ ಅವರಿಗೆ ಮತ್ತು ನಮ್ಮ ಮುಖ್ಯಮಂತ್ರಿ ಶ್ರೀ ಬಿ.ಡಿ. ಜತ್ತಿಯವರಿಗೆ ಈ ಸುಸಂದರ್ಭದಲ್ಲಿ ನಮ್ಮ ಆದರಪೂರ್ವಕ ಹಾಗೂ ಹೃತ್ಪೂರ್ವಕ ಸ್ವಾಗತವನ್ನು ಕೋರುವುದು ನನಗೆ ಹೆಮ್ಮೆಯ ವಿಷಯವಾಗಿದೆ.

ಮಾನ್ಯ ರಾಜ್ಯಪಾಲರು, ದೇಶಕ್ಕಾಗಿ ಎಲ್ಲವನ್ನೂ ತ್ಯಾಗಮಾಡಿ, ಸಂಕಷ್ಟಗಳನ್ನು ಅನುಭವಿಸಿದ ಹಿರಿಯ ಮೌಲ್ಯಯುತ ರಾಜಕಾರಿಣಿ ಹಾಗೂ ಮುತ್ಸದ್ದಿಗಳಲ್ಲಿ ಒಬ್ಬರು. ದೇಶಕ್ಕೆ ರಾಜಕೀಯ ಸ್ವಾತಂತ್ರ್ಯ ಬಂದಮೇಲೆ ಇವರು ಮಧ್ಯ ಪ್ರದೇಶದ, ಬಾಂಬೆಯ ರಾಜ್ಯಪಾಲರಾಗಿ, ಹತ್ತುವರ್ಷಗಳ ಕಾಲ ಬಾಂಬೆಯ ವಿಧಾನ ಪರಿಷತ್ತಿನ ಅಧ್ಯಕ್ಷರಾಗಿ, ಹಲವಾರು ಸಂಸ್ಥೆಗಳ ಅಧ್ಯಕ್ಷರಾಗಿ, ಈಗ ನಮ್ಮ ರಾಜ್ಯದ ರಾಜ್ಯಪಾಲರಾಗಿ ದೇಶಕ್ಕೆ ಅಮೋಘ ಸೇವೆಯನ್ನು ಸಲ್ಲಿಸುತ್ತಿದ್ದಾರೆ. ಕೆಳವರ್ಗದ ಮತ್ತು ದಲಿತವರ್ಗದ ಜನತೆಯ

ನಾನು ನಮ್ಮ ಮುಖ್ಯಮಂತ್ರಿಯವರ ಜೀವನಪಥವನ್ನು ಹೊಗಳಲು ಇಷ್ಟಪಡುವುದಿಲ್ಲ. ಅವರನ್ನು ಕಾಂಗ್ರೆಸ್ ಸಂಸದೀಯ ಪಕ್ಷದ ನಾಯಕನನ್ನಾಗಿ ಆಯ್ಕೆಮಾಡಿರುವುದೇ ತಮ್ಮ ಬುದ್ಧಿಶಕ್ತಿ ಮತ್ತು ಹೃದಯವೈಶಾಲ್ಯವನ್ನು ಎತ್ತಿ ತೋರಿಸುತ್ತವೆ. ರಾಜ್ಯದ ಮುಖ್ಯಮಂತ್ರಿಯಾಗಿ ನೀವು ತೆಗೆದುಕೊಂಡಿರುವ ಹಲವಾರು ಕ್ರಮಗಳೇ ನಿಮಗೆ ಹರಿಜನರ ಕಲ್ಯಾಣದಲ್ಲಿ ಇರುವ ಅತ್ಯಾಸಕ್ತಿಯನ್ನು

ತೋರಿಸುತ್ತವೆ. ಸರ್, ತಾವು ಈ ಸಮಾರಂಭದ ಅಧ್ಯಕ್ಷತೆಯನ್ನು ವಹಿಸಲು ಬಿಡುವುಮಾಡಿಕೊಂಡು ಬಂದಿರುವುದಕ್ಕಾಗಿ ತಮಗೂ ಮತ್ತೊಮ್ಮೆ ನನ್ನ ಹೃದಯಪೂರ್ವಕ ಸ್ವಾಗತವನ್ನು ಕೋರುತ್ತೇನೆ.

ಶಿಕ್ಷಣವನ್ನು ಪ್ರಜಾಪ್ರಭುತ್ವದ ಮೂಲ ಅಡಿಪಾಯವೆಂದು ಪರಿಗಣಿಸಲಾಗಿದೆ. ಈ ಸಪ್ತಾಹದ ಉದ್ದೇಶವೆಂದರೆ, ಹರಿಜನರು ಮತ್ತು ಇತರ ಪರಿಶಿಷ್ಟ ಜಾತಿಗಳವರು ತಮಗೆ ಮತ್ತು ತಮ್ಮ ಮಕ್ಕಳಿಗೆ ಬೇಕಾದ ಶಿಕ್ಷಣದ ಅಗತ್ಯವನ್ನು ಪ್ರಜ್ಞಾಪೂರ್ವಕವಾಗಿ ತಿಳಿದುಕೊಳ್ಳುವಂತೆ ಮಾಡುವುದು. ಶಿಕ್ಷಣದಿಂದ ಮಾತ್ರ ಅವರ ಪ್ರಗತಿ ಮತ್ತು ಮುನ್ನಡೆ ಸಾಧ್ಯ.

ಹರಿಜನರು ದೇಶದ ಜನಸಂಖ್ಯೆಯಲ್ಲಿ ಐದನೆಯ ಒಂದು ಭಾಗದಷ್ಟು ಇದ್ದಾರೆ. ಅವರ ಶಿಕ್ಷಣದ ಮಟ್ಟವು ಬಹಳ ಕಡಿಮೆ ಇದೆ. ಉನ್ನತ ಜ್ಞಾನವಿರುವವನಲ್ಲಿ ಉನ್ನತವಾದ ಅಧಿಕಾರವೂ ಮೇಳವಿಸಿರುತ್ತದೆ ಎಂದು ಹೇಳುತ್ತಾರೆ. ಶಿಕ್ಷಣವನ್ನು ಪಡೆಯುವುದರಿಂದ ಮಾತ್ರ, ಹರಿಜನರು ತಮಗೆ ಸಂವಿಧಾನವು ನೀಡಿರುವ ಸವಲತ್ತುಗಳನ್ನು ಬಳಸಿಕೊಳ್ಳುವ ನೈತಿಕ ಧೈರ್ಯವನ್ನು ಪಡೆಯಲು ಸಾಧ್ಯ. ಹರಿಜನರ ಮನಸ್ಸಿನಲ್ಲಿ ಹೊಸ ಜೀವನದ ಬಗ್ಗೆ ಜ್ಞಾನವನ್ನು ಮೊಳೆಯುವ ಹಾಗೆ ಮಾಡುವತನಕ, ಅವರಲ್ಲಿ ಭವಿಷ್ಯದ ಬಗ್ಗೆ ಧೈರ್ಯ ಮತ್ತು ಆತ್ಮವಿಶ್ವಾಸಗಳು ಮೂಡುವಂತೆ ಮಾಡುವತನಕ, ಅವರಲ್ಲಿ ಉತ್ಸಾಹವು ಚಿಮ್ಮುವಂತೆ ಮಾಡುವತನಕ, ಅವರನ್ನು ಬಲವಾಗಿ ಹಿಡಿದುಕೊಂಡಿರುವ ಬಡತನ, ಅಜ್ಞಾನ ಮತ್ತು ಸಾಮಾಜಿಕ ನ್ಯೂನತೆಗಳಿಂದ ಅವರನ್ನು ಮೇಲೆತ್ತಲು ಸಾಧ್ಯವಿಲ್ಲ. ನಮಗೆ ದೃಷ್ಟಿವೈಶಾಲ್ಯವು ಸಿದ್ಧಿಸಿದ ಮೇಲೆ ಇಡೀ ಪ್ರಪಂಚವೇ ಒಂದಾದ ಹಾಗೆ ಕಾಣಿಸುತ್ತದೆ ಮತ್ತು ಜಾತಿ, ಪಂಗಡಗಳು ಚರಿತ್ರೆಯ ಪುಸ್ತಕದಲ್ಲಿ ಮಾತ್ರ ಉಳಿದುಕೊಳ್ಳುವಂತಾಗುತ್ತದೆ. ಈ ಭೂಮಿಯನ್ನು ಶಾಂತಿಯ ಆವಾಸಸ್ಥಾನವನ್ನಾಗಿಸಲು ನಮ್ಮಪ್ರಜ್ಞಾವ್ಯಾಪ್ತಿ ದೊಡ್ಡದಾಗಬೇಕು, ಮತ್ತು ಮಾನವನ ಘನತೆಯ ಬಗೆಗಿನ ನಮ್ಮ ಕಲ್ಪನೆ ಹಿಗ್ಗಬೇಕು. ಉಪನಿಷತ್ತಿನ ಋಷಿಗಳು, ನಮ್ಮ ರಾಷ್ಟ್ರಪಿತ ಮಹಾತ್ಮ ಗಾಂಧಿಯವರನ್ನೂ ಒಳಗೊಂಡಂತೆ ಎಲ್ಲಾ ಮಹಾನ್ ಪ್ರವಾದಿಗಳು ಮತ್ತು ಶಿಕ್ಷಕರು, ಸಾಮಾಜಿಕ ನ್ಯಾಯವನ್ನು ಸ್ಥಾಪಿಸಲಿಕ್ಕಾಗಿ, ನಮ್ಮ ಸಮಾಜದಲ್ಲಿ ಮಹತ್ತರ ಕ್ರಾಂತಿಯು ಆಗಬೇಕೆಂದು ಹೇಳಿದ್ದಾರೆ.

ಭಾರತದ ಜನತೆಯಲ್ಲಿ ಶೇ.90ರಷ್ಟು ಭಾಗದ ಜನತೆ ನಿರಕ್ಷರಕುಕ್ಷಿಗಳು. ಸೂಕ್ತ ವಿದ್ಯಾಭ್ಯಾಸವನ್ನು ನೀಡುವತನಕ ಪ್ರಜಾಪ್ರಭುತ್ವವು ಯಶಸ್ವಿಯಾಗುವುದಿಲ್ಲವೆಂಬುದನ್ನು ಮನಗಾಣಿಸಿಕೊಂಡಿದ್ದ ನಮ್ಮ ಸಂವಿಧಾನದ ಕರ್ತೃಗಳು, ಸಂವಿಧಾನ 45ನೆಯ ವಿಧಿಯ ಪ್ರಕಾರ ರಾಜ್ಯ ಸರಕಾರಗಳಿಗೆ ನಿರ್ದೇಶನವನ್ನು ನೀಡಿ, ಸಂವಿಧಾನವು ಜಾರಿಗೆ ಬಂದ ದಿನಾಂಕದಿಂದ ಹತ್ತು ವರ್ಷಗಳವರೆಗೆ ಎಲ್ಲಾ ಮಕ್ಕಳಿಗೂ ಉಚಿತ ಹಾಗೂ ಕಡ್ಡಾಯ ಶಿಕ್ಷಣವನ್ನು ನೀಡಬೇಕೆಂದು ತಿಳಿಸಿದೆ. ಸಂವಿಧಾನದ 14(4) ಮತ್ತು 46ನೆಯ ವಿಧಿಗಳ ಅಡಿಯಲ್ಲಿ ಅತ್ಯಂತ ಎಚ್ಚರಿಕೆ ಮತ್ತು ಜವಾಬ್ದಾರಿಯಿಂದ ದುರ್ಬಲವರ್ಗಗಳವರ ಅದರಲ್ಲಿಯೂ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳವರ ಸಾಮಾಜಿಕ ಹಿತವನ್ನು ಕಾಯ್ದುಕೊಂಡು ಬರಬೇಕೆಂದು ರಾಜ್ಯ ಸರಕಾರಗಳಿಗೆ ನಿರ್ದೇಶನವನ್ನು ನೀಡಲಾಗಿದೆ.

ಹಲವಾರು ಉಪಯುಕ್ತ ಕ್ರಮಗಳನ್ನು ಕೈಗೆತ್ತಿಕೊಂಡು ಹರಿಜನರ ಉದ್ಧಾರಕ್ಕಾಗಿ ತನ್ನ ಕೈಯಲ್ಲಾದುದನ್ನೆಲ್ಲಾ ಮೈಸೂರು ಸರಕಾರವು ಮಾಡುತ್ತಿದೆ. ಪ್ರಕೃತ, ರಾಜ್ಯದಲ್ಲಿ ಬಾಲಕರ 100 ಹರಿಜನ ವಿದ್ಯಾರ್ಥಿನಿಲಯಗಳೂ ಮತ್ತು ಬಾಲಕಿಯರ 3 ವಿದ್ಯಾರ್ಥಿನಿನಿಲಯಗಳೂ ಇವೆ. ಈ ವರ್ಷ ಇನ್ನೂ 32 ಬಾಲಕರ ವಿದ್ಯಾರ್ಥಿನಿಲಯಗಳನ್ನೂ, 16 ಬಾಲಕಿಯರ ವಿದ್ಯಾರ್ಥಿನಿನಿಲಯಗಳನ್ನೂ ಕಟ್ಟಲು ಉದ್ದೇಶಿಸಲಾಗಿದೆ. ಇವಲ್ಲದೆ, ತಾಂತ್ರಿಕ ಶಾಲೆಗಳಲ್ಲಿ ಶಿಕ್ಷಣ ಪಡೆಯುತ್ತಿರುವ ವಿದ್ಯಾರ್ಥಿಗಳಿಗಾಗಿ ಒಂದು ವಿದ್ಯಾರ್ಥಿನಿಲಯುವನ್ನೂ ಪ್ರಾರಂಭಿಸುವ ಉದ್ದೇಶವಿದೆ. ಶಾಲೆಗೆ ಹೋಗುವ ಪ್ರತಿಯೊಬ್ಬ ಹರಿಜನ ವಿದ್ಯಾರ್ಥಿನಿಗೂ ಮತ್ತು ಬಡ ಹರಿಜನ ವಿದ್ಯಾರ್ಥಿಗೂ ವಿದ್ಯಾರ್ಥಿನಿಲಯದ ಸೌಲಭ್ಯವನ್ನಾಗಲೀ, ವಿದ್ಯಾರ್ಥಿವೇತನದ ಸೌಲಭ್ಯವನ್ನಾಗಲೀ ನೀಡಲು ಸರಕಾರವು ಆಲೋಚಿಸುತ್ತಿದೆ. ವಿದೇಶದಲ್ಲಿ ತಮ್ಮ ವಿದ್ಯಾಭ್ಯಾಸವನ್ನು ಮುಂದುವರಿಸಲು ಇಚ್ಛಿಸುವ ಅರ್ಹ ಹರಿಜನ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನವನ್ನು ನೀಡಲಾಗುವುದು. ಲೋಯರ್ ಸೆಕೆಂಡರಿಯಲ್ಲಿ ಮೊದಲ ದರ್ಜೆಯಲ್ಲಿ ಉತ್ತೀರ್ಣರಾಗುವ ವಿದ್ಯಾರ್ಥಿಗಳಿಗಾಗಿ ಒಂದು ಮತ್ತು ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಪ್ರಥಮದರ್ಜೆಯಲ್ಲಿ ಉತ್ತೀರ್ಣರಾಗುವ ವಿದ್ಯಾರ್ಥಿಗಳಿಗಾಗಿ ಮತ್ತೊಂದು, ಹೀಗೆ ಎರಡು ಪ್ರತ್ಯೇಕ ವಿದ್ಯಾರ್ಥಿನಿಲಯಗಳನ್ನು ನಿರ್ಮಿಸುವ ಬಗ್ಗೆ ಸರಕಾರವು

ತೀವ್ರವಾಗಿ ಆಲೋಚಿಸುತ್ತಿದೆ. ಹಿಂದುಳಿದ ವರ್ಗಗಳವರು ಮುನ್ನಡೆಯಲು ಸಹಕಾರಿಯಾಗುವಂತೆ ವಿಶೇಷ ಅವಕಾಶಗಳನ್ನು ಸಾಧ್ಯವಿರುವಷ್ಟರ ಮಟ್ಟಿಗೆ ಒದಗಿಸುವುದು, ಎಲ್ಲಾ ಪ್ರಜ್ಞಾವಂತ ವ್ಯಕ್ತಿಗಳ ಮತ್ತು ಸುಸಂಸ್ಕೃತ ಸರಕಾರದ ಕರ್ತವ್ಯವಾಗಿದೆ. ಹೀಗೆ ಮಾಡುವುದರಿಂದ ನಾವು ನಮ್ಮ ನತದೃಷ್ಟ ಸೋದರ ಸೋದರಯರಿಗೆ ಪುನರ್ವಸತಿಯನ್ನು ಕಲ್ಪಿಸುವುದಷ್ಟೇ ಅಲ್ಲದೆ, ತಮ್ಮ ಮಾನವತ್ವದ ಬಗ್ಗೆ ಅರಿವು ಮೂಡಿಸಿ ಘನತೆಯಿಂದ ಬಾಳುವ ಅವಕಾಶವನ್ನು ಅವರಿಗೆ ಮಾಡಿಕೊಟ್ಟಂತೆ ಆಗುತ್ತದೆ. ನಮ್ಮ ಸಂಸ್ಕೃತಿಯ ಮಟ್ಟದ ಪರೀಕ್ಷೆಯನ್ನು ಮಾಡಿಕೊಳ್ಳುವುದರ ಮಾನದಂಡ ಜನತೆಯನ್ನು ನಮ್ಮ ಅಡಿಯಾಳುಗಳನ್ನಾಗಿ ಮಾಡಿಕೊಳ್ಳುವುದರಲ್ಲಿರುವುದಿಲ್ಲ, ಬದಲಿಗೆ ನಾವು ಸಾಧ್ಯವಿರುವೆಡೆಯಲ್ಲೆಲ್ಲಾ ಅವರನ್ನು ಹೇಗೆ ಮೇಲಕ್ಕೆ ಎತ್ತುತ್ತೇವೆ ಎಂಬುದರಲ್ಲಿರುತ್ತದೆ.

ನಾನು ಸಾಮಾಜಿಕ ಪ್ರಜ್ಞೆಯಿರುವ ಎಲ್ಲರಲ್ಲೂ, ಅದರಲ್ಲಿಯೂ ದೇಶದಲ್ಲಿರುವ ದುರ್ಬಲವರ್ಗದ ಜನರಲ್ಲಿ 'ಬಹು ಮಹತ್ವವಿರುವಈ ಸಾಮಾಜಿಕ ಸಮಸ್ಯೆಯನ್ನು ಅವರಿಗೆ ಶಿಕ್ಷಣವನ್ನು ನೀಡುವ ಮೂಲಕ, ಪುನರ್ವಸತಿಯನ್ನು ಕಲ್ಪಿಸುವ ಮೂಲಕ ಮತ್ತು ಅವರ ಜೀವನದ ಗುಣಮಟ್ಟವನ್ನು ಏರಿಸುವ ಮೂಲಕ ಪರಿಹರಿಸಲು ತಮ್ಮ ಸಹಾಯ ಹಸ್ತವನ್ನು ಚಾಚಬೇಕು' ಎಂದು ವಿನಂತಿಸಿಕೊಳ್ಳುತ್ತೇನೆ. ಈ ಮೂಲಕ ನಾವು ರಾಷ್ಟ್ರೀಯ ಐಕ್ಯತೆ ಮತ್ತು ಏಳಿಗೆಗೆ ನಮ್ಮ ಪಾಲನ್ನು ನೀಡಿದಂತೆ ಆಗುತ್ತದೆ. ಇಂದು ಉದ್ಘಾಟನೆಗೊಳ್ಳುತ್ತಿರುವ ಹರಿಜನ ಶಿಕ್ಷಣ ಸಪ್ತಾಹವು ರಾಜ್ಯದಾದ್ಯಂತ ಹರಿಜನರ ಶಿಕ್ಷಣ ಮತ್ತು ಅವರ ಉದ್ಧಾರದ ಪ್ರಯತ್ನಗಳಿಗೆ ಬಲವನ್ನು ತುಂಬುತ್ತದೆಯೆಂದೂ ಮತ್ತು ಜನರು ಹೆಚ್ಚಿನ ಸಂಖ್ಯೆಯಲ್ಲಿ ಇದರ ಉಪಯೋಗವನ್ನು ಪಡೆದುಕೊಳ್ಳುತ್ತಾರೆಂದೂ ನಾನು ಆಶಿಸುತ್ತೇನೆ.

## ♦ ಸಮಾನತೆಯ ಕನಸುಗಳು :

**1960 ರ ಮಾರ್ಚ್ 13 ರಂದು ಹೊಳೆನರಸೀಪುರದಲ್ಲಿ ಹರಿಜನರ ಸಮಾವೇಶದಲ್ಲಿ ಮಾಡಿದ ಉದ್ಘಾಟನಾ ಭಾಷಣವಿದು. ಸಂವಿಧಾನದ ಎದುರು ಎಲ್ಲರೂ ಸಮಾನರೇ. ಸಮಾಜಕ್ಕೆ ಸಮಾನತೆಯೇ ಆದರ್ಶ. ಆದರೇ ಕೆಲವು ಪಟ್ಟಭದ್ರ ಶಕ್ತಿಗಳು ತಮ್ಮ ಕಪಿಮುಷ್ಠಿಯಲ್ಲಿ ಅಸ್ಪೃಶ್ಯತೆಯ, ಶೋಷಣೆಯ ವಿವಿಧ ಆಯಾಮಗಳನ್ನು ಇಂದಿಗೂ ಪ್ರತಿಷ್ಠಾಪಿಸಿ ಹೊರಟಿವೆ. ಇಂತಹ ವಿಷಮ ಸಮಾಜದಲ್ಲಿ ದಲಿತರು ತಮ್ಮ ಅಸ್ತಿತ್ವವನ್ನು ಹೇಗೆ ಕಾಯ್ದುಕೊಳ್ಳಬೇಕು, ಎಂಬುದನ್ನು ಸಮಾಜಮುಖಿಯಾದಂತಹ ಸಮಾನತೆಯ ಬಿಂಬಕವಾದಂತಹ ಮಾತುಗಳು ಭಾಷಣದಲ್ಲಿವೆ.**

ನನಗೆ ಮತ್ತು ನನ್ನ ಸ್ನೇಹಿತ ಶ್ರೀ ಬಸವಲಿಂಗಪ್ಪನವರಿಗೆ ನೀಡಿದ ಹೃದಯಪೂರ್ವಕ ಸ್ವಾಗತಕ್ಕೆ ನಾನು ಕೃತಜ್ಞನಾಗಿದ್ದೇನೆ. ಅಲ್ಲದೆ ನೀವು ನನ್ನ ಬಗ್ಗೆ ಒಳ್ಳೆಯ ಮಾತುಗಳನ್ನಾಡಿದುದಕ್ಕೂ ನಾನು ನಿಮಗೆ ಆಭಾರಿಯಾಗಿದ್ದೇನೆ. ನಾವು ಸಮಾಜವಾದೀ ವ್ಯವಸ್ಥೆಯನ್ನು ನಮ್ಮ ಅಂತಿಮ ಗುರಿಯನ್ನಾಗಿ ಮಾಡಿಕೊಂಡಿದ್ದೇವೆ ಮತ್ತು ನಮ್ಮ ಸಂವಿಧಾನವನ್ನು ಈ ಆಶಯದೊಂದಿಗೇ ರೂಪಿಸಿದ್ದೇವೆ. ಗೌರವಾರ್ಹರಾದ ನಮ್ಮ ಪ್ರಧಾನಮಂತ್ರಿ ಪಂಡಿತ್‌ಜಿಯವರ ನೇತ್ರತ್ವದಲ್ಲಿ ನಮ್ಮ ದೇಶದಲ್ಲಿರುವ ಅನಕ್ಷರತೆ, ಅಜ್ಞಾನ, ಮೂಢನಂಬಿಕೆ ಮತ್ತು ಎಲ್ಲಾ ರೀತಿಯ ಶೋಷಣೆ ಇವುಗಳನ್ನು ತೊಡೆದು ಹಾಕಲು ಪಣತೊಟ್ಟಿದ್ದೇವೆ. ಬಡವರು ಸಾಮಾಜಿಕ ಮತ್ತು ಆರ್ಥಿಕ ಅನ್ಯಾಯಗಳ ಬಲಿಪಶುಗಳಾಗಿದ್ದಾರೆ. ನಮಗೆ ನಮ್ಮ ಸಂವಿಧಾನವು ರಾಜಕೀಯ ಸಮಾನತೆಯ ಆಶ್ವಾಸನೆಯನ್ನು ನೀಡಿದೆ. ಆದರೆ ಇದು ವಾಸ್ತವದಲ್ಲಿ ಎಷ್ಟರ ಮಟ್ಟಿಗೆ ಕಾರ್ಯಗತವಾಗಿದೆ ಎಂಬುದು ಪ್ರಶ್ನೆ.ಅತ್ಯಂತ ಬಡವರಾಗಿರುವವರ ಮತ್ತು ಕೆಳಕ್ಕೆ ತುಳಿಯಲ್ಪಟ್ಟವರ ಹಿತಾಸಕ್ತಿಗಳನ್ನು ರಕ್ಷಿಸುವ ಸಲುವಾಗಿ ಸಂವಿಧಾನವು ಹಲವಾರು ಸವಲತ್ತುಗಳನ್ನು ಅವರಿಗೆ ನೀಡಿದೆ. ಸಂವಿಧಾನವು ನೀಡಿರುವ ಸವಲತ್ತುಗಳು ಎಷ್ಟರ ಮಟ್ಟಿಗೆ ತಮ್ಮ ಉದ್ದೇಶವನ್ನು ಸಾಧಿಸುವಲ್ಲಿ ಸಫಲವಾಗಿವೆ ಎಂಬುದನ್ನು ಪರಿಶೀಲಿಸಲು

ಮತ್ತು ಅವುಗಳ ಅನುಷ್ಠಾನದ ಹಾದಿಯಲ್ಲಿ ಇರುವ ಅಡಚಣೆಗಳನ್ನು ತೆಗೆದುಹಾಕಿ ಪ್ರಗತಿಯ ವೇಗವನ್ನು ಹೆಚ್ಚಿಸಲು ಇಂತಹ ಸಮಾವೇಶಗಳು ಅಗತ್ಯವಾಗುತ್ತವೆ. ನ್ಯಾಯ ಮತ್ತು ಸಮಾನತೆಯನ್ನು ಸ್ಥಾಪಿಸುವುದು ಮತ್ತು ಬಡವರ ಶೋಷಣೆಯನ್ನು ತಡೆಯುವುದು ಸರಕಾರದ ಪ್ರತಿನಿಧಿಗಳಾಗಿ ಇಲ್ಲಿಗೆ ಬಂದಿರುವ ನನ್ನ ಮತ್ತು ನನ್ನ ಮಿತ್ರ ಶ್ರೀ ಬಿ. ಬಸವಲಿಂಗಪ್ಪನವರ ಕರ್ತವ್ಯವಾಗಿದೆ. ದೇಶದಲ್ಲಿನ ಸಂಪತ್ತನ್ನು ಹೆಚ್ಚಿಸಲಿಕ್ಕೆ ಬಡಜನರು ದುಡಿಯುತ್ತಿದ್ದಾರೆ. ಆದರೆ, ದೌರ್ಭಾಗ್ಯವೆಂದರೆ, ಅದೇ ಬಡವರು ಹಸಿವಿನಿಂದ ನರಳಬೇಕಾಗಿದೆ ಮತ್ತು ಅವರ ದುಡಿಮೆಯ ಫಲವನ್ನು ಪಟ್ಟಭದ್ರ ಹಿತಾಸಕ್ತಿಗಳು ಕಸಿದುಕೊಳ್ಳುತ್ತಿವೆ. ಶೋಷಣೆಯ ಎಲ್ಲಾ ತಂತ್ರಗಳನ್ನೂ ಕೆಲವು ಶ್ರೀಮಂತರು ಮತ್ತು ಪಟ್ಟಭದ್ರ ಹಿತಾಸಕ್ತಿಗಳು ಉಪಯೋಗಿಸುತ್ತಿವೆ. ಅವುಗಳಲ್ಲಿ ಮೊದಲನೆಯದು ದೇವರ ಹೆಸರನ್ನು ಉಪಯೋಗಿಸಿಕೊಂಡು ಶೋಷಿಸುವ ತಂತ್ರವಾದರೆ ಇನ್ನೊಂದು ಮತಧರ್ಮವನ್ನು ಬಳಸಿಕೊಂಡು ಶೋಷಿಸುವ ತಂತ್ರ. ಒಟ್ಟು ಜನಸಂಖ್ಯೆಯಲ್ಲಿ ಶೇ 85ರಷ್ಟು ಇರುವ ಬಡ ಜನತೆಯು ಅಜ್ಞಾನ ಮತ್ತು ಅನಕ್ಷರತೆಯನ್ನೇ ಬಂಡವಾಳವನ್ನಾಗಿ ಮಾಡಿಕೊಳ್ಳಲಾಗಿದೆ. ಸಮಾಜದ ಕಲ್ಯಾಣದ ಉದ್ದೇಶವನ್ನುಳ್ಳ ಶಿಕ್ಷಣವು ಇಂದು ಶೋಷಣೆಯ ಸಾಧನವಾಗಿರುವುದು ಶೋಚನೀಯ. ಕೆಲವು ಬುದ್ಧಿವಂತ ಜನರು ತಮ್ಮ ಪ್ರತಿಭೆಯನ್ನು ತಮ್ಮ ಸ್ವಾರ್ಥದ ಉದ್ದೇಶಗಳನ್ನು ಸಾಧಿಸಲು ಉಪಯೋಗಿಸಿಕೊಳ್ಳುವ ಸಲುವಾಗಿ, ಸರಕಾರಕ್ಕೆ ಮತ್ತು ಅದರ ನೀತಿಗಳಿಗೆ ಸಲ್ಲದ ಅರ್ಥವನ್ನು ನೀಡುತ್ತಾರೆ. ನೀವು ಅಂತಹ ವ್ಯಕ್ತಿಗಳ ಬಗ್ಗೆ ಎಚ್ಚರಿಕೆಯಿಂದ ಇರಬೇಕು. ಅವರು ಸಮಾಜದಲ್ಲಿರುವ ವಿವಿಧ ಪಂಗಡಗಳ ನಡುವೆ, ಜನತೆ ಮತ್ತು ಸರಕಾರದ ನಡುವೆ, ಒಂದು ರಾಜಕೀಯಪಕ್ಷ ಮತ್ತು ಮತ್ತೊಂದು ರಾಜಕೀಯ ಪಕ್ಷದ ನಡುವೆ ಅಸೂಯೆಯನ್ನು ಬಿತ್ತುತ್ತಾರೆ. ಇದನ್ನೇ ಬೇರೆಯ ಮಾತಿನಲ್ಲಿ ಹೇಳಬೇಕೆಂದರೆ, ಅವರು ಸಮಾಜದಲ್ಲಿ ಅಶಾಂತಿಯನ್ನು ಬೆಳೆಸಿ, ಬೆಂದ ಮನೆಯಲ್ಲಿ ಗಳುವನ್ನು ಹಿರಿಯುವ ಕೆಲಸವನ್ನು ಮಾಡುತ್ತಾರೆ. ಸರಕಾರವು ಇವರ ತಂತ್ರಗಳನ್ನು ಅರಿತಿದೆಯಾದರೂ, ಅದು ಎಲ್ಲರಿಗೂ ನ್ಯಾಯವನ್ನು ಸಲ್ಲಿಸಬೇಕಾದಲ್ಲಿ ಜನತೆಯೂ ಎಚ್ಚರಿಕೆಯಿಂದ ಇದ್ದು ಸರಕಾರಕ್ಕೆ ಸಹಾಯಮಾಡಬೇಕು. ನಾನಾಗಲೀ, ನನ್ನ ಸ್ನೇಹಿತ ಶ್ರೀ ಬಸವಲಿಂಗಪ್ಪನವರಾಗಲೀ ನೀವು ಶೋಷಣೆಗೆ ಒಳಗಾಗಬಾರದೆಂದು ನಿಮಗೆ

ತಿಳಿವಳಿಕೆಯನ್ನು ನೀಡಿದರೆ, ಅವರು ಅದನ್ನು ಬೇಕೆಂದೇ ನಾವು ನಿಮ್ಮನ್ನು ಅವರ ವಿರುದ್ಧ ಎತ್ತಿಕಟ್ಟುತ್ತಿದ್ದೇವೆ ಎಂದು ಅಪಾರ್ಥವನ್ನು ಮಾಡುತ್ತಾರೆ. ಇದು ಸತ್ಯವೇ? ನೀವೇ ಇದರ ಬಗಗೆ ತೀರ್ಮಾನವನ್ನು ತೆಗೆದುಕೊಳ್ಳಿ.

ಶತಶತಮಾನಗಳಿಂದ ಕ್ರಿಸ್ತ, ಮೊಹಮ್ಮದ್, ಬುದ್ಧ, ಮಾಧವ, ರಾಮಾನುಜ, ಬಸವಣ್ಣ, ಇತ್ತೀಚೆಗೆ ಗಾಂಧಿ – ಇವರಂತಹ ಸಮಾಜ ಸುಧಾರಕರು ಸಮಾನತೆ ಮತ್ತು ಸಾಮಾಜಿಕ ನ್ಯಾಯದ ಪರವಾಗಿ ಬೋಧನೆಯನ್ನು ಮಾಡುತ್ತಿದ್ದಾರೆ. ಆದರೂ, ಅದರ ಫಲವಾಗಿ ಸಮಾನತೆ ಮತ್ತು ಸಾಮಾಜಿಕ ನ್ಯಾಯವು ನಮಗೆ ದೊರೆತಿದೆಯೆ? ಇಲ್ಲ. ಏಕೆಂದು ನೀವು ಹೇಳಬಲ್ಲಿರಾ? ಇದಕ್ಕೆ ಕಾರಣ ದೇಶದ ಬಹುಪಾಲು ಜನತೆ ಇನ್ನೂ ಅನಕ್ಷರರಾಗಿ ಮತ್ತು ಅಜ್ಞಾನಿಗಳಾಗಿಯೇ ಇದ್ದಾರೆ. ದೇವರು, ಧರ್ಮ ಮತ್ತು ಮೂಢನಂಬಿಕೆಗಳ ಮೂಲಕ ಭಯವನ್ನು ಸೃಜಿಸಿ ಬಹುಪಾಲು ಜನರನ್ನು ಶೋಷಣೆಯನ್ನು ಮಾಡುವ ತಂತ್ರದ ಸೂಕ್ಷ್ಮಗಳು ಬಡ, ಅನಕ್ಷರಸ್ಥ ಜನರ ಅರಿವಿಗೇ ಬರುವುದಿಲ್ಲ. ಅವರ ದಿನನಿತ್ಯದ ವ್ಯವಹಾರಗಳು ನಿಮಿತ್ತ ಹೇಳುವವರಿಂದ, ಜ್ಯೋತಿಷಿಗಳಿಂದ. ಕೋಳಿಯ ಕೂಗಿನಿಂದ, ಬಲಭುಜ ಅಥವಾ ದೇಹದ ಇನ್ನಾವುದೇ ಅಂಗದ ಮೇಲೆ ಹಲ್ಲಿ ಬೀಳುವುದರಿಂದ, ದಾರಿಯಲ್ಲಿ ಬೆಕ್ಕೊಂದು ಅವರ ಎಡದಿಂದ ಬಲಕ್ಕೆ ಹಾಯ್ದು ಹೋಗುವುದರಿಂದ ನಿರ್ಧರಿಸಲ್ಪಡುತ್ತವೆ. ತಾವು ಎಲ್ಲಾ ವಿಧದ ಜ್ಞಾನದ ಕೀಲಿಕೈಯನ್ನು ಹೊಂದಿರುವವರೆಂದೂ, ತಾವು ಶಾಸ್ತ್ರಗಳೆಂದು ಹೇಳಿಕೊಳ್ಳುವುಗಳನ್ನು ಬೇರೆ ಯಾರೂ ಓದಬಾರದೆಂದೂ, ಕೇಳಬಾರದೆಂದೂ ಹೇಳುತ್ತಾರೆ. ಎಲ್ಲರೂ ಸಮಾನರೆಂದು ಮತ್ತು ಸಂವಿಧಾನವು ಕಲಿಯಲು, ಕೆಲಸಗಳನ್ನು ಮಾಡಲು, ಹಣವನ್ನು ಸಂಪಾದಿಸಲು ಮತ್ತು ಮಾನವರಂತೆ ಬದುಕಲು ಅವಕಾಶಗಳನ್ನು ಮಾಡಿಕೊಟ್ಟಿದೆಯೆಂದು ಜನತೆಗೆ ನಾವು ತಿಳಿಸಲು ಹೋದರೆ, ಅವರು (ಶೋಷಕರು) ಇಲ್ಲಸಲ್ಲದ ಅಪವಾದಗಳನ್ನು ಮಾಡಿ ನಮ್ಮ ಕೆಲಸದ ಬಗ್ಗೆ ವಿವಿಧ ರೀತಿಯ ಸುದ್ದಿಗಳನ್ನು ಹರಡುತ್ತಾರೆ.

ಜವಾಬ್ದಾರಿಯಿರುವ ಮುಖಂಡರಾದ ಲಕ್ಕಪ್ಪ, ವೀರಪ್ಪ, ಬೋರಜ್ಜ ಮತ್ತಿತರರು ನಮಗೆ ಸಂಬಂಧಪಟ್ಟ ವಿಷಯಗಳನ್ನು ತಿರುಚಿ ಅಸತ್ಯವನ್ನು ಪ್ರಚಾರಮಾಡುತ್ತಾ ಬಡವರ ಕಲ್ಯಾಣಕ್ಕೆ ಅಡಚಣೆಯನ್ನುಂಟುಮಾಡುತ್ತಾ, ಪಟ್ಟಭದ್ರ ಹಿತಾಸಕ್ತಿಗಳಿಗೆ

ಅನುಕೂಲವನ್ನು ಮಾಡಿಕೊಡುತ್ತಿರುವುದು ನಮ್ಮ ಗಮನಕ್ಕೆ ಬಂದಿದೆ. ಸಂವಿಧಾನದ ನಿರ್ದೇಶನದ ಪ್ರಕಾರ, ಅವರು ನಮ್ಮ ಕಾರ್ಯಗಳಲ್ಲಿ ನಮಗೆ ಪ್ರೋತ್ಸಾಹಿಸಿ ಸಹಾಯಮಾಡಿ, ಬಡವರ, ದಲಿತರ ಸ್ಥಿತಿಗತಿಗಳನ್ನು ಉತ್ತಮಗೊಳಿಸುವುದು ಅವರ ಕರ್ತವ್ಯವಾಗಿರಬೇಕಾಗಿತ್ತು. ಇಲ್ಲಿ ಉಪಸ್ಥಿತರಿರುವ ಶ್ರೀ ಕಾರ್ಲೆ ಶ್ರೀ ವೀರಪ್ಪನವರು, ಶ್ರೀ ಸೀತಾರಾಮಯ್ಯನವರು ಮತ್ತು ಇತರರು ತಿಳಿವಳಿಕೆಯುಳ್ಳವರು. ಅದಕ್ಕಾಗಿಯೇ ಅವರು ನಮ್ಮ ಈ ಶ್ಲಾಘನೀಯವಾದ ಕಾರ್ಯಕ್ರಮಕ್ಕೆ ಅನಿರ್ಬಂಧಿತ ನೆರವನ್ನು ನೀಡುತ್ತಿದ್ದಾರೆ. ಅವರ ಹೃದಯದಲ್ಲಿ ದೇಶಪ್ರೇಮ ಮತ್ತು ಉದಾರತೆಗಳು ಉಜ್ಜ್ವಲವಾಗಿವೆ. ಅವರು ತಮ್ಮ ಕೈಲಾದಷ್ಟು ಸಹಾಯವನ್ನು ಯಾರಿಗೆ ಬೇಕಾದರೂ, ಯುಕ್ತಾಯುಕ್ತ ರೀತಿಯಲ್ಲಿ ವಿವೇಚಿಸಿ, ನೀಡಲು ಸಿದ್ಧರಾಗಿದ್ದಾರೆ.

ನಿಮ್ಮ ಬಿನ್ನವತ್ತಳಿಕೆಯಲ್ಲಿ ಹೇಳಿರುವುದನ್ನೆಲ್ಲಾ ನಾನು ನೋಡಿದೆ. ಅದೆಲ್ಲವೂ ನನಗೆ ತಿಳಿದಿದೆ. ನಾನೂ ನಿಮ್ಮಂತೆಯೇ ಸಂಕಷ್ಟಗಳಲ್ಲಿಯೇ ಬೆಳೆದು ಬಂದವನು. ನೀವು ನಿಮ್ಮ ಏಳಿಗೆಗಾಗಿ ದುಡಿಯದೇ ಹೋದರೆ, ಬೇರೆ ಯಾರೂ, ಅಷ್ಟೇಕೆ ಇಡೀ ಪ್ರಪಂಚವೇ ನಿಮಗೆ ಏಳಿಗೆಯನ್ನು ತಂದುಕೊಡಲಾರದು. ನೀವು ಜ್ಞಾನದ ಮೂಲಕ ಮಾತ್ರ ಇದನ್ನು ಸಾಧಿಸಬಹುದು. ಏಕೆಂದರೆ, ಜ್ಞಾನವು ಸರ್ವಶಕ್ತವಾದುದು, ಜ್ಞಾನವನ್ನು ಪಡೆಯಲು ನೀವು ಶಿಕ್ಷಣವನ್ನು ಪಡೆಯಬೇಕು. ಆಗ ನಿಮಗೆ ತಾರ್ಕಿಕ ವಿವೇಚನಾಶಕ್ತಿ ದೊರಕುತ್ತದೆ. ನೀವು ಯಾವುದು ಒಳ್ಳೆಯದು, ಯಾವುದು ಕೆಟ್ಟದು ಎಂಬುದನ್ನು ತೀರ್ಮಾನಿಸಲು ಶಕ್ತರಾಗುತ್ತೀರಿ ಮತ್ತು ಅದರ ಮೇಲೆ ಆಯ್ಕೆ ನಿಮ್ಮದಾಗುತ್ತದೆ, ನಿಮ್ಮ ಕೀಳರಿಮೆ ಮಾಯವಾಗುತ್ತದೆ. ನೀವು ನಿಮ್ಮ ಬಗ್ಗೆ, ನಿಮ್ಮ ಹಕ್ಕು, ಸಮಾಜದ ಬಗ್ಗೆ ಇರುವ ನಿಮ್ಮ ಜವಾಬ್ದಾರಿಗಳ ಬಗ್ಗೆ ಅಧಿಕಾರಯುತವಾಗಿ ಮಾತನಾಡಬಹುದು. ಕೆಲವು ಮುಖಂಡರು ತಮ್ಮ ಮೇಲರಿಮೆಯ ಪರಿಣಾಮವಾದ ಅಹಂಭಾವವನ್ನು ಇನ್ನೂ ಬಿಟ್ಟಿಲ್ಲ. ಕಾರಣ, ಅವರು ಬದಲಾದರೆ, ಅವರ ಹಿತಾಸಕ್ತಿಗಳಿಗೆ ತೊಂದರೆಯಾಗುತ್ತದೆ. ಸಮಾಜದಲ್ಲಿನ ಮೇಲು-ಕೀಳಿನ ಭಾವ, ಹೆಂಗಸರು-ಗಂಡಸರ ನಡುವಿನ ಭೇದಭಾವ ಇವುಗಳ ಕಾಲ ಮುಗಿದುಹೋಗಿದೆ ಎಂಬುದರ ಅರಿವು ಅವರಿಗಿಲ್ಲ. ಹುಟ್ಟಿನಲ್ಲಿ ಪ್ರತಿಯೊಬ್ಬನೂ ಇತರರಿಗೆ ಸಮಾನವಾಗಿರುತ್ತಾನೆ. ಅವಕಾಶಗಳು ದೊರೆತರೆ ತೀರ ಬಡವನಾಗಿರುವವನೂ, ಅತಿ ವಿನೀತನೂ ಅತ್ಯುನ್ನತ ಪದವಿಗೆ

ಏರಬಲ್ಲ. ಹಾಗೆ ಈ ಅವಕಾಶಗಳು ನಿಮಗೆ ತಾವಾಗಿಯೇ ಬರದೆ ಹೋದರೆ, ಅವುಗಳನ್ನು ನೀವು ನಿಮ್ಮ ಸ್ವಂತ ಪ್ರಯತ್ನಗಳಿಂದ ಸೃಷ್ಟಿಸಿಕೊಳ್ಳಬೇಕು. ಈ ಕಾರಣಕ್ಕಾಗಿಯೇ ಶಿಕ್ಷಣವು ಆವಶ್ಯಕವಾಗಿದೆ. ವಾಸ್ತವವಾಗಿ, ಬಡವರು ಮಹಾನ್‌ವ್ಯಕ್ತಿಗಳಾಗಿ ಬೆಳೆಯಲು ಅಗತ್ಯವಾದ ನೈತಿಕ ಮತ್ತು ಆಧ್ಯಾತ್ಮಿಕ ಹಿನ್ನೆಲೆ ಮತ್ತು ಪರಂಪರೆಯನ್ನು ಹೊಂದಿದ್ದಾರೆ. ಬ್ರಹ್ಮರ್ಷಿ ವಸಿಷ್ಠರು ನಮ್ಮ ಹರಿಜನರ ಮನೆಯ ಮಗಳಾದ ಮಹಾ ಪತಿವ್ರತೆಯಾದ ಅರುಂಧತಿಯನ್ನು ಮದುವೆಯಾಗಿದ್ದರು. ಆ ಕಾಲದಲ್ಲಿಯೂ ಅಂತರ್ಜಾತೀಯ ಮದುವೆಗಳು ಆಗುತ್ತಿದ್ದವು ಎನ್ನುವುದಕ್ಕೆ ಇದು ಒಂದು ನಿದರ್ಶನ. ಇಂತಹ ಮದುವೆಗಳನ್ನು ಈಗಲೂ ನಿಷೇಧವೆಂದು ತೀರ್ಮಾನಿಸುವುದನ್ನು ಕೈಬಿಡಬಹುದು. ಅರುಂಧತಿಯನ್ನು ಇಂದಿಗೂ ಮದುವೆಯ ಸಮಾರಂಭಗಳಲ್ಲಿ ನಾವೆಲ್ಲಾ ಗೌರವಿಸುತ್ತೇವೆ. ಇಂದು ಸಮಾಜದಲ್ಲಿ ಬಹುಸಂಖ್ಯಾತರಾಗಿರುವ ಹರಿಜನರ ಕುಟುಂಬಕ್ಕೆ ಸೇರಿದವಳು ಅರುಂಧತಿ. ಹರಿಜನರು ಇಂದು ಎಲ್ಲಾ ವರ್ಗಗಳವರ, ಪಂಗಡಗಳವರ ಸಮಾನರಾಗಿದ್ದಾರೆ. ಅವರು ಯಾರ ಮನೆಗಾದರೂ ಹೋಗಿ ಉಣ್ಣಬಹುದು. ಅವರು ತಮ್ಮ ಮಕ್ಕಳಿಗಾಗಿ ಇತರ ವರ್ಗದವರ ಮನೆಯವರೊಡನೆ ಸಂಬಂಧವನ್ನು ಬೆಳೆಸಲು ಸಿದ್ಧರಾಗಿದ್ದಾರೆ. ಆದರೆ ಇತರ ವರ್ಗಗಳವರು ಇದಕ್ಕೆ ತಯಾರಾಗಿದ್ದಾರೆಯೇ? ಅವರು, ಎಂದರೆ ಹರಿಜನರು, ಈಗಾಗಲೇ ಸಮಾನತೆಯ ತತ್ತ್ವವನ್ನು ಜಾರಿಗೆ ತಂದಿದ್ದಾರೆ ಮತ್ತು ಸಾಮಾಜಿಕ ನ್ಯಾಯವನ್ನು ಅವರ ಸಮಾಜದವರೊಡನೆ ಅನುಸರಿಸುತ್ತಿದ್ದಾರೆ. ಆದರೆ ಅವರ ದುಡಿಮೆಯ ಫಲವನ್ನು ಪಟ್ಟಭದ್ರ ಹಿತಾಸಕ್ತಿಗಳು ಲೂಟಿಮಾಡುತ್ತಿರುವುದರಿಂದ ಅವರು ಹಸಿದ ಹೊಟ್ಟೆಯಲ್ಲಿಯೇ ಇರಬೇಕಾಗಿದೆ. ಈಗ ಜಾತಿಯೆಂಬುದು ಇಲ್ಲ, ಇರುವುದೆಲ್ಲಾ ಪಟ್ಟಭದ್ರ ಹಿತಾಸಕ್ತಿಗಳು ಎಂದು ನಾವು ಹೇಳಿದರೆ ಅವರು ನಮ್ಮನ್ನು ದುರುಗುಟ್ಟಿಕೊಂಡು ನೋಡುತ್ತಾರೆ. ಬುದ್ಧಿವಂತರು ಎಂದು ಕರೆಸಿಕೊಳ್ಳುವ ಶೇ. 5ರಷ್ಟು ಜನರು ಉಳಿದ ಜನತೆಯ ಮೇಲೆ ದಬ್ಬಾಳಿಕೆಯನ್ನು ಮಾಡುತ್ತಾ ಇದ್ದಾರೆಂದು ನಾವು ಹೇಳಿದರೆ, ಅವರಿಗೆ ಕೋಪ ಬರುತ್ತದೆ. ಪುರೋಹಿತರು ದೇವರ ಹೆಸರಿನಲ್ಲಿ ಜನರ ಸುಲಿಗೆಯನ್ನು ಮಾಡುತ್ತಾರೆಂದು ನಾವು ಹೇಳಿದರೆ, ಅವರಿಗೆ ಸಹಿಲಾಗುವುದಿಲ್ಲ. ಸಮಾಜದ ಸಣ್ಣ ಪಂಗಡವೊಂದು ಇದನ್ನೆಲ್ಲಾ ತಮ್ಮ ಮೇಲಿನ ಆಕ್ರಮಣವೆಂದು ತಿಳಿದುಕೊಂಡು ವಿಶೇಷ ರೀತಿಯಲ್ಲಿ

ಪ್ರತಿಕ್ರಿಯಿಸುತ್ತಾರೆ. ಏಕೆ? ಇದು ಕುಂಬಳಕಾಯಿ ಕಳ್ಳ ಎಂದರೆ ಹೆಗಲು ಮುಟ್ಟಿ ನೋಡಿಕೊಳ್ಳುವವನಂತೆ. ಇದು ಅವರ ಅಪರಾಧೀ ಮನೋಭಾವವನ್ನು ತೋರಿಸುತ್ತದೆ. ಇವಕ್ಕೆ ಬೇರೆಯವರು ಮಾಡಬಹುದಾದರೂ ಏನು? ಶೋಷಣೆಯನ್ನು ಗಡೀಪಾರು ಮಾಡುವ ಪ್ರತಿಜ್ಞೆಯನ್ನು ಮಾಡಿರುವ ನಾವು ಸುಮ್ಮನೆ ಕುಳಿತುಕೊಳ್ಳಲು ಸಾಧ್ಯವೇ? ಬೇರೆ ಜಾತಿಯವರಲ್ಲಿ – ಹರಿಜನರಲ್ಲಿ, ಲಿಂಗಾಯತರಲ್ಲಿ, ಬ್ರಾಹ್ಮಣರಲ್ಲಿ, ಮತ್ತು ಹಿಂದುಳಿದ ಇತರ ಜಾತಿಯವರಲ್ಲಿ ಪುರೋಹಿತರು ಇಲ್ಲವೇ? ನಗ್ನಸತ್ಯವನ್ನು ಜಾಹೀರುಗೊಳಿಸಿದರೆ, ಅದನ್ನು ಆಕ್ರಮಣವೆಂದು ಏಕೆ ತಿಳಿಯಬೇಕು. ನಾವು ಇಲ್ಲಿ ಟೀಕಿಸುತ್ತಿರುವುದು ಯಾವೊಬ್ಬ ವ್ಯಕ್ತಿಯ ತಪ್ಪುಗಳನ್ನಲ್ಲ, ಅಥವಾ ಅವನ ಕುಂದುಕೊರತೆಗಳನ್ನಲ್ಲ. ನಾವು ವೈಯಕ್ತಿಕ ವ್ಯಕ್ತಿಗಳನ್ನು ಗಮನದಲ್ಲಿರಿಸಿಕೊಂಡಿಲ್ಲ. ಆದರೆ, ಕೆಲವೊಂದು ಸ್ಥಾಪಿತ ತತ್ತ್ವಗಳನ್ನು ನಾವು ಆರಾಧಿಸುತ್ತೇವೆ ಮತ್ತು ಅವುಗಳ ಯಶಸ್ಸಿಗಾಗಿ ದುಡಿಯುತ್ತೇವೆ. ತಪ್ಪಾಗಿರುವುದು ಏನು ಎಂಬುದನ್ನು ಗಮನಿಸಿ ಅದನ್ನು ಸರಿಪಡಸಲು ಪ್ರಯತ್ನಿಸುತ್ತೇವೆಯೇ ಹೊರತು, ತಪ್ಪುಮಾಡಿದವರು ಯಾರು ಎಂದು ನಾವು ಕೆದಕುವುದಕ್ಕೆ ಹೋಗುವುದಿಲ್ಲ. ನಮ್ಮ ಇಂತಹ ನಿಲುವು ತಪ್ಪೆನಿಸುತ್ತದೆಯೇ? ಸಂಸ್ಕೃತಿಯ ಹೆಸರಿನಲ್ಲಿ ಅಲ್ಪಸಂಖ್ಯಾತರು ಬಹುಸಂಖ್ಯಾತರನ್ನು ಆರ್ಥಿಕ, ಸಾಮಾಜಿಕ ಮತ್ತು ರಾಜಕೀಯ ಗುಲಾಮಗಿರಿಯಲ್ಲಿ ಇಟ್ಟುಕೊಂಡಿದ್ದಾರೆ. ಸಂಸ್ಕೃತಿಯ ಹೆಸರಿನಲ್ಲಿ ಅಜ್ಞಾನ, ಮೂಢನಂಬಿಕೆಗಳು ಸಮಾಜದಲ್ಲಿ ಸ್ಥಾಪಿತವಾಗಿವೆ ಮತ್ತು ಪೂಜಿಸಲ್ಪಡುತ್ತಿವೆ. ಇದಕ್ಕೆ ಕಾರಣರಾಗಿರುವವರು ಈಗಲಾದರೂ ತಮ್ಮ ಅಭಿಪ್ರಾಯಗಳನ್ನು ಬದಲಿಸಿಕೊಳ್ಳಬೇಕು. ಮೇಲುಮೇಲಿನ ಅನುಕಂಪದಿಂದ ಯಾವ ಪ್ರಯೋಜನವೂ ಇಲ್ಲ. ಸ್ವಾರ್ಥತೆ ತೊಲಗಬೇಕು. ಆರ್ಥಿಕ ಮತ್ತು ಸಾಮಾಜಿಕ ನ್ಯಾಯವು ಎಲ್ಲರಿಗೂ ಸಿಗುವಂತೆ ಆಗಬೇಕು. ಹಾಗಾಗದಿದ್ದರೆ, ನಾವು ನಮ್ಮ ಸಂವಿಧಾನದ ಆಶಯಗಳನ್ನು ಕಾರ್ಯಗತಗೊಳಿಸುತ್ತೇವೆ ಎಂಬ ಪ್ರತಿಜ್ಞೆಗಳಿಗೆ ಅರ್ಥವೇ ಇರುವುದಿಲ್ಲ. ದಮನಿತ ವರ್ಗಗಳನ್ನು ಮೇಲೆತ್ತುವುದಕ್ಕಾಗಿ ಎಲ್ಲರೂ ಪ್ರಾಮಾಣಿಕವಾಗಿ ತಮ್ಮ ನೆರವಿನ ಹಸ್ತವನ್ನು ಚಾಚಬೇಕು. ಅನ್ಯಾಯಯುತ ಹಾಗೂ ಸಮಾಜಕ್ಕೆ ವಿರುದ್ಧವಾದ ವ್ಯವಸ್ಥೆಯನ್ನು ಯಾರೂ ಮುಂದುವರಿಸಿಕೊಂಡು ಹೋಗಬಾರದು, ಹಾಗೆ ಮಾಡಿದರೆ ಅಂತಹವನು ನಿಜವಾದ ಅರ್ಥದಲ್ಲಿ ಸಮಾಜಕ್ಕೆ ವಿಶ್ವಾಸಘಾತವನ್ನು ಮಾಡಿದವನಾಗುತ್ತಾನೆ.

ಈ ಕೆಟ್ಟ ವ್ಯವಸ್ಥೆಯನ್ನು ರಾಜಾರೋಷವಾಗಿ ಕೊನೆಗಾಣಿಸಲು ಪ್ರಯತ್ನಿಸದೆ, ಮುಂದುವರಿಸಿಕೊಂಡು ಹೋಗಲು ಸೂಕ್ಷ್ಮ ತಂತ್ರಗಳನ್ನು ಅನುಸರಿಸುವವನು ಖಳನಾಗುತ್ತಾನೆ. ಇದೇ ರೀತಿ ಮುಂದುವರಿದರೆ, ಪ್ರತೀಕಾರದ ದೇವತೆಯು ಅಂತಹವರನ್ನು ಸುಮ್ಮನೆ ಬಿಡುವುದಿಲ್ಲ, ನಾವು ಈಗ ಗುರಿಯಾಗಿಟ್ಟುಕೊಂಡಿರುವ ಶಾಂತಿಯುತ ಸಮಾಜದ ಕಟ್ಟುವಿಕೆಗೆ ಬದಲಾಗಿ ಕ್ರಾಂತಿಕಾರಿ ಹಾದಿಯು ನಮ್ಮೆದುರಿಗೆ ಬಂದು ನಿಲ್ಲುತ್ತದೆ. ಇಂತಹ ಅನಗತ್ಯ ಹಾಗೂ ದುರದೃಷ್ಟ ಸನ್ನಿವೇಶವು ಎದುರಾದರೆ, ಅದಕ್ಕೆ ಅವರೇ ಹೊಣೆಗಾರರಾಗಬೇಕಾಗುತ್ತದೆ. ನಾವು, ಸಚಿವರಾಗಿ, ಜನತೆಯ ಮತ್ತು ಜನತೆಯ ಪ್ರತಿನಿಧಿಗಳ ಸಂಪೂರ್ಣ ಬೆಂಬಲ ಮತ್ತು ಸಹಕಾರದಿಂದ ಮಾತ್ರ ನಮ್ಮ ಕಾರ್ಯವನ್ನು ನಿರ್ವಹಿಸಬಹುದು. ನೀವು ನಿಮ್ಮ ಬೆಂಬಲ ಮತ್ತು ಸಹಕಾರವನ್ನು ನೀಡುವ ಮೊದಲು ನಮ್ಮ ಗುರಿ ನ್ಯಾಯಯುತವಾಗಿದೆಯೇ ಮತ್ತು ಗುರಿಯನ್ನು ತಲುಪಲು ನಾವು ಅನುಸರಿಸುತ್ತಿರುವ ಮಾರ್ಗಗಳು ನ್ಯಾಯಸಮ್ಮತವಾಗಿವೆಯೇ ಎಂಬುದನ್ನು ಖಾತರಿಮಾಡಿಕೊಳ್ಳಿ. ಇಲ್ಲಿ ನಿಮ್ಮ ಜವಾಬ್ದಾರಿಯು ಗುರುತರವಾದದ್ದು. ನಿಮ್ಮ ಅಗಾಧವಾದ ವ್ಯವಹಾರಜ್ಞಾನದಿಂದ ನೀವು ನಿಮ್ಮ ಕರ್ತವ್ಯವನ್ನು ಅಚ್ಚುಕಟ್ಟಾಗಿ, ನ್ಯಾಯದೃಷ್ಟಿಯಿಂದ ನಿಭಾಯಿಸಬಲ್ಲಿರಿ ಎಂಬುದರಲ್ಲಿ ನನಗೆ ನಂಬಿಕೆಯಿದೆ. ಪ್ರಜಾಪ್ರಭುತ್ವವು ನಮ್ಮಿಂದ ನಿರೀಕ್ಷಿಸುವುದು ಸದಾ ಜಾಗೃತರಾಗಿರುವುದನ್ನು, ಎಲ್ಲಾ ವಿಧದಲ್ಲಿಯೂ ಉತ್ತಮವಾಗಿರುವ ಮತ್ತು ಎಂದಿಗೂ ಭ್ರಷ್ಟವಾಗದ ರೀತಿನೀತಿಗಳನ್ನು ಹಾಗೂ ಪ್ರಾಮಾಣಿಕತೆಯನ್ನು. ಇಲ್ಲಿಯವರೆಗೂ ನೀವು ವಸ್ತುನಿಷ್ಠವಾಗಿ ಆಲೋಚಿಸುವುದನ್ನು ನಿಮ್ಮ ಸ್ವಭಾವದಲ್ಲಿ ಅಳವಡಿಸಿಕೊಂಡಿರದಿದ್ದರೆ, ಈಗ ನೀವು ಅಳವಡಿಸಿಕೊಳ್ಳಬೇಕು. ನೀವು, ಹೆಂಗಸರು ಮತ್ತು ಗಂಡಸರು ಎಂಬ ಭೇದವಿಲ್ಲದೆ ಎಲ್ಲರೂ, ನಿಮ್ಮ ವ್ಯಕ್ತಿತ್ವವನ್ನು ಗರಿಷ್ಠ ಮಟ್ಟಕ್ಕೆ ಬೆಳಸಿಕೊಳ್ಳಬೇಕು. ನಿಮಗೆ ಸಾಧ್ಯವಿರುವ ಮಟ್ಟಿಗೆ ನಿಮ್ಮ ಮಕ್ಕಳಿಗೆ ಶಿಕ್ಷಣವನ್ನು ಕೊಡಿಸಿ. ಹಾಗೆ ಮಾಡಿದರೆ ಮಾತ್ರ ನೀವು ಪ್ರಜಾಪ್ರಭುತ್ವದಲ್ಲಿ ನಿಮ್ಮ ಪಾತ್ರವನ್ನು ಸರಿಯಾಗಿ ನಿರ್ವಹಿಸುವಿರಿ. ಏನೇ ಆದರೂ, ಧರ್ಮದಲ್ಲಿ, ದೇವರಲ್ಲಿ ನಂಬಿಕೆಯಿಡಿ. ಆದರೆ ಎಂದೂ ಈ ನಂಬಿಕೆ, ಸಂವಿಧಾನವು ಚಿತ್ರಿಸಿರುವ ಆರ್ಥಿಕ ಮತ್ತು ಸಾಮಾಜಿಕ ವಿಷಯಗಳನ್ನು ಹಾಳುಗೆಡಹುವ ಹಾಗೆ ಶಾಸ್ತ್ರಾಂಧತೆಯಾಗದಿರಲಿ, ಧರ್ಮಾಂಧತೆಯಾಗದಿರಲಿ. ಗಾಂಧೀಜಿ

ಧರ್ಮಾಂಧನೊಬ್ಬನ ಗುಂಡಿಗೆ ಬಲಿಯಾದುದು ನಿಮಗೆ ತಿಳಿದ ವಿಷಯವೇ ಆಗಿದೆ. ನಮ್ಮ ಪುಣ್ಯ, ಅವನು ಹರಿಜನನಾಗಿರಲಿಲ್ಲ, ಬದಲಿಗೆ, ಅವನು ಸಾಂಪ್ರದಾಯಿಕ ಕುಟುಂಬಕ್ಕೆ ಸೇರಿದ, ಮುಂದುವರಿದ ವರ್ಗದ ವಿದ್ಯಾವಂತನಾಗಿದ್ದ. ಇದರಿಂದ ಧರ್ಮಾಂಧತೆ ಎಲ್ಲಿಯವರೆಗೆ ಹೋಗಬಹುದು ಎಂಬುದನ್ನು ನೀವು ನೋಡಬಹುದು. ನೀವು, ಹಿಂದುಳಿದ ವರ್ಗಕ್ಕೆ ಸೇರಿದ ಹರಿಜನರು, ಅಂತಹ ಕೃತ್ಯವನ್ನು ಮಾಡಲು ಕನಸಿನಲ್ಲಿಯೂ ಯೋಚಿಸಿರಲಾರಿರಿ. ವಧಾಸ್ಥಂಭಕ್ಕೆ ಕರೆದುಕೊಂಡು ಹೋಗುವ ಕುರಿಯಂತೆ ನೀವು ನಡೆಸಿಕೊಳ್ಳಲ್ಪಡುತ್ತಿದ್ದೀರಿ. ನಿಮಗೆ ಅನಂತ ಶಾಂತಿಯ ಆಶ್ವಾಸನೆಯನ್ನು ಕೊಟ್ಟಿರುತ್ತಾರೆ. ನಿಜ, ಆದರೆ ಅದು ಸ್ಮಶಾನ ಶಾಂತಿ. ಅದನ್ನು ಬೋಧಿಸುವವರೆ ಅದನ್ನು ಇಟ್ಟುಕೊಳ್ಳಲಿ. ನಾವು, ನಿರಂತರವಾಗಿ ತುಳಿಯಲ್ಪಟ್ಟಿರುವ ಜನಾಂಗದವರಾದ ನಾವು, ಬಯಸುವುದು ಇರಲು ಈ ಭೂಮಿಯ ಮೇಲೆ ಒಂದಿಷ್ಟು ಜಾಗ, ಮತ್ತೆ ಶಾಂತಿಯುತವಾದ ಬದುಕು ಮತ್ತು ಶಾಂತಿಯುತವಾದ ಸಾವು. ನಮಗೆ ಬೇಕಾಗಿರುವುದು ಸಾಕಷ್ಟು ಆಹಾರ, ಬಟ್ಟೆಬರೆ, ವಾಸಿಸಲು ಒಂದಷ್ಟು ಜಾಗ ಮತ್ತು ದುಡಿಯಲು ಕೆಲಸ ಮತ್ತು ಸಾಧಾರಣವಾದ ಜೀವನಮಟ್ಟ. ನಾವು ಯಾರನ್ನೂ ಶೋಷಿಸಬಯಸುವುದಿಲ್ಲ, ಆದರೆ ಕಷ್ಟಪಟ್ಟು ದುಡಿದು ನಮ್ಮ ಜೀವನವನ್ನು ಸಾಗಿಸುತ್ತೇವೆ. ಇಷ್ಟನ್ನು ಮಾಡಲು ನಮಗೆ ಪ್ರತಿಯೊಬ್ಬರೂ ದಯಮಾಡಿ ಅವಕಾಶವನ್ನು ಮಾಡಿಕೊಡಲಿ. ನಾವು ನಮ್ಮ ಅರ್ಹತೆಯಿಂದ, ಐಕ್ಯತಾಭಾವದಿಂದ, ಸಮಗ್ರತೆಯಿಂದ ಮತ್ತು ದೇಶಭಕ್ತಿಯಿಂದ ಇಷ್ಟನ್ನು ಪಡೆದುಕೊಳ್ಳುವುದಕ್ಕೆ ಪಾತ್ರರಾಗೋಣ. ಕಲ್ಯಾಣ ರಾಷ್ಟ್ರವನ್ನು ಕಟ್ಟುವಲ್ಲಿ ನಾವೆಲ್ಲರೂ ಉಳಿದೆಲ್ಲರ ಜೊತೆ ಸೇರಿ, ದೃಢಸಂಕಲ್ಪದಿಂದ ಕಾರ್ಯಪ್ರವೃತ್ತರಾಗೋಣ. ತಮ್ಮನ್ನು ತಾವು ರಕ್ಷಿಸಿಕೊಳ್ಳಲಾರದವರು ಗೌರವಕ್ಕೆ ಅರ್ಹರಾಗಲಾರರು ಎಂದು ಸುಭಾಷ್ ಬೋಸ್ ಹೇಳಿದ್ದರು. ಆದ್ದರಿಂದ ನಿಮ್ಮನ್ನು ನೀವು ರಕ್ಷಿಸಿಕೊಳ್ಳಲು ಸಿದ್ಧರಾಗಿರಿ, ಆದರೆ ಅದಕ್ಕೆ ಸಂಬಂಧಿಸಿದ ಹಾಗೆ, ನೀವೆಲ್ಲರೂ ನಿಮ್ಮ ನಿಮ್ಮ ಬಾಧ್ಯತೆಗಳನ್ನೂ, ಜವಾಬ್ದಾರಿಗಳನ್ನೂ ಅರಿತುಕೊಳ್ಳಬೇಕು. ಒಂದು ದೇಶದ ಸಂಪತ್ತು ಎಂದರೆ ಆ ದೇಶದ ಜನರ ದುಡಿಮೆಯ ಫಲ. ತಮ್ಮ ನ್ಯಾಯಯುತ ಪಾಲನ್ನು ಪಡೆಯಲು, ತಮಗೆ ಘನತೆಯಿಂದ ಬದುಕಲು ಸಿಗಬೇಕಾಗಿದ್ದ ಅವಕಾಶವನ್ನು ಪಡೆಯಲು ಬಡಜನತೆ ಈ ದೇಶದಲ್ಲಿ ಹಲವಾರು ಶತಮಾನಗಳಿಂದ ಶ್ರಮಪಡುತ್ತಾ

ಬಂದಿದ್ದಾರೆ. ಆದ್ದರಿಂದ ಮುಂದಿನ ಶುಭದಿನಗಳ ಫಲವನ್ನು ಪಡೆಯಲು ನೀವು ಸಾಂವಿಧಾನಿಕ ಮಾರ್ಗಗಳಲ್ಲಿ ಯೋಗ್ಯರಾಗಿರಿ.

ಗಾಂಧೀಜಿಯವರು ಹರಿಜನ ಎಂದು ಹೆಸರಿಸಿದಾಗ, ಅವರ ಮನಸ್ಸಿನಲ್ಲಿ ಇದ್ದುದು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳು ಮಾತ್ರವಲ್ಲ. ಅದರ ವ್ಯಾಪ್ತಿ, ಆರ್ಥಿಕವಾಗಿ, ಸಾಮಾಜಿಕವಾಗಿ ಮತ್ತು ಶೈಕ್ಷಣಿಕವಾಗಿ ಹಿಂದುಳಿದ ವರ್ಗಗಳ ಎಲ್ಲಾ ಬಡವರನ್ನೂ ಒಳಗೊಂಡಿತ್ತು. ಹೀಗಾಗಿ ಎಲ್ಲಾ ಬಡವರೂ ಹರಿಜನರೇ. ಅವರೆಲ್ಲರೂ ದೇವರಿಗೆ ಸೇರಿದ ಜನರೇ. ಅವರ ಮುಗ್ಧತೆಗಾಗಿ, ದೈವತ್ವಕ್ಕಾಗಿ ಮತ್ತು ಎಲ್ಲಾ ಬಗೆಯ ಶ್ರಮದಾಯಕ ಕೆಲಸಗಳನ್ನೂ ಪ್ರೀತಿಯಿಂದ ಮಾಡುವ ಗುಣಕ್ಕಾಗಿ ದೇವರು ಅವರನ್ನು ಪ್ರೀತಿಸುತ್ತಾನೆ. ದೇವಸ್ಥಾನಗಳನ್ನು ಕಟ್ಟಿದವರು, ಅಲ್ಲಿನ ಶಿಲ್ಪಗಳನ್ನು ಕೊರೆದವರು, ದೇವಾನುದೇವತೆಗಳ ಪ್ರತಿಮೆಯನ್ನು ಕಟೆದು ನಿಲ್ಲಿಸಿದವರು ಈ ಜನಗಳೇ. ಆಹಾರವನ್ನು ಬೆಳೆದವರು, ಪಾದರಕ್ಷೆಗಳಿಂದ ಹಿಡಿದು ವಸ್ತ್ರಗಳವರೆಗೆಎಲ್ಲವನ್ನೂ ತಯಾರಿಸಿದವರು ಕೂಡ ಈ ಜನಗಳೇ. ಆದರೆ ಈ ಜನಗಳು ಕುಡಿಯುವ ನೀರಿಗಾಗಿ ಒಂದು ಭಾವಿಯನ್ನು ಬೇಡಿದರೆ ಕೊಡಲು ನಾವು ಹಿಂದೆ ಮುಂದೆ ನೋಡುತ್ತೇವೆ. ಈ ಬಡಜನರು ವಾಸಿಸುವ ಇಡೀ ಪ್ರದೇಶಕ್ಕೆ ಕೇವಲ ಒಂದು ಭಾವಿಯನ್ನು ನೀಡುವುದಕ್ಕೂ ನಾವು ಗೊಣಗುತ್ತೇವೆ. ಸಾರ್ವಜನಿಕ ಭಾವಿಯಿಂದ ನೀರನ್ನು ಸೇದಿಕೊಳ್ಳಲು ನಾವು ಅವಕಾಶವನ್ನು ಕೊಡುವುದಿಲ್ಲ. ಇದು ಎಷ್ಟು ದಃಖಕರ ವಿಷಯ! ಪಟ್ಟಣ ಮತ್ತು ನಗರಗಳಲ್ಲಿ ಪ್ರತಿಯೊಂದು ಮನೆಗೂ ಐದಾರು ನಲ್ಲಿಗಳು ಇರುತ್ತವೆ. ಆದರೆ ಕ್ರೂರ ಸಮಾಜವನ್ನು ಸೃಷ್ಟಿಸಿರುವ ನಾವು ಬಡಜನರಿಗೆ ಕುಡಿಯುವ ನೀರನ್ನು ಕೂಡ ಕೊಡದೆ ಅವರನ್ನು ವಂಚಿಸುತ್ತಿದ್ದೇವೆ. ನಮ್ಮನ್ನು ನಾವು ಮನುಷ್ಯರು ಎಂದುಕೊಳ್ಳಬಹುದೇ? ನಾವು ಮಾನವರಿಗೆ ಅವರಿಗೆ ಸಲ್ಲುವ ಘನತೆಯನ್ನು ನೀಡುತ್ತಿದ್ದೇವೆಯೇ? ಮಾನವ ಹಕ್ಕುಗಳ ಸನ್ನದಿನ ಬಗ್ಗೆ ಮಾತನಾಡುತ್ತೇವೆ. ಅದರಿಂದ ಏನು ಉಪಯೋಗ? ದೇಶದ ಬಡಜನತೆ ಎಲ್ಲಾ ವಿಷಯಗಳಲ್ಲಿಯೂ ಆದ್ಯತೆ ಮೇರೆಗೆ ಮೊದಲ ಹಕ್ಕನ್ನು ಹೊಂದಿರಬೇಕು. ವಸ್ತುಶಃ, ಅವರು ಇತರರಿಗೆ ತಮ್ಮ ಭಾವಿಯಿಂದ ನೀರನ್ನು ಕೊಡಬೇಕು. ಆದರೆ ಅವರಲ್ಲಿ ಅಹಂಕಾರವು ಬೆಳೆದು, ಅವರು ಸ್ಥಿತಿವಂತರನ್ನು ಕರೆದು,

ನೀರಿನ ಮೇಲಿನ ಮೊದಲ ಹಕ್ಕು ನಮ್ಮದು ಆದ್ದರಿಂದ ನೀವು ಬಂದು ನಮ್ಮಿಂದ ನೀವು ನೀರನ್ನು ತೆಗೆದುಕೊಂಡುಹೋಗಿ ಎಂದು ಹೇಳಬಹುದಾದ ದಾರ್ಷ್ಟ್ಯವನ್ನು ನಾನು ಒಪ್ಪುವುದಿಲ್ಲ. ಉಳ್ಳವರಲ್ಲಿ ಸಹಕಾರದ ಮನೋಭಾವವಿದ್ದು ಅವರು ಉದಾರವಾಗಿ ಇತರರನ್ನು ನಡೆಸಿಕೊಳ್ಳಬೇಕು. ಬಡಜನತೆಯು ವಾಸಮಾಡುವ ಪ್ರದೇಶದಲ್ಲಿ ಶಾಲೆಗಳನ್ನು ತೆರೆದು ಅಲ್ಲಿಗೆ ತಮ್ಮ ಮಕ್ಕಳನ್ನೂ ಕಳುಹಿಸಿದರೆ, ಮಕ್ಕಳು ಬೇಧಭಾವವಿಲ್ಲದ ಒಟ್ಟಿಗೆ ಬೆಳೆಯುವ ಅವಕಾಶ ದೊರೆತು ರಾಷ್ಟ್ರದ ಪುನರ್ನಿರ್ಮಾಣಕ್ಕೆ ಮುಂದೆ ಅವರು ಕೈಜೋಡಿಸಬಹುದು. ಬಡವರು ದೇಶಕ್ಕೆ ಎಂದೂ ಮೋಸಮಾಡಿಲ್ಲ. ಅದಕ್ಕೆ ವಿರುದ್ಧವಾಗಿ ಅವರು ದೇಶದ ಸಂಪತ್ತನ್ನು ಹೆಚ್ಚಿಸಲು ದುಡಿದಿದ್ದಾರೆ. ಈಗ ಆ ದುಡಿಮೆಯ ಫಲವನ್ನು ವಿತರಣೆ ಮಾಡುವ ಮತ್ತು ಅನುಭವಿಸುವ ಕಾರ್ಯದಲ್ಲಿ ಅವರ ಪಾತ್ರವೂ ಇರಬೇಕು. ಈ ತತ್ತ್ವವನ್ನು ವಿರೋಧಿಸುವವನು ನಿಜವಾಗಿಯೂ ಸಮಾಜವಿರೋಧಿಯೂ, ದೇಶದ್ರೋಹಿಯೂ ಆಗುತ್ತಾನೆ. ಮುಂದಿನ ಜನ್ಮವೆಂಬುದು ಇದ್ದರೆ, ತಾವು ಹರಿಜನರಾಗಿ ಹುಟ್ಟಬೇಕೆಂದು ಬಯಸುವುದಾಗಿ ಗಾಂಧೀಜಿ ಪದೇಪದೇ ಹೇಳುತ್ತಿದ್ದರು. ಇದಕ್ಕೆ ಇನ್ನೇನಾದರೂ ವ್ಯಾಖ್ಯಾನವು ಬೇಕಾಗಿದೆಯೇ?

ಕೊನೆಯದಾಗಿ, ಸ್ಥಿತಿವಂತರು ಒಂದು ಪಾಠವನ್ನು ಕಲಿಯಬೇಕಾಗಿದೆ. ಅವರು ಬರಲಿರುವ ಕೇಡಿನ ಸೂಚನೆಯನ್ನು ಅವರು ಗಮನಿಸಬೇಕು. ಅವರಿಗೆ ಹರಿಜನರಿಗೆ ನೇರವಾಗಿ ಸಹಾಯಮಾಡಲು ಸಾಧ್ಯವಿಲ್ಲದಿದ್ದರೆ ಪರವಾಗಿಲ್ಲ, ಆದರೆ ಅವರು ಹರಿಜನರು ತಮ್ಮ ಹಕ್ಕುಗಳನ್ನು ಸಮರ್ಥಿಸಿಕೊಳ್ಳುವುದಕ್ಕೆ ಅಡ್ಡಿಬರಬಾರದು. ಹರಿಜನರಿಗೆ ನಿರಾಶೆಯನ್ನು ಉಂಟುಮಾಡಬಾರದು. ಅವರು ತಮ್ಮ ಕನಸುಗಳನ್ನು ಕಾಣುವುದಕ್ಕೆ ಅದನ್ನು ಸಾಕಾರಮಾಡಿಕೊಳ್ಳುವುದಕ್ಕೆ, ಮತ್ತು ಅವರಪಾಡಿಗೆ ಅವರು ತಮ್ಮ ಜೀವನವನ್ನು ಸಾಗಿಸುವುದಕ್ಕೆ ಅವರನ್ನು ಬಿಟ್ಟುಬಿಡಬೇಕು, ಹರಿಜನರು ಶಾಂತಿಯಿಂದ ಬದುಕಲು, ತಮ್ಮ ಕೃಷಿ, ತೋಟಗಾರಿಕೆ, ಪಶುಸಂಗೋಪನೆ, ಮತ್ತು ಸಣ್ಣಪ್ರಮಾಣದ ಉದ್ದಿಮೆಗಳನ್ನು ಮುಂದುವರಿಸಿಕೊಂಡು ಹೋಗಲು ಅವಕಾಶಮಾಡಿಕೊಡಿ. ಬೇರೆಯವರೂ ಅವರ ಜೊತೆ ಸೇರಿಕೊಂಡು ಸಹಕಾರ ತತ್ತ್ವದ ಆಧಾರದ ಮೇಲೆ ಹೆಚ್ಚು ಹೆಚ್ಚು ಉತ್ಪಾದನೆಯನ್ನು ಮಾಡಬಹುದು ಮತ್ತು ಅದರ ಮೂಲಕ ಎಲ್ಲರಿಗೂ ಉಣ್ಣಲು ಸಾಕಷ್ಟು ಆಹಾರವನ್ನು ಕೊಡಬಹುದು.

ಕುಡಿತದ ಚಟವು ವಿಪರೀತವಾಗಿದ್ದಾಗ, ಸಾರಾಯಿ ಅಂಗಡಿಗಳು ಸಾಮಾನ್ಯವಾಗಿ ಹರಿಜನರ ವಾಸಪ್ರದೇಶಗಳಲ್ಲಿಯೇ ಇರುತ್ತಿದ್ದವು. ಒಂದು ಕಡೆ ಕುಡಿತದ ವಿರುದ್ಧ ಪ್ರವಚನಗಳು ನಡೆಯುತ್ತಿದ್ದರೆ, ಮತ್ತೊಂದು ಕಡೆ ಸಾರಾಯಿ ಅಂಗಡಿಗಳು ಇರುತ್ತಿದ್ದವು. ಸಾರಾಯಿ ಅಂಗಡಿಗಳ ಮುಂದೆ ಯಾರಿಗೆ ಸ್ಥಿತಪ್ರಜ್ಞನ ಹಾಗೆ ಕುಳಿತುಕೊಂಡಿರಲು ಸಾಧ್ಯವಾಗುತ್ತಿತ್ತು? ಹಲವಾರು ವರ್ಷಗಳು ಕಠಿಣ ತಪಸ್ಸು ಮಾಡಿದ ವಿಶ್ವಾಮಿತ್ರನೇ ಮೇನಕೆಯ ಬಲೆಗೆ ಬೀಳಲಿಲ್ಲವೇ? 'ನನಗೇನಾದರೂ ಒಂದು ಗಂಟೆಯಮಟ್ಟಿಗೆ ಸರ್ವಾಧಿಕಾರವು ದೊರೆತಿದ್ದರೆ, ಎಲ್ಲಾ ಪಾನಶಾಲೆಗಳನ್ನೂ ಮುಚ್ಚಿಸಿ ಕುಡಿತದ ಚಟವನ್ನು ನಿಲ್ಲಿಸುತ್ತಿದ್ದೆ' ಎಂದು ಇದೇ ಕಾರಣಕ್ಕಾಗಿ ಗಾಂಧೀಜಿಯವರು ಹೇಳುತ್ತಿದ್ದರು. ಈ ಕೆಟ್ಟ ಚಟವು ಬಡವರು ಮತ್ತು ಶ್ರೀಮಂತರಿಬ್ಬರನ್ನೂ ತನ್ನೆಡೆಗೆ ಸೆಳೆದುಕೊಳ್ಳುತ್ತದೆ. ಮನುಷ್ಯನ ಆಲೋಚನಾ ಶಕ್ತಿಯನ್ನು ಅದು ಹಾಳುಮಾಡುತ್ತದೆ. ನೀವು ನಿಮ್ಮ ಹಣವನ್ನೆಲ್ಲಾ ಅದಕ್ಕೆ ಸುರಿಯುವಂತೆ ಮಾಡಿ ನಿಮ್ಮನ್ನು ನೈತಿಕವಾಗಿ ಮತ್ತು ದೈಹಿಕವಾಗಿ ಜರ್ಜರಿತರನ್ನಾಗಿ ಮಾಡುತ್ತದೆ. ಈ ಕಾರಣಕ್ಕಾಗಿಯೇ, ಕಾಂಗ್ರೆಸ್ ಸರಕಾರವು ಪಾನನಿಷೇಧವನ್ನು ಜಾರಿಗೆ ತಂದಿದೆ. ಇದರಿಂದ ಸರಕಾರಕ್ಕೆ ಕೋಟಿಗಟ್ಟಲೆ ನಷ್ಟವಾಗಿದೆ. ಆದರೂ, ಸಮಾಜದ ಹಿತದೃಷ್ಟಿಯಿಂದ ತೆಗೆದುಕೊಂಡಿರುವ ಈ ಕ್ರಮಕ್ಕೆ ನಿಮ್ಮೆಲ್ಲರ ಸಹಕಾರವೂ ಅಗತ್ಯವಿದೆ. ಪಾನನಿಷೇಧದ ಮಹತ್ವವನ್ನು ಮನಗಂಡಿರುವುದರಿಂದಲೇ ಅದನ್ನು ಇನ್ನಿತರ ಪ್ರದೇಶಗಳಿಗೂ ವಿಸ್ತರಿಸುವ ನಿರ್ಧಾರವನ್ನು ಸರಕಾರವು ತೆಗೆದುಕೊಂಡಿದೆ.

ಕೊನೆಯದಾಗಿ, ಇಂತಹ ಸಮಾವೇಶಗಳು ಆರು ತಿಂಗಳಿಗೊಮ್ಮೆ ನಡೆಯುತ್ತಿರಬೇಕು. ಸರಕಾರವು ತನ್ನ ಕೈಯಲ್ಲಿ ಸಾಧ್ಯವಾದ ಎಲ್ಲಾ ಸಹಾಯವನ್ನೂ ಮಾಡುತ್ತದೆ. ಅದನ್ನು ಉಪಯೋಗಿಸಿಕೊಂಡು ನೀವು, ನಮ್ಮ ದೊಡ್ಡ ದೊಡ್ಡ ನಾಯಕರು ನಿಗದಿಗೊಳಿಸಿರುವ ಗುರಿಯುತ್ತ, ದೃಢ ಸಂಕಲ್ಪದಿಂದ, ಶಾಂತಿಯುತವಾಗಿ, ಶಿಸ್ತಿನಿಂದ ಮುನ್ನಡೆಯಬೇಕು. ನಾನು ನಗ್ನ ಸತ್ಯವನ್ನು ನುಡಿದಿದ್ದೇನೆ. ಅದನ್ನು ಯಾರೂ ವೈಯಕ್ತಿಕ ಟೀಕೆಯೆಂದು ಬಗೆಯಬೇಡಿ. ಯಾವ ವ್ಯಕ್ತಿಯನ್ನೂ ಉದ್ದೇಶಿಸಿ ನಾನು ಮಾತನಾಡಲಿಲ್ಲ. ನಾನು ಹೇಳಿರುವುದನ್ನು ಸರಿಯಾದ ರೀತಿಯಲ್ಲಿ ಅರ್ಥಮಾಡಿಕೊಳ್ಳಬೇಕೆಂದು ಕೇಳಿಕೊಳ್ಳುತ್ತೇನೆ. ಅದನ್ನು ಅಪಾರ್ಥಮಾಡದೆ, ಅದಕ್ಕೆ ಸುಣ್ಣಬಣ್ಣವನ್ನು ಹಚ್ಚದೆ, ನನ್ನ ಮಾತಿನ ಸಂದರ್ಭವನ್ನು ಮರೆಮಾಡಿ ಹೇಳಿಕೆಗಳನ್ನು ತಿರುಚದೆ ನನ್ನ ಸದಾಶಯವನ್ನು ಅರ್ಥಮಾಡಿಕೊಳ್ಳಿ. ಶಾಂತಿಗೆ ಜಯವಾಗಲಿ ಮತ್ತು ನಮ್ಮ ಉದ್ದೇಶಗಳಿಗೆ ಯಶಸ್ಸು ಸಿಗಲಿ.

## ♦ ಗಿರಿಜನರ ಪುನರ್ವಸತಿ ಮತ್ತು ಅದರ ಆಗುಹೋಗುಗಳು

**ಕಾಡುಗಳಲ್ಲಿ, ಬೆಟ್ಟ – ಗುಡ್ಡಗಳಲ್ಲಿ ಮತ್ತು ಕಣಿವೆಗಳಲ್ಲಿ ಬದುಕುತ್ತಿರುವಂತಹ ಗಿರಿಜನರ ಸಾಮಾಜಿಕ ಮತ್ತು ಆರ್ಥಿಕ ಕ್ಷೇತ್ರಗಳಲ್ಲಿನ ಅಭಿವೃದ್ಧಿಗಾಗಿ ಹಾಗೂ ಮಹಿಳೆ, ಮಕ್ಕಳ ಸುರಕ್ಷತೆಗಳಿಗಾಗಿ, ಪುನರ್ವಸತಿಯ ಅವಕಾಶಗಳನ್ನು ಕಲ್ಪಿಸಿಕೊಡುವಂತಹ ಉದಾರವಾದಿ ನಿಲುವುಗಳನ್ನು ಈ ಲೇಖನ ಸಾದರಪಡಿಸುತ್ತದೆ. 1961 ರ ಜನವರಿ 6 ರಂದು ಚಾಮರಾಜನಗರ, ತಾಲೂಕಿನ ಕ್ಯಾತದೇವರಗುಡಿಯಲ್ಲಿ ನಡೆದ ಗಿರಿಜನರ ಸಮಾವೇಶದಲ್ಲಿ ಮಾಡಿದ ಅಧ್ಯಕ್ಷೀಯ ಭಾಷಣ ಇದಾಗಿದೆ.**

ಇಂತಹ ಒಂದು ಸ್ಥಳದಲ್ಲಿ ನಿಮ್ಮೆಲ್ಲರನ್ನೂ ಭೇಟಿಮಾಡಿ ನಿಮ್ಮೊಡನೆ ಕೆಲಕಾಲ ಕಳೆಯುವುದು ನನ್ನ ಬಯಕೆಯಾಗಿತ್ತು. ಆದರೆ, ಬೇರೆ ಕೆಲಸಗಳ ಒತ್ತಡದಿಂದ ಇಲ್ಲಿಯವರೆಗೆ ಇದು ಸಾಧ್ಯವಾಗಿರಲಿಲ್ಲ. ಇಂದಾದರೂ ನನ್ನ ಬಯಕೆಯು ಈಡೇರಿದುದಕ್ಕೆ ನನಗೆ ಸಂತೋಷವಾಗಿದೆ.

ನೀವು ಬದುಕಿನಲ್ಲಿ ಪಡುತ್ತಿರುವ ಕಷ್ಟಗಳು ಮತ್ತು ನೀವು ಎದುರಿಸುತ್ತಿರುವ ಸಮಸ್ಯಗಳುಸರಕಾರದ ಗಮನಕ್ಕೆ ಬಂದಿವೆ. ನಿಮ್ಮ ಜೀವನದ ಗುಣಮಟ್ಟವನ್ನು ಇತರ ಮುಂದುವರಿದ ವರ್ಗಗಳವರ ಜೀವನದ ಮಟ್ಟಕ್ಕೆ ತರಲು ಮತ್ತು ನೀವೂ ಇತರರಂತೆ ನಾಗರಿಕ ಬಾಳನ್ನು ನಡೆಸಲು ಅನುಕೂಲವಾಗುವಂತೆ, ಅವುಗಳಿಗೆ ವಿಶೇಷ ಗಮನವನ್ನು ನೀಡಲು ಭಾರತ ಸರಕಾರವು ಸಂವಿಧಾನದಲ್ಲಿಯೇ ಕೆಲವು ವಿಧಿಗಳನ್ನು ಸೇರಿಸಿದೆ. ನೀವು ವಿದ್ಯಾವಂತರಲ್ಲ. ಹಾಗಾಗಿ ಸಂವಿಧಾನವನ್ನು ಮತ್ತು ಅದರಲ್ಲಿನ ವಿಧಿಗಳನ್ನು, ಉದಾ. 16(40), 275(1), 232(1) ಮತ್ತು 338 – ಇವುಗಳನ್ನು ಅರ್ಥಮಾಡಿಕೊಳ್ಳುವುದು ನಿಮಗೆ ಸಾಧ್ಯವಾಗದೆ 'ಹೋಗಬಹುದು. ಆದರೂ, ಸರಕಾರವು ನಿಮಗಾಗಿ ಏನು ಮಾಡುತ್ತಿದೆ ಎಂಬುದನ್ನು ತಿಳಿಸಲು, ನಿಮಗೆ ಅದರ ಸ್ಥೂಲವಾದ ಒಂದು ಚಿತ್ರವನ್ನು ನೀಡಲು ಅವುಗಳನ್ನು ನಾನಿಲ್ಲಿ ಹೇಳುತ್ತಿದ್ದೇನೆ. ಉದ್ಯೋಗಗಳಲ್ಲಿ ನಿಮಗೆ ಆದ್ಯತೆಯನ್ನು ನೀಡಲಾಗಿದೆ, ವಿದ್ಯಾಭ್ಯಾಸಕ್ಕಾಗಿ ಹಲವು ಸವಲತ್ತುಗಳನ್ನು

ನೀಡಲಾಗಿದೆ, ಮತ್ತು ಆರ್ಥಿಕ ಹಾಗೂ ಸಾಮಾಜಿಕ ಕ್ಷೇತ್ರಗಳಲ್ಲಿನ ಪ್ರಗತಿಗಾಗಿ ಹಲವು ಸೌಲಭ್ಯಗಳನ್ನು ಒದಗಿಸಲಾಗಿದೆ. ನಿಮ್ಮ ಕಲ್ಯಾಣಕ್ಕಾಗಿ ಕೇಂದ್ರ ಹಾಗೂ ರಾಜ್ಯ ಸರಕಾರಗಳು ತಮ್ಮ ತಮ್ಮ ಆಯವ್ಯಯದಲ್ಲಿ ನಿರ್ದಿಷ್ಟ ಹಣವನ್ನು ತೆಗೆದಿರಿಸಲು ಅನುಕೂಲವಾಗುವಂತಹ ನಿಯಮಗಳನ್ನು ರೂಪಿಸುತ್ತವೆ. ನಿಮಗೆ ನಿಮ್ಮ ವಾಸಪ್ರದೇಶಗಳಲ್ಲಿ ಕಟ್ಟಿಕೊಡುವ ಮನೆಗಳು, ನಿಮಗೆ ನೀಡಲಿರುವ ಎತ್ತುಗಳು, ಕೃಷಿಯೋಗ್ಯವನ್ನಾಗಿ ಮಾಡಿ ನಿಮಗೆ ನೀಡಿರುವ ಜಮೀನು, ನಿಮ್ಮ ಮಕ್ಕಳಿಗಾಗಿ ನಡೆಸಲಾಗುತ್ತಿರುವ ಶಾಲೆಗಳು ಮತ್ತು ಈ ಪ್ರದೇಶಕ್ಕೆ ಮಂಜೂರು ಮಾಡಿರುವ ಮಹಿಳಾ ಕಲ್ಯಾಣ ಕೇಂದ್ರ – ಇವೆಲ್ಲವುಗಳಿಗೂ ಸರಕಾರಗಳು ವಿಶೇಷ ಕಾಳಜಿಯಿಂದ ನಿಮಗಾಗಿ ಎಂದು ತೆಗೆದಿರಿಸಿದ ನಿಧಿಯೇ ಆಧಾರ.

ನಿಮ್ಮ ಪರಿಸ್ಥಿತಿಯನ್ನು ಆದಷ್ಟು ಶೀಘ್ರವಾಗಿ ಉತ್ತಮಗೊಳಿಸುವಲ್ಲಿ ವಿಶೇಷ ಆಸಕ್ತಿಯನ್ನು ಹೊಂದಿರುವಂತಹ ಬಾಬು ರಾಜೇಂದ್ರ ಪ್ರಸಾದ್ ಅವರಂತಹ ರಾಷ್ಟ್ರಾಧ್ಯಕ್ಷರನ್ನೂ, ಪಂಡಿತ್ ನೆಹ್ರೂರಂತಹ ಪ್ರಧಾನಮಂತ್ರಿಯವರನ್ನೂ, ಪಂಡಿತ್ ಪಂತ್ ಅವರಂತಹ ಗೃಹಮಂತ್ರಿಗಳನ್ನೂ ಪಡೆದಿರುವ ನೀವು ಬಹಳ ಅದೃಷ್ಟಶಾಲಿಗಳು. ಈ ರಾಜ್ಯದ ಮಂತ್ರಿಯ ಸ್ಥಾನದಲ್ಲಿರುವ ನಾನು, ನಿಮ್ಮ ಪರಿಸ್ಥಿತಿಗಳು ಉತ್ತಮಗೊಳ್ಳುವವರೆಗೂ, ನೀವು ಇತರ ಮುಂದುವರಿದ ವರ್ಗಗಳ ಮಟ್ಟಕ್ಕೆ ಬರುವವರೆಗೂ ನನ್ನ ಕರ್ತವ್ಯವನ್ನು ಸಂಪೂರ್ಣವಾಗಿ ನಿರ್ವಹಿಸಿದ್ದೇನೆಂದು ಭಾವಿಸುವುದಿಲ್ಲ. ನೀವು ಗುಡಿಸಲುಗಳಲ್ಲಿ ವಾಸಿಸುವುದನ್ನು, ಹಾಗೂ ಅಲಕ್ಷಿತರಾಗಿ ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಅಲೆದಾಡುತ್ತಿರುವುದನ್ನು ನೋಡಿದಾಗ ನನಗೆ ಅತೀವ ನೋವು ಉಂಟಾಗುತ್ತದೆ. ನಮ್ಮ ದೇಶದಲ್ಲಿ ಇಂತಹ ಪರಿಸ್ಥಿತಿಯು ಇರಗೊಡಬಾರದೆಂಬ ದೃಢನಿರ್ಧಾರವನ್ನು ನಾನು ತೆಗೆದುಕೊಂಡಿದ್ದೇನೆ. ನೀವು ನಮ್ಮಲ್ಲಿ ಒಬ್ಬರಾಗಿ ಹಿತವಾದ ಮತ್ತು ಗೌರವಯುತವಾದ ಬದುಕನ್ನು ನಡೆಸುವ ಹಕ್ಕನ್ನು ಹೊಂದಿದ್ದೀರಿ. ನಿಮ್ಮ ಮಕ್ಕಳು ವಿದ್ಯಾವಂತರಾಗುವಂತೆ, ನಿಮ್ಮ ಸ್ತ್ರೀಯರ ಬದುಕು ಉತ್ತಮಗೊಳ್ಳುವಂತೆ, ನಿಮ್ಮ ಬದುಕು ನಿಮ್ಮ ಸುತ್ತಮುತ್ತಲಿನವರ ಬದುಕಿನ ಮಟ್ಟಕ್ಕೆ ಏರುವಂತೆ ನೀವು ಮಾಡಬೇಕು. ಇದಕ್ಕಾಗಿ ನಾನು ಸೂಚಿಸುವ ಮೊದಲ ಹೆಜ್ಜೆಯೆಂದರೆ ನೀವು ಭಯದ ಮನೋಭಾವವನ್ನು ತ್ಯಜಿಸಬೇಕು, ಮತ್ತು ಆತ್ಮವಿಶ್ವಾಸ ಹಾಗೂ ಸ್ವಾವಲಂಬನೆಯನ್ನು ಬೆಳೆಸಿಕೊಳ್ಳಬೇಕು. ಇತರರಂತೆ ನಾವೂ ಸ್ವಾತಂತ್ರ್ಯವನ್ನು

ಅನುಭವಿಸುವ ಹಕ್ಕನ್ನು ಹೊಂದಿದ್ದೇವೆ ಎಂಬುದನ್ನು ನೀವು ಅರಿತುಕೊಳ್ಳಬೇಕು. ನೀವು ಈ ಎಲ್ಲಾ ಅರಿವನ್ನೂ ಗಳಿಸಿದ ನಂತರವೇ, ನೀವು ಪ್ರಗತಿಯತ್ತ ಹೆಜ್ಜೆಹಾಕಲು, ನಿಮ್ಮನ್ನು ನೀವು ಸುಧಾರಿಸಿಕೊಳ್ಳಲು ಸಾಧ್ಯವಾಗುತ್ತದೆ.

ನಾನು ಗಮನಿಸಿದ ಒಂದು ಅಂಶವೆಂದರೆ, ನೀವು, ಅಂದರೆ ಸೋಲಿಗರು, ಯಾವಾಗಲೂ ನಿಮ್ಮ ವಾಸಸ್ಥಳವನ್ನು ಒಂದು ಸ್ಥಳದಿಂದ ಮತ್ತೊಂದಕ್ಕೆ ಬದಲಾಯಿಸುತ್ತಲೇ ಇರುತ್ತೀರಿ, ನಿಮಗೆ ಇಂದು ದೊರೆತಷ್ಟರಿಂದಲೇ ನೀವು ತೃಪ್ತರಾಗಿರುತ್ತೀರಿ ಮತ್ತು ಭವಿಷ್ಯದ ಬಗ್ಗೆ ನೀವು ಯೋಚಿಸುವುದೇ ಇಲ್ಲ. ಈ ರೀತಿಯ ಬದುಕು ನಮ್ಮ ಇಂದಿನ ಪ್ರಜಾಪ್ರಭುತ್ವದ ರೀತಿನೀತಿಗೆ ಸುತರಾಂ ಹೊಂದುವುದಿಲ್ಲ.ನೀವು ಒಂದೇ ಸ್ಥಳದಲ್ಲಿ ನೆಲೆಸಿ ನಿಮ್ಮ ಆರ್ಥಿಕ ಹಾಗೂ ಸಾಮಾಜಿಕ ಸ್ಥಿತಿಗಳನ್ನು ಸುಧಾರಿಸುವತ್ತ ಗಮನವನ್ನು ಹರಿಸಬೇಕು. ನಿಮ್ಮ ಮಕ್ಕಳನ್ನು ಶಾಲೆಗೆ ಕಳುಹಿಸಬೇಕು, ಅವರನ್ನು ವಿದ್ಯಾವಂತರನ್ನಾಗಿಸಿ ರಾಷ್ಟ್ರದ ನಾಯಕರನ್ನಾಗಿ, ಸರಕಾರದ ಅಧಿಕಾರಿಗಳನ್ನಾಗಿ ಮಾಡಬೇಕು. ನೀವು ನಿಮ್ಮ ಹೆಂಗಸರನ್ನು ಮಹಿಳಾ ಕಲ್ಯಾಣ ಕೇಂದ್ರಗಳಿಗೆ ಕಳುಹಿಸಿ, ಅವರು ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಮೇಲೆಬರುವಂತೆ ಮಾಡಬೇಕು. ನೀವು ಕಷ್ಟಪಟ್ಟು ದುಡಿಯಬೇಕು ಮತ್ತು ಹೆಚ್ಚು ಹೆಚ್ಚು ಸಂಪಾದನೆಯನ್ನು ಮಾಡಿ ಉತ್ತಮ ಜೀವನವನ್ನು ನಡೆಸುವ ಮನೋಭಾವವನ್ನು ಹೊಂದಿರಬೇಕು.

ನಿಮ್ಮ ಪರಿಸ್ಥಿತಿಯನ್ನು ಸುಧಾರಿಸಲು, ನಾವು ಎರಡು ವಾಸಪ್ರದೇಶಗಳನ್ನು ಅಭಿವೃದ್ಧಿಪಡಿಸಲು ನಿಶ್ಚಯಿಸಿದ್ದೇವೆ – ಒಂದು ಇಲ್ಲಿ, ಅಂದರೆ ಕ್ಯಾತೆದೇವರಗುಡಿಯಲ್ಲಿ ಮತ್ತೊಂದು ಇಲ್ಲಿಗೆ ಹನ್ನೆರಡು ಮೈಲಿ ದೂರದಲ್ಲಿರುವ ಬಿಳಿಗಿರಿರಂಗ ಬೆಟ್ಟದಲ್ಲಿ. ನಿಮಗೆ ಈ ಸೌಲಭ್ಯವನ್ನು ನೀಡಿ ನೀವು ಅಲ್ಲಿ ನೆಲಸುವಂತೆ ಮಾಡಲು ಕಳೆದ ಆರು ವರ್ಷಗಳಿಂದ ಪ್ರಯತ್ನವನ್ನು ಮಾಡಲಾಗುತ್ತಿದೆ. ದುರದೃಷ್ಟದಿಂದ ಅಗತ್ಯವಾದ ಜಮೀನು ನಮಗೆ ದೊರೆತಿರಲಿಲ್ಲ. ಈ ಉದ್ದೇಶಕ್ಕೆ ಬೇಕಾದ ಜಮೀನು ದೊರೆತಿಲ್ಲವೆಂಬುದನ್ನು ಕೇಳಿದಾಗಲೆಲ್ಲಾ ನನಗೆ ನೋವಾಗುತ್ತಿತ್ತು. ಕಾರಣ, ಈ ಕಾಲದಲ್ಲಿಯೂ ಕಾಡಿನಲ್ಲಿ ವಾಸಿಸುತ್ತಿರುವ ಪಂಗಡಗಳವರ ಕಲ್ಯಾಣಕ್ಕಾಗಿ ಕೆಲಸವನ್ನು ಮಾಡುವವರಲ್ಲಿ ಪ್ರಾಮಾಣಿಕತೆಯ ಕೊರತೆ ಕಂಡುಬರುತ್ತಿದೆ. ನಾನು ಈ ರಾಜ್ಯದ ಮಂತ್ರಿಯ ಜವಾಬ್ದಾರಿಯನ್ನು ವಹಿಸಿಕೊಂಡಂದಿನಿಂದ ಸಂಬಂಧಪಟ್ಟ ಅಧಿಕಾರಿಗಳನ್ನು ಈ ವಿಷಯದಲ್ಲಿ

ಒತ್ತಾಯಮಾಡುತ್ತಲೇ ಬಂದಿದ್ದೇನೆ. ಗಿರಿಜನರಿಗೆ ಖಾಯಂ ಆಗಿ ವಾಸಿಸಲು ಜಮೀನು ದೊರೆತಿರುವುದು ನನಗೆ ಸಂತಸವನ್ನುಂಟುಮಾಡಿದೆ. ಅಲ್ಲದೆ, ನಿಮಗೆ ಕೃಷಿ ಉದ್ದೇಶಕ್ಕಾಗಿಯೂ ಸಾಕಷ್ಟು ಜಮೀನು ಮಂಜೂರಾಗಿದೆ. ನೀವು ಕಷ್ಟಪಟ್ಟು ಕೆಲಸಮಾಡಿದರೆ ನಿಮಗೆ ಇನ್ನೂ ಹೆಚ್ಚಿನ ಜಮೀನು ದೊರೆಯುತ್ತದೆ ಎಂಬ ಆಶ್ವಾಸನೆಯನ್ನು ನಾನು ನೀಡುತ್ತೇನೆ.

ಸರಕಾರವು ನಿಮಗೆ ಎಲ್ಲಾ ಸಹಾಯವನ್ನೂ ಮಾಡಬಹುದು. ಅಧಿಕಾರಿಗಳೂ ನಿಮ್ಮ ಬಗ್ಗೆ ಅನುಕಂಪವನ್ನು ಹೊಂದಿರಬಹುದು, ಇತರ ಜನರೂ ನಿಮ್ಮ ಬಗ್ಗೆ ಆಸಕ್ತಿಯನ್ನು ತೋರಿಸಬಹುದು, ಆದರೆ, ನೀವು ನಿಮ್ಮ ಮನೋಭಾವವನ್ನು, ನಿಮ್ಮ ಬದಕಿನ ರೀತಿಯನ್ನು ಬದಲಿಸಿಕೊಳ್ಳದಿದ್ದರೆ, ಉತ್ತಮ ಜೀವನದ ಬಯಕೆ ನಿಮ್ಮಲ್ಲಿ ಮೂಡದಿದ್ದರೆ, ಈಗಾಗಲೇ ಮಾಡಿರುವುದೆಲ್ಲವೂ, ಮತ್ತು ಮಾಡಬೇಕೆಂದಿರುವುದೆಲ್ಲವೂ ನಿಷ್ಫಲವಾಗುತ್ತದೆ. ನಿಮ್ಮಲ್ಲಿ ಒಬ್ಬನಾಗಿ ನಿಮಗೆ ನಾನು ವಿನಂತಿಸಿಕೊಳ್ಳುವುದೆಂದರೆ, ಒಟ್ಟಾರೆಯಾಗಿ ನಿಮ್ಮ ಮನೋಧರ್ಮವನ್ನು ಬದಲಾಯಿಸಿಕೊಳ್ಳಬೇಕು; ನಿಮ್ಮ ಸಂಸ್ಕೃತಿಯನ್ನು ಮತ್ತು ಪರಂಪರಾಗತ ಅಂಶಗಳಲ್ಲಿ ಉಪಯುಕ್ತವಾಗಿರುವುಗಳ ಕೈಬಿಡದೆ, ನಿಮ್ಮ ಸಾಮಾಜಿಕ ಮತ್ತು ಆರ್ಥಿಕ ಕ್ಷೇತ್ರಗಳಲ್ಲಿ ಮುನ್ನಡೆಯುವ ಸಂಕಲ್ಪವನ್ನು ಮಾಡಬೇಕು. ನಿಮ್ಮ ಮಕ್ಕಳಿಗೆ ಶಿಕ್ಷಣವನ್ನು ಕೊಡಿಸಿ ಅವರ ಭವಿಷ್ಯಕ್ಕೆ ಭದ್ರವಾದ ಬುನಾದಿಯನ್ನು ಹಾಕಿ. ನಿಮ್ಮ ಹೆಂಗಸರನ್ನು ಗಿರಿಜನ ಮಹಿಳಾ ಕಲ್ಯಾಣ ಕೇಂದ್ರಗಳಿಗೆ ಕಳುಹಿಸಿ ಅವರು ಉತ್ತಮ ಅಭ್ಯಾಸಗಳನ್ನು, ಉತ್ತಮವಾದ ಜೀವನದ ವಿಧಾನಗಳನ್ನು ಕಲಿತುಕೊಳ್ಳುವಂತೆ ಮಾಡಿ. ನೀವು, ಅಂದರೆ ಗಂಡಸರು, ಶ್ರಮಪಟ್ಟು ಕೆಲಸಮಾಡಿ, ಹೆಚ್ಚು ಸಂಪಾದನೆಯನ್ನು ಮಾಡಿ ಮತ್ತು ಲೇಸಾದ ಬದುಕನ್ನು ನಡೆಸಿ.

ನೇಗಿಲು, ಎತ್ತುಗಳು ಮತ್ತಿತರ ಕೃಷಿ ಸಾಧನಗಳನ್ನು ಉಚಿತವಾಗಿ ಸರಬರಾಜು ಮಾಡುವುದರ ಜೊತೆಗೆ ನಾನು ಈಗ ಹೊಸ ವಾಸಸ್ಥಾನಕ್ಕಾಗಿ ಶಂಖುಸ್ಥಾಪನೆಯನ್ನು ಮಾಡುತ್ತಿರುವ ಪ್ರದೇಶದಲ್ಲಿ ಇಪ್ಪತ್ತೈದು ವಾಸದ ಮನೆಗಳನ್ನೂ, ಮಕ್ಕಳಿಗಾಗಿ ಒಂದು ಶಾಲೆ ಹಾಗೂ ಒಂದು ವಿದ್ಯಾರ್ಥಿನಿಲಯವನ್ನೂ, ಅಲ್ಲದೆ ಮಹಿಳೆಯರು ಮತ್ತು ಮಕ್ಕಳಿಗಾಗಿ ಸಮುದಾಯ ಭವನ ಹಾಗೂ ಮಹಿಳಾ ಕಲ್ಯಾಣಕೇಂದ್ರಗಳನೊಳಗೊಂಡ ಒಂದು ಕಟ್ಟಡವನ್ನೂ, ಕುಡಿಯುವ ನೀರಿಗಾಗಿ

ಒಂದು ಭಾವಿಯನ್ನೂ ಕಟ್ಟಲು ನಿರ್ಧರಿಸಲಾಗಿದೆ ಎಂದು ನಿಮಗೆ ತಿಳಿಸಲು ನನಗೆ ಸಂತೋಷವಾಗುತ್ತಿದೆ. ಇವೆಲ್ಲಕ್ಕಾಗಿ ಸರಕಾರವು 99,300 ರೂಗಳ ವೆಚ್ಚವನ್ನು ಭರಿಸಬೇಕಾಗುತ್ತದೆ. ಬಿಳಿಗಿರಿ ರಂಗನ ಬೆಟ್ಟದಲ್ಲಿನ ನಿವಾಸ ಯೋಜನೆಗೆ 75,000 ರೂ.ಗಳ ವೆಚ್ಚವು ತಗಲುತ್ತದೆ. ಇಷ್ಟು ದೊಡ್ಡ ವೆಚ್ಚವನ್ನು ನಾವು ಮಾಡುತ್ತಿದ್ದೇವೆ. ಸರಕಾರದ ಈ ಕ್ರಮದ ಸದುಪಯೋಗವನ್ನು ಪಡೆದುಕೊಂಡು ನೀವು ಜೀವನದಲ್ಲಿ ಪ್ರಗತಿಯನ್ನು ಸಾಧಿಸಬೇಕೆಂದು ನಿಮ್ಮಲ್ಲಿ ನಾನು ಪ್ರಾರ್ಥಿಸುತ್ತೇನೆ. ನಾನು ಮತ್ತೊಮ್ಮೆ ಈ ಪ್ರದೇಶಕ್ಕೆ ಭೇಟಿ ನೀಡಿದಾಗ, ನೀವೆಲ್ಲರೂ ತೃಪ್ತ, ಸಂತೋಷಮಯವಾದ, ಗೌರವದ ಜೀವನವನ್ನು ನಡೆಸುತ್ತಿರುವುದನ್ನು ನೋಡಿದರೆ, ನಾನು ಅತ್ಯಂತ ಹರ್ಷಪಡುತ್ತೇನೆ ಮತ್ತು 'ನಾನು ಈ ಭಾಗದ ಜನರಿಗಾಗಿ ನನ್ನ ಪಾಲಿನ ಕರ್ತವ್ಯವನ್ನು ಮಾಡಿದ್ದೇನೆ' ಎಂದು ತೃಪ್ತಿಯಿಂದ ಹೇಳಿಕೊಳ್ಳಬಹುದು. ನನ್ನ ಈ ಕನಸನ್ನು ಸಾಕಾರಮಾಡಿಕೊಳ್ಳಲು ನನಗೆ ನಿಮ್ಮ ಸಹಕಾರವನ್ನು ನೀಡುತ್ತೀರೆಂಬ ನಂಬಿಕೆ ನನಗಿದೆ.

ಈ ರಾಜ್ಯದ ಕಾಡುಗಳಲ್ಲಿ, ಬೆಟ್ಟಗುಡ್ಡಗಳಲ್ಲಿ ಮತ್ತು ಕಣಿವೆಗಳಲ್ಲಿ ಒಂದು ಲಕ್ಷಕ್ಕೂ ಮೀರಿದ ಸಂಖ್ಯೆಯಲ್ಲಿ ನಿಮ್ಮಂತಹವರು ವಾಸಿಸುತ್ತಿದ್ದಾರೆ. ಅವರಲ್ಲಿ ಕೆಲವರ ಪರಿಸ್ಥಿತಿಯು ನಿಮ್ಮದಕ್ಕಿಂತ ಇನ್ನೂ ಕೀಳಾಗಿದೆ. ಅವರೆಲ್ಲರಿಗೂ ಗಮನವನ್ನು ನೀಡಿ ಅವರ ಜೀವನದಲ್ಲಿಯೂ ಪ್ರಗತಿಯನ್ನು ಸಾಧಿಸಲು ನೆರವಾಗಬೇಕೆಂಬುದರಲ್ಲಿ ನನಗೆ ತೀವ್ರವಾದ ಆಸಕ್ತಿಯಿದೆ. ಎರಡನೆಯ ಪಾಂಚವಾರ್ಷಿಕ ಯೋಜನೆಯ ಅಡಿಯಲ್ಲಿ ಸರಕಾರವು ನಿಮ್ಮ ಅಂದರೆ ಮೈಸೂರು ರಾಜ್ಯದ ಪರಿಶಿಷ್ಟ ಪಂಗಡಗಳವರ, ಅದೃಷ್ಟದ ಹಾದಿಯನ್ನು ಬದಲಿಸಲು 50 ಲಕ್ಷ ರೂ.ಗಳನ್ನು ವೆಚ್ಚಮಾಡುತ್ತದೆ. ನಿಮಗೆ ಭೂಮಿಯನ್ನು, ಕೃಷಿಮಾಡಲು ಬೇಕಾದ ಅನುಕೂಲಗಳನ್ನು, ಕುಶಲಕೆಲಸಗಳನ್ನು ಮುಂದುವರಿಸಲು ಅಗತ್ಯವಾದ ನೆರವನ್ನು ನೀಡಲು ನಾವು ನೀಡಬೇಕೆಂದಿದ್ದೇವೆ. ಇವುಗಳಿಂದ ನಿಮ್ಮ ಗಳಿಕೆಯನ್ನು ನೀವು ಹೆಚ್ಚಿಸಿಕೊಳ್ಳಬಹುದು. ಶೋಷಕರಿಂದ ನಿಮಗೆ ಮುಕ್ತಿಯನ್ನು ನೀಡಿ ನಿಮಗೆ ಹೊಸ ಜೀವನವನ್ನು ಕೊಡಲು ನಾವು ವನ್ಯ ಶ್ರಮಜೀವಿಗಳ ಸಹಕಾರ ಸಂಘದ ವ್ಯವಸ್ಥೆಯನ್ನು ಮಾಡಿದ್ದೇವೆ.ಭವಿಷ್ಯದಲ್ಲಿ ಅಂತಹ ಸಂಘಗಳ ಸಂಖ್ಯೆಯನ್ನು ಇನ್ನೂ ಹೆಚ್ಚುಮಾಡಲಿದ್ದೇವೆ. ಆಶ್ರಮ ಶಾಲೆಗಳನ್ನು ತೆರೆದು ನಿಮ್ಮ ಮಕ್ಕಳ ವಿದ್ಯಾಭ್ಯಾಸಕ್ಕೆ ಅನುಕೂಲವನ್ನು ಮಾಡಿಕೊಡುತ್ತಿದ್ದೇವೆ. ನೀವು ಅವುಗಳ

ಉಪಯೋಗವನ್ನು ಮಾಡಿಕೊಂಡು ಪ್ರತಿಯೊಬ್ಬ ಮಗುವೂ ಶಿಕ್ಷಿತನಾಗುವಂತೆ ಮಾಡಿ ಅದರ ಭವಿಷ್ಯವನ್ನು ಉಜ್ವಲಗೊಳಿಸಿ ಅದಕ್ಕೆ ಉತ್ತಮ ಜೀವನದ ಅವಕಾಶವನ್ನು ಕೊಡಿ. ನಿಮ್ಮ ಹೆಂಗಸರು ಮತ್ತು ಮಕ್ಕಳಿಗಾಗಿ ನಾವು ಮಹಿಳಾ ಕಲ್ಯಾಣಕೇಂದ್ರಗಳನ್ನು ನಿಮಗೆ ಕೊಟ್ಟಿದ್ದೇವೆ. ನೀವು ಈ ಎಲ್ಲಾ ಸೌಲಭ್ಯಗಳನ್ನೂ ಬಳಸಿಕೊಂಡು ನಿಮ್ಮ ಆರೋಗ್ಯ ಮತ್ತು ನೈರ್ಮಲ್ಯವನ್ನು ಸುಧಾರಿಸಿಕೊಳ್ಳಿ. ನಿಮ್ಮ ಕಲ್ಯಾಣಕ್ಕಾಗಿ ಮಾಡಿರುವ ಎಲ್ಲಾ ಯೋಜನೆಗಳ ಲಾಭವನ್ನೂ ಪಡೆದುಕೊಂಡು ನಿಮ್ಮ ಜೀವನದ ಗುಣಮಟ್ಟವನ್ನು ಹೆಚ್ಚಿಸಿಕೊಳ್ಳಿ ಎಂದು ನಿಮ್ಮಲ್ಲಿ ವಿನಂತಿಮಾಡಿಕೊಳ್ಳುತ್ತೇನೆ.

ಸಹೋದರ ಸಹೋದರಿಯರೆ, ಕ್ಯಾತೇದೇವರಗುಡಿಯಲ್ಲಿ ಗಿರಿಜನರ ಕೃಷಿ ಕಾಲನಿಗೆ ನಾನು ಈಗ ಸಂತೋಷದಿಂದ ಶಂಖುಸ್ಥಾಪನೆಯನ್ನು ಮಾಡುತ್ತಿದ್ದೇನೆ. ನಿಮ್ಮ ಮೇಲೆ ಕೃಪೆಯನ್ನು ಮಾಡಿ ನಿಮ್ಮ ಜೀವನವು ಸುಖಸಂತೋಷಗಳಿಂದ ಕೂಡಿರುವಂತೆ ಮಾಡಬೇಕೆಂದು ನಾನು ಪರಮಾತ್ಮನನ್ನು ಪ್ರಾರ್ಥಿಸುತ್ತೇನೆ.

## ♦ ಪರಸ್ಪರ ಸಹಕಾರ ಮನೋಭಾವದ ಅಗತ್ಯತೆ :

**ಈ ಮಣ್ಣಿನಲ್ಲಿ ಶೋಷಣೆಗೆ ಒಳಗಾದ ವರ್ಗ ಹಿಂದುಳಿದ ಜಾತಿಗಳದು. ಮಾನವರನ್ನು ಇಂಚಿಂಚಾಗಿ ವಿಭಾಗಿಸಿರುವ ಆಳುವ ವರ್ಗಗಳು ಶೋಷಣೆಯೇ ಸಂಸ್ಕೃತಿ ಎಂದು ಭ್ರಮಿಸಿಕೊಂಡಿವೆ. ಅದರ ನಿರ್ಮೂಲನೆಗಾಗಿ ಇರುವ ಸಂವಿಧಾನಾತ್ಮಕ ರಕ್ಷಣೆಯನ್ನು ರಾಚಯ್ಯನವರು ತಮ್ಮ ಅನೇಕ ಭಾಷಣಗಳಲ್ಲಿ ಹೇಳುವ ಮೂಲಕ ಜನರಲ್ಲಿ ಅರಿವು ಮೂಡಿಸಿದರು. 1961 ರ ಜನವರಿ 8 ರಂದು ಮೈಸೂರು ಪ್ರದೇಶ ಆರ್ಯ ಈಡಿಗರ ಸಂಘದ ಎರಡನೆಯ ಸಮಾವೇಶದಲ್ಲಿ ಮಾಡಿದ ಅಧ್ಯಕ್ಷೀಯ ಭಾಷಣ ಇಲ್ಲಿದೆ.**

ನನ್ನನ್ನು ಈ ಸಮಾರಂಭದ ಅಧ್ಯಕ್ಷತೆಯನ್ನು ವಹಿಸಲು ಆಹ್ವಾನಿಸಿದ್ದುದಕ್ಕಾಗಿ, ಮೈಸೂರು ಪ್ರದೇಶ ಆರ್ಯ ಈಡಿಗರ ಸಂಘದ ಅಧ್ಯಕ್ಷರು ಮತ್ತು ಸದಸ್ಯರಿಗೆ ನಾನು ಕೃತಜ್ಞನಾಗಿದ್ದೇನೆ. ನಿಮಗೆ ತಿಳಿದಿರುವಂತೆ, ಕಾಯಿಲೆ, ಅಜ್ಞಾನ, ಬಡತನ ಇವುಗಳನ್ನು ಜನರ, ಅದರಲ್ಲಿಯೂ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳವರ, ಮಧ್ಯದಿಂದ ಮೂಲೋತ್ಪಾಟನೆ ಮಾಡಬೇಕು ಎಂದು ಬಯಸುವವರಲ್ಲಿ ನಾನೂ ಒಬ್ಬ. ನನ್ನ ಹೃದಯಕ್ಕೆ ಹತ್ತಿರವಾದ ಈ ಮಹತ್ತರವಾದ ಉದ್ದೇಶಕ್ಕೆ ಬೆಂಬಲ ಸೂಚಿಸುವ, ಅದನ್ನು ಬೆಳೆಸುವ ಯಾವುದೇ ಪ್ರಯತ್ನಗಳ ಜೊತೆ ಸಹಯೋಗವನ್ನು ಹೊಂದುವುದು ನನಗೆ ಅತ್ಯಂತ ಸಂತೋಷವನ್ನು ಕೊಡುತ್ತದೆ.

ಈ ಸಮ್ಮೇಳನವನ್ನು ಉದ್ಘಾಟಿಸಲು ಈಡಿಗರ ಜನಾಂಗಕ್ಕೆ ಹತ್ತಿರವಾದ ಎಳವ ಜನಾಂಗಕ್ಕೆ ಸೇರಿದ ಕೇರಳದ ಉಪ ಮುಖ್ಯಮಂತ್ರಿ ಶ್ರೀ ಶಂಕರ್ ಅವರು ನಮ್ಮೊಂದಿಗೆ ಇರುವುದು ನಮ್ಮ ಅದೃಷ್ಟ. ಇಂತಹವರ ಸದಾಶ್ರಯದಲ್ಲಿ ಪ್ರಾರಂಭವಾಗಿರುವ ಈ ಸಮ್ಮೇಳನವು ಇದರಲ್ಲಿ ಭಾಗವಹಿಸಿರುವವರಲ್ಲಿ ಭ್ರಾತೃತ್ವದ ಭಾವನೆಯನ್ನು, ಪರಸ್ಪರ ಅರಿತುಕೊಳ್ಳುವ ಹಾಗೂ ಸಹಾಯ ಮಾಡುವ ಮನೋಭಾವವನ್ನು ಮೂಡಿಸಿ, ಎಲ್ಲಾ ಜನರ, ಅದರಲ್ಲಿಯೂ ಈಡಿಗ ಜನಾಂಗದವರ, ಆಶೋತ್ತರಗಳನ್ನು ಪೂರೈಸುವಂತೆ ಮಾಡುತ್ತದೆ ಎಂದು ನಾನು ನಂಬಿದ್ದೇನೆ.

ನಮ್ಮ ದೇಶದ ಹಿಂದುಳಿದ ಜನಾಂಗದವರು, ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡಗಳವರು ಹಿಂದೆ ಇದ್ದ ಪರಿಸ್ಥಿತಿ ಹಾಗೂ ಈಗಿರುವ ಪರಿಸ್ಥಿತಿಯನ್ನು ಗಮನಿಸಿದಾಗ, ನನ್ನ ಮನಸ್ಸು ನಮ್ಮ ರಾಷ್ಟ್ರಪಿತ ಮಹಾತ್ಮ ಗಾಂಧಿ, ದಿವಂಗತ ಸರ್ದಾರ್ ವಲ್ಲಭ ಭಾಯಿ ಪಟೇಲ್ ಹಾಗೂ ಡಾ. ಅಂಬೇಡ್ಕರ್ ಅವರು ಈ ಜನಾಂಗಕ್ಕೆ ಸಲ್ಲಿಸಿದ ಅಮೂಲ್ಯ ಸೇವೆಯ ಪವಿತ್ರ ಸ್ಮೃತಿಗೆ ಜಾರುತ್ತದೆ. ಭಾರತದಲ್ಲಿರುವ ಹಿಂದುಳಿದವರ್ಗಗಳ, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಹಾಗೂ ಇತರ ದುರ್ಬಲವರ್ಗಗಳ ಕಲ್ಯಾಣಕ್ಕಾಗಿ, ಅವರ ರಕ್ಷಣೆ ಮತ್ತು ಅವರ ಹಿತಾಸಕ್ತಿಗಳಿಗೆ ಅನುಕೂಲಕರ ವಾತಾವರಣವನ್ನು ಸೃಷ್ಟಿಸುವುದಕ್ಕಾಗಿ ಹಾಗೂ ಅವರನ್ನು ಉಳಿದ ಮುಂದುವರ್ಗದವರ ಮಟ್ಟಕ್ಕೆ ಏರಿಸುವುದಕ್ಕಾಗಿ ಅವರಿಗೆ ಹಲವಾರು ಸವಲತ್ತುಗಳನ್ನು ನಮ್ಮ ಸಂವಿಧಾನದಲ್ಲಿ ಅಳವಡಿಸುವುದರಲ್ಲಿ ದಿವಂಗತ ಸರ್ದಾರ್ ಪಟೇಲ್, ಡಾ. ಅಂಬೇಡ್ಕರ್ ಅವರ ಹಾಗೂ ಈಗ ದೇಶದ ಉನ್ನತಸ್ಥಾನದಲ್ಲಿರುವ ಡಾ. ರಾಜೇಂದ್ರ ಪ್ರಸಾದ್ ಹಾಗೂ ಪಂಡಿತ್ ಜವಹರ್‌ಲಾಲ್ ಅವರ ದೂರದೃಷ್ಟಿಯೇ ಕಾರಣ. ಸಂವಿಧಾನದಲ್ಲಿ ಮೂಲಭೂತ ಹಕ್ಕುಗಳ ಅಡಿಯಲ್ಲಿ, ದೇಶದ ಜನತೆಯ ನಡುವೆ ತಾರತಮ್ಯವನ್ನು ವಿರೋಧಿಸುವ 15ನೆಯ ವಿಧಿಯ 4ನೆಯ ಪರಿಚ್ಛೇದದಲ್ಲಿ ಹೀಗೆ ಹೇಳಲಾಗಿದೆ:

"ಸಾಮಾಜಿಕವಾಗಿ, ಶೈಕ್ಷಣಿಕವಾಗಿ ಹಿಂದುಳಿದವರ್ಗಗಳವರ, ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡಗಳವರ ಮೇಲ್ಮೆಗಾಗಿ ವಿಶೇಷವಾದ ಯಾವುದೇ ಕ್ರಮಗಳನ್ನು ತೆಗೆದುಕೊಳ್ಳುವ, ನಿಯಮಗಳನ್ನು ರೂಪಿಸುವ ವಿಷಯದಲ್ಲಿ ಈ ವಿಧಿಯು (ಅಥವಾ 29ನೆಯ ವಿಧಿಯ 2ನೆಯ ಪರಿಚ್ಛೇದವು) ಸರಕಾರಕ್ಕೆ ಯಾವುದೇ ರೀತಿಯ ಪ್ರತಿಬಂಧವನ್ನೂ ವಿಧಿಸುವುದಿಲ್ಲ".

ಮತ್ತೆ, ಮೂಲಭೂತ ಹಕ್ಕುಗಳ ಅಡಿಯಲ್ಲಿ ಎಲ್ಲರಿಗೂ ಸಮಾನಾವಕಾಶಗಳನ್ನು ನೀಡುವ ಸಂವಿಧಾನದ 16ನೆಯ ವಿಧಿಯ 4ನೆಯ ಪರಿಚ್ಛೇದದಲ್ಲಿ ಹೀಗೆ ಹೇಳಲಾಗಿದೆ:

"ಯಾವುದಾದರೂ ಸೇವಾ ವಿಭಾಗದಲ್ಲಿ ಹಿಂದುಳಿದ ವರ್ಗಗಳಿಗೆ ಸೇರಿದ ಜನಗಳಿಗೆ ಸಾಕಷ್ಟು ಪ್ರಾತಿನಿಧ್ಯ ದೊರೆತಿಲ್ಲವೆಂಬುದನ್ನು ಸರಕಾರವು ಮನಗಂಡರೆ, ಅದನ್ನು ಸರಿಪಡಿಸಿ, ಈ ವರ್ಗದ ಜನರಿಗೆ ಸಾಕಷ್ಟು ಪ್ರಾತಿನಿಧ್ಯವನ್ನು

ದೊರಕಿಸಿಕೊಡುವ ಉದ್ದೇಶದಿಂದ ಸೂಕ್ತ ನಿಯಮಗಳನ್ನು ರೂಪಿಸಲು ಈ ವಿಧಿಯು ಸರಕಾರಕ್ಕೆ ಯಾವುದೇ ರೀತಿಯ ಪ್ರತಿಬಂಧವನ್ನೂ ವಿಧಿಸುವುದಿಲ್ಲ".

ಸಂವಿಧಾನದ ನಾಲ್ಕನೆಯ ವಿಭಾಗದಲ್ಲಿ ನಿರ್ದೇಶಕ ತತ್ತ್ವಗಳ ನೀತಿಯನ್ನು ವಿವರಿಸುವ ಸಂದರ್ಭದಲ್ಲಿ 46ನೆಯ ವಿಧಿಯು ಹೀಗೆ ಹೇಳುತ್ತದೆ:

ಸರಕಾರವು ವಿಶೇಷಗಮನವನ್ನು ನೀಡಿ ದುರ್ಬಲವರ್ಗಗಳವರ, ಅದರಲ್ಲಿಯೂ ವಿಶೇಷವಾಗಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳವರ, ಶೈಕ್ಷಣಿಕ ಮತ್ತು ಆರ್ಥಿಕ ಹಿತಾಸಕ್ತಿಗಳನ್ನು ಪ್ರೋತ್ಸಾಹಿಸಬೇಕು ಮತ್ತು ಈ ವರ್ಗಗಳವರನ್ನು ಸಾಮಾಜಿಕ ಅನ್ಯಾಯಗಳಿಂದ ಹಾಗೂ ಎಲ್ಲಾ ರೀತಿಯ ಶೋಷಣೆಗಳಿಂದ ಮುಕ್ತರನ್ನಾಗಿರಿಸಬೇಕು".

ಸಂವಿಧಾನದ ಕರ್ತೃಗಳ ವಿವೇಕದಿಂದಾಗಿ ಈ ಸೌಲಭ್ಯಗಳು ಸಂವಿಧಾನದ ಮೂಲಕ ನಮಗೆ ಲಭ್ಯವಾಗಿದೆ.

ಸಂರಕ್ಷಣೆಯ ಈ ವಿಶೇಷ ಸವಲತ್ತುಗಳನ್ನು ನೀಡದೆ ಇದ್ದರೆ, ದುರ್ಬಲವರ್ಗಗಳವರು ಇನ್ನೂ ಹೆಚ್ಚಿನ ದೌರ್ಬಲ್ಯಕ್ಕೆ ಒಳಗಾಗುತ್ತಾರೆ ಮತ್ತು ಪ್ರಬಲ ವರ್ಗಗಳವರು ಇನ್ನೂ ಪ್ರಬಲರಾಗುತ್ತಾರೆ, ಹೀಗಾದರೆ, ಅಂತಿಮವಾಗಿ ಸಮಾಜದ ವಿವಿಧ ವರ್ಗಗಳವರ ನಡುವಿನ ಸಂಬಂಧವು ಹದಗೆಡುತ್ತದೆ ಎಂದು ಅವರು ಸ್ಪಷ್ಟವಾಗಿ ಮುಂಗಂಡಿದ್ದರು. ನೀವು ಸಾಕಷ್ಟು ಕ್ರಮಗಳನ್ನು ಕೈಗೊಳ್ಳದಿದ್ದರೆ ಸಂವಿಧಾನದ ವಿಧಿಗಳು ತಾವೇ ಬಂದು ನಿಮಗೆ ಸೌಲಭ್ಯಗಳನ್ನು ಒದಗಿಸುವುದಿಲ್ಲ. ಸಂವಿಧಾನವು ನೀಡಿರುವ ಸೌಲಭ್ಯ ಮತ್ತು ಹಕ್ಕುಗಳನ್ನು ನೀವು ನಿಮ್ಮ ಪ್ರಯತ್ನದಿಂದ ಪಡೆಯಬೇಕು. ಇದರ ಪ್ರಾರಂಭ ನಿಮ್ಮಿಂದ ಆಗಬೇಕು. ಅಂದರೆ ನಿಮ್ಮ ಹಕ್ಕು ಮತ್ತು ಜವಾಬ್ದಾರಿಗಳ ಪ್ರಜ್ಞೆಯನ್ನು ಎಚ್ಚರಿಸುವ ಕೆಲಸವಾಗಬೇಕು. ಹಾಗಾದಾಗ ನಿಮ್ಮ ಉದ್ದೇಶಿತ ಗುರಿಯನ್ನು ಮುಟ್ಟಲು ಅಗತ್ಯವಾದ ಧೈರ್ಯ, ಆತ್ಮವಿಶ್ವಾಸಗಳು ನಿಮಗೆ ಸಿಗುತ್ತವೆ. ಚೆನ್ನಾಗಿ ವಿಚಾರಮಾಡಿ ಯೋಜಿಸಿದ ಸರಕಾರದ ಯೋಜನೆಗಳು ನಿಮ್ಮ ಜೀವನದ ಸ್ಥಿತಿಗತಿಗಳನ್ನು ಸುಧಾರಿಸಲು ಅವಕಾಶವನ್ನು ಮಾಡಿಕೊಡುತ್ತವೆ. ಆದರೆ, ನಿಮ್ಮ ಸುಧಾರಣೆಗಳು ಮುಖ್ಯವಾಗಿ ಈ ಯೋಜನೆಗಳ ಬಗ್ಗೆ ನಿಮಗಿರುವ ಆಸಕ್ತಿಯ ಮೇಲೆ ನಿಂತಿರುತ್ತವೆ.

ಬಡವನಾಗಿರಲಿ, ಬಲ್ಲಿದನಾಗಿರಲಿ, ನಿಕೃಷ್ಟವಾಗದ ಕೆಲಸವನ್ನು ಮಾಡುವವನಾಗಿರಲಿ ಅಥವಾ ಶ್ರೀಮಂತ ವ್ಯವಹಾರಸ್ಥನಾಗಿರಲಿ, ಗಂಡಸಾಗಲೀ ಅಥವಾ ಹೆಂಗಸಾಗಲಿ, ದೇವರ ದೃಷ್ಟಿಯಲ್ಲಿ ಎಲ್ಲರೂ ಒಂದೇ. ಭಗವಾನ್ ಬುದ್ಧ ಮತ್ತು ಬಸವೇಶ್ವರರು ಇದನ್ನೇ ನಮಗೆ ತಿಳಿಸಿದರು. ಆದರೆ ಸಂಕೀರ್ಣವಾಗಿರುವ ನಮ್ಮ ಸಮಾಜವ್ಯವಸ್ಥೆಯಲ್ಲಿ, ಪ್ರಾಮಾಣಿಕತೆಯ ಅಭಾವದಿಂದಾಗಿ, ಹೃದಯವೈಶಾಲ್ಯದ ಕೊರತೆಯಿಂದಾಗಿ ಮತ್ತು ಜನತೆಯಲ್ಲಿ ಕಾಣೆಯಾಗಿರುವ ಅನುಕಂಪದಿಂದಾಗಿ ಈ ಸಮಾನತೆಯನ್ನು ಅನುಸರಿಸುವುದು ನಮಗೆ ಇದುವರೆಗೂ ಸಾಧ್ಯವಾಗಿಲ್ಲ.

ನಮ್ಮ ಸಂವಿಧಾನವು ಎಲ್ಲರಿಗೂ ಸಮಾನ ಅವಕಾಶಗಳ ಆಶ್ವಾಸನೆಯನ್ನು ಕೊಟ್ಟಿದೆ. ನೀವು ನಿಮ್ಮ ಹಕ್ಕುಗಳನ್ನು ಮತ್ತು ಸವಲತ್ತುಗಳನ್ನು ಸರಿಯಾಗಿ ತಿಳಿದುಕೊಳ್ಳುವವರೆಗೂ, ಸಂವಿಧಾನದ ಆಶಯಗಳನ್ನು ಎಲ್ಲರೂ ಪ್ರಾಮಾಣಿಕವಾಗಿ ಅನುಷ್ಠಾನಕ್ಕೆ ತರುವವರೆಗೂ ಸಂವಿಧಾನವು ಮುಚ್ಚಿಟ್ಟ ಪುಸ್ತಕದ ಒಳಗೆ ತೂಕಡಿಸುತ್ತಿರುತ್ತದೆ ಮತ್ತು ಅದು ನಿರುಪಯುಕ್ತವಾಗಿರುತ್ತದೆ. ಸಂವಿಧಾನದ ವಿಧಿಗಳನ್ನು ಕಾರ್ಯರೂಪಕ್ಕೆ ತರುವುದು ಇಡೀ ಸಮಾಜದ ಹೊಣೆಗಾರಿಕೆಯಾಗಿರುತ್ತದೆ. ಅನಕ್ಷರತೆ, ಮೂಢನಂಬಿಕೆ ಮತ್ತು ಅಜ್ಞಾನಗಳು ನಮ್ಮ ಸಮಾಜದಲ್ಲಿ ಇರುವವರೆಗೆ, ನಾವು ಪ್ರಗತಿಯ ದಾರಿಯಲ್ಲಿ ಸಾಕಷ್ಟು ಮುಂದೆ ಸಾಗಲಾಗುವುದಿಲ್ಲ. ನೀವು ವೈಯಕ್ತಿಕವಾಗಿ ಹೇಗೆ ಪ್ರಗತಿಯನ್ನು ಸಾಧಿಸಬಲ್ಲಿರಿ? ನಮ್ಮಲ್ಲಿ ನಿರಕ್ಷರಕುಕ್ಷಿಗಳ ಸಂಖ್ಯೆ ಅಗಾಧವಾಗಿರುವಾಗ, ನಾವು ಸಮಾನ ಕೆಲಸಕ್ಕೆ ಸಮಾನ ವೇತನ ಎಂಬ ಮಾತುಗಳನ್ನು ಆಡುತ್ತೇವೆ. ಅದು ಆಚರಣೆಯಲ್ಲಿ ಬಂದಿದೆಯೇ? ಶ್ರಮವಹಿಸಿ ದುಡಿಯುವವನಿಗೆ ಎರಡು ಹೊತ್ತಿನ ಕೂಳಿಗೂ ಸಾಲದ ವೇತನವು ದೊರೆತರೆ, ಕೆಲಸವನ್ನೇ ಮಾಡದೆ, ಶೋಷಣೆಯಿಂದಲೇ ಬದುಕುವವನು ಸಂಪತ್ತನ್ನು ಶೇಖರಿಸುತ್ತಾಹೋಗುತ್ತಾನೆ. ಬಡವನು ಬೆವರು ಸುರಿಸಿ ದುಡಿದ ಸಂಪತ್ತು, ಶ್ರೀಮಂತರ ಕಪಾಟುಗಳಲ್ಲಿ ಭದ್ರವಾಗಿ ಕುಳಿತಿರುತ್ತದೆ. ಶೇ 90ಜನರ ದುಡಿಮೆಯಿಂದ ಶೇ 10 ಜನರ ವೈಭವದ ಬದುಕು ಸಾಗುತ್ತಿರುತ್ತದೆ. ಇದರ ಪರಿಣಾಮವೆಂದರೆ, ಬಡವರು ಇನ್ನಷ್ಟು ಬಡವರಾಗುತ್ತಾ ಹೋದರೆ, ಶ್ರೀಮಂತರು ಇನ್ನೂ ಹೆಚ್ಚು ಶ್ರೀಮಂತರಾಗುತ್ತಿರುತ್ತಾರೆ.

ನಾನು ಮತ್ತೆ ಮತ್ತೆ ಹೇಳುತ್ತೇನೆ, ಸಂವಿಧಾನವು ನಮಗೆ ಅನುಕೂಲಗಳನ್ನು ಕಲ್ಪಿಸಿಕೊಟ್ಟಿದ್ದರೆ, ಆ ಅನುಕೂಲಗಳು ನಮ್ಮ ಕೈಸೇರಬೇಕಾದರೆ, ನಮ್ಮಲ್ಲಿ ತಿಳಿವಳಿಕೆ ಮೂಡಬೇಕು. ಇದು ಶಿಕ್ಷಣದಿಂದ ಮಾತ್ರ ಸಾಧ್ಯ. ಶಿಕ್ಷಣವೆನ್ನುವುದು ಕತ್ತಲೆಯಲ್ಲಿ ತಡಕಾಡುತ್ತಿರುವವರಿಗೆ ದೀಪದ ಹಾಗೆ. ಆದ್ದರಿಂದ ನಮ್ಮಲ್ಲಿ ಪ್ರತಿಯೊಬ್ಬರೂ, ನಮ್ಮೆಲ್ಲಾ ಶಕ್ತಿಯನ್ನೂ ಸಾಮಾನ್ಯ ಜನತೆಗೆ, ಅದರಲ್ಲಿಯೂ ದುರ್ಬಲವರ್ಗದ ಜನರಿಗೆ ಮತ್ತು ಅವರ ಮಕ್ಕಳಿಗೆ, ಶಿಕ್ಷಣವನ್ನು ನೀಡುವುದಕ್ಕಾಗಿ ಉಪಯೋಗಿಸಬೇಕು. ಆರ್ಯ ಈಡಿಗ ಬಂಧುಗಳು ನಡೆಸುತ್ತಿರುವಂತಹ ಸಮಾವೇಶಗಳು ತಮ್ಮ ಗಮನವನ್ನು ಈ ಸಮಸ್ಯೆಗಳ ಮೇಲೆ ಕೇಂದ್ರೀಕರಿಸುತ್ತವೆ, ಹಾಗೂ, ನಿಮ್ಮ ಪ್ರಗತಿಗೆ ಸಂಬಂಧಿಸಿದ ಇನ್ನಿತರ ವಿಷಯಗಳ ಮಧ್ಯವೂ, ನೀವು ನಿಮ್ಮ ಮಕ್ಕಳ ಶಿಕ್ಷಣದ ವಿಚಾರಕ್ಕೆ ಆದ್ಯತೆಯನ್ನು ನೀಡುತ್ತೀರೆಂದು ಎಂದು ನಾನು ಆಶಿಸುತ್ತೇನೆ.

ಹಿಂದುಳಿದ ವರ್ಗಗಳು, ಪರಿಶಿಷ್ಟ ಜಾತಿಗಳು ಮತ್ತು ಇತರ ದುರ್ಬಲ ವರ್ಗಗಳ ಸಮಸ್ಯೆಗಳ ಮೇಲೆ ಸಾರ್ವಜನಿಕರ ಗಮನವು ಕೇಂದ್ರೀಕೃತವಾಗುವಂತೆ ಮಾಡುವ ಮೂಲಕ ಅವರ ಸಮಸ್ಯೆಗಳನ್ನು ಕಡಿಮೆ ಮಾಡುವಲ್ಲಿ ನಿರತವಾಗಿರುವ ಮೈಸೂರು ಪ್ರದೇಶ ಆರ್ಯ ಈಡಿಗರ ಸಂಘವು ದೇಶಕ್ಕೆ ಅತ್ಯುತ್ತಮ ಸೇವೆಯನ್ನು ಸಲ್ಲಿಸುತ್ತಿದೆ ಎಂಬುದನ್ನು ತಿಳಿದು ನನಗೆ ಸಂತೋಷವಾಗಿದೆ.

ಈ ಹಿಂದುಳಿದ ವರ್ಗಗಳವರು ಮತ್ತು ಪರಿಶಿಷ್ಟ ಜಾತಿಗಳವರು ಹಾಗು ಇತರ ದುರ್ಬಲವರ್ಗಗಳವರು ಹೇಳಲಾಗದಷ್ಟು ಸಂಕಷ್ಟಗಳನ್ನು ಶತಶತಮಾನಗಳಿಂದ ಅನುಭವಿಸುತ್ತಾ ಬಂದಿದ್ದಾರೆ. ಎಲ್ಲಾ ಮುಖಂಡರೂ ಮತ್ತು ಸಂಸ್ಥೆಗಳೂ ಮುಂದೆ ಬಂದು, ಸಂವಿಧಾನವು ದುರ್ಬಲವರ್ಗದ ಜನತೆಗಾಗಿ ಕೊಡಮಾಡಿರುವ ಹತ್ತುಹಲವು ಸೌಲಭ್ಯ ಮತ್ತು ಸವಲತ್ತುಗಳನ್ನು ಸಂಪೂರ್ಣವಾಗಿ ಅನುಷ್ಠಾನಕ್ಕೆ ತರುವಲ್ಲಿ ಸರಕಾರದೊಡನೆ ಸಹಕರಿಸಿ, ಹಿಂದಿನಿಂದ ಮಾಡಿಕೊಂಡು ಬಂದಿರುವ ತಪ್ಪನ್ನು ಸರಿಪಡಿಸಲು ಇದು ಸಕಾಲ.

ನಿಮಗೆಲ್ಲಾ ತಿಳಿದಿರುವಂತೆ ಮೈಸೂರು ಸರಕಾರವು ಹಿಂದುಳಿದ ವರ್ಗಗಳವರ ಸಾಮಾಜಿಕ, ಆರ್ಥಿಕ ಮತ್ತು ಶೈಕ್ಷಣಿಕ ಸ್ಥಿತಿಗಳನ್ನು ಉತ್ತಮಗೊಳಿಸಲು ತನ್ನ ಕೈಲಾದುದೆಲ್ಲವನ್ನೂ ಮಾಡುತ್ತಿದೆ. ಸರಕಾರವು ಈಗಾಗಲೇ ಹಲವಾರು

ಯೋಜನೆಗಳನ್ನು ಜಾರಿಗೆ ತಂದು ಅವುಗಳ ಮುಖಾಂತರ ಈ ವರ್ಗದ ಹೆಚ್ಚಿನ ಸಂಖ್ಯೆಯ ಜನರಿಗೆ ಮನೆಕಟ್ಟಲು, ಶಿಕ್ಷಣಕ್ಕಾಗಿ ಹಾಗೂ ಕೃಷಿ ಮತ್ತು ಕುಟೀರ ಕೈಗಾರಿಕೆಗಳನ್ನು ನಡೆಸಲು ಸೌಲಭ್ಯಗಳನ್ನು ಒದಗಿಸಿದೆ. ಸಾಮಾನ್ಯ ಶಾಲೆಗಳಲ್ಲಿ ಹಾಗೂ ತಾಂತ್ರಿಕ ಸಂಸ್ಥೆಗಳಲ್ಲಿ ಓದಲು ಬಾಲಕ ಬಾಲಕಿಯರಿಗೆ ಅನುಕೂಲವಾಗುವಂತೆ, ಹೆಚ್ಚು ಹೆಚ್ಚಿನ ಸಂಖ್ಯೆಯಲ್ಲಿ ವಿದ್ಯಾರ್ಥಿನಿಲಯಗಳನ್ನು ಪ್ರಾರಂಭಿಸುತ್ತಿದ್ದೇವೆ. ಹಿಂದುಳಿದವರ ಕಲ್ಯಾಣಕ್ಕಾಗಿ ಮೂರನೆಯ ಪಾಂಚವಾರ್ಷಿಕ ಯೋಜನೆಯಲ್ಲಿ ಸರಕಾರವು 900 ಲಕ್ಷ ರೂಗಳನ್ನು ವೆಚ್ಚಮಾಡಲು ಯೋಜಿಸಿದೆ. ಈ ಮೊತ್ತವು, ಎರಡನೆಯ ಯೋಜನೆಯಲ್ಲಿ ತೆಗೆದಿರಿಸಿದ್ದ ಮೊತ್ತಕ್ಕಿಂತ ಸುಮಾರು 3ರಷ್ಟು ಹೆಚ್ಚಾಗಿದೆ.

ಇದೇ ಸಂದರ್ಭದಲ್ಲಿ ಒಂದು ವಿಷಯವನ್ನು ಹೇಳಿದರೆ ಅದು ಸಂದರ್ಭಕ್ಕೆ ವಿರೋಧವಾಗುವುದಿಲ್ಲವೆಂದು ತಿಳಿದಿದ್ದೇನೆ. ಇತ್ತೀಚಿನ ಹಿಂದುಳಿದ ವರ್ಗಗಳ ಖಾತೆಯ ಸಚಿವರುಗಳ ಸಮಾವೇಶವು ದೆಹಲಿಯಲ್ಲಿ ಜರುಗಿತು. ಅದರಲ್ಲಿ ಹಾಜರಿರುವ ಯೋಗವು ನನ್ನದಾಗಿತ್ತು. ಅದರಲ್ಲಿ ಬಹಳ ದೂರಗಾಮಿ ಪ್ರಭಾವವನ್ನು ಬೀರುವ ಕೆಲವು ನಿರ್ಣಯಗಳನ್ನು ತೆಗೆದುಕೊಳ್ಳಲಾಯಿತು. ಅವುಗಳನ್ನು ರಾಜ್ಯ ಸರಕಾರಗಳು ಸಂಪೂರ್ಣವಾಗಿ ಅನುಸರಿಸಿದರೆ, ಇಡೀ ರಾಷ್ಟ್ರದಲ್ಲಿ ಹಿಂದುಳಿದ ವರ್ಗಗಳವರಿಗೆ ಸಾಕಷ್ಟು ಅನುಕೂಲಗಳು ದೊರಕುತ್ತವೆ.

ಅಲ್ಲಿ ತೆಗೆದುಕೊಂಡ ಮುಖ್ಯವಾದ ನಿರ್ಣಯಗಳಲ್ಲಿ ಒಂದು – ಈಗ ಕೇಂದ್ರ ಹಾಗೂ ರಾಜ್ಯ ಸರಕಾರಗಳು ತಮ್ಮ ಸಮಾಜ ಕಲ್ಯಾಣ ಇಲಾಖೆಯ ಮೂಲಕ ನೀಡುತ್ತಿರುವ ಸೌಲಭ್ಯಗಳ ಜೊತೆಗೆ, ಸರಕಾರದ ಎಲ್ಲಾ ಅಭಿವೃದ್ಧಿ ಇಲಾಖೆಗಳ ಯೋಜಿತ ಬಜೆಟ್‌ನಲ್ಲಿ ಒಂದು ಪಾಲನ್ನು ಹಿಂದುಳಿದ ವರ್ಗಗಳವರ ಅನುಕೂಲಕ್ಕೆಂದೇ ಪ್ರತ್ಯೇಕವಾಗಿ ತೆಗೆದಿರಿಸಬೇಕು. ಅಂದರೆ, ಈ ವರ್ಗದ ಜನರು, ಇತರರೊಡನೆ ಎಲ್ಲಾ ಯೋಜನೆಯ ಲಾಭವನ್ನೂ ಹಂಚಿಕೊಳ್ಳುವುದರ ಜೊತೆಗೆ, ಎಲ್ಲಾ ಯೋಜನೆಗಳಲ್ಲಿಯೂ, ಅವರು ಆರ್ಥಿಕವಾಗಿ, ಸಾಮಾಜಿಕವಾಗಿ ಮತ್ತು ಶೈಕ್ಷಣಿಕವಾಗಿ ಹಿಂದುಳಿದಿರುವುದರಿಂದ, ವಿಶೇಷ ಪಾಲನ್ನು ಕೂಡ ಪಡೆಯಬಹುದು.

ದುರದೃಷ್ಟದಿಂದ, ಸ್ವಾತಂತ್ರ್ಯವು ಬಂದು ಹದಿಮೂರು ವರ್ಷಗಳಾದ ನಂತರವೂ, ಅಖಿಲ ಭಾರತ ಹಾಗೂ ರಾಜ್ಯಮಟ್ಟದ ಸೇವಾ ಹುದ್ದೆಗಳಲ್ಲಿ,

ಅದರಲ್ಲಿಯೂ ಐ.ಎ.ಎಸ್. ಮತ್ತು ಐ.ಪಿ.ಎಸ್. ಹುದ್ದೆಗಳಲ್ಲಿ, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳವರು ಪ್ರಾತಿನಿಧ್ಯವನ್ನು ಪಡೆಯುವಲ್ಲಿ ಪ್ರಗತಿಯೇನೂ ಸಾಧ್ಯವಾಗಿಲ್ಲ. ಈ ಪರಿಸ್ಥಿತಿ ಸುಧಾರಿಸಬೇಕು. ದುರ್ಬಲವರ್ಗಗಳವರ ಉಪಯೋಗಕ್ಕಾಗಿ ಸಾಕಷ್ಟು ಹಣವನ್ನು ಮೀಸಲಿರಿಸುವಂತೆ ಎಲ್ಲಾ ಅಭಿವೃದ್ಧಿ ಇಲಾಖೆಗಳಿಗೂ ಮೈಸೂರು ಸರಕಾರವು ಸೂಚನೆಯನ್ನು ನೀಡಿದೆ.

ಪರಿಶಿಷ್ಟ ಜಾತಿಗಳವರನ್ನೂ ಒಳಗೊಂಡಿರುವ ಹಿಂದುಳಿದ ವರ್ಗಗಳವರ ಪುನರ್ವಸತಿಯ ಸಮಸ್ಯೆ ಅಗಾಧವಾಗಿದ್ದು, ಅದನ್ನು ತ್ವರಿತವಾಗಿ ಮತ್ತು ಪರಿಣಾಮಕಾರಿಯಾಗಿ ಪರಿಹರಿಸುವ ಕಾರ್ಯ ಸರಕಾರದೊಡನೆ ಜನಗಳೂ ಸಹಕರಿಸಿದಾಗ ಮಾತ್ರ ಸಾಧ್ಯವಾಗುತ್ತದೆ. ನಿಮ್ಮ ಮಧ್ಯದಲ್ಲಿರುವ ಶ್ರೀ ಗುರುಸ್ವಾಮಿ, ಶ್ರೀ ವೆಂಕಟಸ್ವಾಮಿ ಮತ್ತು ಶ್ರೀ ತಮ್ಮಣ್ಣಗೌಡರಂತಹ ವ್ಯಕ್ತಿಗಳು ಹಿಂದುಳಿದ ವರ್ಗಗಳವರ, ಅದರಲ್ಲಿಯೂ ಮುಖ್ಯವಾಗಿ ಆರ್ಯ ಈಡಿಗರ ಸಮಾಜದವರ, ಜೀವನದ ಪರಿಸ್ಥಿತಿಯನ್ನು ಉತ್ತಮಗೊಳಿಸಲು ತಮ್ಮ ತನು,ಮನ, ಧನಗಳನ್ನು ಧಾರಾಳವಾಗಿ ಧಾರೆಯೆರೆಯುತ್ತಿರುವುದನ್ನು ನೋಡಿ ನನಗೆ ಸಂತೋಷವಾಗಿದೆ. ನಾನು ಅವರನ್ನು ಅಭಿನಂದಿಸುತ್ತೇನೆ. ಉಳ್ಳವರು ಬಡವರ ಧರ್ಮದರ್ಶಿಗಳಂತೆ ಇರಬೇಕೆಂದು ಮತ್ತು ತಮ್ಮ ಸಂಪತ್ತಿನಲ್ಲಿ ಸ್ವಲ್ಪಭಾಗವನ್ನು ಕೆಳವರ್ಗದ ಜನರ, ದಲಿತರ ಬಿಡುಗಡೆಗಾಗಿ ಉಪಯೋಗಿಸಬೇಕೆಂದೂ ನಮ್ಮ ರಾಷ್ಟ್ರಪಿತ ಮಹಾತ್ಮ ಗಾಂಧಿಯವರು ಸೂಚಿಸಿದಂತೆ ನಡೆದುಕೊಳ್ಳುತ್ತಿರುವ ಪರೋಪಕಾರೀ ಮಹಾನುಭಾವರ ಪಂಕ್ತಿಯಲ್ಲಿ ಇವರೂ ಸೇರಿದ್ದಾರೆ. ಇವರ ಭವ್ಯವಾದ ಉದಾಹರಣೆಯನ್ನು ಇತರ ಶ್ರೀಮಂತರೂ ಅನುಸರಿಸುವಂತಾಗಲಿ.

ಇದೇ ಸಂದರ್ಭದಲ್ಲಿ ಒಂದು ಎಚ್ಚರಿಕೆಯ ಮಾತನ್ನೂ ನಾನು ಹೇಳಬೇಕು. ಪರಿಶಿಷ್ಟ ಜಾತಿ ಹಾಗೂ ಇತರ ಹಿಂದುಳಿದ ವರ್ಗಗಳವರ ಅಭಿವೃದ್ಧಿಯ ಕಾರ್ಯಕ್ರಮದಲ್ಲಿ ಅತ್ಯಂತ ಉತ್ಸಾಹಿತರಾಗಿ ಇತರ ಮುಂದುವರೆದ ವರ್ಗಗಳವರ ವಿರುದ್ಧ ಯಾವುದೇ ಬಗೆಯ ದುರಭಿಪ್ರಾಯವನ್ನು ಇಟ್ಟುಕೊಳ್ಳಕೂಡದು. ಬಡತನವಿಲ್ಲದ, ರೋಗ–ರುಜಿನಗಳಿಂದ ಮುಕ್ತವಾದ ಮತ್ತು ಅಜ್ಞಾನ–ಅವಿದ್ಯೆಗಳಿಲ್ಲದ ರಾಷ್ಟ್ರವನ್ನು ಕಟ್ಟುವುದು ಮುಂದುವರೆದ ಹಾಗೂ ಹಿಂದುಳಿದ ಎಲ್ಲಾ ವರ್ಗಗಳವರ ಒಟ್ಟು ಹೊಣೆಯೆಂಬ ಭಾವನೆಯನ್ನು ಪ್ರತಿಯೊಬ್ಬರೂ ಮನಸ್ಸಿನಲ್ಲಿಟ್ಟುಕೊಂಡಿರಬೇಕು.

ಆದ್ದರಿಂದ ಎಲ್ಲಾ ರಾಜ್ಯಗಳ ಎಲ್ಲಾ ವರ್ಗಗಳವರಲ್ಲೂ ನಾನು ಮಾಡಿಕೊಳ್ಳುವ ವಿನಂತಿಯೆಂದರೆ, ಪ್ರತಿಯೊಬ್ಬನೂ ಮೊದಲಿಗೆ ತಾನು ಭಾರತೀಯ ಮತ್ತು ಓಜಸ್ವಿಯಾದ ರಾಷ್ಟ್ರವನ್ನು ಕಟ್ಟಲು, ರಾಷ್ಟ್ರದ ದುರ್ಬಲವರ್ಗದವರನ್ನು ಮೇಲೆತ್ತಲು ತಮ್ಮ ಸಹಾಯಹಸ್ತವನ್ನು ನೀಡುವುದು ಅಗತ್ಯ ಮತ್ತು ಈ ಸಹಾಯಹಸ್ತವನ್ನು ನೀಡುವುದು ತಮ್ಮ ಕರ್ತವ್ಯವೆಂದು ಭಾವಿಸಬೇಕೆ ಹೊರತು ಅನುಕಂಪದ ಕೊಡುಗೆ ಅಥವಾ ದಯಾಭಿಕ್ಷೆಯೆಂದು ತಿಳಿಯಬಾರದು.

ನನ್ನ ಮಾತನ್ನು ಮುಗಿಸುವ ಮೊದಲು, ಭಾರತ ಸರಕಾರವು 1956ರಲ್ಲಿ ಪ್ರಕಟಿಸಿರುವ ಹಿಂದುಳಿದ ವರ್ಗಗಳವರ ಆಯುಕ್ತರ ವರದಿಯ ಮೂರನೆಯ ಸಂಪುಟದಿಂದ ಕೆಲವು ವಾಕ್ಯಗಳನ್ನು ಇಲ್ಲಿ ಹೇಳುತ್ತೇನೆ. ಈ ವಾಕ್ಯಗಳು ಆ ಸಂಪುಟದ 21ನೆಯ ಪುಟದಲ್ಲಿ, 'ಮುಕ್ತಾಯ' ಎಂಬ ಶೀರ್ಷಿಕೆಯ ಅಡಿಯಲ್ಲಿ ಇವೆ.

ಈ ಸಂದರ್ಭದಲ್ಲಿ ನಾನು ಒಂದು ನೀತಿಯನ್ನು ಶಿಫಾರಸು ಮಾಡುತ್ತೇನೆ. ಅದೆಂದರೆ, ಅದರ ಪರಿಣಾಮವಾಗಿ ಉಂಟಾಗಬಹುದಾದ ತೊಂದರೆಗಳನ್ನು ಸೂಕ್ಷ್ಮವಾಗಿ ಗಮನದಲ್ಲಿಟ್ಟುಕೊಂಡು, ಅನುಷ್ಠಾನದಲ್ಲಿ ತರುವಾಗ ಉಂಟಾಗಬಹುದಾದ ವಿಳಂಬವನ್ನೂ ಮನಸ್ಸಿನಲ್ಲಿಟ್ಟುಕೊಂಡು, ಹಿಂದುಳಿದ ವರ್ಗಗಳವರನ್ನು ಹೆಚ್ಚು ಹೆಚ್ಚಾಗಿ ದೇಶದ ರಾಜಕೀಯ ಮತ್ತು ಆಡಳಿತಾತ್ಮಕ ಪ್ರಕ್ರಿಯೆಗಳಲ್ಲಿ ತೊಡಗಿಸಿಕೊಳ್ಳಬೇಕು. ಏಕೆಂದರೆ ಅವರು ಈ ದೇಶದ ಅವಿಭಾಜ್ಯ, ಅನಿವಾರ್ಯ ಅಂಗವಾಗಿದ್ದಾರೆ. ನಿಧಾನವಾಗಿ ಎಲ್ಲಾ ಜಾತಿ, ವರ್ಣಗಳನ್ನೂ ಒಂದುಗೂಡುವ ಹಾಗೆ ಬೆಸೆಯುವುದೊಂದೆ ನಮಗಿರುವ ಮಾರ್ಗ. ಅದು ಸಾಧ್ಯವಾದಾಗ ಮಾತ್ರ ಶಾಂತಿಯುತವಾದ ಭವಿಷ್ಯವು ನಮ್ಮದಾಗುತ್ತದೆ. ಈ ಹಾದಿಯಲ್ಲಿ ಸಾಗುವುದುಕ್ಕೆ ನಮಗೆ ಸಮಚಿತ್ತ, ಪಟ್ಟುಬಿಡದೆ ಮುನ್ನಡೆಯುವ ಛಲ ಇವುಗಳನ್ನು ದಿನದಿಂದ ದಿನಕ್ಕೆ ನವೀಕರಿಸಿಕೊಂಡು ಹೋಗುವ ಗುಣ, ಎಲ್ಲರ ಸಹಯೋಗ, ಭಿನ್ನಾಭಿಪ್ರಾಯಗಳನ್ನು ಚರ್ಚೆಗಳ ಮೂಲಕ ಪರಿಹರಿಸಿಕೊಳ್ಳುವ ಪ್ರವೃತ್ತಿ ಮತ್ತು ಕೊಡುಕೊಳ್ಳುವ ಮನೋಭಾವ – ಇವೆಲ್ಲವುಗಳ ಅಗತ್ಯವಿದೆ. ಈ ಸಹಯೋಗವನ್ನು ಸಾಧಿಸುವುದು ಸುಲಭದ ಕೆಲಸವಲ್ಲ. ಒಂದು ಪಕ್ಷದವರು, ಅವರ ಹುಟ್ಟಿನಿಂದ ಬಂದ ಜಾತಿಯ ಅಥವಾ ವರ್ಣದ

ಮೇಲರಿಮೆಯ ಅಹಂಭಾವವನ್ನು ತ್ಯಜಿಸಬೇಕು. ಈ ಅಹಂಭಾವ ರಾಜಕೀಯದಲ್ಲಿನ ಪಾರಮ್ಯಕ್ಕೆ ಸದೃಶವಾಗಿರುತ್ತದೆ ಹಾಗೂ ಓಬೀರಾಯನ ಕಾಲದ ನಂಬಿಕೆಗಳ ಮೇಲೆ ನಿಂತಿದೆ ಮತ್ತು ಇದಕ್ಕೆ ಆಧುನಿಕ ಸಮಾಜವು ಮತ್ತು ಆಧುನಿಕ ಸಂಸ್ಕೃತಿಯು ಕವಡೆಯ ಕಾಸಿನ ಬೆಲೆಯನ್ನೂ ನೀಡುವುದಿಲ್ಲ. ಇನ್ನೊಂದು ಪಕ್ಷವು ಸಂವಿಧಾನದಲ್ಲಿ ಹೇಳಿರುವ ಭ್ರಾತೃತ್ವ ಮತ್ತು ಸಮಾನತೆಯ ಆಶಯಗಳು ಐಂದ್ರಜಾಲಿಕನ ದಂಡದಿಂದ ಮೂಡಿಬರುವಂತೆ ಬಂದು ದೇಶದಲ್ಲಿ ಸ್ಥಾಪಿತವಾಗುವುದಿಲ್ಲ ಎಂಬುದನ್ನು ಮನವರಿಕೆ ಮಾಡಿಕೊಳ್ಳಬೇಕು.

ಸಂಖ್ಯಾದೃಷ್ಟಿಯಿಂದ ಹೆಚ್ಚಿಗೆ ಇರುವ ಹಿಂದುಳಿದ ವರ್ಗಗಳವರು ಮುಂದೆ ಒಂದಲ್ಲ ಒಂದು ದಿನ ತಮ್ಮಿಂದ ಅಧಿಕಾರವನ್ನು ಕಸಿದುಕೊಳ್ಳುತಾರೆಂಬುದನ್ನು ಮುಂದುವರಿದ ವರ್ಗಗಳವರು ತಿಳಿದುಕೊಳ್ಳಬೇಕು. ಆಗ ಈ ಎರಡೂ ಪಂಗಡಗಳ ಮಧ್ಯೆ ಕಹಿಯ ಭಾವನೆಯು ಮೂಡುವುದು ಖಚಿತ. ಹಿಂದುಳಿದ ವರ್ಗಗಳವರು ಹಾಗೆ ಮಾಡುವುದಕ್ಕೆ ಮನಸ್ಸು ಮಾಡುವ ಮೊದಲೇ, ಮೇಲ್ವರ್ಗದವರು ತಮ್ಮ ರಾಜಕೀಯ ಹಾಗೂ ಆಡಳಿತಾತ್ಮಕ ಅಧಿಕಾರವನ್ನು ಹಿಂದುಳಿದ ವರ್ಗಗಳವರ ಸಂಗಡ ಶಾಂತಿಯುತವಾಗಿ ಸಹಬಾಳ್ವೆಯ ತತ್ತ್ವದ ಆಧಾರದ ಮೇಲೆ ಹಂಚಿಕೊಳ್ಳಬೇಕು.

## ♦ ಸಮುದಾಯ ಅಭಿವೃದ್ಧಿ ಕನಸುಗಳು :

**"ಗ್ರಾಮದ ವಿಸ್ತರಣೆಯ ಭಾಗವಾಗಿ ಸಮುದಾಯದ ಅಭಿವೃದ್ಧಿಗಳನ್ನು ಪಂಚವಾರ್ಷಿಕ ಯೋಜನೆಗಳ ಮೂಲಕ ಸಾಮಾಜಿಕ ಮತ್ತು ಆರ್ಥಿಕ, ಶೈಕ್ಷಣಿಕ ಕಾರ್ಯಪ್ರಗತಿಯನ್ನು ಹೊಂದಬಹುದು. ಸಮುದಾಯದ ಅಭಿವೃದ್ಧಿ ಜನಾಂಗದ ಅಭಿವೃದ್ಧಿಯೇ ಆಗಿರುವುದರಿಂದ ಕೃಷಿ, ಕೈಗಾರಿಕೆಗಳ ನವೀಕರಣದಿಂದ ಸಾಮುದಾಯಿಕ ಅಭಿವೃದ್ಧಿಯ ನೇರ ನಿಲುವುಗಳನ್ನು ಎನ್. ರಾಚಯ್ಯನವರ ಈ ಮಾತುಗಳಲ್ಲಿ ಕಾಣಬಹುದಾಗಿದೆ. ಇದು 1960ರ ಡಿಸೆಂಬರ್ 26 ರಂದು ಬೆಂಗಳೂರು ದಕ್ಷಿಣ ತಾಲ್ಲೂಕಿನ ಯಲಹಂಕದಲ್ಲಿ ಸಮುದಾಯ ಅಭಿವೃದ್ಧಿಯ ವಿಭಾಗೀಯ ಸಮ್ಮೇಳನದಲ್ಲಿ ಮಾಡಿದ ಅಧ್ಯಕ್ಷೀಯ ಭಾಷಣ.**

ಸಮುದಾಯ ಅಭಿವೃದ್ಧಿ ಎಂಬುದಕ್ಕೆ ಹಲವಾರು ವ್ಯಾಖ್ಯಾನಗಳು ಹೊರಟಿವೆ. 'ಸಮುದಾಯ ಅಭಿವೃದ್ಧಿಯು ಒಂದು ವಿಧಾನವಾಗಿದ್ದು, ಗ್ರಾಮಾಂತರ ವಿಸ್ತರಣೆಯಾಗಿದೆ. ಇದರ ಮೂಲಕ ಹಳ್ಳಿಗಳ ಸಾಮಾಜಿಕ ಮತ್ತು ಆರ್ಥಿಕ ಪರಿವರ್ತನೆಯ ಪ್ರಕ್ರಿಯೆಯುನ್ನು ಪಾಂಚವಾರ್ಷಿಕ ಯೋಜನೆಯು ಜಾರಿಗೊಳಿಸುತ್ತದೆ.' ಈ ಪರಿವರ್ತನೆಯ ಪ್ರಕ್ರಿಯೆಯು ಪ್ರಾರಂಭವಾಗಿದೆ ಮತ್ತು ಜನತೆಯಲ್ಲಿ ಇದರ ಬಗ್ಗೆ ಜಾಗೃತಿ ಈಗಾಗಲೇ ಮೂಡಿದೆ. ಸಮುದಾಯ ಅಭಿವೃದ್ಧಿ ಕಾರ್ಯಕ್ರಮವನ್ನು ಜಾರಿಗೆ ತಂದಿರುವುದರ ಪರಿಣಾಮವಾಗಿ ರಾಜ್ಯದಲ್ಲಿ, ಅಷ್ಟೇಕೆ ಇಡೀ ರಾಷ್ಟ್ರದಲ್ಲಿ, ಹಳ್ಳಿಗಳಲ್ಲಿ ಈ ಪರಿವರ್ತನೆಯ ನಿಧಾನವಾಗಿ, ಆದರೆ ಸ್ಥಿರವಾದ ಗತಿಯಲ್ಲಿ, ನಡೆಯುತ್ತಿದೆ. ಇತರ ಎಲ್ಲಾ ದೊಡ್ಡ ಪ್ರಯತ್ನಗಳಂತೆಯೇ, ಈ ಸಮುದಾಯ ಅಭಿವೃದ್ಧಿ ಕಾರ್ಯಕ್ರಮದ ಪ್ರಗತಿಯು ಕೂಡ, ಒಟ್ಟಾರೆಯಾಗಿ ಜನತೆಯ ಸೇವಾಮನೋಭಾವ, ಜನರ ಸಹಕಾರ, ಅವರ, ಅದರಲ್ಲಿಯೂ ವಿಭಾಗೀಯ ಮಟ್ಟದ ಅಧಿಕಾರಿಗಳ ಮತ್ತು ಹಳ್ಳಿಗಳ ಮಟ್ಟದಲ್ಲಿನ ಕಾರ್ಯಕರ್ತರ ಪ್ರಯತ್ನಗಳಲ್ಲಿನ ಸುಸಂಘಟಿತತೆ, ಇವುಗಳನ್ನು ಬಹುಪಾಲು ಅವಲಂಬಿಸಿರುತ್ತದೆ. ರಾಜ್ಯದಲ್ಲಿ ವಿಭಾಗೀಯ ಮಟ್ಟದ

ಅಧಿಕಾರಿಗಳಲ್ಲಿ ಮತ್ತು ಹಳ್ಳಿಗಳ ಮಟ್ಟದಲ್ಲಿನ ಕಾರ್ಯಕರ್ತರಲ್ಲಿ ಹೆಚ್ಚಿನವರು ಈ ಕಾರ್ಯವನ್ನು ಉತ್ಸಾಹದಿಂದ ಮತ್ತು ಸೇವಾ ಮನೋಭಾವದಿಂದ ಕೈಗೆತ್ತಿಕೊಂಡಿದ್ದಾರೆಂಬುದನ್ನು ನಾವು ಗುರುತಿಸಬೇಕು. ಅಂತಹ ಹಳ್ಳಿಗಳಲ್ಲಿ ಈ ಕಾರ್ಯಕ್ರಮದ ಅನುಷ್ಠಾನದಲ್ಲಿ ಕಂಡುಬರುತ್ತಿರುವ ಪ್ರಗತಿಯು ಪ್ರಶಂಸನೀಯವಾದುದು.

ಸಮುದಾಯ ಅಭಿವೃದ್ಧಿ ಕಾರ್ಯಕ್ರಮವು ನಿರಂತರವಾಗಿ ತನ್ನ ವಿಸ್ತಾರವನ್ನು ಹೆಚ್ಚಿಸಿಕೊಳ್ಳುತ್ತಲೇ ಹೋಗುತ್ತಿದ್ದು ಈಗ ಅದು ರಾಜ್ಯದ ನೂರನೆಯ ಎರಡು ಭಾಗದಷ್ಟು ಪ್ರದೇಶದ ವ್ಯಾಪ್ತಿಯನ್ನು ಹೊಂದಿದೆ. ಇಷ್ಟರಲ್ಲಿಯೇ. ಅದು ರಾಜ್ಯದ ಇತರ ಭಾಗಗಳಿಗೂ ವ್ಯಾಪಿಸುತ್ತದೆಯೆಂಬ ನಿರೀಕ್ಷೆಯಿದೆ. ಈಗಿನ ಅದರ ವ್ಯಾಪ್ತಿಯು 56,435 ಚದರ ಮೈಲಿಗಳಷ್ಟು, ಅಂದರೆ ರಾಜ್ಯದ ಗ್ರಾಮಾಂತರ ಪ್ರದೇಶಗಳ ಶೇ 76.8ರಷ್ಟು, ಇದ್ದು, 113.84 ಲಕ್ಷ ಜನರನ್ನು ಅದು ತನ್ನ ಕಕ್ಷೆಯೊಳಕ್ಕೆ ತೆಗೆದುಕೊಂಡಿದೆ. ಇದು ವಿವಿದೋದ್ದೇಶವನ್ನು ಹೊಂದಿದ್ದು, ಕೃಷಿ, ಕೈಗಾರಿಕೆ. ಶಿಕ್ಷಣ. ಸಮಾಜಸೇವೆ, ಸಂಪರ್ಕ. ಸಾರ್ವಜನಿಕ ಆರೋಗ್ಯ ಇತ್ಯಾದಿಯಾಗಿ ಮಾನವನ ಚಟುವಟಿಕೆಯ ಎಲ್ಲಾ ಕ್ಷೇತ್ರಗಳನ್ನು ವ್ಯಾಪಿಸಿದೆ. ಇವುಗಳೆಲ್ಲವುಗಳ ಮೂಲ ಉದ್ದೇಶವೆಂದರೆ. ಜನತೆಯ ಕಲ್ಯಾಣ, ಅವರಿಗೆ ಸಾಮಾಜಿಕ. ಆರ್ಥಿಕ ಹಾಗೂ ರಾಜಕೀಯ ನ್ಯಾಯಗಳನ್ನು ಒದಗಿಸುವುದು, ಆಲೋಚನೆ, ಅಭಿವ್ಯಕ್ತಿ, ನಂಬಿಕೆ. ಧರ್ಮ. ಆರಾಧನೆ ಮೊದಲಾದವುಗಳಲ್ಲಿ ಸ್ವಾತಂತ್ರ್ಯವನ್ನು ನೀಡುವುದು. ಸ್ಥಾನಮಾನ ಮತ್ತು ಅವಕಾಶಗಳಲ್ಲಿ ಸಮಾನತೆಯನ್ನು ಒದಗಿಸುವುದು. ಸಂವಿಧಾನದಲ್ಲಿ ಆಶ್ವಾಸನೆಯನ್ನು ಕೊಟ್ಟಿರುವ ಹಾಗೆ ದೇಶದ ಸಮಗ್ರತೆ ಮತ್ತು ವೈಯಕ್ತಿಕ ಬದುಕಿನಲ್ಲಿ ಗೌರವಗಳನ್ನು ಒಳಗೊಂಡಂತೆ ಭ್ರಾತೃತ್ವವನ್ನು ಜನತೆಯ ಮಧ್ಯದಲ್ಲಿ ಬೆಳೆಸುವುದು. ನಿಮಗೆ ತಿಳಿದಿರುವಂತೆ. ದೇಶದ ಜನತೆಗಾಗಿ ಉದ್ಯೋಗಾವಕಾಶಗಳನ್ನು ಹೆಚ್ಚಿಸುವುದು ಮತ್ತು ಉತ್ಪಾದನೆಯನ್ನು ಹೆಚ್ಚಿಸುವುದು ಹಾಗೂ ಗರಿಷ್ಠಮಟ್ಟದಲ್ಲಿ ಸಾಮಾಜಿಕ ನ್ಯಾಯವನ್ನು ದೊರೆಯುವಂತೆ ಮಾಡುವುದು – ಇವುಗಳನ್ನು ಉದ್ದೇಶವಾಗಿ ಉಳ್ಳ ಸ್ವಾತಂತ್ರ್ಯ ಹಾಗೂ ಪ್ರಜಾಪ್ರಭುತ್ವದ ತತ್ತ್ವಗಳ ಆಧಾರದ ಮೇಲೆ ಸಾಮಾಜಿಕ–ಆರ್ಥಿಕ ವ್ಯವಸ್ಥೆಯನ್ನು, ಸಮಾಜವಾದೀ ಆದರ್ಶಗಳನ್ನುಳ್ಳ ಸಮಾಜವನ್ನು ನಿರ್ಮಿಸಲು ಮೊದಲನೆಯ ಪಂಚವಾರ್ಷಿಕ ಯೋಜನೆಯಲ್ಲಿ ಅದರ ಯೋಜಕರು ಭದ್ರವಾದ ಅಡಿಗಲ್ಲನ್ನು ಹಾಕಿದರು. ಎರಡನೆಯ ಪಾಂಚವಾರ್ಷಿಕ ಯೋಜನೆಯು, ಮೊದಲನೆಯ ಯೋಜನೆಯಲ್ಲಿ ಪ್ರಾರಂಭಿಸಿದ

ಪ್ರಕ್ರಿಯೆಯನ್ನು ಮುಂದುವರಿಸಿಕೊಂಡು, ರಾಷ್ಟ್ರೀಯ ವರಮಾನದಲ್ಲಿ ಹೆಚ್ಚಳ, ತೀವ್ರಗತಿಯಲ್ಲಿ ಕೈಗಾರಿಕಾ ಪ್ರಗತಿ, ಉದ್ಯೋಗಾವಕಾಶಗಳ ಹೆಚ್ಚಳ ಮತ್ತು ಸಂಪತ್ತು ಹಾಗೂ ಅಧಿಕಾರದ ಹಂಚಿಕೆ – ಈ ಉದ್ದೇಶಗಳನ್ನು ತನ್ನೆದುರು ಇಟ್ಟುಕೊಂಡಿದೆ. ವಿಭಾಗೀಯ ಅಭಿವೃದ್ಧಿ ಅಧಿಕಾರಿಗಳು, ವಿಸ್ತರಣಾ ಅಧಿಕಾರಿಗಳು ಮತ್ತು ಗ್ರಾಮಸೇವಕರು ಸೇವೆಯ ಮನೋಧರ್ಮವನ್ನು ತಮ್ಮಲ್ಲಿ ರಕ್ತಗತವಾಗಿಸಿಕೊಳ್ಳಬೇಕು. ಎಲ್ಲರಿಗೂ ಅನ್ವಯವಾಗುವಂತಹ ಆರ್ಥಿಕ ಉದ್ದೇಶವಾದ ಹೆಚ್ಚು ಉತ್ಪಾದನೆ ಮತ್ತು ಜೀವನದ ಗುಣಮಟ್ಟವನ್ನು ಏರಿಸುವಿಕೆಗಳನ್ನು ಸಾಧಿಸಲು ಗ್ರಾಮಾಂತರದ ಜನತೆ ಎಲ್ಲರೂ ಒಟ್ಟಿಗೆ ಬಂದು, ಸಮಾನತೆಯ ತತ್ತ್ವದ ಆಧಾರದ ಮೇಲೆ ಸಹಕಾರವನ್ನು ನೀಡುವಂತೆ ಮಾಡಲು ಅನುವಾಗುವ ಹಾಗೆ ಅವರ ಪ್ರಜ್ಞೆಯನ್ನು ಜಾಗೃತಗೊಳಿಸುವ ಕಾರ್ಯವನ್ನು ಈ ಅಧಿಕಾರಿಗಳು ತಮ್ಮ ಕಾರ್ಯಶೀಲತೆಯಿಂದ ಮತ್ತು ತಾವು ಹಾಕುವ ಮೇಲ್ಪಂಕ್ತಿಯಿಂದ ಮಾಡಬೇಕು.

ಎರಡನೆಯ ಮತ್ತು ಮೂರನೆಯ ಪಂಚವಾರ್ಷಿಕ ಯೋಜನೆಗಳ ಅಡಿಯಲ್ಲಿ ಕೃಷಿಯ ಕ್ಷೇತ್ರದಲ್ಲಿ ಸಂಶೋಧನೆ, ಉತ್ಪಾದನೆ, ಶಿಕ್ಷಣ, ಮಣ್ಣಿನ ಸಂರಕ್ಷಣೆ ಮೊದಲಾದವುಗಳಿಗಾಗಿ ಹಲವಾರು ಯೋಜನೆಗಳಿವೆ. ಕೃಷಿ ಉತ್ಪಾದನೆಯಲ್ಲಿ, ಆಹಾರದ ಬೆಳೆಗಳಷ್ಟೇ ಅಲ್ಲದೆ ವಾಣಿಜ್ಯ ಬೆಳೆಗಳಾದ ಕಬ್ಬು, ಹತ್ತಿ, ತೆಂಗು, ಅಡಿಕೆ, ಗೋಡಂಬಿ, ಮೆಣಸು, ಏಲಕ್ಕಿ, ಎಣ್ಣೆಯ ಬೀಜಗಳು ಮೊದಲಾದವುಗಳ ಉತ್ಪಾದನೆಯನ್ನೂ ಹೆಚ್ಚಿಸಲು ಹಲವಾರು ಅಭಿವೃದ್ಧಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿದೆ. ಈ ಕಾರ್ಯಕ್ರಮಗಳ ಬಗೆಗಿನ ವಿವರಕ್ಕೆ ನಾವು ಹೋಗಲು ಬಯಸುವುದಿಲ್ಲ. ಸಮುದಾಯ ಅಭಿವೃದ್ಧಿ ಕಾರ್ಯಕ್ರಮವು ಕೃಷಿ ಉತ್ಪಾದನೆಯ ಮೇಲೆ ವಿಶೇಷವಾದ ಒತ್ತನ್ನು ಹಾಕಿದೆ. ಉತ್ಪಾದನೆಯನ್ನು ಹೆಚ್ಚಿಸುವ ದೃಷ್ಟಿಯಿಂದ ಸುಧಾರಿತ ಬೀಜಗಳನ್ನು, ರಸಗೊಬ್ಬರಗಳನ್ನೂ ಹೆಚ್ಚಿನ ಪ್ರಮಾಣದಲ್ಲಿ ಬೇಸಾಯಗಾರರಿಗೆ ಹಂಚಲಾಗಿದೆ. ರಾಜ್ಯದಲ್ಲಿ ಜಾನುವಾರುಗಳ ಅಭಿವೃದ್ಧಿಗಾಗಿ ಹಲವಾರು ಕ್ರಮಗಳನ್ನು ಕೈಗೊಳ್ಳಲಾಗಿದೆ. ಹೆಚ್ಚಿನ ಸಂಖ್ಯೆಯ ದೊಡ್ಡ, ಮಧ್ಯಮ ಹಾಗೂ ಸಣ್ಣ ಪ್ರಮಾಣದ ನೀರಾವರಿ ಯೋಜನೆಗಳನ್ನು ನಿರ್ಮಾಣದ ಹಂತದಲ್ಲಿವೆ. ಹೆಚ್ಚಿನ ಭೂಮಿಯನ್ನು ಕೃಷಿಯ ಉದ್ದೇಶಕ್ಕೆ ಒಳಪಡಿಸುವ ಉದ್ದೇಶದಿಂದ ರೈತರಿಗೆ ಬಾವಿಗಳನ್ನು ನಿರ್ಮಿಸಿಕೊಡುವುದು, ನೀರೆತ್ತುವ ಪಂಪುಗಳನ್ನು ಒದಗಿಸಿಕೊಡುವುದು ಮೊದಲಾದ ಸೌಲಭ್ಯಗಳನ್ನು ನೀಡಲಾಗುತ್ತಿದೆ. ರೈತರಿಗೆ ಧನಸಹಾಯವನ್ನು

ನೀಡಲಾಗುತ್ತಿದೆ. ವಯಸ್ಕರಲ್ಲಿರುವ ಅನಕ್ಷರತೆಯನ್ನು ಹೋಗಲಾಡಿಸಲು, ಹೊಸ ವಯಸ್ಕರ ಶಿಕ್ಷಣ ಶಾಲೆಗಳನ್ನು ತೆರೆಯಲಾಗಿದೆ. ಹಲವಾರು ಯುವಕರ ಕೂಟಗಳನ್ನು, ಮಹಿಳಾ ಮಂಡಳಿಗಳನ್ನು, ವಯಸ್ಕ ಶಿಕ್ಷಣ ಕೇಂದ್ರಗಳನ್ನು ಪ್ರಾರಂಭಿಸಲಾಗಿದೆ. ರಾಜ್ಯದ ವಿವಿದೆಡೆಗಳಲ್ಲಿ ಒಟ್ಟು 1,69,166 ಸದಸ್ಯರನ್ನು ಹೊಂದಿರುವ ಕೂಟಗಳು, ರೈತರ ವೇದಿಕೆ, ಮತ್ತು ಯುವ ರೈತರ ಸಂಘಗಳು ಈಗ ಕೆಲಸಮಾಡುತ್ತಿವೆ. ರಾಜ್ಯದಲ್ಲಿ ಒಟ್ಟು 1608 ಮಹಿಳಾ ಮಂಡಳಿಗಳಿದ್ದು ಅವುಗಳ ಸದಸ್ಯರ ಸಂಖ್ಯೆ 34,734.

ಹೆಂಗಸೊಬ್ಬಳನ್ನು ವಿದ್ಯಾವಂತಳನ್ನಾಗಿ ಮಾಡಿದರೆ, ಅದು ಮೂರು ಪುರುಷರಿಗೆ ಶಿಕ್ಷಣವನ್ನು ನೀಡಿದಂತೆ ಎಂಬ ಹೇಳಿಕೆಯಿದೆ. ರಾಜ್ಯದ ವಿವಿಧ ವಿಭಾಗಗಳಲ್ಲಿರುವ ಎಲ್ಲಾ ಮಹಿಳಾ ಮಂಡಳಿಗಳೂ ಅತ್ಯುತ್ತಮವಾದ ಕೆಲಸವನ್ನು ಮಾಡಿವೆ ಎಂದು ಹೇಳುವುದು ಸಾಧ್ಯವಿಲ್ಲವಾದರೂ, ಬಟ್ಟೆಹೊಲಿಯುವುದು, ಹೆಣಿಗೆ, ಮತ್ತು ಕಸೂತಿಕೆಲಸಗಳನ್ನು ಹಳ್ಳಿಯ ಹೆಂಗಸರಿಗೆ ಕಲಿಸುತ್ತಿರುವುದನ್ನು ಮತ್ತು ಅವರ ಆರೋಗ್ಯ, ಮನೆಯನ್ನು ಅಚ್ಚುಕಟ್ಟಾಗಿ ಇಟ್ಟುಕೊಳ್ಳುವುದು ಹಾಗೂ ಸಾಧ್ಯವಾದ ಎಡೆಗಳಲ್ಲೆಲ್ಲಾ ಕೈದೋಟಗಳನ್ನು ಬೆಳೆಸುವುದು – ಇವುಗಳಲ್ಲಿ ಈ ಮಂಡಳಿಗಳು ಮಾಡಿರುವ ಸಾಧನೆಯನ್ನು ಅಲ್ಲಗಳೆಯಲಾಗುವುದಿಲ್ಲ.

ತಮ್ಮ ಒಳಿತಿಗಾಗಿ ಹಳ್ಳಿಯ ಹೆಂಗಸರು ಒಟ್ಟಿಗೆ ಕಲೆಯುವುದು, ಅವುಗಳಿಂದ ಒದಗುವ ನೇರವಾದ ಉಪಯೋಗಗಳಲ್ಲದೆ, ಅವರ ಮನಸ್ಸಿನ ಮೇಲೂ ಪರಿಣಾಮವನ್ನು ಬೀರುತ್ತದೆ. ತಾವು ಅಸಹಾಯಕರಾಗಿ ಗಂಡಸರ ನೆರಳಾಗಿ ನಡೆಸುತ್ತಿದ್ದ ಪರಾವಲಂಬಿ ಜೀವನಕ್ಕೆ ಬದಲಾಗಿ ಈಗ ತಾವೂ ತಮಗಾಗಿ, ತಮ್ಮ ಕುಟುಂಬಕ್ಕಾಗಿ ಮತ್ತು ಸಮುದಾಯಕ್ಕಾಗಿ ಉಪಯುಕ್ತರಾಗುವಂತಹ ಅವಕಾಶವನ್ನು ಪಡೆದು, ತೃಪ್ತ ಜೀವನವನ್ನು ನಡೆಸಬಹುದು ಎಂಬುದನ್ನು ಈ ಮಹಿಳೆಯರು ಮನದಟ್ಟು ಮಾಡಿಕೊಳ್ಳುತ್ತಾರೆ.

ಸಮುದಾಯ ಅಭಿವೃದ್ಧಿ ಕಾರ್ಯಕ್ರಮವು ರೈತರ ಸಾಲದ ಅಗತ್ಯಗಳನ್ನು ಸಮಗ್ರವಾಗಿ ಪೂರೈಸುವ ಉದ್ದೇಶಗಳನ್ನು ಹೊಂದಿದೆ. ಈ ದೃಷ್ಟಿಯಿಂದ, ರಾಜ್ಯದಲ್ಲಿ ಸುಮಾರು 10 ಲಕ್ಷ ಸದಸ್ಯರನ್ನುಳ್ಳ ವಿವಿಧ ಬಗೆಯ 9000 ಸಹಕಾರ ಸಂಘಗಳನ್ನು ಈಗಾಗಲೇ ಸ್ಥಾಪಿಸಲಾಗಿದೆ.

**ಎ. ಮೀನುಗಾರಿಕೆಯ ಅಭಿವೃದ್ಧಿ:**

ರಾಜ್ಯಗಳ ಪುನರ್ವಿಂಗಡಣೆಯಾದ ಮೇಲೆ, ರಾಜ್ಯಕ್ಕೆ ಹಲವಾರು ಒಳನಾಡು ಜಲಮೂಲಗಳನ್ನೂ ಒಳಗೊಂಡು ಸುಮಾರು 200 ಮೈಲಿಗಳಷ್ಟಿರುವ ಕರಾವಳಿಯನ್ನು ದೊರೆತಿದೆ. ಆದ್ದರಿಂದ ರಾಜ್ಯಗಳ ಪುನರ್ವಿಂಗಡಣೆಯಾದಮೇಲೆ ಮೈಸೂರು ರಾಜ್ಯದಲ್ಲಿ ಮೀನುಗಾರಿಕೆಗೆ ಮಹತ್ವವು ಸಿಕ್ಕಿದೆ. ಈ ಕ್ಷೇತ್ರದ ಅಭಿವೃದ್ಧಿಗಾಗಿ ತೆಗೆದುಕೊಂಡಿರುವ ಮೊದಲ ಹೆಜ್ಜೆಯೆಂದರೆ, ರಾಜ್ಯದಲ್ಲಿ 69 ಲಕ್ಷ ರೂ.ಗಳ ವೆಚ್ಚದಲ್ಲಿ ಮೀನುಗಾರಿಕೆಯ ಯೋಜನೆಯನ್ನು ಸಿದ್ಧಪಡಿಸಿರುವುದು. ರಾಜ್ಯವು ತೆಗೆದುಕೊಂಡ ಮುಂದಿನ ಕ್ರಮವೆಂದರೆ, ಪರಿಷ್ಕೃತ ಯೋಜನೆಯನ್ನು ಜಾರಿಗೊಳಿಸುವ ಸಲುವಾಗಿ ತಾಂತ್ರಿಕ ನಿರ್ದೇಶಕರೊಬ್ಬರ ನೇತೃತ್ವದಲ್ಲಿ ಮೀನುಗಾರಿಕೆಗಾಗಿಯೇ ಹೊಸ ಇಲಾಖೆಯೊಂದನ್ನು ತೆರೆದಿರುವುದು. ಇದನ್ನು 1957–58ರಲ್ಲಿ ಮಾಡಲಾಯಿತು ಮತ್ತು ಅಂದಿನಿಂದ ಮೀನುಗಾರಿಕೆಯ ಅಭಿವೃದ್ಧಿಗಾಗಿ ಪ್ರಾಮಾಣಿಕವಾದ ಗಮನವನ್ನು ನೀಡಲಾಗುತ್ತಿದೆ.

**ಬಿ. ಒಳನಾಡು ಮೀನುಗಾರಿಕೆ:**

ಮೀನುಗಳನ್ನು ಸಾಕಲು, ಮೀನುಗಳ ಸಂತಾನವನ್ನು ಹೆಚ್ಚಿಸಲು ಸೌಲಭ್ಯಗಳನ್ನು ಒದಗಿಸುವ ಸಲುವಾಗಿ ಮೀನುಗಳ ಅಭಿವೃದ್ಧಿಕೇಂದ್ರಗಳನ್ನು ರಾಜ್ಯದ ಸೂಕ್ತ ಸ್ಥಳಗಳಲ್ಲಿ ನಿರ್ಮಿಸಲಾಗಿದೆ.

ಮೀನುಗಳು ಕೃತಕರೀತಿಯಲ್ಲಿ ಸಂತಾನಾಭಿವೃದ್ಧಿಯನ್ನು ಮಾಡುವಂತೆ ಅವುಗಳಿಗೆ, ವಿಶೇಷವಾಗಿ, ಗಂಗಾನದಿಯಲ್ಲಿನ ಸಿಹಿನೀರು ಮೀನುಗಳಿಗೆ ಪಿಟ್ಯೂಟರಿ ಹಾರ್ಮೋನುಗಳನ್ನು ನೀಡಲಾಗುತ್ತಿದೆ.

**ಸಿ. ತೋಟಗಾರಿಕೆ:**

ನಮ್ಮ ರಾಜ್ಯದಲ್ಲಿ ಹಣ್ಣುಗಳು, ತರಕಾರಿಗಳು ಮತ್ತು ಹೂವುಗಳು ಮೊದಲಾದ ತೋಟಗಾರಿಕೆಯ ಉತ್ಪನ್ನಗಳಿಗೆ ಬೇಡಿಕೆಯು ಏರುತ್ತಲೇ ಇರುವುದರಿಂದ, ತೋಟಗಾರಿಕೆಯ ಅಭಿವೃದ್ಧಿ ಕಾರ್ಯಕ್ರಮವು ನಮ್ಮ ಆರ್ಥಿಕತೆಯಲ್ಲಿ ಬಹುಮುಖ್ಯ ಪಾತ್ರವನ್ನು ವಹಿಸುತ್ತದೆ.

ಎರಡನೆಯ ಪಾಂಚವಾರ್ಷಿಕ ಯೋಜನೆಯ ಅವಧಿಯಲ್ಲಿ ಮೈಸೂರು ರಾಜ್ಯದ ತೋಟಗಾರಿಕೆಯಲ್ಲಿ ಅದ್ಭುತವಾದ ಪ್ರಗತಿಯು ಸಾಧ್ಯವಾಯಿತು.

ತೋಟಗಾರಿಕಾ ಇಲಾಖೆಯು ಹಣ್ಣುಗಳು ಮತ್ತು ತರಕಾರಿಗಳ ಹೊಸ ಹೊಸ ತಳಿಗಳನ್ನು ಪರಿಚಯಿಸಿತು, ಹೊಸ ತೋಟಗಳನ್ನು ಮಾಡಿಕೊಳ್ಳಲು ರೈತರಿಗೆ ಸಹಾಯವನ್ನು ನೀಡಿತು ಮತ್ತು ಗಿಡಗಳನ್ನು ನೆಡಲು ಮತ್ತು ಬೀಜಗಳನ್ನು ಬಿತ್ತಲು ಅವರಿಗೆ ದೋಷಮುಕ್ತವಾದ ಸಲಕರಣೆಗಳನ್ನು ಒದಗಿಸುವ ಏರ್ಪಾಟನ್ನು ಮಾಡಿತು, ಕೃಷಿಯ ವಿಧಾನಗಳನ್ನು, ಕಳೆ ಮತ್ತು ಕೀಟಗಳ ನಾಶಕ್ಕೆ ಅಗತ್ಯವಾದ ಜ್ಞಾನವನ್ನು ರೈತರಿಗೆ ಒದಗಿಸಿತು. ಇದಲ್ಲದೆ, ಅವರಿಗಾಗಿ ಪ್ರಾತ್ಯಕ್ಷಿಕೆಗಳನ್ನು ಏರ್ಪಡಿಸಿತು. ತನ್ನ ತೋಟಗಾರಿಕಾ ಅಭಿವೃದ್ಧಿ ಕಾರ್ಯಕ್ರಮದ ಬಹುಪಾಲನ್ನು ರಾಷ್ಟ್ರೀಯ ಉದ್ಯೋಗ ಯೋಜನೆ ಹಾಗೂ ಸಮುದಾಯ ಅಭಿವೃದ್ಧಿ ವಿಭಾಗಗಳು ಜಾರಿಯಲ್ಲಿರುವ ಪ್ರದೇಶಗಳಲ್ಲಿ ನಡೆಸಿತು.

ತೋಟಗಾರಿಕೆಯ ಇಲಾಖೆಯ ಈ ಎಲ್ಲಾ ಪ್ರಯತ್ನಗಳಿಂದ ರಾಜ್ಯದಲ್ಲಿ ಹಣ್ಣು, ಹೂವು ಮತ್ತು ತರಕಾರಿಗಳನ್ನು ಬೆಳೆಯುವ ತೋಟಗಳ ಅಂದಾಜು ವಿಸ್ತೀರ್ಣವು ಈಗ 30,000 ಎಕರೆಗಳನ್ನು ಮುಟ್ಟಿದೆ.

ತುಂಗಭದ್ರಾ ತೋಟಗಾರಿಕಾ ಅಭಿವೃದ್ಧಿ ಯೋಜನೆಯ ಅಡಿಯಲ್ಲಿ, 5,000 ಎಕರೆ ಜಮೀನಿನಲ್ಲಿ ತೋಟಗಾರಿಕೆಯ ಬೆಳೆಯನ್ನು ಬೆಳೆಯಲಾಗುತ್ತಿದೆ. ಇದೇ ಯೋಜನೆಯ ಅಡಿಯಲ್ಲಿ 88 ಫಲ ಪ್ರಾತ್ಯಕ್ಷಿಕಾ ಕೇಂದ್ರಗಳನ್ನು ಏರ್ಪಡಿಸಲಾಗಿತ್ತು. 43,000 ಹಣ್ಣಿನ ಮತ್ತು ಇತರ ಆರ್ಥಿಕ ಪ್ರಾಮುಖ್ಯವುಳ್ಳ ಗಿಡಗಳನ್ನು ಸರಬರಾಜು ಮಾಡಲಾಯಿತು. ಇದಲ್ಲದೆ, 2 ಲಕ್ಷ ತರಕಾರಿ ಸಸಿಗಳನ್ನು ಯೋಜನಾ ಕ್ಷೇತ್ರದಲ್ಲಿನ ರೈತರಿಗೆ ಕೊಡಲಾಗಿದೆ.

ಬಯಲುಸೀಮೆ ತರಕಾರಿಗಳ, ದ್ರಾಕ್ಷಿಯನ್ನೂ ಒಳಗೊಂಡಂತೆ ಎಲ್ಲಾ ಹಣ್ಣುಗಳ ಮತ್ತು ಹೂವುಗಳ ಬೆಳೆಯನ್ನು ಉತ್ತಮಪಡಿಸಲು ಇನ್ನೂ ಹಲವು ಯೋಜನೆಗಳಿವೆ

ಈಗ ನಡೆಯುತ್ತಿರುವ ಸಮುದಾಯ ಅಭಿವೃದ್ಧಿ ಕಾರ್ಯಕ್ರಮದ ಅಗಾಧತೆಯನ್ನು ನಿಮ್ಮ ಗಮನಕ್ಕೆ ತರುವಲ್ಲಿ, ಸಮಯಾಭಾವವಿರುವುದರಿಂದ, ನಾನು ಅದರ ಸಂಕ್ಷೇಪ ರೂಪವನ್ನು ಮಾತ್ರ ನಿಮ್ಮ ಮುಂದೆ ಇರಿಸಿದ್ದೇನೆ. ಆದರೂ, ಈ ಕಾರ್ಯಕ್ರಮಗಳು ದೇಶದ ದೈತ್ಯಪ್ರಮಾಣದ ಸಮಸ್ಯೆಗಳಾದ ಬಡತನ, ಕಾಯಿಲೆ, ಅಜ್ಞಾನ ಮತ್ತು ನಿರುದ್ಯೋಗಗಳನ್ನೆಲ್ಲಾ ನಿವಾರಿಸಿ ಜನತೆಯ ಜೀವನದ ಗುಣಮಟ್ಟವನ್ನು ಮೇಲೆತ್ತುವ ಕಾರ್ಯದಲ್ಲಿ ಕೆಲ ಮಟ್ಟಿಗೆ ಮಾತ್ರ

ಸಹಾಯಮಾಡಬಲ್ಲವು. ಹಲವು ಅಭಿವೃದ್ಧಿ ಚಟುವಟಿಕೆಗಳಿಗೆ ಅಗತ್ಯವಾದ ಸಹಕಾರಗಳನ್ನು ಪಟ್ಟಿಮಾಡಿ, ಜನರನ್ನು ಸ್ವಾವಲಂಬಿಗಳನ್ನಾಗಿ ಮಾಡುವುದು ಸಮುದಾಯ ಅಭಿವೃದ್ಧಿ ಕಾರ್ಯಕ್ರಮದ ಮುಖ್ಯ ಗುರಿಯಾಗಿದೆ. ಇಲ್ಲಿ ಸಾಧಿಸುವ ಕೆಲಸಗಳಿಗಿಂತ, ಧನ ಮತ್ತು ಶ್ರಮದ ರೂಪದಲ್ಲಿ ನೀಡುವ ಕಾಣಿಕೆಯು ಸಮುದಾಯ ಅಭಿವೃದ್ಧಿ ಕಾರ್ಯಕ್ರಮಗಳಲ್ಲಿ ಹೆಚ್ಚಿನ ಪ್ರಾಮುಖ್ಯವನ್ನು ಹೊಂದಿರುತ್ತದೆ. ಈ ಕಾರ್ಯಕ್ರಮಕ್ಕೆ ಅದರ ಪ್ರಾರಂಭದ ದಿನದಿಂದ 1960ರ ಜೂನ್ ಕೊನೆಯವರೆಗೆ ಜನರಿಂದ ಸಂದಾಯವಾಗಿರುವ ಕಾಣಿಕೆಯು 181.90 ಲಕ್ಷ ರೂಗಳಾಗಿದ್ದು, ಇದು ಸರಕಾರದ ಒಟ್ಟು ಖರ್ಚಿನ ಶೇ. 20.81ರಷ್ಟಾಗುತ್ತದೆ. ಈ ಸಾಧನೆಯು ಪ್ರಶಂಸನೀಯವಾದುದಾದರೂ, ತನ್ನ ಮೂಲ ಉದ್ದೇಶಗಳನ್ನು ಸಾಧಿಸಲು ಸಮುದಾಯ ಅಭಿವೃದ್ಧಿ ಕಾರ್ಯಕ್ರಮಗಳಿಗೆ ಭವಿಷ್ಯದಲ್ಲಿ ಅಗತ್ಯವಾಗಿರುವ ಅಗಾಧವಾದ ಹಣದ ಮೊತ್ತಕ್ಕೆ ಸಾರ್ವಜನಿಕರು ನೀಡಬೇಕಾದ ಸಹಾಯಕ್ಕೆ ಹೋಲಿಸಿದಾಗ ಈಗ ನಾವು ಸಾರ್ವಜನಿಕರಿಂದ ಪಡೆದುಕೊಂಡಿರುವ ಮೊತ್ತವು ಹೇಳಿಕೊಳ್ಳುವಂತಹುದೇನೂ ಇಲ್ಲ ಎಂಬುದನ್ನು ನೀವು ಗಮನಿಸಬಹುದು.

ಇದೇ ಸಂದರ್ಭದಲ್ಲಿ ಒಂದು ವಿಷಯವನ್ನು ಹೇಳಿದರೆ ಅದು ಸಂದರ್ಭಕ್ಕೆ ವಿರೋಧವಾಗುವುದಿಲ್ಲವೆಂದು ತಿಳಿದಿದ್ದೇನೆ. ಇತ್ತೀಚಿನ ಹಿಂದುಳಿದ ವರ್ಗಗಳ ಖಾತೆಯ ಸಚಿವರುಗಳ ಸಮಾವೇಶವು ದೆಹಲಿಯಲ್ಲಿ ಜರುಗಿತು. ಅದರಲ್ಲಿ ಹಾಜರಿರುವ ಯೋಗವು ನನ್ನದಾಗಿತ್ತು. ಅದರಲ್ಲಿ ಬಹಳ ದೂರಗಾಮಿ ಪ್ರಭಾವವನ್ನು ಬೀರುವ ಕೆಲವು ನಿರ್ಣಯಗಳನ್ನು ತೆಗೆದುಕೊಳ್ಳಲಾಯಿತು. ಅವುಗಳನ್ನು ರಾಜ್ಯ ಸರಕಾರಗಳು ಸಂಪೂರ್ಣವಾಗಿ ಅನುಸರಿಸಿದರೆ, ಇಡೀ ರಾಷ್ಟ್ರದಲ್ಲಿ ಹಿಂದುಳಿದ ವರ್ಗಗಳವರಿಗೆ ಸಾಕಷ್ಟು ಅನುಕೂಲಗಳು ದೊರಕುತ್ತವೆ.

ಅಲ್ಲಿ ತೆಗೆದುಕೊಂಡ ಮುಖ್ಯವಾದ ನಿರ್ಣಯಗಳಲ್ಲಿ ಒಂದು -- ಈಗ ಕೇಂದ್ರ ಹಾಗೂ ರಾಜ್ಯ ಸರಕಾರಗಳು ತಮ್ಮ ಸಮಾಜ ಕಲ್ಯಾಣ ಇಲಾಖೆಯ ಮೂಲಕ ನೀಡುತ್ತಿರುವ ಸೌಲಭ್ಯಗಳ ಜೊತೆಗೆ, ಸರಕಾರದ ಎಲ್ಲಾ ಅಭಿವೃದ್ಧಿ ಇಲಾಖೆಗಳ ಯೋಜಿತ ಬಜೆಟ್‌ನಲ್ಲಿ ಒಂದು ಪಾಲನ್ನು ಹಿಂದುಳಿದ ವರ್ಗಗಳವರ ಅನುಕೂಲಕ್ಕೆಂದೇ ಪ್ರತ್ಯೇಕವಾಗಿ ತೆಗೆದಿರಿಸಬೇಕು. ಅಂದರೆ, ಈ ವರ್ಗದ ಜನರು,

ಇತರರೊಡನೆ ಎಲ್ಲಾ ಯೋಜನೆಯ ಲಾಭವನ್ನೂ ಹಂಚಿಕೊಳ್ಳುವುದರ ಜೊತೆಗೆ, ಎಲ್ಲಾ ಯೋಜನೆಗಳಲ್ಲಿಯೂ, ಅವರು ಆರ್ಥಿಕವಾಗಿ, ಸಾಮಾಜಿಕವಾಗಿ ಮತ್ತು ಶೈಕ್ಷಣಿಕವಾಗಿ ಹಿಂದುಳಿದಿರುವುದರಿಂದ, ವಿಶೇಷ ಪಾಲನ್ನು ಕೂಡ ಪಡೆಯಬಹುದು.

ಸ್ವಾತಂತ್ರ್ಯವು ಬಂದು ಹದಿಮೂರು ವರ್ಷಗಳಾದ ನಂತರವೂ, ದುರದೃಷ್ಟದಿಂದ, ಅಖಿಲ ಭಾರತ ಹಾಗೂ ರಾಜ್ಯಮಟ್ಟದ ಸೇವಾ ಹುದ್ದೆಗಳಲ್ಲಿ, ಅದರಲ್ಲಿಯೂ ಐ.ಎ.ಎಸ್. ಮತ್ತು ಐ.ಪಿ.ಎಸ್. ಹುದ್ದೆಗಳಲ್ಲಿ, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳವರು ಪ್ರಾತಿನಿಧ್ಯವನ್ನು ಪಡೆಯುವಲ್ಲಿ ಪ್ರಗತಿಯೇನೂ ಸಾಧ್ಯವಾಗಿಲ್ಲ. ಈ ಪರಿಸ್ಥಿತಿ ಸುಧಾರಿಸಬೇಕು. ದುರ್ಬಲವರ್ಗಗಳವರ, ಅದರಲ್ಲಿಯೂ ಪರಿಶಿಷ್ಟಜಾತಿಗಳು ಮತ್ತು ಪರಿಶಿಷ್ಟ ಪಂಗಡಗಳವರ, ಉಪಯೋಗಕ್ಕಾಗಿ ಸಾಕಷ್ಟು ಹಣವನ್ನು ಮೀಸಲಿರಿಸುವಂತೆ ಎಲ್ಲಾ ಅಭಿವೃದ್ಧಿ ಇಲಾಖೆಗಳಿಗೂ ಮೈಸೂರು ಸರಕಾರವು ಸೂಚನೆಯನ್ನು ನೀಡಿದೆ.

ಸಮುದಾಯ ಅಭಿವೃದ್ಧಿ ಕಾರ್ಯಕ್ರಮಗಳ ಸಾಧನೆಯನ್ನು ಹಾಗೂ ಅದರಲ್ಲಿ ಜನತೆ ತೋರಿಸಿರುವ ಉತ್ಸಾಹ ಮತ್ತು ಆಸಕ್ತಿಗಳನ್ನು ವಿಶ್ಲೇಷಿಸಿದರೆ, ಈ ಕಾರ್ಯಕ್ರಮಗಳು ಅಧಿಕ ಆಹಾರವನ್ನು ಉತ್ಪಾದಿಸುವುದಕ್ಕೆ, ಅಧಿಕ ಉದ್ಯೋಗಗಳನ್ನು ಸೃಷ್ಟಿಸುವಲ್ಲಿ ಮತ್ತು ಜನತೆಯ ಜೀವನದ ಗುಣಮಟ್ಟವನ್ನು ಸುಧಾರಿಸುವಲ್ಲಿ ಅಪಾರ ಕಾಣಿಕೆಯನ್ನು ನೀಡಿವೆ ಎಂಬುದನ್ನು ನಿಸ್ಸಂಶಯವಾಗಿ ನೋಡಬಹುದು. ಆದರೂ, ಜನಸಂಖ್ಯಾ ಪ್ರಮಾಣದಲ್ಲಿ ಆಗುತ್ತಿರುವ ಹೆಚ್ಚಳದಿಂದ ಹಾಗೂ ಆರ್ಥಿಕ ಪರಿಸ್ಥಿತಿಯು ಉತ್ತಮಗೊಳ್ಳುತ್ತಿರುವುದರಿಂದ ಹಾಲಿ ಇರುವ ಜನರಿಂದಲೇ ಆಹಾರಕ್ಕಾಗಿ, ಜೀವನಾವಶ್ಯಕ ಸೌಲಭ್ಯಗಳಿಗಾಗಿ ಹೆಚ್ಚಿನ ಬೇಡಿಕೆಯಿರುವುದರಿಂದ ಈ ಕಾರ್ಯಕ್ರಮಗಳಿಂದ ದೇಶಕ್ಕೆ ಆಗಿರುವ ಲಾಭವು ತನ್ನ ನೈಜ ಪ್ರಮಾಣದಲ್ಲಿ ಕಾಣಿಸಿಕೊಳ್ಳುತ್ತಿಲ್ಲ. ಕೆಲವು ಪ್ರದೇಶಗಳಲ್ಲಿ ಇನ್ನೂ ಮೂಢನಂಬಿಕೆಗಳು ಜೀವಂತವಾಗಿರುವುದರಿಂದ ರೈತರು ರಾಸಾಯನಿಕ ಗೊಬ್ಬರಗಳನ್ನು ಬಳಸಲು ಮುಂದಾಗುತ್ತಿಲ್ಲ. ಇನ್ನು ಮುಂದೆ ಇಂತಹ ಮೂಢನಂಬಿಕೆಗಳು ಹೆಚ್ಚುಕಾಲ ಇರುವುದಿಲ್ಲವಾದ್ದರಿಂದ, ಇದನ್ನು ತಾತ್ಕಾಲಿಕ ಹಂತವೆಂದು ಭಾವಿಸಬಹುದು. ಇತರ ಭಾಗಗಳ ರೈತರು ರಾಸಾಯನಿಕ

ಗೊಬ್ಬರಗಳನ್ನು ಉಪಯೋಗಿಸಿ ಹೆಚ್ಚು ಬೆಳೆಯನ್ನು ತೆಗೆಯುತ್ತಿರುವುದನ್ನು ನೋಡಿದ ಮೇಲೆ ಈ ಮೂಢನಂಬಿಕೆಗಳು ಹೊರಟುಹೋಗುತ್ತವೆ.

ಜಾರಿಗೆ ಬಂದಿರುವ ಪಂಚಾಯತ್ ರಾಜ್ಯ ವ್ಯವಸ್ಥೆಯ ಮೂಲಕ ಹಳ್ಳಿಯ ಜನತೆಯ ಕೈಗೆ ಅಧಿಕಾರ ಮತ್ತು ಜವಾಬ್ದಾರಿಯನ್ನು ನೀಡಿರುವುದರಿಂದ, ಸಮುದಾಯ ಅಭಿವೃದ್ಧಿ ಕಾರ್ಯಕ್ರಮಗಳಿಗೆ ರಾಜ್ಯಾದ್ಯಂತ ಮತ್ತಷ್ಟು ಬಲವು ಬರುತ್ತದೆ ಮತ್ತು ಅಂತಿಮವಾಗಿ ಸಾಮಾಜಿಕ ಆರ್ಥಿಕತೆಯಲ್ಲಿ ಪ್ರಜಾತಾಂತ್ರಿಕ ಸಮಾಜದ ನಿರ್ಮಾಣಕ್ಕೆ ಅದು ಕಾರಣವಾಗುತ್ತದೆ.

ನೀವು ನಿಮ್ಮ ಕರ್ತವ್ಯವನ್ನು ಸೇವಾ ಮನೋಭಾವದಿಂದ ಮಾಡುವಿರಾದರೆ, ಈ ಸಮಾವೇಶದಲ್ಲಿ ಗಳಿಸುವ ಜ್ಞಾನ ಮತ್ತು ತರಬೇತಿಯು ನಿಮ್ಮ ಕರ್ತವ್ಯವನ್ನು ಸಾರ್ಥಕವಾಗಿ ಮತ್ತು ಪರಿಣಾಮಕಾರಿಯಾಗಿ ಮಾಡಲು ಸಹಕಾರಿಯಾಗುತ್ತವೆ ಎಂಬ ನಂಬಿಕೆ ನನಗಿದೆ. ನೀವು ಇತರರನ್ನು ಸಂತೋಷದಿಂದ, ತೃಪ್ತಿಯಿಂದ ಇರುವಂತೆ ನೋಡಿಕೊಂಡರೆ ನೀವೂ ಸಂತೋಷ ಮತ್ತು ತೃಪ್ತಿಯನ್ನು ಪಡೆಯುತ್ತೀರಿ ಎಂಬುದನ್ನು ನೀವು ನೆನಪಿನಲ್ಲಿ ಇಡಬೇಕು. ಇತರರನ್ನು ಸಂತೋಷದಲ್ಲಿಡಬಹುದಾದಂತಹ ಅದೃಷ್ಟ ನಿಮ್ಮದಾಗಿದೆ. ಈ ಕಾರಣದಿಂದಲೇ ನೀವೂ ಸಂತೋಷವನ್ನು ಹೊಂದಬಹುದು. ಈ ಸಮಾವೇಶವು ರಾಜ್ಯದ ಅಸಂಖ್ಯಾತ ಹಳ್ಳಿಗಳಲ್ಲಿ ಸಂತೋಷ ಮತ್ತು ತೃಪ್ತಿಯನ್ನು ಹರಡಲಿ.

## ◈ ಪಂಚಾಯತ್ ರಾಜ್ಯಗಳ ಮುಖಾಂತರ ಗ್ರಾಮಗಳ ಅಭಿವೃದ್ಧಿ

**ಅಧಿಕಾರವನ್ನು ಶೃಂಗದಿಂದ ತಳಮಟ್ಟದ ಜನತೆಗೆ ವರ್ಗಾಯಿಸುವ ಮತ್ತು ವೈಯಕ್ತಿಕ ಕುಟುಂಬಗಳಿಂದ ಮೇಲು ಮೇಲಕ್ಕೆ ಜನರಲ್ಲಿ ರಚನಾತ್ಮಕ ಸ್ಪರ್ಧೆಯ ಸ್ವಯಂಪ್ರೇರಿತ ಬೆಳವಣಿಗೆಯನ್ನು ಪ್ರೋತ್ಸಾಹಿಸುವಂತಹ ಸ್ವಯಂ ಪ್ರಚೋದಿತವಾಗಿರುವ ವ್ಯವಸ್ಥೆಯ ನಿಟ್ಟಿನಲ್ಲಿ ಪಂಚಾಯತ್ ರಾಜ್ಯವು ಒಂದು ಕ್ರಾಂತಿಕಾರಿ ಹೆಜ್ಜೆಯಾಗಿದೆ. ಪಂಚಾಯತ್ ರಾಜ್ ವ್ಯವಸ್ಥೆಯು ಪ್ರಜಾಪ್ರಭುತ್ವಕ್ಕೆ ಜನರಿಗೆ ಅಗತ್ಯವಾದ ತರಬೇತಿಯನ್ನು ತಾವೇ ಪಡೆದುಕೊಳ್ಳಲು ಅವಕಾಶವನ್ನು ಒದಗಿಸುತ್ತದೆ. ಮಂಡ್ಯ ಜಿಲ್ಲೆಯ ಮದ್ದೂರಿನಲ್ಲಿ 1961ರ ಜನವರಿ 15 ರಂದು ನಡೆದ ಪಂಚಾಯತ್ ರಾಜ್ಯದ ಮೇಲಿನ ವಿಚಾರ ಸಂಕಿರಣದ ಉದ್ಘಾಟನಾ ಭಾಷಣ ಇಲ್ಲಿದೆ.**

ಪಂಚಾಯತ್ ರಾಜ್ಯದ ಮೇಲಿನ ವಿಚಾರಸಂಕಿರಣದಂತಹ ಮಹತ್ವಪೂರ್ಣ ಹಾಗೂ ಪ್ರಾಮುಖ್ಯವಿರುವ ಸಂದರ್ಭದಲ್ಲಿ ನಿಮ್ಮೊಡನೆ ನಾನೂ ಒಬ್ಬನಾಗಿ ಭಾಗವಹಿಸುವುದಕ್ಕೆ ನನಗೆ ಅತೀವ ಸಂತೋಷವಾಗಿದೆ. ನಿಮ್ಮನ್ನು ನೀವು ಇಷ್ಟು ಉತ್ಸಾಹದಿಂದ ಈ ಹೊಸ ಸಾಹಸಕ್ಕೆ ತೆತ್ತುಕೊಂಡಿರುವುದನ್ನು ನೋಡಿದಾಗ ನನ್ನ ಸಂತೋಷ ಮತ್ತೂ ಹೆಚ್ಚಾಗುತ್ತದೆ. ಇಂದು ನಾವು ನಮ್ಮ ಮಧ್ಯದಲ್ಲಿ, ನಮ್ಮ ರಾಜ್ಯದಲ್ಲಿ ಪಂಚಾಯತ್ ರಾಜ್ಯ ವ್ಯವಸ್ಥೆಯ ಶಿಲ್ಪಿಯನ್ನೇ ಹೊಂದಿದ್ದೇವೆ. ಅವರ ಅವಿರತ ಶ್ರಮದಿಂದ ಲೇ ನಮ್ಮ ರಾಜ್ಯದಲ್ಲಿ ಪಂಚಾಯತ್ ರಾಜ್ಯವು ಬೇರುಬಿಡಲು ಸಾಧ್ಯವಾಯಿತು.

ಅಲ್ಲದೆ, ಈ ವಿಚಾರ ಸಂಕಿರಣದಲ್ಲಿ ಸಹಕಾರ ಸಂಘಗಳನ್ನು ಪಂಚಾಯತ್ ರಾಜ್ಯದ ವ್ಯವಸ್ಥೆಯಲ್ಲಿನ ಒಂದು ಅವಿಭಾಜ್ಯ ಹಾಗೂ ಪರಿಣಾಮಕಾರಿ ಅಂಗವೆಂದು ಅದರ ಸಂಪೂರ್ಣ ಪಾತ್ರದ ಮೇಲೆ ನಮ್ಮ ದೃಷ್ಟಿಯನ್ನು ಕೇಂದ್ರೀಕರಿಸುತ್ತಿರುವುದು ಒಂದು ತೃಪ್ತಿದಾಯಕವಾಗಿದೆ.

ನಾವು ಪ್ರಜಾಪ್ರಭುತ್ವದ ತತ್ತ್ವಗಳ ಆಧಾರದ ಮೇಲೆ ಜನಜೀವನದ ಮಟ್ಟವನ್ನು ಮೇಲುಮೇಲಕ್ಕೆ ಏರಿಸುವ ಪ್ರಯತ್ನದಲ್ಲಿರುವಂತಹ ಈ ಸಮಯದಲ್ಲಿ, ನಮ್ಮ

ಈ ಮಹಾನ್ ನಾಯಕರ ವಿವೇಕಯುತ ದೂರದೃಷ್ಟಿಯ ಪರಿಣಾಮದಿಂದ ಪಂಚಾಯತ್ ರಾಜ್ಯ ವ್ಯವಸ್ಥೆಯು ಹೊಮ್ಮಿ, ಅನುಷ್ಠಾನಕ್ಕೆ ಬಂದಿದೆ. ಯಾವುದೇ ಪ್ರಜಾಪ್ರಭುತ್ವ ಸರಕಾರವೆಂದರೆ, ಅದು ಜನರ ಮತ್ತು ಜನರಿಗಾಗಿ ಇರುವ ಸರಕಾರ. ಆದ್ದರಿಂದ ನಿಜವಾದ ಅಧಿಕಾರವು ಜನಗಳ ಬಳಿಯೇ ಇರಬೇಕು. ಇದನ್ನು ನಾವು ಪಂಚಾಯತ್ ರಾಜ್ಯ ವ್ಯವಸ್ಥೆಯ ಮೂಲ ಆಶಯವಾದ ಅಧಿಕಾರದ ವಿಕೇಂದ್ರೀಕರಣದ ಮೂಲಕ ಮಾತ್ರ ಸಾಧಿಸಬಹುದು. ಕೇವಲ ವಯಸ್ಕ ಮತದಾನ ಪದ್ಧತಿಯಿಂದ ಇದನ್ನು ಸಾಧಿಸಲು ಸಾಧ್ಯವಾಗುವುದಿಲ್ಲ. ಪ್ರಜಾತಂತ್ರವು ನಿಜವಾದ ಅರ್ಥದಲ್ಲಿ ಯಶಸ್ಸನ್ನು ಗಳಿಸಬೇಕಾದರೆ, ಜನತೆಯು ತಮ್ಮ ದೈನಂದಿನ ವ್ಯವಹಾರಗಳಲ್ಲಿ ಪರಿಣಾಮಕಾರಿಯಾಗಿ ಭಾಗವಹಿಸುವುದು ಬಹುಮುಖ್ಯವಾದ ಅಂಶವಾಗಿರುತ್ತದೆ. ಪಂಚಾಯತ್ ರಾಜ್ಯ ವ್ಯವಸ್ಥೆಯು ಜನತೆಯು ನೇರವಾಗಿ ತಮ್ಮ ಪ್ರಭಾವವನ್ನು ಬೀರಬಹುದಾದ ಮತ್ತು ತಮ್ಮ ಧೋರಣೆಯನ್ನು ವ್ಯಕ್ತಪಡಿಸಬಹುದಾದ ಅವಕಾಶವನ್ನು ಅವರಿಗೆ ನೀಡುತ್ತದೆ.

ಜನತೆಯ ಆವಶ್ಯಕತೆಗಳನ್ನು ಶೀಘ್ರವಾಗಿ ಪೂರೈಸಲು ಸಂಪೂರ್ಣ ಹೊಣೆಗಾರಿಕೆಯನ್ನುಳ್ಳ ಸ್ವಾಯತ್ತ ಸ್ಥಳೀಯ ಸಂಸ್ಥೆಗಳನ್ನು ರಚಿಸುವುದು ಭಾರತದ ಸಂವಿಧಾನದ ಮೂಲಭೂತ ಕಲ್ಪನೆಯಾಗಿದೆ. ಇದನ್ನು ಶಾಸನಗಳ ಮೂಲಕ ಮಾಡಬೇಕು, ಮತ್ತು ಈ ಕಾರಣದಿಂದ ಪಂಚಾಯತಿಗಳು ಕಾನೂನುಬದ್ಧ ಸಂಸ್ಥೆಗಳು. ಅದರ ಹಾಗೂ ತಾಲ್ಲೂಕು ಮಂಡಳಿಗಳ ಪದಾಧಿಕಾರಿಗಳು ಮತ್ತು ಸದಸ್ಯರು ಜನರಿಂದ ನೇರವಾಗಿ ಚುನಾಯಿತರಾಗುತ್ತಾರೆ ಮತ್ತು ಅಧಿಕಾರವನ್ನು ಜನತೆಗಾಗಿ ಮತ್ತು ಜನತೆಯ ಪರವಾಗಿ ಹೊಂದಿರುತ್ತಾರೆ.

ಇದು ನಮ್ಮ ದೇಶಕ್ಕೆ ಹೊಸದೇನೂ ಅಲ್ಲ. ಆದರೆ ಇದರಲ್ಲಿನ ಹೊಸತನವೆಂದರೆ, ಅದರ ನ್ಯಾಯಬದ್ಧವಾಗಿ ಹಾಗೂ ವೈಜ್ಞಾನಿಕ ತಳಹದಿಯಮೇಲೆ ಆಗಿರುವ ಅದರ ರಚನೆ ಹಾಗೂ ಈಗಿನ ದಿನಗಳಿಗೆ ತಕ್ಕಂತೆ ಅದಕ್ಕೆ ನೀಡಿರುವ ಅಧಿಕಾರ ಮತ್ತು ಹೊಣೆಗಾರಿಕೆ. ಆದರೆ ಅದರ ನಾವೀನ್ಯವು ಇರುವುದು ಕೇವಲ ಅದು ತನ್ನ ದೈನಂದಿನ ಆಡಳಿತವನ್ನು ನೋಡಿಕೊಳ್ಳುವುದರಲ್ಲಿ ಮಾತ್ರ ಇರುವುದಿಲ್ಲ, ಬದಲಿಗೆ, ರಾಷ್ಟ್ರೀಯ ಯೋಜನೆಯ ಅಡಿಯಲ್ಲಿ ತನ್ನಗುರಿಗಳನ್ನು ನಿಗದಿಪಡಿಸುವುದರಲ್ಲಿ, ಅದರ ಸಾಧನೆಯ ಮಾರ್ಗವನ್ನು

ರಚಿಸಿ ಅದರಲ್ಲಿ ನಡೆಯುವಂತೆ ಮಾಡುವುದರಲ್ಲಿ ಹಾಗೂ ಆ ಗುರಿಯನ್ನು ಸಾಧಿಸುವುದರಲ್ಲಿ ಇದೆ. ಇದೇ ತೊಂದರೆಯಿರುವ ಜಾಗ. ಸ್ಥಳೀಯ ಮುಖಂಡತ್ವದ ಸತ್ವಪರೀಕ್ಷೆ ನಡೆಯುವುದು ಇಲ್ಲಿಯೇ. ಅವರು ಇಲ್ಲಿ ಗಳಿಸುವ ಯಶಸ್ಸಿನ ಮೇಲೆ ಮತ್ತು ಅವರ ಮುಖಂಡತ್ವದ ಮೇಲೆ ನಮ್ಮ ದೇಶದ ಸಂಸದೀಯ ಪ್ರಜಾಪ್ರಭುತ್ವವು ನಿಂತಿರುತ್ತದೆ. ಆದ್ದರಿಂದಲೇ, ಇದಕ್ಕೆ ಹೊಣೆಗಾರಿಕೆಯನ್ನು ಹೊತ್ತಿರುವವರು ಸದಾಕಾಲ ಎಚ್ಚರವಾಗಿರಬೇಕಾಗಿರುವುದು ಮತ್ತು ಸತತವಾಗಿ ಶ್ರಮಪೂರ್ಣ ದುಡಿಮೆ ಮಾಡಬೇಕಾದುದು ಅಗತ್ಯ.

ಒಂದು ದೇಶವು ಸರಿಯಾದ ದಾರಿಯಲ್ಲಿ ಪ್ರಗತಿಯನ್ನು ಸಾಧಿಸಬೇಕಾದರೆ, ಅದು ಸ್ಥಳೀಯ ಸ್ವಾಯುತ್ತ ಸಂಸ್ಥೆಗಳಿರುವ ವ್ಯವಸ್ಥೆಯನ್ನು ಹೊಂದಿರಲೇಬೇಕು. ಅಷ್ಟೇ ಮುಖ್ಯವಾದದ್ದು ಸಹಕಾರಸಂಘಗಳ ಪಾತ್ರ. ನಾನು ಸಂದರ್ಶಿಸುವ ಅವಕಾಶಗಳನ್ನು ಪಡೆದಿದ್ದ ಕೆಲವು ಪಾಶ್ಚಿಮಾತ್ಯ ದೇಶಗಳಲ್ಲಿ ಸಹಕಾರಸಂಘಗಳು ರಾಷ್ಟ್ರ ಆರ್ಥಿಕತೆಯಲ್ಲಿ ಪ್ರಮುಖ ಪಾತ್ರವನ್ನು ವಹಿಸುತ್ತವೆ. ನಮ್ಮ ದೇಶದಲ್ಲಿನ ಸಹಕಾರ ಸಂಘಗಳ ವಿಷಯದಲ್ಲಿ ಚೇತೋಹಾರಿಯಾದ ಅಂಶವೆಂದರೆ, ಅವುಗಳು ನಿಜವಾದ ಅರ್ಥದಲ್ಲಿ ಸ್ವಯಂಪ್ರಚೋದಿತವಾದವುಗಳು. ಕೆಲವು ದೇಶಗಳಲ್ಲಿರುವಂತೆ, ನಮ್ಮ ದೇಶದ ಸಹಕಾರಿ ಸಂಘಗಳಲ್ಲಿ ಬಲವಂತವಾಗಲೀ ಮೇಲಿನವರ ಒತ್ತಡವಾಗಲೀ ಇರುವುದಿಲ್ಲ. ಇಲ್ಲಿ, ಯಾವುದೇ ವ್ಯಕ್ತಿಯಾದರೂ ಈ ಸಹಕಾರೀ ಸಂಘಗಳಿಗೆ ಸೇರದೆ ಹೊರಗುಳಿಯಬಹುದು ಅಥವಾ ತನ್ನ ಸ್ವಂತ ಇಚ್ಛೆಯಿಂದ ಅದರಲ್ಲಿ ತಾನೂ ಸೇರಿಕೊಳ್ಳಬಹುದು. ಏಕೆಂದರೆ, ಗಾಂಧೀಜಿಯವರು ಹೇಳುತ್ತಿದ್ದ 'ನಮ್ಮ ಗುರಿಯಷ್ಟೇ ನಮ್ಮ ಸಾಧನ–ಮಾರ್ಗಗಳೂ ಪವಿತ್ರವಾಗಿರಬೇಕು' ಎಂಬ ತತ್ತ್ವಕ್ಕೆ ನಾವು ಬದ್ಧರಾಗಿದ್ದೇವೆ.

ವಿಮಾಯೋಜನೆ, ಗೃಹಭತ್ಯೆ, ಮತ್ತಿತರ ಭತ್ಯೆ, ಇವುಗಳಲ್ಲದೆ ನೌಕರಿಯಲ್ಲಿನ ಅವಿಚ್ಛಿನ್ನತೆ ಮತ್ತು ಅಪಘಾತಗಳ ವಿರುದ್ಧ ಪರಿಹಾರ – ಈ ಎಲ್ಲಾ ಸೌಲಭ್ಯಗಳಿವೆ. ಅವನ ದುಡಿಮೆಯ ಅವಧಿಯು ನಿಗದಿತವಾಗಿರುತ್ತದೆ. ಹೆಚ್ಚಿನ ವೇಳೆ ದುಡಿದರೆ, ಅವನಿಗೆ ಅದಕ್ಕೆ ಪ್ರತ್ಯೇಕ ಭತ್ಯಸಿಗುತ್ತದೆ. ಆದರೆ, ಕೃಷಿಕಾರ್ಮಿಕರ ಪಾಡು ಏನಾಗಿದೆ? ಅವರು ಬೆಳಗಿನಿಂದ ಸಂಜೆಯವರೆಗೂ ದುಡಿದರೂ, ಅವರಿಗೆ ಸಿಗುವುದು ಅವರ ಎರಡು ಹೊತ್ತಿನ ಊಟಕ್ಕೂ ಸಾಲದಷ್ಟಿರುತ್ತದೆ. ಸಂವಿಧಾನದ

23ನೆಯ ವಿಧಿಯು ಮಾನವರ ವಿಕ್ರಯವನ್ನು ಮತ್ತು ಎಲ್ಲಾ ವಿಧದ ಬಲವಂತದ ದುಡಿಮೆಯನ್ನು ನಿಷೇಧಿಸಿದ್ದರೂ, ಪರಿಸ್ಥಿತಿಯಲ್ಲಿ ಯಾವ ಸುಧಾರಣೆಯೂ ಕಂಡುಬರದಿರುವುದು ದುರ್ದೈವದ ಸಂಗತಿಯಾಗಿದೆ. ಅವರಿಗೆ ಸಿಗುತ್ತಿರುವ ವೇತನವೂ ಅತ್ಯಲ್ಪ. ಇಂದು ನಮ್ಮೊಡನಿರುವ ನನ್ನ ಸನ್ಮಿತ್ರರಾದ ಕಾನೂನು ಸಚಿವರು ಅಗತ್ಯವಾದ ಶಾಸನವನ್ನು ನಮಗೆ ಸಿದ್ಧಪಡಿಸಿಕೊಟ್ಟಿದ್ದಾರೆ. ಆದರೆ ಅದರ ಅನುಷ್ಠಾನ ಎಲ್ಲಿಯವರೆಗೆ ಆಗಿದೆ? ನಮ್ಮ ಜನತೆಯಲ್ಲಿನ ಬಹುಭಾಗ ಕೃಷಿಕಾರ್ಮಿಕರು. ವಾಸ್ತವವಾಗಿ ದೇಶದ ಸಂಪತ್ತಿನ ಉತ್ಪಾದನೆಯಾಗುತ್ತಿರುವುದು ಅವರಿಂದ. ಸಂವಿಧಾನದ 43ನೆಯ ವಿಧಿಯು ಹೀಗೆ ಹೇಳುತ್ತದೆ: 'ಸರಕಾರವು ಸೂಕ್ತ ಕಾನೂನಿನ ಮೂಲಕವಾಗಲೀ, ಆರ್ಥಿಕ ವ್ಯವಸ್ಥೆಯ ಮೂಲಕವಾಗಲೀ, ಅಥವಾ ಇನ್ನಾವುದೇ ರೀತಿಯಲ್ಲಾಗಲೀ, ಕೃಷಿ, ಕೈಗಾರಿಕೆ ಅಥವಾ ಇನ್ನಾವುದೇ ಕಾರ್ಮಿಕರಿಗೆ ಕೆಲಸ, ಜೀವನ ನಿರ್ವಹಣೆಗೆ ಸಾಲುವಷ್ಟು ವೇತನ, ಕೆಲಸದ ವಾತಾವರಣ, ಸಾಕಷ್ಟು ವಿರಾಮ, ಸಾಂಸ್ಕೃತಿಕ ಅವಕಾಶಗಳು, ಇತ್ಯಾದಿಗಳು ದೊರಕುವ ಹಾಗೆ ಮತ್ತು ವಿಶೇಷವಾಗಿ ವೈಯಕ್ತಿಕ ಅಥವಾ ಸಹಕಾರಿ ಸಂಘಗಳ ಮಟ್ಟದಲ್ಲಿ ಕುಟೀರ ಕೈಗಾರಿಕೆಗಳು ಅಭಿವೃದ್ಧಿಯನ್ನು ಹೊಂದುವ ಹಾಗೆ ಪ್ರಯತ್ನಪಡಬೇಕು.' ನಮ್ಮ ದೇಶದ ಬಹುಪಾಲು ಜನರು ಕೃಷಿಕಾರ್ಮಿಕರಿರಬಹುದು ಅಥವಾ ಕೈಗಾರಿಕಾ ಕಾರ್ಮಿಕರಿರಬಹುದು, ಅವರೇ ನಮ್ಮ ಮತದಾತರು. ಅವರಿಗೆ ನಾವು ಜವಾಬ್ದಾರರಾಗಿರಬೇಕು. ನಾವು ಈ ಸಾಂವಿಧಾನಿಕ ಸವಲತ್ತುಗಳನ್ನು ಜಾರಿಗೊಳಿಸದೆ ಇದ್ದಲ್ಲಿ, ಮತ್ತು ನಮ್ಮ ಜನತೆಯ ಆರ್ಥಿಕ ಮತ್ತು ಸಾಮಾಜಿಕ ಸ್ಥಿತಿಗತಿಗಳನ್ನು ತ್ವರಿತವಾಗಿ ಸುಧಾರಿಸದೇ ಹೋದಲ್ಲಿ, ಸಂಸದೀಯ ಪ್ರಜಾಪ್ರಭುತ್ವದ ಭವಿಷ್ಯವು ನಮ್ಮ ದೇಶದಲ್ಲಿ ಸುಭದ್ರವಾಗಿರುವುದಿಲ್ಲ. ಅವರ ಪರಿಸ್ಥಿತಿಯನ್ನು ಸುಧಾರಿಸಬೇಕಾದರೆ ಅವರು ಕೃಷಿವಿಧಾನಗಳು, ಪಶುಸಂಗೋಪನೆ, ತೋಟಗಾರಿಕೆ ಮತ್ತು ಒಳನಾಡು ಮೀನುಗಾರಿಕೆ ಇವುಗಳಲ್ಲಿಆಧುನಿಕ ಪದ್ಧತಿಗಳನ್ನು ಅನುಸರಿಸುವಂತೆ ನಾವು ಅವರ ಮನಸ್ಸನ್ನು ತಿದ್ದಬೇಕು. ಹಾಗೆ ಮಾಡಿದರೆ, ಅವರು ಈ ಪದ್ಧತಿಗಳನ್ನು ಅನುಸರಿಸಿ ಉತ್ಪಾದನೆ ಹಾಗೂ ಅದರ ಗುಣಮಟ್ಟವನ್ನು ಹೆಚ್ಚಿಸಿ ನಮ್ಮ ಆಹಾರ ಸಮಸ್ಯೆಯನ್ನು ಬಗೆಹರಿಸಲು ನಮಗೆ ಸಹಾಯವನ್ನು ಮಾಡಬಹುದು. ರಷ್ಯಾದಲ್ಲಿ ಒಂದು ಹಸುವು ದಿನಕ್ಕೆ ನಲವತ್ತರಿಂದ ಐವತ್ತು ಸೇರು ಹಾಲನ್ನು ಕರೆಯುವುದನ್ನು ನಾನು ನೋಡಿದ್ದೇನೆ. ನಾವು ನಮ್ಮ ಹಸುಗಳ ತಳಿಯನ್ನು ಅಭಿವೃದ್ಧಿಪಡಿಸಲು

ಸಾಧ್ಯವಿರುವ ಎಲ್ಲಾ ಪ್ರಯತ್ನವನ್ನೂ ಮಾಡಬೇಕು. ಹೀಗೆ ಮಾಡಿದರೆ ಮಾತ್ರ ಮಕ್ಕಳೂ ಸೇರಿದಂತೆ ನಮ್ಮೆಲ್ಲಾ ಜನತೆಯ ಸಮತೂಕದ ಆಹಾರಕ್ಕಾಗಿ ಸಾಕಷ್ಟು ಹಾಲನ್ನು ಪಡೆಯಬಹುದು. ಇದರಿಂದ ಅಪೌಷ್ಟಿಕತೆಯ ತಾಂಡವವನ್ನು ಹೊಡೆದೋಡಿಸಬಹುದು. ವಾಸ್ತವವಾಗಿ, ಸಂವಿಧಾನದ 47ನೆಯ ವಿಧಿಯ ಅಡಿಯಲ್ಲಿ 'ಪೌಷ್ಟಿಕತೆಯ ಪ್ರಮಾಣವನ್ನು ಹೆಚ್ಚಿಸುವುದನ್ನು ಮತ್ತು ತನ್ನ ನಾಗರಿಕರ ಜೀವನದ ಮಟ್ಟವನ್ನು ಏರಿಸುವುದನ್ನು, ಸಾರ್ವಜನಿಕ ಆರೋಗ್ಯಕ್ಕೆ ಹೆಚ್ಚಿನ ಗಮನವನ್ನು ನೀಡುವುದನ್ನು ಸರಕಾರವು ತನ್ನ ಪ್ರಾಥಮಿಕ ಕರ್ತವ್ಯಗಳಲ್ಲಿ ಒಂದೆಂದುಭಾವಿಸಬೇಕು.' ಎಂದು ಹೇಳಿದೆ. ಗ್ರಾಮಾಂತರ ಪ್ರದೇಶಗಳ ಜನರಿಗೆ ಹೆಚ್ಚಿನ ಉದ್ಯೋಗಾವಕಾಶಗಳನ್ನು ನೀಡಬಲ್ಲ ಪೂರಕ ಕೈಗಾರಿಕೆಗಳನ್ನು ಸ್ಥಾಪಿಸಲು ಅವಕಾಶಗಳನ್ನು ಸಂವಿಧಾನವು ನೀಡಿದೆ. ನಮ್ಮ ಕಲ್ಪನೆಯ ಕಲ್ಯಾಣ ರಾಜ್ಯವು ತೃಪ್ತ ಹಾಗೂ ಸಮಾನಸ್ಕಂಧರಾಗಿರುವಂತಹವರಿಂದ ಕೂಡಿದ ಸಮಾಜವಾಗಿದೆ.

ಆದ್ಯತೆಗಾಗಿ ತಗಾದೆಮಾಡುತ್ತಿರುವ ಮತ್ತೊಂದು ಅಂಶವೆಂದರೆ, ಸಮಾನತೆ ತತ್ತ್ವದ ಆಧಾರದ ಮೇಲೆ ಮಕ್ಕಳಿಗೆ ದೊರಕಬೇಕಾಗಿರುವ ಶಿಕ್ಷಣ ಮತ್ತು ಅವರ ಕಲ್ಯಾಣ. ಸಂವಿಧಾನದ 46ನೆಯ ವಿಧಿಯು ಹೀಗೆ ಹೇಳುತ್ತದೆ: ಸರಕಾರವು ವಿಶೇಷ ಗಮನವನ್ನು ನೀಡಿ ದುರ್ಬಲವರ್ಗಗಳವರ, ಅದರಲ್ಲಿಯೂ ವಿಶೇಷವಾಗಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳವರ, ಶೈಕ್ಷಣಿಕ ಮತ್ತು ಆರ್ಥಿಕ ಹಿತಾಸಕ್ತಿಗಳನ್ನು ಪ್ರೋತ್ಸಾಹಿಸಬೇಕು ಮತ್ತು ಈ ವರ್ಗಗಳವರನ್ನು ಸಾಮಾಜಿಕ ಅನ್ಯಾಯಗಳಿಂದ ಹಾಗೂ ಎಲ್ಲಾ ರೀತಿಯ ಶೋಷಣೆಗಳಿಂದ ಮುಕ್ತರನ್ನಾಗಿರಿಸಬೇಕು". ಈ ನಿರ್ದೇಶಕ ತತ್ತ್ವದ ಪ್ರಕಾರ, ರಾಜ್ಯ ಸರಕಾರವು ಹಲವಾರು ಕ್ರಮಗಳನ್ನು ತೆಗೆದುಕೊಳ್ಳುತ್ತಿದೆ. ತಂದೆತಾಯಿಗಳ ಆದಾಯವು 100 ರೂ.ಗಳಿಗಿಂತ ಕಡಿಮೆ ಇದ್ದಲ್ಲರ ಅಂತಹವರ ಮಕ್ಕಳಿಗೆ ವಿದ್ಯಾಭ್ಯಾಸ, ಬಟ್ಟೆ, ಆಹಾರ, ನೆರಳು ಮತ್ತು ವೈದ್ಯಕೀಯ ನೆರವನ್ನು ಸರಕಾರವೇ ನೀಡಬೇಕು ಎನ್ನುವುದು ನನ್ನ ಅಭಿಪ್ರಾಯ. ಪ್ರತಿಭಾವಂತ ವಿದ್ಯಾರ್ಥಿಗಳಿಗೆ ವಿದೇಶದಲ್ಲಿ ತಮ್ಮ ವಿದ್ಯಾಭ್ಯಾಸವನ್ನು ಮುಂದುವರಿಸುವಂತೆ ಮಾಡಲು ವಿದ್ಯಾರ್ಥಿವೇತನವನ್ನು ನೀಡಲು ವಿಶೇಷ ಅವಕಾಶಗಳನ್ನು ನಾವು ಕಲ್ಪಿಸಬೇಕು. ಮಕ್ಕಳ ಕಲ್ಯಾಣವು ನಮ್ಮ ಗಮನದಲ್ಲಿ ಆದ್ಯತೆಯ ವಿಷಯವಾಗಬೇಕು. ಇಲ್ಲಿ ನಾವು ಮಕ್ಕಳಲ್ಲಿ ಸನ್ನಡತೆಯನ್ನು, ರಾಷ್ಟ್ರೀಯತೆಯನ್ನು, ಸಹಕಾರ ಮನೋಭಾವವನ್ನು ಹಾಗು ಅವರನ್ನು ಉತ್ತಮ

ಪ್ರಜೆಯನ್ನಾಗಿ ಮಾಡಲು ಅಗತ್ಯವಾದ ಇನ್ನಿತರ ಗುಣಗಳನ್ನು ಬೆಳೆಸಲು ನಮಗೆ ಅವಕಾಶವಿರುತ್ತದೆ. 'ಜ್ಞಾನವೇ ಶಕ್ತಿ,ಮತ್ತು ಶಿಕ್ಷಣವೇ ಪ್ರಜಾಪ್ರಭುತ್ವದ ಅಡಿಗಲ್ಲು ಎಂದು ಸುಭಾಷ್ ಬೋಸ್ ಹೇಳಿದ್ದರು. ನಮ್ಮ ಸಂಸದೀಯ ಪ್ರಜಾತಂತ್ರವು ಸುಭದ್ರವಾಗಿರಬೇಕಾಗಿದ್ದರೆ, ಚಿರಕಾಲ ಬಾಳಬೇಕಾಗಿದ್ದರೆ, ಜ್ಞಾನದ ಬೆಳಕು, ಶಿಕ್ಷಣವುದೇಶದ ಮೂಲೆ ಮೂಲೆಗಳನ್ನು ತಲುಪುವಹಾಗೆ ನಾವು ಮಾಡಬೇಕು.

ನಮ್ಮ ಸಂವಿಧಾನವು ಎಲ್ಲರಿಗೂ ಸಮಾನ ಹಕ್ಕುಗಳನ್ನೂ ಮತ್ತು ಸಮಾನ ಅವಕಾಶಗಳನ್ನೂ ನೀಡಿದೆ. ಆದರೆ, ದುರ್ಬಲವರ್ಗ, ಹಿಂದುಳಿದವರು, ಪರಿಶಿಷ್ಟ ಜಾತಿ, ಪರಿಶಿಷ್ಟ ವರ್ಗ ಇವರಿಗೆ ವಿಶೇಷವಾದ ವಿನಾಯತಿಯ ಸೌಲಭ್ಯಗಳನ್ನು ನೀಡಿದೆ. ನಮ್ಮ ದೇಶದ ಒಟ್ಟು ಜನಸಂಖ್ಯೆಯಲ್ಲಿ ಹೆಚ್ಚಿನವರು ಈ ವರ್ಗಕ್ಕೇ ಸೇರಿದವರು. ಸಂವಿಧಾನದ 39ನೆಯ ವಿಧಿಯ ಪ್ರಕಾರ 'ಆರ್ಥಿಕ ನಿರ್ವಹಣಾ ವ್ಯವಸ್ಥೆಯು ಸಂಪತ್ತು ಮತ್ತು ಉತ್ಪಾದನಾ ಸಾಧನಗಳು ಕೆಲವರಲ್ಲಿಯೇ ಕೇಂದ್ರೀಕೃತವಾಗಿ ಬಹುಜನರ ಹಿತಾಸಕ್ತಿಗಳಿಗೆ ಮಾರಕವಾಗುವಂತೆ ಮಾಡಬಾರದು, ಮತ್ತು ಈ ಸಂಪತ್ತು ಹಾಗೂ ಸಾಧನಗಳು ಜನತೆಯು ಎಲ್ಲರ ಹಿತಕ್ಕಾಗಿ ಬಳಸಿಕೊಳ್ಳಲ್ಪಡಬೇಕು'. ಹೀಗೆ ನೋಡಿಕೊಳ್ಳುವುದು ಸರಕಾರದ ಹೊಣೆ.

ರಾಜ್ಯ ಸರಕಾರವು ಇತ್ತೀಚೆಗೆ ಒಂದು ನಿರ್ಣಯವನ್ನು ಅಂಗೀಕರಿಸಿದೆ. ಅದರ ಪ್ರಕಾರ ಈಗ ಸಮಾಜ ಕಲ್ಯಾಣ ಇಲಾಖೆಯ ಮೂಲಕ ನೀಡುತ್ತಿರುವ ವಿಶೇಷ ಸೌಲಭ್ಯಗಳ ಜೊತೆಗೆ, ಸರಕಾರದ ಎಲ್ಲಾ ಅಭಿವೃದ್ಧಿ ಇಲಾಖೆಗಳ ಯೋಜಿತ ಬಜೆಟ್‌ನಲ್ಲಿ ಒಂದು ಪಾಲನ್ನು ಹಿಂದುಳಿದ ವರ್ಗಗಳವರ ಅನುಕೂಲಕ್ಕೆಂದೇ ಪ್ರತ್ಯೇಕವಾಗಿ ತೆಗೆದಿರಿಸಬೇಕು. ನಮ್ಮ ಅಧಿಕಾರದ ವ್ಯಾಪ್ತಿಯ ಒಳಗೆ, ಸಂವಿಧಾನವು ಕೊಡಮಾಡಿರುವ ಈ ಸೌಲಭ್ಯಗಳನ್ನು ಹಿಂದುಳಿದ ವರ್ಗದವರ ಒಳಿತಿಗಾಗಿ ಅನುಷ್ಠಾನಕ್ಕೆ ತರುವುದು ನಮ್ಮ ಪ್ರಾಥಮಿಕ ಹಾಗೂ ಆದ್ಯ ಕರ್ತವ್ಯ. ಜನತೆಯ ಸ್ಥಿತಿಗತಿಗಳ ಉದ್ಧಾರಕ್ಕಾಗಿ ಎಷ್ಟರ ಮಟ್ಟಿಗೆ ನೀವು ನಿಮ್ಮ ಅಧಿಕಾರವನ್ನು, ನಿಮ್ಮ ಪ್ರಭಾವವನ್ನು ಉಪಯೋಗಿಸಿಕೊಳ್ಳುತೀರಿ ಎಂಬುದರ ಮೇಲೆ ತಾರುಣ್ಯಾವಸ್ಥೆಯನ್ನು ಮುಟ್ಟುತ್ತಿರುವ ನಮ್ಮ ಪ್ರಜಾಪ್ರಭುತ್ವದ ಭವಿಷ್ಯವು

ಅವಲಂಬಿಸಿದೆ. ರಾಷ್ಟ್ರೀಯ ಸಂಪತ್ತನ್ನು ನಮ್ಮ ಪಂಚವಾರ್ಷಿಕ ಯೋಜನೆಯ ಗುರಿಯ ಪ್ರಕಾರ ವ್ಯವಸ್ಥೆಗೊಳಿಸುವ, ಹೆಚ್ಚಿಸುವ ಮತ್ತು ತನ್ಮೂಲಕ ಜನತೆಯ ರಾಜಕೀಯ ಒಲವು ನಿಲವನ್ನು ಮುಂದಿನ ಚುನಾವಣೆಗೆ ತಿದ್ದುವ ಕಾರ್ಯಗಳು ಈಗ ನಿಮ್ಮ ಕೈಯಲ್ಲಿವೆ.

ನಿಮ್ಮ ವಿವಿಧ ಅಭಿವೃದ್ಧಿ ಕಾರ್ಯಕ್ರಮಗಳ ಮೂಲಕ ನಂಬಿಕೆ ಮತ್ತು ವಿಶ್ವಾಸವನ್ನು ತುಂಬುವತನಕ, ಭವಿಷ್ಯದಲ್ಲಿ ಪ್ರಜಾತಂತ್ರವು ಅಡೆತಡೆಯಿಲ್ಲದೆ ಮುಂದೆ ಸಾಗುವುದಿಲ್ಲ. ನೀವು ನಿಮ್ಮ ಈ ಮೂಲಭೂತ ಕರ್ತವ್ಯವನ್ನು ಸರಿಯಾಗಿ ನಿರ್ವಹಿಸಿದರೆ, ಹೊಸ ವ್ಯವಸ್ಥೆಯು ನಿಮ್ಮ ಮೇಲೆ ಇಟ್ಟಿರುವ ವಿಶ್ವಾಸಕ್ಕೆ ನೀವು ಪಾತ್ರರಾಗುತ್ತೀರಿ ಎಂಬುದು ನನ್ನ ಅಭಿಪ್ರಾಯ.

ಕೊನೆಯದಾಗಿ ನಾನು ನಿಮ್ಮನ್ನು – ತಾಲ್ಲೂಕು ಮಂಡಳಿಯ ಅಧ್ಯಕ್ಷರು, ಉಪಾಧ್ಯಕ್ಷರು ಮತ್ತು ಸದಸ್ಯರು, ಗ್ರಾಮಪಂಚಾಯತಿಯ ಅಧ್ಯಕ್ಷರು, ಉಪಾಧ್ಯಕ್ಷರು ಮತ್ತು ಸದಸ್ಯರುಗಳು ಮತ್ತು ಸಹಕಾರ ಚಳವಳಿಯಲ್ಲಿ ಭಾಗಿಗಳಾಗಿರುವ ಎಲ್ಲರನ್ನು – ಪ್ರಾರ್ಥಿಸುವುದೇನೆಂದರೆ, ಗ್ರಾಮಾಂತರ ಜನತೆಯ ಚುನಾಯಿತ ಪ್ರತಿನಿಧಿಗಳಾಗಿ ನೀವು ನಿಮ್ಮ ಜವಾಬ್ದಾರಿಯನ್ನು ಅರಿತುಕೊಳ್ಳಬೇಕು ಮತ್ತು ನೀವೆಲ್ಲರೂ ಒಂದಾಗಿ ಸಹಕಾರ ಮನೋಭಾವದಿಂದ ಇಲ್ಲಿಯವರೆಗೆ ಹಳ್ಳಿಗಳಲ್ಲಿ ಅನ್ಯಾಯ ಮತ್ತು ಶೋಷಣೆಗೆ ಒಳಗಾಗಿರುವ ಜನಗಳ ಸೇವೆಯನ್ನು ವಿಶೇಷವಾಗಿ ಮಾಡಬೇಕು. ಸಂವಿಧಾನವು ನಿಮ್ಮ ಮೇಲೆ ಹೊರಿಸಿರುವ ಹೊಣೆಯ ಅರಿವನ್ನು ನೀವು ನಿಮ್ಮ ಮನಸ್ಸಿನಲ್ಲಿ ಇಟ್ಟುಕೊಂಡಿದ್ದರೆ, ಯಾವುದೇ ಗೊಂದಲ, ಗಲಭೆಗಳನ್ನೂ ನಿವಾರಿಸಿಕೊಂಡು ನೀವು ಹೊಸ ಮಾರ್ಗವನ್ನು ಆವಿಷ್ಕರಿಸಬಹುದು. ಹಳ್ಳಿಗಳ ಜನರು ಬೇಸಾಯ, ಪಶುಸಂಗೋಪನೆ, ತೋಟಗಾರಿಕೆ ಮತ್ತು ಮೀನುಗಾರಿಕೆಯನ್ನು ತೀವ್ರವಾದ ಆಸಕ್ತಿಯಿಂದ ಕೈಗೆತ್ತಿಕೊಳ್ಳುವಂತೆ ಮಾಡಿದರೆ, ಅಧಿಕಗೊಳ್ಳುತ್ತಲೇ ಹೋಗುತ್ತಿರುವ ಆಹಾರದ ಸಮಸ್ಯೆಯನ್ನು ನಿವಾರಿಸಬಹುದು. ಅಲ್ಲದೆ, ಈ ಪ್ರಯತ್ನಗಳು ರೈತರಿಗೆ ಪೂರ್ಣಕಾಲದ ಕೆಲಸವನ್ನು ನೀಡುತ್ತವೆ ಮತ್ತು ನಿರುದ್ಯೋಗಿಗಳಿಗೂ ಉದ್ಯೋಗವನ್ನು ಒದಗಿಸುತ್ತದೆ. ಇದರ ಜೊತೆಗೆ ಗ್ರಾಮಾಂತರ ಹಾಗೂ ಕುಟೀರ ಕೈಗಾರಿಕೆಗಳನ್ನು ಪ್ರಾರಂಭಿಸುವಂತೆ ಮಾಡಿದರೆ, ಇನ್ನೂ ಹೆಚ್ಚಿನ ಉದ್ಯೋಗಾವಕಾಶಗಳನ್ನು ನಿರ್ಮಿಸಬಹುದು ಮತ್ತು ಹಳ್ಳಿಗಳ

ಆರ್ಥಿಕತೆಯನ್ನು ಉತ್ತಮಗೊಳಿಸಬಹುದು. ನಿಮ್ಮ ವೃತ್ತಿಯ ಈ ಅಂಶಗಳು ನಿಮ್ಮ ಗಮನವನ್ನು ವಿಶೇಷವಾಗಿ ಸೆಳೆಯುತ್ತವೆ ಎಂದು ನಾನು ಭಾವಿಸುತ್ತೇನೆ.

1959ರ ಡಿಸೆಂಬರ್ 11ರಂದು ನವ ದೆಹಲಿಯಲ್ಲಿ ಅಮೆರಿಕದ ಅಧ್ಯಕ್ಷರು ಕೃಷಿಮೇಳವನ್ನು ಉದ್ಘಾಟಿಸುತ್ತಾ 'ಮಾನವಕುಲದ ಶಾಂತಿಗಾಗಿ ನಾಲ್ಕು ಅಂಶಗಳನ್ನು ಮೊಟ್ಟಮೊದಲು ಪರಿಹರಿಸಿಕೊಳ್ಳಬೇಕು, ಅವೆಂದರೆ, ಆಹಾರ, ಕುಟುಂಬ, ಸ್ನೇಹ ಮತ್ತು ಸ್ವಾತಂತ್ರ್ಯಕ್ಕೆ ಸಂಬಂಧಿಸಿದ ಸಮಸ್ಯೆಗಳು' ಎಂದು ಹೇಳಿದರು. ಪ್ರತಿಯೊಂದು ಕುಟುಂಬವೂ ಒಂದೊಂದು ಘಟಕವಾಗಿರುತ್ತದೆ ಮತ್ತು ತನ್ನ ಅಗತ್ಯಗಳನ್ನು ಪೂರೈಸಿಕೊಳ್ಳುವ ಸ್ವಸಾಮರ್ಥ್ಯವನ್ನು ಅದು ಹೊಂದಿಲ್ಲದಿದ್ದರೆ, ಶಾಂತಿಯು ಈ ನೆಲದಲ್ಲಿ ನೆಲಸಲು ಸಾಧ್ಯವಿಲ್ಲ.

ಮಕ್ಕಳ ಸಂರಕ್ಷಣೆಯ ಪ್ರಾಮುಖ್ಯವನ್ನು ನಾನು ಮತ್ತೆ ಒತ್ತಿ ಹೇಳಬಯಸುತ್ತೇನೆ. ದುರ್ಬಲವರ್ಗದ ಮಕ್ಕಳನ್ನೂ ಒಳಗೊಂಡಂತೆ ಎಲ್ಲಾ ವರ್ಗದ ಮಕ್ಕಳಿಗೂ ಸಮಾನ ವಾತಾವರಣದಲ್ಲಿ ಯೋಗ್ಯ ಶಿಕ್ಷಣವನ್ನು, ಉಚಿತ ಆಹಾರ, ಬಟ್ಟೆಬರೆ ಮತ್ತು ಇತರ ಸೌಲಭ್ಯಗಳನ್ನು ನೀಡಬೇಕು. ಆ ಮಕ್ಕಳಲ್ಲಿ ಚಾರಿತ್ರ್ಯವನ್ನು ಉತ್ತಮಗೊಳಿಸುವಂತಹ ಗುಣಗಳು ಮೂಡುವಂತೆ ಮಾಡಬೇಕು. ಹೀಗಾದರೆ ಮಾತ್ರ, ಗಾಂಧೀಜಿಯವರು ಬಯಸಿದ್ದ ಗುಣಗಳನ್ನುಳ್ಳ ಯುವ ಜನತೆಯನ್ನು ಮುಂದಿನ ಮೂವತ್ತು ವರ್ಷಗಳಲ್ಲಿ ನಾವು ಕಾಣುವ ಅವಕಾಶವಿರುತ್ತದೆ.

ಜಿಲ್ಲೆ, ತಾಲ್ಲೂಕು ಮತ್ತು ಹಳ್ಳಿಗಳ ಮಟ್ಟದಲ್ಲಿ ಅಭಿವೃದ್ಧಿ ಯೋಜನೆಗಳ ಹೊಣೆಯನ್ನು ಈಗ ಹೊತ್ತಿರುವಂತಹವರು ತಮ್ಮ ಕರ್ತವ್ಯವನ್ನು ಶ್ರದ್ಧೆಯಿಂದ, ಪ್ರಾಮಾಣಿಕವಾಗಿ, ಸೇವಾ ಹಾಗೂ ತ್ಯಾಗದ ಮನೋಭಾವದಿಂದ ಮತ್ತು ಜವಾಬ್ದಾರಿಯಿಂದ ನಿರ್ವಹಿಸಿದರೆ ಮಾತ್ರ ಇವೆಲ್ಲವನ್ನೂ ಸಾಧಿಸಬಹುದು. ಪ್ರತಿಯೊಬ್ಬ ನಾಗರಿಕನ, ಆತ ಅಧಿಕಾರದಲ್ಲಿರಲಿ, ಇಲ್ಲದಿರಲಿ, ಆತನ ವೃತ್ತಿ ಯಾವುದೇ ಇರಲಿ, ಆತನ ಎಲ್ಲಾ ಪ್ರಯತ್ನಗಳೂ ಈ ಉದ್ದೇಶಗಳನ್ನು ಸಾಧಿಸುವತ್ತ ಕೇಂದ್ರೀಕೃತವಾಗಿರಬೇಕು.

ಚುನಾಯಿತ ಪ್ರತಿನಿಧಿಗಳು ಮತ್ತು ಇಂತಹ ಸಂಸ್ಥೆಗಳಿಗೆ ಮಾರ್ಗದರ್ಶನ ಮಾಡುವ ಸ್ಥಾನದಲ್ಲಿರುವವರು ಹಳ್ಳಿ, ತಾಲ್ಲೂಕು ಮತ್ತು ಜಿಲ್ಲಾ ಮಟ್ಟದಲ್ಲಿ ಈ ಮೂಲಭೂತ ಸಾಂವಿಧಾನಿಕ ತತ್ತ್ವಗಳನ್ನು ಅನುಸರಿಸಿದರೆ, ಮತ್ತು ಕೇಂದ್ರ

ಹಾಗೂ ರಾಜ್ಯಸರಕಾರಗಳ ನೀತಿಗಳನ್ನು ಅನುಷ್ಠಾನಕ್ಕೆ ತಂದರೆ, ಅವರು ತಮ್ಮೆಲ್ಲಾ ಪ್ರಯತ್ನಗಳಲ್ಲಿಯೂ ರಾಜ್ಯ ಸರಕಾರದ ಬೆಂಬಲ ಮತ್ತು ಸಹಾಯಗಳನ್ನು ನಿರೀಕ್ಷಿಸಬಹುದು. ಈ ಮೂಲಕ ಅವರು ನೈಜವಾದ ಕಲ್ಯಾಣ ರಾಜ್ಯದ ರಚನೆಯ ಕ್ರಿಯಾತ್ಮಕ ಪ್ರಯತ್ನದಲ್ಲಿ ನೆರವಾಗಬಹುದು.

## ♦ ಪಂಚಾಯತ್ ರಾಜ್ಯಗಳ ಮೂಲಕ ಅಧಿಕಾರ ವಿಕೇಂದ್ರೀಕರಣ

**ಪಂಚಾಯತ್ ರಾಜ್ ವ್ಯವಸ್ಥೆ ಗಾಂಧೀಜಿಯ ಕನಸು. ಗ್ರಾಮೀಣ ಮಟ್ಟದಲ್ಲೂ ಸ್ಥಳೀಯವಾಗಿ ನಾಯಕತ್ವ ವಹಿಸಿ ಸಮಸ್ಯೆ ಪರಿಹರಿಸಿಕೊಳ್ಳುವ ಅಧಿಕಾರ ವಿಕೇಂದ್ರೀಕರಣದ ಈ ವ್ಯವಸ್ಥೆ ಹಳ್ಳಿಯ ಅಭಿವೃದ್ಧಿಯ ದ್ಯೋತಕವಾಗಿದೆ. 1961 ರಂದು ಶಿವಮೊಗ್ಗದಲ್ಲಿ ಏರ್ಪಡಿಸಿದ್ದ ಪ್ರಥಮ ಅಖಿಲ-ಮೈಸೂರು ರಾಜ್ಯ ಪಂಚಾಯತ್ ರಾಜ್ಯ ಸಮ್ಮೇಳನಕ್ಕೆ ಸಂಬಂಧಿಸಿದ ವಸ್ತುಪ್ರದರ್ಶನವನ್ನು ಉದ್ಘಾಟಿಸುವ ಸಂದರ್ಭದಲ್ಲಿ ಮಾಡಿದ ಭಾಷಣ**

ಪ್ರಾರಂಭದಲ್ಲಿ, ಪ್ರಥಮ ಅಖಿಲ ಮೈಸೂರು ರಾಜ್ಯ ಪಂಚಾಯತ್ ರಾಜ್ಯದ ಸಮ್ಮೇಳನದಲ್ಲಿ ಪಾಲುಗೊಳ್ಳಲು ಮತ್ತು ಇದಕ್ಕೆ ಸಂಬಂಧಿಸಿದ ವಸ್ತುಪ್ರದರ್ಶನವನ್ನು ಉದ್ಘಾಟಿಸಲು ಅವಕಾಶವನ್ನು ಕೊಟ್ಟಿರುವ ನಿಮಗೆ ನಾನು ಆಭಾರಿಯಾಗಿದ್ದೇನೆ.

ಅಧಿಕಾರವನ್ನು ಶೃಂಗದಿಂದ ತಳಮಟ್ಟದ ಜನತೆಗೆ ವರ್ಗಾಯಿಸುವ, ಮತ್ತು ವೈಯಕ್ತಿಕ ಕುಟುಂಬಗಳಿಂದ ಮೇಲುಮೇಲಕ್ಕೆ ಜನರಲ್ಲಿ ರಚನಾತ್ಮಕ ಸ್ಪರ್ಧೆಯ ಸ್ವಯಂಪ್ರೇರಿತ ಬೆಳವಣಿಗೆಯನ್ನು ಪ್ರೋತ್ಸಾಹಿಸುವಂತಹ ಸ್ವಯಂಚೋದಿತವಾಗಿರುವ ವ್ಯವಸ್ಥೆಯ ನಿಟ್ಟಿನಲ್ಲಿ ಪಂಚಾಯತ್ ರಾಜ್ಯವು ಒಂದು ಕ್ರಾಂತಿಕಾರೀ ಹೆಜ್ಜೆಯಾಗಿದೆ. ಪಂಚಾಯತ್ ರಾಜ್ಯ ವ್ಯವಸ್ಥೆಯು ಪ್ರಜಾಪ್ರಭುತ್ವಕ್ಕೆ ಜನರಿಗೆ ಅಗತ್ಯವಾದ ತರಬೇತಿಯನ್ನು ತಾವೇ ಪಡೆದುಕೊಳ್ಳಲು ಅವಕಾಶವನ್ನು ಒದಗಿಸುತ್ತದೆ ಮತ್ತು ದೇಶದಲ್ಲಿ ಅನುಪಯುಕ್ತವಾಗಿ ಇರುವ ಸಂಪನ್ಮೂಲಗಳನ್ನು ಅತ್ಯುತ್ತಮವಾಗಿ ಉಪಯೋಗಿಸಿಕೊಳ್ಳಲು ಸಹಾಯಮಾಡುತ್ತದೆ. ಪ್ರತಿ ಹಳ್ಳಿಯಲ್ಲಿಯೂ ಅಲ್ಲಿನ ನಿವಾಸಿಗಳ ಹಿತಾಸಕ್ತಿಗಳನ್ನು ನೋಡಿಕೊಳ್ಳುವಂತಹ ಸುಸಂಘಟಿತವಾದ ಪಂಚಾಯತ್ ರಾಜ್ಯ ವ್ಯವಸ್ಥೆಯನ್ನು ಕಾಣುವುದು ಮಹಾತ್ಮಾಜಿಯವರ ಹೃದಯದಲ್ಲಿದ್ದ ಆಸೆಯಾಗಿತ್ತು. ಈ ಕಾರಣದಿಂದಲೇ, ಕಾಂಗ್ರೆಸ್ ಪಕ್ಷದಲ್ಲಿ ಮೊಳಕೆಯೊಡೆದ ಈ ಪಂಚಾಯತ್ ರಾಜ್ಯ ವ್ಯವಸ್ಥೆಯು ಈಗ ದೇಶದ ಎಲ್ಲೆಡೆ ಹರಡಿಕೊಂಡಿರುವುದು ಅಚ್ಚರಿಯ ವಿಷಯವಲ್ಲ.

'ಸರಕಾರವು ಗ್ರಾಮ ಪಂಚಾಯತಿಗಳನ್ನು ರಚಿಸಲು ಕ್ರಮಗಳನ್ನು ತೆಗೆದುಕೊಂಡು ಅವುಗಳಿಗೆ ತಮ್ಮ ಆಡಳಿತವನ್ನು ತಾವೇ ನೋಡಿಕೊಳ್ಳಲು ಅಗತ್ಯವಾದ ಎಲ್ಲಾ ಅಧಿಕಾರ ಮತ್ತು ವಿಧಾಯಕ ಶಕ್ತಿಯನ್ನು ನೀಡಬೇಕು' ಎಂದು ಸಂವಿಧಾನದ ನಿರ್ಮಾಪಕರು ವಿವೇಕಯುತವಾದ ನಿಯಮವನ್ನು ರೂಪಿಸಿದ್ದಾರೆ.

ಕೇಂದ್ರ ಸರಕಾರವು ಘೋಷಿಸಿರುವ ನೀತಿಗೆ ಅನುಗುಣವಾಗಿ, ಎಲ್ಲಾ ರಾಜ್ಯ ಸರಕಾರಗಳೂ ಸ್ಥಳೀಯ ಸ್ವಾಯತ್ತ ಸಂಸ್ಥೆಗಳನ್ನು ರಚಿಸಿ, ಅವುಗಳು ತಮ್ಮತಮ್ಮ ಪ್ರದೇಶದ ಜನಗಳ ಅಗತ್ಯಗಳನ್ನು ಪೂರೈಸಲು ಬೇಕಾದ ಅಧಿಕಾರ ಮತ್ತು ಹೊಣೆಗಾರಿಕೆಯನ್ನು ನೀಡಿವೆ. ಇದರ ಪರಿಣಾಮವಾಗಿ ಪಂಚಾಯತಿಗಳು ಈಗ ಶಾಸನಬದ್ಧ ಸಂಸ್ಥೆಗಳಾಗಿವೆ, ತಾಲ್ಲೂಕು ಮಂಡಳಿಗಳ ಸದಸ್ಯರು ಮತ್ತು ಪದಾಧಿಕಾರಿಗಳು ಜನರಿಂದ ನೇರವಾಗಿ ಚುನಾಯಿತರಾಗಿ, ಅಧಿಕಾರವನ್ನು ಜನರಿಂದ ಮತ್ತು ಜನರಿಗಾಗಿ ಹೊಂದಿರುತ್ತಾರೆ. 1960ರ ಡಿಸೆಂಬರ್‌ನ ಕೊನೆಯ ವಾರದಲ್ಲಿ ನಮ್ಮೆಲ್ಲರ ಪ್ರೀತಿಪಾತ್ರರಾದ ರಾಷ್ಟ್ರಾಧ್ಯಕ್ಷರು ಮೈಸೂರು ರಾಜ್ಯದಲ್ಲಿ ಪಂಚಾಯತ್ ವ್ಯವಸ್ಥೆಯ ಉದ್ಘಾಟನೆಯನ್ನು ಮಾಡಿದರು. ಅಲ್ಲಿಂದೀಚೆಗೆ ಜಾಗೃತರಲ್ಲಿ ಕಂಡುಬರುವ ಹೊಸ ಜೀವನದ ಹೊಳಹು, ಮತ್ತು ಶಕ್ತಿಸಂಚಾರದ ಕುರುಹುಗಳು ನಮ್ಮ ರಾಜ್ಯದ ಜನತೆಯಲ್ಲಿ, ಅದರಲ್ಲಿಯೂ ವಿಶೇಷವಾಗಿ ಹಳ್ಳಿಗಳ ಮಟ್ಟದಲ್ಲಿ ಗ್ರಾಮಪಂಚಾಯತಿ, ಸಮುದಾಯ ಅಭಿವೃದ್ಧಿ ಯೋಜನೆ ಮತ್ತು ರಾಷ್ಟ್ರೀಯ ವಿಸ್ತರಣಾ ಸೇವೆಗಳ ಮೂಲಕ, ಕಾಣಬರುತ್ತಿರುವುದರಿಂದ ನನಗೆ ಸಂತೋಷವಾಗಿದೆ.

ಮೈಸೂರು ರಾಜ್ಯದಲ್ಲಿ ನಾವು ಅಳವಡಿಸಿಕೊಂಡಿರುವ ಪಂಚಾಯತ್ ರಾಜ್ಯ ವ್ಯವಸ್ಥೆಯು ಇತರ ರಾಜ್ಯಗಳವರು ಅಳವಡಿಸಿಕೊಂಡಿರುವ ವ್ಯವಸ್ಥೆಗಿಂತ ಅಷ್ಟೇನೂ ಭಿನ್ನವಾಗಿಲ್ಲ. ಇತರ ರಾಜ್ಯಗಳಲ್ಲಿರುವಂತೆಯೇ, ಮೈಸೂರು ರಾಜ್ಯದಲ್ಲಿ ಕೂಡ ಈ ವ್ಯವಸ್ಥೆಯು ಮೂರು ಹಂತಗಳನ್ನು ಒಳಗೊಂಡಿದೆ. ಕೆಳ ಹಂತದಲ್ಲಿ ಈ ವ್ಯವಸ್ಥೆಯು 1,500 ಅಥವಾ ಅದಕ್ಕಿಂತ ಹೆಚ್ಚಿನ ಜನಸಂಖ್ಯೆಯನ್ನುಳ್ಳ ಎಲ್ಲಾ ಹಳ್ಳಿಗಳ ಆಡಳಿತವನ್ನು ಸ್ಥಳೀಯವಾಗಿ ನೋಡಿಕೊಳ್ಳುತ್ತದೆ. ಎರಡನೆಯ ಹಂತದ ವ್ಯವಸ್ಥೆಯಲ್ಲಿ, ಇತರ ರಾಜ್ಯಗಳಲ್ಲಿರುವ ಜಿಲ್ಲಾಮಟ್ಟದ ಸಮಿತಿಗೆ ಸಮನಾಗಿ

ನಮ್ಮ ರಾಜ್ಯದಲ್ಲಿ ತಾಲ್ಲೂಕು ಅಭಿವೃದ್ಧಿ ಮಂಡಳಿಗಳು ಇವೆ. ಹಾಗೆಯೇ ತಾಲ್ಲೂಕು ಅಭಿವೃದ್ಧಿ ಮಂಡಳಿಯ ಮೇಲೆ ನಮ್ಮಲ್ಲಿ ಜಿಲ್ಲಾ ಪರಿಷತ್ತುಗಳು ಕೆಲಸಮಾಡುತ್ತಿವೆ.

ರಾಜ್ಯ ಸರಕಾರವು ಪ್ರಜಾತಂತ್ರದಲ್ಲಿನ ವಿಕೇಂದ್ರೀಕರಣದ ಈ ಪ್ರಯೋಗವನ್ನು ಯಶಸ್ವಿಗೊಳಿಸುವುದಕ್ಕೆ ಅತ್ಯಾಸಕ್ತವಾಗಿದೆ. ಈ ಉದ್ದೇಶಕ್ಕಾಗಿ ಪಂಚಾಯತಿಗಳಿಗೆ ಮತ್ತು ತಾಲ್ಲೂಕು ಅಭಿವೃದ್ಧಿ ಮಂಡಳಿಗಳಿಗೆ ಅವುಗಳ ಭೂಕಂದಾಯದ ಶೇ. 60 ಭಾಗವನ್ನು ನೀಡುತ್ತಿದೆ. ಇದಲ್ಲದೆ, ಶಿಕ್ಷಣ, ಸಾರ್ವಜನಿಕ ಆರೋಗ್ಯ, ಸಂಪರ್ಕ ಮೊದಲಾದವುಗಳಿಗಾಗಿ ಹೆಚ್ಚಿನ ಮೊತ್ತದ ಅನುದಾನಗಳನ್ನೂ ನೀಡುತ್ತಿದೆ. ರಾಜ್ಯದ 25,880 ಹಳ್ಳಿಗಳನ್ನು 7,444 ಪಂಚಾಯತಿಗಳ ಅಡಿಯಲ್ಲಿ ತಂದಿದ್ದೇವೆ. ಇವುಗಳಲ್ಲಿ 132 ದೊಡ್ಡ ಪಂಚಯತಿಗಳನ್ನು ಪಟ್ಟಣ ಪಂಚಾಯತಿಗಳಾಗಿವೆ. ಇವುಗಳು ತಮ್ಮ ಅಧ್ಯಕ್ಷ ಮತ್ತು ಉಪಾಧ್ಯಕ್ಷರನ್ನು ತಾವೇ ಚುನಾಯಿಸಿಕೊಂಡು ಕಾರ್ಯವನ್ನು ನಿರ್ವಹಿಸುತ್ತಿವೆ. ಮೈಸೂರು ರಾಜ್ಯದಲ್ಲಿ ಪಂಚಾಯತಿ ಚುನಾವಣೆಗಳು ರಾಜಕೀಯ ಪಕ್ಷಗಳ ಹೆಸರಿನಲ್ಲಿ ನಡೆಯುತಿಲ್ಲವೆನ್ನುವುದು ತೃಪ್ತಿಕರವಾದ ವಿಷಯ. ಸುಮಾರು ಶೇ. 57ರಷ್ಟು ಸ್ಥಾನಗಳಿಗೆ ಸದಸ್ಯರು ಅವಿರೋಧವಾಗಿ ಆಯ್ಕೆಯಾಗಿದ್ದಾರೆ. ಇದು ರಾಜ್ಯದಲ್ಲಿ ಜನಗಳ ಮಧ್ಯದಲ್ಲಿ ಇರುವ ಸಾಮರಸ್ಯವನ್ನು ಎತ್ತಿ ತೋರಿಸುತ್ತದೆ. ತಾಲ್ಲೂಕಿನ ಮಟ್ಟದಲ್ಲಿ 171 ತಾಲ್ಲೂಕು ಮಂಡಳಿಗಳೂ, ಜಿಲ್ಲಾ ಮಟ್ಟದಲ್ಲಿ 19 ಜಿಲ್ಲಾ ಅಭಿವೃದ್ಧಿ ಪರಿಷತ್ತುಗಳೂ ರಾಜ್ಯದಲ್ಲಿ ಇವೆ. ಇವೆಲ್ಲವೂ ಪಂಚಾಯತಿ ಮತ್ತು ಸ್ಥಳೀಯ ಮಂಡಳಿಯ ಶಾಸನದ ಪ್ರಕಾರ ತಮಗೆ ನಿಗದಿಯಾಗಿರುವ ಕರ್ತವ್ಯಗಳನ್ನು ಇಲ್ಲಿಯವರೆಗೆ ನಿರ್ವಹಿಸುತ್ತಾ ಬಂದಿವೆ. ಹಳ್ಳಿಗಳ ಸಂಪೂರ್ಣ ಆಡಳಿತದ ಜವಾಬ್ದಾರಿಯನ್ನು ಹೊತ್ತುಕೊಂಡಿರುವ ಪಂಚಾಯತಿಗಳು ಮುಖ್ಯವಾದ ಗ್ರಾಮ ಸಂಸ್ಥೆಗಳಾಗಿದ್ದು, ಈಗ ಆಡಳಿತಾತ್ಮಕ ಮತ್ತು ಅಭಿವೃದ್ಧಿ ಸಂಬಂಧಿತ ಕಾರ್ಯಗಳನ್ನು ಮಾಡುತ್ತಿವೆ. ಈಗಿರುವ ನಾಗರಿಕ ಮತ್ತು ಪೌರಾಡಳಿತದ ಹಾಗೂ ಸ್ಥಳೀಯ ಸಂಸ್ಥೆಯ ಕಾರ್ಯಗಳ ಜೊತೆಗೆ, ಪಂಚಾಯತ್‌ಗಳಿಗೆ ಹೊಸದಾಗಿ ಅಭಿವೃದ್ಧಿ, ಭೂಮಿಯ ನಿರ್ವಹಣೆ ಮತ್ತು ಭೂಸುಧಾರಣೆಯ ಕೆಲಸಗಳನ್ನೂ ನೀಡಲಾಗಿದೆ. ಸ್ಥಳೀಯ ಆಡಳಿತಕ್ಕೆ ಈ ಹೊಸ ಪಾತ್ರವು ಅವುಗಳ ಆಡಳಿತದ ಸ್ವರೂಪದಲ್ಲಿ ಕೇವಲ ಪರಿಮಾಣಾತ್ಮಕ ಬದಲಾವಣೆಗಳನ್ನಷ್ಟೇ ಅಲ್ಲದೆ ಗುಣಾತ್ಮಕ ಬದಲಾವಣೆಯನ್ನು ನೀಡಿದೆ.

ಪ್ರಜಾತಾಂತ್ರಿಕ ಯೋಜನೆಗಳ ಮೂಲಕ ಹೊಸ ಭಾರತವನ್ನು ಕಟ್ಟುವ ಮಹಾನ್ ಕಾರ್ಯದಲ್ಲಿ ನಾವೀಗ ಪ್ರಧಾನ ಹಂತಕ್ಕೆ ತಲುಪಿದ್ದೇವೆ. ಎರಡು ಪಾಂಚವಾರ್ಷಿಕ ಯೋಜನೆಗಳ ಅನುಷ್ಠಾನವು ಆರ್ಥಿಕ ಅಭಿವೃದ್ಧಿಗೆ ಅಡಿಗಲ್ಲನ್ನು ಹಾಕಿದೆ ಮತ್ತು ಸಮಾಜವಾದಿ ವ್ಯವಸ್ಥೆಯನ್ನು ಜಾರಿಗೆ ತರುವ ನಿಟ್ಟಿನಲ್ಲಿ ದೇಶದ ಪ್ರಗತಿಯನ್ನು ಖಚಿತಗೊಳಿಸಿದೆ. ಮೂರನೆಯ ಪಾಂಚವಾರ್ಷಿಕ ಯೋಜನೆಯ ಉದ್ದೇಶಗಳು ಹೀಗಿವೆ: ರಾಷ್ಟ್ರೀಯ ವರಮಾನವನ್ನು ಶೇ 5ರ ಗತಿಯಲ್ಲಿ ವೃದ್ಧಿಸುವಂತೆ ಮಾಡುವುದು, ಆಹಾರಧಾನ್ಯಗಳ ವಿಷಯದಲ್ಲಿ ಸ್ವಾವಲಂಬನೆಯನ್ನು ಸಾಧಿಸುವುದು, ಕೃಷಿ ಉತ್ಪಾದನೆಯನ್ನು ಹೆಚ್ಚಿಸುವುದು, ಮೂಲಭೂತ ಕೈಗಾರಿಕೆಗಳ ವ್ಯಾಪ್ತಿಯನ್ನು ವಿಸ್ತರಿಸುವುದು, ದೇಶದಲ್ಲಿ ಇರುವ ಮಾನವ ಸಂಪನ್ಮೂಲವನ್ನು ಗರಿಷ್ಠ ಪ್ರಮಾಣದಲ್ಲಿ ಬಳಸಿಕೊಳ್ಳುವುದು, ಆದಾಯ ಮತ್ತು ಸಂಪತ್ತಿನ ವಿಷಯದಲ್ಲಿ ಅಸಮಾನತೆಯನ್ನು ಕಡಿಮೆಮಾಡುವುದು, ಕಲ್ಯಾಣ ರಾಜ್ಯವನ್ನು ಕಟ್ಟುವುದಕ್ಕಾಗಿ ಸರಕಾರವು ಘೋಷಿಸಿರುವ ನೀತಿಯ ಪ್ರಕಾರ ಆರ್ಥಿಕ ಶಕ್ತಿಯನ್ನು ಇನ್ನೂ ಹೆಚ್ಚು ನ್ಯಾಯಯುತವಾಗಿರುವಂತೆ ವಿತರಿಸುವುದು. ಇದೊಂದು ಅಗಾಧವಾದ ಕಾರ್ಯ. ಎಲ್ಲಾ ಜನರ ಸ್ವ–ಇಚ್ಛೆಯ ಹಾಗೂ ಪರಿಣಾಮಕಾರಿ ಸಹಕಾರದಿಂದಲ್ಲದೆ ಇದನ್ನು ಸಾಧಿಸುವುದು ಸಾಧ್ಯವಾಗುವುದಿಲ್ಲ. ಈ ಸಂದರ್ಭದಲ್ಲಿ ಪಂಚಾಯತ್ ರಾಜ್ಯ ವ್ಯವಸ್ಥೆಯನ್ನು ಪರಿಚಯಿಸಿರುವುದು ಅರ್ಥಪೂರ್ಣವಾಗಿದೆ. ತಮ್ಮ ಚುನಾಯಿತ ಪ್ರತಿನಿಧಗಳ ಮೂಲಕ ತಮಗೆ ಬೇಕಾದುದನ್ನು ಮಾಡಿಸಿಕೊಳ್ಳಲು ಇದು ಸಹಾಯಮಾಡುತ್ತದೆ. ಪಂಚಾಯತ್ ರಾಜ್ಯದ ಸದಸ್ಯರು ನಾಲ್ಕು ವರ್ಷದ ಅವಧಿಗೆ ಚುನಾಯಿತರಾಗಿರುತ್ತಾರೆ, ಮತ್ತು ಈಗ ಅವರಿಗೆ ಹಳ್ಳಿಗಳಲ್ಲಿ ತಮ್ಮ ಅಭಿವೃದ್ಧಿಕಾರ್ಯಗಳನ್ನು ಪರಿಣಾಮಕಾರಿಯಾಗಿ ಮಾಡಿ ಜನತೆಯು ತಮ್ಮ ಮೇಲೆ ಇಟ್ಟಿರುವ ವಿಶ್ವಾಸವನ್ನು ಸಮರ್ಥಿಸಿಕೊಳ್ಳಲು ಇನ್ನೂ ಮೂರು ವರ್ಷದ ಅವಧಿ ಬಾಕಿ ಇದೆ. ನಾವು ಪಂಚಾಯತ್ ರಾಜ್ಯದ ಮೂಲಕ 'ಜನರ', 'ಜನರಿಂದ' ಪ್ರಜಾತಾಂತ್ರಿಕ ಸಂಸ್ಥೆಗಳನ್ನು ರಚಿಸಿದ್ದೇವಾದರೂ, ಸಂವಿಧಾನದ ಆಶಯವಾದ 'ಜನರಿಗಾಗಿ', ಅದರಲ್ಲಿಯೂ ದುರ್ಬಲವರ್ಗ ಹಾಗೂ ದುಡಿಯುವ ವರ್ಗಗಳಿಗಾಗಿ ಕೆಲಸ ಮಾಡುವಂತಹ ಮಟ್ಟವನ್ನು ಇನ್ನೂ ತಲುಪಿಲ್ಲ. ಈ ಸಂಸ್ಥೆಗಳ ಕಾರ್ಯವು ಯಶಸ್ವಿಯಾಗಬೇಕಾದರೆ, ಅವುಗಳ ಸದಸ್ಯರ ಮೊದಲ ಚಿಂತೆ ಶ್ರಮಜೀವಿಗಳ ವಿಷಯದಲ್ಲಿ ಇರಬೇಕು. ಮೂರನೆಯ ಪಂಚವಾರ್ಷಿಕ

ಯೋಜನೆಯ ಅವಧಿಯಲ್ಲಿ ಈ ವಿಷಯವನ್ನು ಸಂಪೂರ್ಣವಾಗಿ ಅರಿತುಕೊಳ್ಳಲಾಗುವುದು ಎಂದು ನಾನು ಆಶಿಸುತ್ತೇನೆ.

ಸಾಕಷ್ಟು ಕುಡಿಯುವ ನೀರಿನ ಸರಬರಾಜು, ಹಳ್ಳಿಗಳಿಗೆ ಯೋಗ್ಯವಾದ ರಸ್ತೆಗಳು, ಚರಂಡಿಗಳು, ನೈರ್ಮಲ್ಯ, ಶಿಕ್ಷಣಕ್ಕೆ ಬೇಕಾದ ಸೌಲಭ್ಯಗಳು, ವೈದ್ಯಕೀಯ ಸೇವೆ, ಮೊದಲಾದ ಪ್ರಾಥಮಿಕ ಪೌರ ಅಗತ್ಯಗಳ ಮೇಲೆ ಪಂಚಾಯತಿಗಳು ಪ್ರಮುಖವಾಗಿ ತಮ್ಮ ಗಮನವನ್ನು ಕೇಂದ್ರೀಕರಿಸಬೇಕು. ಕುಡಿಯುವ ನೀರಿನ ವಿಷಯವನ್ನು ಸಾಮಾನ್ಯವಾಗಿ ಹಗುರವಾಗಿ ತೆಗೆದುಕೊಳ್ಳುತ್ತಾರೆ. ದೇಶದ ಹಲವು ಭಾಗಗಳಲ್ಲಿ –ಗ್ರಾಮಾಂತರ ಪ್ರದೇಶ, ಪಟ್ಟಣಪ್ರದೇಶ, ಅಥವಾ ದೂರದ ಗುಡ್ಡಗಾಡುಜನರ ವಾಸಪ್ರದೇಶ ಎಲ್ಲಾ ಕಡೆಗಳಲ್ಲಿ – ಸಿಗುತ್ತಿರುವ ನೀರು ಕುಡಿಯಲು ಯೋಗ್ಯವಾದುದಲ್ಲ. ಕುಡಿಯುವ ನೀರು ಯೋಗ್ಯವಾಗಿದ್ದ ಎಡೆಗಳಲ್ಲಿ ಸಾಕಷ್ಟು ಪ್ರಮಾಣದಲ್ಲಿ ಅದು ಸಿಗುವುದಿಲ್ಲ. ಪ್ರತಿಯೊಂದು ಹಳ್ಳಿಯಲ್ಲಿಯೂ ಜೀವನದ ಈ ಪ್ರಾಥಮಿಕ ಅಗತ್ಯವನ್ನು ಪೂರೈಸಬೇಕು. ಗಾಳಿ, ಬೆಳಕು ಮತ್ತು ಭೂಮಿಯಂತೆ, ನೀರು ಕೂಡ ದೇವರ ಉಚಿತ ಕೊಡುಗೆ. ಮತ್ತು ಇದನ್ನು ಉಪಯೋಗಿಸುವುದು ಪ್ರತಿಯೊಬ್ಬನ ಆಜನ್ಮಸಿದ್ಧಹಕ್ಕು ಎಂಬುದು ನನ್ನ ಭಾವನೆ. ಹಾಲಿ ಇರುವ ಕುಡಿನೀರಿನ ಭಾವಿಗಳನ್ನು ರಿಪೇರಿ ಮಾಡುವ ಮತ್ತು ಹೊಸ ಭಾವಿಗಳನ್ನು ತೋಡಿಸುವ ಮೂಲಕ ಕುಡಿಯುವ ನೀರನ್ನು ಒದಗಿಸುವ ಕಾರ್ಯಕ್ರಮವನ್ನು ರಾಜ್ಯ ಸರಕಾರವು ಹಾಕಿಕೊಂಡಿದೆ. ಆರೋಗ್ಯ ಕೇಂದ್ರಗಳನ್ನು ತೆರೆಯುವ, ಶೌಚಾಲಯಗಳನ್ನು ನಿರ್ಮಿಸುವ ಮತ್ತು ಹಳ್ಳಿಗಳ ರಸ್ತೆಗಳಿಗೆ ಜಲ್ಲಿ, ಕಲ್ಲುಗಳನ್ನು ಹಾಕಿ ಯೋಗ್ಯವನ್ನಾಗಿಸುವ ಗ್ರಾಮಾಂತರ ನೈರ್ಮಲ್ಯದ ಕಾರ್ಯಕ್ರಮವನ್ನೂ ಸರಕಾರವು ಹಾಕಿಕೊಂಡಿದೆ. 1952ರಲ್ಲಿ ಸಮುದಾಯ ಅಭಿವೃದ್ಧಿ ಕಾರ್ಯಕ್ರಮವು ರೂಪಿತವಾದಂದಿನಿಂದ ಇಲ್ಲಿಯವರೆಗೆ, ಅಸಂಖ್ಯಾತ ಕುಡಿಯುವ ನೀರಿನ ಭಾವಿಗಳನ್ನು ತೋಡಲಾಗಿದೆ, ಹಲವಾರು ಭಾವಿಗಳನ್ನುರಿಪೇರಿ ಮಾಡಲಾಗಿದೆ ಅಥವಾ ನವೀಕರಿಸಲಾಗಿದೆ, ಹಳ್ಳಿಗಳಲ್ಲಿ ಶೌಚಾಲಯಗಳನ್ನು ಮತ್ತು ಚರಂಡಿಗಳನ್ನು ನಿರ್ಮಿಸಲಾಗಿದೆ, ಹಳ್ಳಿಯ ಹಾದಿಗಳನ್ನು ಯೋಗ್ಯ ರಸ್ತೆಗಳನ್ನಾಗಿ ಮಾಡಲಾಗಿದೆ. ಆದರೆ, ಇವೆಲ್ಲವುಗಳಿಂದ ಸಮಸ್ಯೆಯ ಸ್ವಲ್ಪ ಭಾಗವನ್ನು ಮಾತ್ರ ಪರಿಹರಿಸಿದಂತೆ ಆಗಿದೆ. ಕೃಷಿ ಹಾಗೂ ಕೈಗಾರಿಕೆ – ಎರಡೂ ಕ್ಷೇತ್ರಗಳಲ್ಲಿ ಮಾಡಬೇಕಾದುದು ಇನ್ನೂ ಸಾಕಷ್ಟಿದೆ.

ಸಮುದಾಯ ಅಭಿವೃದ್ಧಿ ಹಾಗೂ ರಾಷ್ಟ್ರೀಯ ಉದ್ಯೋಗ ಯೋಜನೆಗಳ ಉದ್ದೇಶಗಳು – ಪ್ರತಿ ಹಳ್ಳಿಗೂ ಯೋಜನೆಯ ವಿಷಯದಲ್ಲಿ ಸಹಾಯಮಾಡುವುದು, ಕೃಷಿ ಉತ್ಪಾದನೆಯನ್ನು ಹೆಚ್ಚುಮಾಡುವುದಕ್ಕಾಗಿ ಸಮಗ್ರ, ವಿವಿಧ ಹಂತಗಳ ಕುಟುಂಬ ಹಾಗೂ ಹಳ್ಳಿಯ ಮಟ್ಟಗಳಲ್ಲಿ ಯೋಜನೆಯನ್ನು ಕಾರ್ಯಗತಗೊಳಿಸುವುದು; ಹಾಲಿ ಇರುವ ಗ್ರಾಮ ಕುಶಲ ಉದ್ದಿಮೆಗಳು ಹಾಗೂ ಇತರ ಉದ್ದಿಮೆಗಳನ್ನು ಸುಧಾರಿಸುವುದು ಮತ್ತು ಹೊಸವುಗಳನ್ನು ಪ್ರಾರಂಭಿಸುವುದು; ಕನಿಷ್ಠ ಮಟ್ಟದ ಆರೋಗ್ಯ ಸೇವೆಗಳನ್ನಾದರೂ ಒದಗಿಸುವುದು ಮತ್ತು ಆರೋಗ್ಯದ ಬಗೆಗಿನ ಪರಿಪಾಠವನ್ನು ಉತ್ತಮಗೊಳಿಸುವುದು; ಮಕ್ಕಳಿಗೆ ಶಿಕ್ಷಣದ ಸೌಲಭ್ಯಗಳನ್ನು ಹಾಗೂ ವಯಸ್ಕರ ಶಿಕ್ಷಣ ಕಾರ್ಯಕ್ರಮವೊಂದನ್ನು ಒದಗಿಸುವುದು, ಮನರಂಜನಾ ಕಾರ್ಯಕ್ರಮಗಳನ್ನು ನೀಡುವುದು ಮತ್ತು ಮನೆಯಲ್ಲಿ ಮತ್ತು ಕುಟುಂಬದಲ್ಲಿ ಜೀವನದ ಮಟ್ಟವನ್ನು ಹೆಚ್ಚುಮಾಡುವುದು; ಸಮುದಾಯ ಅಭಿವೃದ್ಧಿಯ ಮಾರ್ಗದರ್ಶಿಯ ಪ್ರಕಾರ ಹಳ್ಳಿಯ ಹೆಂಗಸರು ಮತ್ತು ಯುವಕರಿಗೆ ಕಾರ್ಯಕ್ರಮಗಳನ್ನು ನೀಡುವುದು, ಮುಂತಾದವು. ಹಳ್ಳಿಗಳಿಗೆ ಹೊಸ ರೂಪವನ್ನು ನೀಡುವಂತಹ ಸಾಮಾಜಿಕ ವಾತಾವರಣವನ್ನು ಮತ್ತು ಧೋರಣೆಯನ್ನು ಸೃಜಿಸುವುದು, ತಮ್ಮ ಜೀವನದ ರೀತಿಯನ್ನು ಹಾಗೂ ಅವರ ಪಾರಂಪರಿಕ ಅಭ್ಯಾಸಗಳನ್ನು, ವಿಧಾನಗಳನ್ನು ಉತ್ತಮಗೊಳಿಸುವಂತೆ ಮಾಡುವುದು ಸಮುದಾಯ ಅಭಿವೃದ್ಧಿ ಮತ್ತು ರಾಷ್ಟ್ರೀಯ ವಿಸ್ತರಣಾ ಯೋಜನೆಗಳಲ್ಲಿ ತೊಡಗಿಕೊಂಡಿರುವ ಎಲ್ಲ ಅಧಿಕಾರಿಗಳ ಅಥವಾ ಅಧಿಕಾರೇತರರ ಉದ್ದೇಶವಾಗಿರಬೇಕು. ಇದಕ್ಕೆ ಬೇಕಾದುದು ಮಾನವೀಯ ಭಾವನೆ ಮತ್ತು ಗ್ರಾಮಾಂತರ ಪ್ರದೇಶಗಳಲ್ಲಿನ ಸಾಮಾಜಿಕ, ಆರ್ಥಿಕ ಮತ್ತು ಶೈಕ್ಷಣಿಕ ವಾತಾವರಣದ ಬಗ್ಗೆ ಮಾನವೀಯ ಪರಿಗಣನೆ.

ಎಲ್ಲಾ ಕಾರ್ಮಿಕ ವರ್ಗಗಳೂ – ಅದರಲ್ಲಿಯೂ ಮುಖ್ಯವಾಗಿ, ಕೃಷಿ, ಪಶುಸಂಗೋಪನೆ, ತೋಟಗಾರಿಕೆ, ಮೀನುಗಾರಿಕೆಗಳ ಕಾರ್ಮಿಕರು ಖಾಯಂ ಕೆಲಸದ ಆಶ್ವಾಸನೆಯನ್ನು, ಪ್ರತಿ ತಿಂಗಳೂ ನಿಯತವಾಗಿ ಕನಿಷ್ಠ 50 ರೂಗಳ ವೇತನವನ್ನು ಪಡೆಯುವಂತಹ ವಾತಾವರಣವನ್ನು ನಾವು ಸೃಷ್ಟಿಸಬೇಕು. ಹೀಗೆ ಮಾಡಿದರೆ, ಉದ್ಯೋಗವನ್ನು ಅರಸುತ್ತಾ ನಗರಪ್ರದೇಶಗಳಿಗೆ ವಲಸೆಹೋಗುವುದನ್ನು ತಪ್ಪಿಸಬಹುದು. ಈ ಕನಿಷ್ಠ ಅಗತ್ಯಗಳನ್ನು ಒದಗಿಸಿದರೆ, ನಮ್ಮ ಹಳ್ಳಿಗಳಲ್ಲಿಯ

ಜೀವನದ ಚಿತ್ರವು ಮೂಲಭೂತವಾಗಿ ಬದಲಾಗುತ್ತದೆ ಮತ್ತು ಅವರ ಮನೋಭಾವದಲ್ಲಾಗುವ ಬದಲಾವಣೆಯಿಂದ, ತೃಪ್ತ ಜೀವನದಿಂದ ನಮ್ಮ ಆಹಾರದ ಕೊರತೆ ತನ್ನಿಂದ ತಾನೇ ಮಾಯವಾಗುತ್ತದೆ.

ಸಾರ್ವತ್ರಿಕ ಮತ್ತು ಕಡ್ಡಾಯ ಶಿಕ್ಷಣವನ್ನು ಮಕ್ಕಳಿಗೆ – ಅದರಲ್ಲಿಯೂ, ದುರ್ಬಲವರ್ಗದ ಮತ್ತು ಕಾರ್ಮಿಕ ವರ್ಗದವರ ಮಕ್ಕಳಿಗೆ– ನೀಡುವುದು, ಹಾಗೂ ಮಹಿಳೆಯರ ಮತ್ತು ಮಕ್ಕಳ ಕಲ್ಯಾಣ ಇವೆರಡಕ್ಕೂ ಸರಕಾರದ ಗಮನವು, ನಮ್ಮ ರಾಜ್ಯದ ಎಲ್ಲಾ ಅಭಿವೃದ್ಧಿ ಕಾರ್ಯಕ್ರಮಗಳಲ್ಲಿ, ಆದ್ಯತೆಯ ಮೇಲೆ ದೊರಕಬೇಕು.

**ಎ. ಕೃಷಿ ಮತ್ತು ಕೈಗಾರಿಕೆಯಿಂದ ರಾಜ್ಯದ ಅಭಿವೃದ್ಧಿ:**

ಆಹಾರಕ್ಕಾಗಿ, ಕೈಗಾರಿಕಾ ಕಚ್ಚಾವಸ್ತುಗಳಿಗಾಗಿ ಏರುತ್ತಿರುವ ಬೇಡಿಕೆಯನ್ನು ಕೃಷಿಯು ಪೂರೈಸಬೇಕು. ಅಭಿವೃದ್ಧಿಹೊಂದುತ್ತಿರುವ ಕೈಗಾರಿಕೆಗಳಿಗೆ ಮತ್ತು ನಗರೀಕರಣದ ಸಮಸ್ಯೆಗಳಿಗೆ ಸಂಬಂಧಿಸಿದಂತೆ ಅಗತ್ಯವಾದ ಕಾರ್ಮಿಕರನ್ನೂ ಒದಗಿಸಬೇಕು. ಅದೇ ಸಮಯದಲ್ಲಿ, ಜನಸಂಖ್ಯೆಯ ಏರಿಕೆಯ ಸಮಸ್ಯೆಯನ್ನು ಹಾಗೂ ಪೌಷ್ಟಿಕ ಆಹಾರದ ಬೇಡಿಕೆಯನ್ನೂ ಕೃಷಿ ವಲಯವು ಎದುರಿಸಬೇಕಾಗುತ್ತದೆ. ಕೈಗಾರಿಕೆಯು ಕೃಷಿಯ ಉತ್ಪಾದನಾ ಸಾಮರ್ಥ್ಯವನ್ನು ಹೆಚ್ಚಿಸಲು ಮತ್ತು ಹಳೆಯ ಜೀವನ ಪದ್ದತಿಯನ್ನು ಬಿಟ್ಟು ವಾಣಿಜ್ಯ ಮತ್ತು ಕೈಗಾರಿಕಾ ಚಟುವಟಿಕೆಗಳನ್ನು ಅಂಗವಾಗಿ ಉಳ್ಳ ಜೀವನದ ಶೈಲಿಯನ್ನು ಅಳವಡಿಸಿಕೊಳ್ಳಲು, ಬದಲಾಯಿಸಿಕೊಳ್ಳಲು ಜನರಿಗೆ ಅಗತ್ಯವಾದ ಸಾಧನಗಳನ್ನು ಒದಗಿಸುತ್ತದೆ. ಇದಕ್ಕಾಗಿ ಕೈಗಾರಿಕೆಗೆ ಸಂಕೀರ್ಣವಾದ ಕೌಶಲ್ಯ ಮತ್ತು ತಂತ್ರಗಳು ಅಗತ್ಯವಾಗಿರುತ್ತವೆ. ಕೈಗಾರಿಕೆಗಳು ಅಪಾರ ಉದ್ಯೋಗಾವಕಾಶಗಳನ್ನು ನೀಡುತ್ತದೆ ಮತ್ತು ಇದಕ್ಕಾಗಿ ಹಳ್ಳಿಗಳಿಂದ ಹೆಚ್ಚು ಹೆಚ್ಚು ಸಂಖ್ಯೆಯಲ್ಲಿ ಕಾರ್ಮಿಕರನ್ನು ಆಕರ್ಷಿಸುತ್ತದೆ. ಆಧುನಿಕ ಕೃಷಿ ಪದ್ಧತಿಗಳನ್ನು ಅಳವಡಿಸಿಕೊಂಡು ಆಹಾರೋತ್ಪಾದನೆಯ ಮಟ್ಟವನ್ನು ಹೆಚ್ಚಿಸುವ ಜವಾಬ್ದಾರಿಯು ಹಳ್ಳಿಯಲ್ಲೇ ಉಳಿದ ಇತರರ ಮೇಲೆ ಬೀಳುತ್ತದೆ. ಕೃಷಿಯು ಒಂದು ವೃತ್ತಿಯಾಗಿ ಲಾಭದಾಯಕವಾಗಿಲ್ಲದಿದ್ದರೆ ಮತ್ತು ಕೃಷಿಕಾರ್ಮಿಕರು ತೃಪ್ತರಾಗಿಲ್ಲದಿದ್ದರೆ ಕೃಷಿಕೆಲಸಗಳನ್ನು – ಹಾಲಿ ಇರುವ ಕೃಷಿ ಚಟುವಟಿಕೆಗಳನ್ನು – ಸಂಬಾಳಿಸಲು

ಕಾರ್ಮಿಕರ ಕೊರತೆ ಎದುರಾಗುತ್ತದೆ. ರಾಷ್ಟ್ರೀಯ ಆರ್ಥಿಕತೆಯಲ್ಲಿ ಕೃಷಿ ಮತ್ತು ಕೈಗಾರಿಕೆಗಳು ಪ್ರಮುಖ ಪಾತ್ರಗಳನ್ನು ವಹಿಸುತ್ತವೆ. ಇದನ್ನು ಬಹಳ ಹಿಂದೆಯೇ ನಮ್ಮ ಯೋಜನಾಕರ್ತೃಗಳು ಯೋಚಿಸಿದ್ದರು. ಕಳೆದ ದಶಕದಲ್ಲಿ, ಅಂದರೆ ಮೊದಲ ಹಾಗೂ ಎರಡನೆಯ ಪಾಂಚವಾರ್ಷಿಕ ಯೋಜನೆಯ ಅವಧಿಯಲ್ಲಿ, ಹಿಂದಿನ ದಶಕದಲ್ಲಿ ಇದ್ದುದಕ್ಕಿಂತಲೂ ಹೆಚ್ಚಿನ ಪ್ರಗತಿಯು ದಾಖಲಾಗಿದೆ. ದೇಶದಲ್ಲಿ ಕೃಷಿ ಉತ್ಪಾದನೆಯು ಶೇ 35ರಷ್ಟು ಹೆಚ್ಚಾದರೆ, ಆಹಾರಧಾನ್ಯಗಳ ಉತ್ಪಾದನೆಯು ಸುಮಾರು 20 ದಶಲಕ್ಷ ಟನ್ನುಗಳಷ್ಟು ಹೆಚ್ಚಾಯಿತು. 1959ರ ಅಂತ್ಯದ ಹೊತ್ತಿಗೆ ಕೈಗಾರಿಕಾ ಉತ್ಪನ್ನವು ಶೇ 51ರಷ್ಟು ಪ್ರಗತಿಯನ್ನು ಸಾಧಿಸಿತ್ತು. ಈ ಹೆಚ್ಚಳಗಳನ್ನು ಉಳಿಸಿಕೊಂಡು, ಆಹಾರಧಾನ್ಯಗಳ ಮತ್ತು ಇತರ ಪದಾರ್ಥಗಳ ಉತ್ಪಾದನೆಯ ಗತಿಯನ್ನು ಇನ್ನೂ ತೀವ್ರವಾಗುವಂತೆ ಮಾಡುವುದಕ್ಕಾಗಿ ಮೂರನೆಯ ಪಾಂಚವಾರ್ಷಿಕ ಯೋಜನೆಯಲ್ಲಿ ಗುರಿಯನ್ನು ಹಾಕಿಕೊಳ್ಳಲಾಗಿದೆ. ಮೂರನೆಯ ಯೋಜನೆಯ ಅವಧಿಯಲ್ಲಿ ರಾಜ್ಯದಲ್ಲಿನ ಆಹಾರೋತ್ಪಾದಯಲ್ಲಿ 7.50 ಲಕ್ಷ ಟನ್ನುಗಳ ಹೆಚ್ಚಳವನ್ನು ಸಾಧಿಸಲು ಯೋಜನೆಯನ್ನು ಹಾಕಿಕೊಳ್ಳಲಾಗಿದೆ. ಹೀಗಾದಾಗ, ಮೂರನೆಯ ಪಾಂಚವಾರ್ಷಿಕ ಯೋಜನೆಯ ಅಂತ್ಯದಲ್ಲಿ ನಮ್ಮ ರಾಜ್ಯದ ಒಟ್ಟು ಆಹಾರೋತ್ಪಾದನೆಯು 48.5 ಲಕ್ಷಟನ್ನುಗಳಷ್ಟಾಗಬಹುದು. ಆದರೂ, ಅಷ್ಟು ಹೊತ್ತಿಗೆ ನಮ್ಮ ಜನಸಂಖ್ಯೆಯು 25 ದಶಲಕ್ಷವನ್ನು ಮುಟ್ಟಿರುವುದರಿಂದ ಮತ್ತು ಪ್ರತಿಯೊಬ್ಬರಿಗೂ ಸರಾಸರಿ 16 ಔನ್ಸ್ ಆಹಾರದ ಅಗತ್ಯವನ್ನು ಇಟ್ಟುಕೊಂಡು ಲೆಕ್ಕ ಹಾಕಿದರೆ, ಈ ಮಟ್ಟದ ಆಹಾರೋತ್ಪಾದನೆಯಲ್ಲಿಯೂ ಸ್ವಲ್ಪ ಮಟ್ಟಿನ ಕೊರತೆ ಇರುತ್ತದೆ. ಮೂರನೆಯ ಯೋಜನೆಯ ಅವಧಿಯಲ್ಲಿ, ರಾಜ್ಯದ ವಿವಿಧ ಪ್ರದೇಶಗಳಲ್ಲಿ ಹತ್ತಿ, ಕಬ್ಬು, ಗೋಡಂಬಿ, ತೆಂಗು, ಅಡಿಕೆ, ಏಲಕ್ಕಿ ಮೊದಲಾದ ವಾಣಿಜ್ಯ ಬೆಳೆಗಳ ಅಭಿವೃದ್ಧಿಯನ್ನು ಸಾಧಿಸಲು ಹಲವಾರು ಕಾರ್ಯಕ್ರಮಗಳನ್ನು ಹಾಕಿಕೊಳ್ಳಲಾಗಿದೆ. ಹಳ್ಳಿಗಳಲ್ಲಿ ಕೃಷಿ ಉತ್ಪಾದನೆಗಳ ಹೆಚ್ಚಳದ ಜೊತೆಜೊಗೆಗೇ ಪಂಚಾಯತಿಗಳು ಹಣ್ಣು ಮತ್ತು ತರಕಾರಿಗಳನ್ನು ಬೆಳೆಯಲು ತೀವ್ರವಾದ ಗಮನವನ್ನು ನೀಡಬೇಕು. ತಮ್ಮ ವ್ಯಾಪ್ತಿಯ ಹಳ್ಳಿಗಳಲ್ಲಿನ ಬೇಡಿಕೆಯನ್ನು ಸಂಪೂರ್ಣವಾಗಿ ಪೂರೈಸಿಕೊಂಡ ನಂತರ ಈ ಪದಾರ್ಥಗಳ ಕೊರತೆಯನ್ನು ಎದುರಿಸುತ್ತಿರುವ ಸುತ್ತಮುತ್ತಲಿನ ಪ್ರದೇಶಗಳಿಗೆ ತಮ್ಮ ಹೆಚ್ಚುವರಿ ಉತ್ಪಾದನೆಯನ್ನು ಮಾರುವಷ್ಟರ ಮಟ್ಟಿಗೆ

ಉತ್ಪಾದನೆಯನ್ನು ಹೆಚ್ಚಿಸಲು ಪಂಚಾಯತಿಗಳು ಪ್ರಯತ್ನಪಡಬೇಕು. ಪ್ರತಿ ಹಳ್ಳಿಯೂ ತನ್ನಲ್ಲಿ ದೊರೆಯುವ ಸೌಲಭ್ಯಗಳನ್ನು ಉಪಯೋಗಿಸಿಕೊಂಡು ಮತ್ತು ಅಲ್ಲಿನ ವಾತಾವರಣಗಳಿಗೆ ತಕ್ಕಂತೆ ಅಲ್ಲಿ ಬೆಳೆಯಬಹುದಾದವುಗಳ ಮೇಲೆ ಹೆಚ್ಚಿನ ಗಮನವನ್ನು ಕೇಂದ್ರೀಕರಿಸುವುದರ ಮೂಲಕ ಹೆಚ್ಚಿನ ಉತ್ಪಾದನೆಯನ್ನು ಸಾಧಿಸಿದರೆ ಸುತ್ತಮುತ್ತಲಿನ ಪ್ರದೇಶ ಹಾಗೂ ರಾಜ್ಯದ ಇತರ ಪ್ರದೇಶಗಳೊಂದಿಗೆ ಅಧಿಕ ಪ್ರಮಾಣದ ವ್ಯಾಪಾರ ವ್ಯವಹಾರಗಳನ್ನು ಇಟ್ಟುಕೊಳ್ಳುವುದು ಸಾಧ್ಯವಾಗುತ್ತದೆ. ಹಳ್ಳಿಯಲ್ಲಿನ ಸಂಪನ್ಮೂಲಗಳನ್ನು, ಇತರ ಅವಕಾಶಗಳನ್ನು ಗರಿಷ್ಠ ಪ್ರಮಾಣದಲ್ಲಿ ಬಳಸಿಕೊಳ್ಳಲು ಪಂಚಾಯತಿಗಳು ತಮ್ಮೆಲ್ಲಾ ಪ್ರಯತ್ನಗಳನ್ನೂ ತೊಡಗಿಸಬೇಕು.

ತಮ್ಮ ಮನೆ, ಉದ್ಯೋಗಗಳನ್ನು ಹಿಂದೆ ಬಿಟ್ಟು ಉದ್ಯೋಗಾಕಾಶಗಳನ್ನು ಅರಸುತ್ತಾ ನಗರ ಪ್ರದೇಶಗಳಿಗೆ ವಲಸೆ ಹೋಗುವ ಪ್ರವೃತ್ತಿ ಕೃಷಿಕಾರ್ಮಿಕರಲ್ಲಿ ಇದೆ. ಇದಕ್ಕೆ ಎರಡು ಕಾರಣಗಳಿವೆ. ಮೊದಲನೆಯದಾಗಿ, ಕೈಗಾರಿಕೆಗಳಲ್ಲಿ ಕೆಲಸಮಾಡುವ ಕಾರ್ಮಿಕರು ಮತ್ತು ಸರಕಾರಿ ಸೇವೆಗಳಲ್ಲಿರುವವರು ಗಳಿಸುವಷ್ಟು ಆದಾಯವನ್ನು ಕೃಷಿಕಾರ್ಮಿಕರು ಗಳಿಸಲಾರರು. ಎರಡನೆಯದಾಗಿ, ಆಹಾರೋತ್ಪಾದನೆಯಲ್ಲಿ ಬೆವರು ಸುರಿಸಿ ದುಡಿಯುವ ಕೃಷಿಕಾರ್ಮಿಕರು, ತಮ್ಮ ಅಲ್ಪ ಗಳಿಕೆಯಿಂದ ತಮಗೆ ಬೇಕಾದಷ್ಟು ಪ್ರಮಾಣದ ಆಹಾರಧಾನ್ಯಗಳನ್ನು ಕೊಂಡುಕೊಳ್ಳಲು ಸಮರ್ಥರಾಗಿರುವುದಿಲ್ಲ. ಇದರ ಪರಿಣಾಮವಾಗಿ, ಕೃಷಿಕಾರ್ಮಿಕರನ್ನು, ಅದರಲ್ಲಿಯೂ ಶಿಕ್ಷಿತ ಯುವಕರನ್ನು ಹಿಡಿದಿಟ್ಟುಕೊಳ್ಳುವಷ್ಟು ಆಕರ್ಷಣೆಯನ್ನು ಕೃಷಿಯು ಹೊಂದಿಲ್ಲ. ಆಹಾರದ ಉತ್ಪಾದನೆಯು ಹೆಚ್ಚಬೇಕಾದರೆ, ಈ ಪರಿಸ್ಥಿತಿಯು ಸುಧಾರಿಸಬೇಕು. ಎಷ್ಟು ವಿಧದ ನವೀನ ಕೃಷಿವಿಧಾನಗಳು ಬಂದರೂ, ನಮ್ಮ ಬೇಸಾಯಗಾರರಲ್ಲಿ ಹೆಚ್ಚಿನ ಜನರು ಇನ್ನೂ ಪಾರಂಪರಿಕ ವಿಧಾನಗಳಿಗೇ ಜೋತುಬಿದ್ದಿದ್ದಾರೆ. ಕೃಷಿಕಾರ್ಮಿಕರು ತಮ್ಮ ಸಾಕಷ್ಟು ಉತ್ತಮ ಜೀವನವನ್ನು ನಡೆಸಲು ಅನುವಾಗುವ ಹಾಗೆ ಅವರಿಗೆ ವೇತನವು ಕೃಷಿಯಿಂದ ದೊರೆಯುವವರೆಗೆ ನಮ್ಮ ಆಹಾರೋತ್ಪಾದನೆಯಲ್ಲಿ ಹೆಚ್ಚಳವನ್ನು ಕಾಣುವುದು ಸಾಧ್ಯವಿಲ್ಲ.

ಆಹಾರದ ಸಮಸ್ಯೆಯನ್ನು ಪರಿಣಾಮಕಾರಿಯಾಗಿ ಪರಿಹರಿಸಲು, ಕನಿಷ್ಠ ತಾಲ್ಲೂಕು ಮಟ್ಟದಲ್ಲಿಯಾದರೂ ಸಂಯುಕ್ತ ಬೇಸಾಯ ಪದ್ಧತಿಯನ್ನು ಜಾರಿಗೆ

ತರಬೇಕು; ಕೃಷಿಯಲ್ಲಿ ಆಧುನಿಕ ಪದ್ಧತಿಗಳನ್ನು ಅನುಸರಿಸುವುದರೊಂದಿಗೆ, ಅನೇಕ ನಿರುದ್ಯೋಗಿಗಳಿಗೆ ವರ್ಷಪೂರ್ತಿ ಉದ್ಯೋಗವನ್ನು ನೀಡಬಹುದಾದ ಹಂದಿ ಸಾಕಣೆ, ಕೋಳಿಸಾಕಣೆ, ಕುರಿಸಾಕಣೆ, ಹಾಲಿನ ಉತ್ಪಾದನೆ, ತೋಟಗಾರಿಕೆ, ಒಳನಾಡು ಮೀನುಗಾರಿಕೆ ಮತ್ತು ಇತರ ಕೃಷಿಗೆ ಸಂಬಂಧಿಸಿದ ಕೈಗಾರಿಕೆಗಳು ಸ್ಥಾಪಿತವಾಗಬೇಕು. ಇದಕ್ಕೆ ಆದ್ಯತೆ ಸಲ್ಲಬೇಕು. ಸಣ್ಣಪುಟ್ಟ ಹಿಡುವಳಿದಾರರು ಸಹಕಾರ ತತ್ತ್ವಗಳ ಆಧಾರದ ಮೇಲೆ ಒಟ್ಟಾಗಿ ಬೇಸಾಯಮಾಡುವ ಪದ್ಧತಿಯನ್ನು ಅನುಸರಿಸಿ ತಮ್ಮ ಬಳಿಯಿರುವ ಸ್ವಲ್ಪ ಜಮೀನಿಂದಲೇ ಅಧಿಕ ಲಾಭವನ್ನು ಪಡೆಯಬೇಕು. ಈ ಸಹಕಾರಿ ವ್ಯವಸಾಯಗಾರರಿಗೆ ಸಕಾಲದಲ್ಲಿ ಸೇವೆಗಳನ್ನು ಸಲ್ಲಿಸುವ, ಕಡಿಮೆ ಬಡ್ಡಿದರದಲ್ಲಿ ಸಾಲಗಳನ್ನು, ರಸಗೊಬ್ಬರಗಳನ್ನು ಮತ್ತು ಉಪಕರಣಗಳನ್ನು ನೀಡುವ ಕರ್ತವ್ಯದಲ್ಲಿ ಸೇವಾ ಸಹಕಾರಿ ಸಂಘಗಳು ಸದಾ ಸಿದ್ಧವಾಗಿರಬೇಕು. ಕೃಷಿಕಾರ್ಮಿಕರಿಗೆ ಉದ್ಯೋಗವನ್ನು ಒದಗಿಸಲು ಮತ್ತು ಆಹಾರದ ಸಮಸ್ಯೆಯನ್ನು ಪರಿಹರಿಸಲು ಸರಕಾರವು ಸಾಕಷ್ಟು ಜಮೀನು ಮತ್ತು ಸೌಲಭ್ಯಗಳು ತನ್ನ ಅಧೀನದಲ್ಲಿರುವೆಡೆಗಳಲ್ಲಿ ತೋಟಗಾರಿಕೆ ಮತ್ತು ಪಶುಸಂಗೋಪನಾ ಕೇಂದ್ರಗಳನ್ನು ತೆರೆಯಬೇಕು. ಕೋಳಿಗಳಿಗೆ, ಮೊಟ್ಟೆಗಳಿಗೆ, ಮಾಂಸ ಮತ್ತು ಮೀನುಗಳಿಗೆ, ಹಾಗೂ ತರಕಾರಿ ಮತ್ತು ಹಣ್ಣುಗಳಿಗೆ ವಿಪರೀತವಾದ ಬೇಡಿಕೆಗಳಿವೆ. ಈ ಬೇಡಿಕೆಗಳನ್ನು ಪೂರೈಸುವ ನಿಟ್ಟಿನಲ್ಲಿ ನಾವು ಕಾರ್ಯಕ್ರಮಗಳನ್ನು ಹಮ್ಮಿಕೊಂಡರೆ, ಕೃಷಿಕಾರ್ಮಿಕರ ನಿರುದ್ಯೋಗ ಸಮಸ್ಯೆಯನ್ನು ಪರಿಹರಿಸುವುದರ ಜೊತೆಗೆ ರಾಷ್ಟ್ರೀಯ ಪೌಷ್ಟಿಕತೆಯಲ್ಲಿನ ಗುಣಮಟ್ಟವನ್ನೂ ಹೆಚ್ಚಿಸಬಹುದು.

ಮೂರನೆಯ ಪಾಂಚವಾರ್ಷಿಕ ಯೋಜನೆಯ ಅಡಿಯಲ್ಲಿನ ಎಲ್ಲಾ ಅಭಿವೃದ್ಧಿ ಯೋಜನೆಗಳಲ್ಲಿ ಹಿಂದುಳಿದ ವರ್ಗಗಳವರ, ಅದರಲ್ಲಿಯೂ ವಿಶೇಷವಾಗಿ ಪರಿಶಿಷ್ಟ ಜಾತಿ ಮತ್ತು ಪಂಗಡಗಳವರ ಪ್ರಯೋಜನಕ್ಕಾಗಿ ಮತ್ತು ಅವರು ಸಾಮಾಜಿಕ, ಆರ್ಥಿಕ ಹಾಗೂ ಶೈಕ್ಷಣಿಕ ಮತ್ತು ಸಾಂಸ್ಕೃತಿಕ ಮಟ್ಟವನ್ನು ಸುಧಾರಿಸಿಕೊಳ್ಳುವಂತೆ ಮಾಡಲು ನಿರ್ದಿಷ್ಟ ಮೊತ್ತವನ್ನು ಪ್ರತ್ಯೇಕವಾಗಿ ತೆಗೆದಿರಿಸುವುದು ಕೇಂದ್ರ ಮತ್ತು ರಾಜ್ಯ ಸರಕಾರಗಳ ನೀತಿಯಾಗಿದೆ. ಇದೊಂದು ಸಾಂವಿಧಾನಿಕ ಜವಾಬ್ದಾರಿಯಾಗಿದ್ದು ಇಲ್ಲಿಯವರೆಗೂ ಅನುಷ್ಠಾನಗೊಂಡಿರಲಿಲ್ಲವಾದರೂ, ಮೂರನೆಯ ಪಾಂಚವಾರ್ಷಿಕ ಯೋಜನೆಯ ಅವಧಿಯಲ್ಲಿ ಜಾರಿಗೆ

ಬರುತ್ತಿರುವುದರಿಂದ ನನಗೆ ಸಂತೋಷವಾಗಿದೆ. ಈ ವರ್ಗಗಳವರನ್ನು ಶೋಷಣೆ, ದುರಾಸೆ, ಕ್ರೌರ್ಯ, ಹಸಿವು ಮತ್ತು ನಿರಾಶೆಗಳಿಂದ ಮುಕ್ತಗೊಳಿಸಲು ನಾವು ವಿಫಲರಾದರೆ, ಸಂಸದೀಯ ಪ್ರಜಾಪ್ರಭುತ್ವಕ್ಕೆ ಭದ್ರವಾದ ಅಡಿಗಲ್ಲನ್ನು ಹಾಕುವ ನಮ್ಮ ಕರ್ತವ್ಯದಲ್ಲಿಯೂ ವಿಫಲರಾಗುತ್ತೇವೆ. ಅಭಿವೃದ್ಧಿ ಕಾರ್ಯಕ್ರಮಗಳಿಗಾಗಿ ವೆಚ್ಚಮಾಡುತ್ತಿರುವ ಹಣದಲ್ಲಿ ಬಹುಭಾಗವನ್ನು ರಸ್ತೆ ನಿರ್ಮಾಣದಂತಹ ಉದ್ದೇಶಗಳ ಬದಲಾಗಿ ಈ ವರ್ಗಗಳವರ ಕಲ್ಯಾಣಕ್ಕಾಗಿ ಬಳಸಿಕೊಳ್ಳಬೇಕೆಂದು ನಾನು ಅಭಿಪ್ರಾಯಪಡುತ್ತೇನೆ. ರಸ್ತೆ ನಿರ್ಮಾಣ ಮೊದಲಾದ ಕೆಲಸಗಳನ್ನು ಮುಂದೆ ಎಂದಾದರೂ ಕೈಗೆತ್ತಿಕೊಳ್ಳಬಹುದು. ಇಲ್ಲಿಯವರೆಗೂ ನಿರ್ದಯವಾಗಿ ಶೋಷಿಸಲ್ಪಡುತ್ತಿರುವ ಮತ್ತು ಕೆಳಕ್ಕೆ ತುಳಿಯಲ್ಪಡುತ್ತಿರುವ ಬಡ ಹಾಗೂ ಶ್ರಮಜೀವಿ ವರ್ಗಗಳ ರಕ್ಷಣೆಯುನಮ್ಮ ಪ್ರಥಮ ಕರ್ತವ್ಯವಾಗಿರುತ್ತದೆ.

ಕುಟೀರ ಕೈಗಾರಿಕೆಗಳು ಕೃಷಿಕಾರ್ಮಿಕರಿಗೆ ಪೂರಕ ಉದ್ಯೋಗಾವಕಾಶಗಳನ್ನು ಒದಗಿಸುವುದರಿಂದ ಹಳ್ಳಿಗಳಲ್ಲಿ ಅವುಗಳನ್ನು ಅಧಿಕ ಸಂಖ್ಯೆಯಲ್ಲಿ ಸ್ಥಾಪಿಸಬೇಕು. ನಮ್ಮ ಗ್ರಾಮಾಂತರ ಪ್ರದೇಶಗಳಲ್ಲಿ, ನೇಯುವುದು, ಕಂಬಳಿಗಳನ್ನು ತಯಾರಿಸುವುದು, ಚಾಪೆ ಹೆಣೆಯುವುದು, ಪಾದರಕ್ಷೆಗಳನ್ನು ತಯಾರಿಸುವುದು, ಜೈನು ಸಾಕಣೆ, ಬುಟ್ಟಿ ಹೆಣೆಯುವುದು, ಮರಗೆಲಸ, ಸಣ್ಣಪುಟ್ಟ ಕೃಷಿ ಸಲಕರಣೆಗಳನ್ನು ತಯಾರಿಸುವುದು ಮೊದಲಾದ ಕುಟೀರ ಕೈಗಾರಿಕೆಗಳಿಗೆ ಸಾಕಷ್ಟು ಅವಕಾಶಗಳು ಇವೆ. ಪ್ರತಿ ಹಳ್ಳಿಯಲ್ಲಿಯೂ ಪ್ರಾರಂಭಿಸಬಹುದಾದ ಕೈಗಾರಿಕೆಗಳು ಅಲ್ಲಿ ದೊರೆಯುವ ಕಚ್ಚಾವಸ್ತುಗಳು, ಕುಶಲ ಕೆಲಸಗಾರರು, ಮಾರುಕಟ್ಟೆಯ ಸೌಲಭ್ಯ ಮೊದಲಾದವುಗಳನ್ನು ಅವಲಂಬಿಸಿರಬೇಕು. ಪಂಚಾಯತಿಗಳಿಗೆ ಯಾವುದೇ ಕುಟೀರ ಕೈಗಾರಿಕೆಗಳನ್ನು ಪ್ರಾರಂಭಿಸುವಲ್ಲಿ ಅಗತ್ಯವಾದ ನೆರವನ್ನು ಸರಕಾರದ ಅಭಿವೃದ್ಧಿ ಇಲಾಖೆಯು ಒದಗಿಸಲು ಸದಾ ಸಿದ್ಧವಿದೆ.

ಹಳ್ಳಿಗಳ ಮತ್ತು ಸಣ್ಣ ಕೈಗಾರಿಕೆಗಳ ಯೋಜಿತ ಅಭಿವೃದ್ಧಿಗಾಗಿ ಸಾಕಷ್ಟು ಹಣವನ್ನು ರಾಜ್ಯಸರಕಾರವು ತೆಗೆದಿರಿಸಿದೆ ಮತ್ತು ಈ ಉದ್ದೇಶಕ್ಕಾಗಿ ಸಣ್ಣ ಕೈಗಾರಿಕೆಗಳ ಮಂಡಳಿ, ಖಾದಿ ಮತ್ತು ಗ್ರಾಮ ಉದ್ಯೋಗಗಳ ಆಯೋಗ, ತೆಂಗಿನ ನಾರಿನ ಮಂಡಳಿ ಮೊದಲಾದ ಮಂಡಳಿಗಳ ವಿಶಾಲವಾದ ಜಾಲವನ್ನು ಸ್ಥಾಪಿಸಿದೆ. 1959–60ನೆಯ ಸಾಲಿನಲ್ಲಿ ಸಮುದಾಯ ಅಭಿವೃದ್ಧಿ ಕಾರ್ಯಕ್ರಮದ

ಅಡಿಯಲ್ಲಿ 1749 ಜನರಿಗೆ ಒಟ್ಟು 2.23 ಲಕ್ಷ ರೂಗಳ ಸಾಲವನ್ನು ಕೊಡಲಾಗಿತ್ತು. ಪ್ರಾತ್ಯಕ್ಷಿಕೆ ಮತ್ತು ತರಬೇತಿ ಕೇಂದ್ರಗಳಲ್ಲಿ 1,500ಕ್ಕೂ ಹೆಚ್ಚಿನ ಗ್ರಾಮೀಣ ಕುಶಲಕರ್ಮಿಗಳಿಗೆ ಮೂಲ ತರಬೇತಿಯನ್ನು, 500 ಜನರಿಗೆ ಪುನರನುಸಂಧಾನದ ತರಬೇತಿಯನ್ನು ಇದೇ ಅವಧಿಯಲ್ಲಿ ನೀಡಲಾಯಿತು. ಅಂಕಿ ಅಂಶಗಳಿಂದ ನಿಮಗೆ ಬೇಸರವನ್ನುಂಟುಮಾಡಲು ನಾನು ಇಚ್ಛಿಸುವುದಿಲ್ಲ. ಕಳೆದ ಕೆಲವು ವರ್ಷಗಳಲ್ಲಿ ಸಾಕಷ್ಟು ಗ್ರಾಮೀಣ ಕೈಗಾರಿಕೆಗಳನ್ನು ಸ್ಥಾಪಿಸಲಾಗಿದೆ, ಆದರೆ ವಿವಿಧ ಹಳ್ಳಿಗಳಲ್ಲಿ ಇಂತಹ ಹಲವಾರು ಕೈಗಾರಿಕೆಗಳನ್ನು ಸ್ಥಾಪಿಸುವ ಆವಶ್ಯಕತೆ ಇನ್ನೂ ಇದೆ ಎಂದು ಹೇಳಿದರೆ ಸಾಕೆನ್ನಿಸುತ್ತದೆ. ಮೂರನೆಯ ಯೋಜನೆಯಲ್ಲಿ ಯೋಜಿಸಿರುವ ಕೈಮಗ್ಗದ ಉದ್ದಿಮೆಗೆ ಪುನಶ್ಚೇತನವನ್ನು ನೀಡುವ ಕಾರ್ಯಕ್ರಮದಲ್ಲಿನ ಸಹಕಾರಿ ಸಂಘಗಳ ತೆಕ್ಕೆಯಲ್ಲಿ 18,000 ನೇಕಾರರು ಬರುತ್ತಾರೆ, 30 ವಾಸಪ್ರದೇಶಗಳನ್ನು ಅಭಿವೃದ್ಧಿಗೊಳಿಸಲಾಗುವುದು, 950 ಕೈಗಾರಿಕಾ ಷೆಡ್ಡುಗಳನ್ನು ಕಟ್ಟಲಾಗುವುದು. ಈ ಉದ್ದೇಶಕ್ಕಾಗಿ 359.27 ಲಕ್ಷ ರೂಗಳನ್ನು ತೆಗೆದಿರಿಸಲಾಗಿದೆ. ಹಾಗೆಯೇ ಮರಗಳ ಕೆತ್ತನೆ ಕೆಲಸಗಳನ್ನೂ ಒಳಗೊಂಡಂತೆ ಕರಕುಶಲವಸ್ತಗಳ ಉತ್ಪಾದಕರ ಸಹಾಯಕ್ಕಾಗಿ 85 ಲಕ್ಷ ರೂ.ಗಳನ್ನು ಮೀಸಲಿರಿಸಲಾಗಿದೆ. ಇಸಲ್ಲದೆ, ಕೈಗಾರಿಕೆಗಳಿಂದ ಉತ್ಪಾದನೆ ಮತ್ತು ಆದಾಯಗಳನ್ನು ಹೆಚ್ಚಿಸುವುದಕ್ಕಾಗಿ, ಇತ್ತೀಚಿನ ವಾಣಿಜ್ಯ ಮತ್ತು ವ್ಯವಹಾರದಲ್ಲಿನ ಬೆಳವಣಿಗೆಗಳಲ್ಲಿ ಜನರಿಗೆ ತರಬೇತಿಯನ್ನು ನೀಡಲು, ಸ್ವಸಹಾಯದ ಅಭ್ಯಾಸಗಳನ್ನು ಬೆಳೆಸಲು ಮೂರನೆಯ ಯೋಜನೆಯ ಅವಧಿಯಲ್ಲಿ ಗ್ರಾಮೀಣ ಕೈಗಾರಿಕಾ ಯೋಜನೆಯ ಮೂಲಕ ಸಹಾಯವನ್ನು ನೀಡಲು 85.50 ಲಕ್ಷ ರೂಗಳನ್ನು ತೆಗೆದಿರಿಸಲಾಗಿದೆ. ತಮ್ಮ ಅಗತ್ಯಗಳಿಗೆ ಅನುಗುಣವಾಗಿ ಸಂಪನ್ಮೂಲಗಳನ್ನು ರೂಢಿಸಿಕೊಳ್ಳಲು, ತಮ್ಮ ವ್ಯಾಪ್ತಿಯ ಹಳ್ಳಿಗಳಲ್ಲಿ ಕಾನೂನಿನ ಅಡಿಯಲ್ಲಿ ತೆರಿಗೆಯನ್ನು ವಿಧಿಸಲು ಪಂಚಾಯತಿಗಳಿಗೆ ಅಗತ್ಯವಾದ ಅಧಿಕಾರವನ್ನು ನೀಡಲಾಗಿದೆ. ಈ ಪ್ರಯತ್ನಗಳಿಂದ ಕ್ರೋಢೀಕರಿಸಿದ ಹಣವು ತಮ್ಮ ಕಾರ್ಯಕ್ರಮಗಳಿಗೆ ಸಾಲದೆ ಬಂದರೆ, ಪಂಚಾಯತಿಗಳು ಯಾವಾಗ ಬೇಕಾದರೂ ಹೆಚ್ಚುವರಿ ಅನುದಾನಕ್ಕಾಗಿ ಸರಕಾರವನ್ನು ಕೇಳಿಕೊಳ್ಳಬಹುದು. ಪಂಚಾಯತಿಗಳು ತಮ್ಮ ಕಾರ್ಯಕ್ರಮಗಳಿಗೆ ಅಗತ್ಯವಾದಷ್ಟು ಹಣವನ್ನು ಪಡೆಯಲು ಜನಗಳ ಮೇಲೆ ಗರಿಷ್ಠಮಟ್ಟದ ತೆರಿಗೆಯನ್ನು ವಿಧಿಸಲು ಹಿಂದೆಮುಂದೆ ನೋಡಬೇಕಾದ ಅಗತ್ಯವಿಲ್ಲ. ತೆರಿಗೆಯನ್ನು ವಿಧಿಸುವುದು ಕೇವಲ

ಸಾಧನವೇ ಹೊರತು, ಅದೇ ತಮ್ಮ ಮುಖ್ಯ ಉದ್ದೇಶವಲ್ಲ ಎಂಬ ಅಂಶವನ್ನು ಅವುಗಳು ಮನಸ್ಸಿನಲ್ಲಿ ಇಟ್ಟುಕೊಳ್ಳಬೇಕು. ತಮ್ಮ ಮೇಲೆ ತೆರಿಗೆಯನ್ನು ವಿಧಿಸುತ್ತಿರುವುದು ತಮಗೆ ಹೆಚ್ಚಿನ ಸೌಲಭ್ಯಗಳನ್ನು ಒದಗಿಸಲು ಮತ್ತು ತಮ್ಮ ಜೀವನದ ಗುಣಮಟ್ಟವನ್ನು ಹೆಚ್ಚಿಸಲು ಎಂಬುದನ್ನು ಜನತೆಯೂ ಅರ್ಥಮಾಡಿಕೊಳ್ಳುವಂತೆ ಮಾಡಬೇಕು. ಜನಗಳ ಮನಸ್ಸನ್ನು ಮತ್ತು ಧನಾತ್ಮಕವಾದ ಸಹಕಾರವನ್ನು ಗಳಿಸಿ, ರೂಢಿಸಿಕೊಳ್ಳುವುದನ್ನು ಪಂಚಾಯತಿಗಳಿಂದ ನಿರೀಕ್ಷಿಸಲಾಗಿದೆ.

ನೀವು ತಿಳಿದಿರುವಂತೆ, ಸಹಕಾರದ ಚಳವಳಿಯುನ್ನು ಜನರ ಚಳವಳಿಯನ್ನಾಗಿಸುವುದು ಮತ್ತು ಸಾಮಾಜಿಕ ಮತ್ತು ಆರ್ಥಿಕ ಅಭಿವೃದ್ಧಿಯ ಪ್ರವರ್ತನಾ ಪ್ರವೃತ್ತಿಯನ್ನು ಮತ್ತು ಅದನ್ನು ನಿರ್ವಹಿಸುವ ಜವಾಬ್ದಾರಿಯನ್ನು ಪಂಚಾಯತಿಗಳಿಗೇ ವಹಿಸುವುದು ಸರಕಾರದ ನೀತಿಯಾಗಿದೆ. ಸಹಕಾರ ಸಂಘಗಳ ಸಹಯೋಗದೊಂದಿಗೆ ಪಂಚಾಯತಿಗಳು ರೈತರ ಸಾಲದ ಅಗತ್ಯಗಳನ್ನು ಪೂರೈಸುವ ಗುರಿಯನ್ನು ಹಾಕಿಕೊಳ್ಳಬೇಕು. ವಿವಿಧೋದ್ದೇಶಗಳ ಸಂಘಗಳನ್ನೂ ಒಳಗೊಂಡಂತೆ ವಿವಿಧ ಬಗೆಯ ಸಹಕಾರಿ ಸಂಘಗಳನ್ನು ಸ್ಥಾಪಿಸಲು ಹಳ್ಳಿಗಳ ಜನರಿಗೆ ಪ್ರೋತ್ಸಾಹವನ್ನು ನೀಡಬೇಕು.

ಗ್ರಾಮೀಣ ಆರ್ಥಿಕತೆಯ ಪುನರುತ್ಥಾನ ಬಹುಮಟ್ಟಿಗೆ ಜಾನುವಾರುಗಳ ಅಭಿವೃದ್ಧಿಯ ಮೇಲೆ ಅವಲಂಬಿಸಿರುತ್ತದೆ. ಕೆಲಸಕ್ಕೆ ಬರುವ ಎತ್ತುಗಳು ಕೃಷಿ ಉತ್ಪಾದನೆಯಲ್ಲಿ ಸಹಾಯಮಾಡಿದರೆ, ಹಾಲುಕರೆಯುವ ಹಸುಗಳು ಆಹಾರ ಸೇವನೆಯ ಸ್ವರೂಪವನ್ನು ಉತ್ತಮಗೊಳಿಸುವಲ್ಲಿ ಸಹಾಯವನ್ನು ಮಾಡುತ್ತವೆ. ಹಾಲಿ ಇರುವ ಕೆಳದರ್ಜೆಯ ತಳಿಗಳನ್ನು ಉತ್ತಮಗೊಳಿಸುವುದು, ಪಶುರೋಗಗಳಿಗೆ ಪರಿಹಾರವನ್ನು ಒದಗಿಸುವುದು, ಮತ್ತು ಹಾಲಿನ ಪದಾರ್ಥಗಳಿಗೆ ಉತ್ತಮ ಮಾರುಕಟ್ಟೆಯನ್ನು ಒದಗಿಸುವುದು ಇವೇ ಮೊದಲಾದ ಕ್ರಮಗಳಿಂದ ಜಾನುವಾರುಗಳ ಪ್ರಮಾಣ ಮತ್ತು ಗುಣಮಟ್ಟವನ್ನು ಹೆಚ್ಚಿಸುವ ಹಲವಾರು ಯೋಜನೆಗಳು ಜಾರಿಗೊಳ್ಳುತ್ತಲಿವೆ. ಸಮತೂಕದ ಆಹಾರದ ನಿಯಮದ ಪ್ರಕಾರ ಪ್ರತಿಯೊಬ್ಬನ ಹಾಲಿನ ಬಳಕೆ 10 ಔನ್ಸ್‌ಗಳಿರಬೇಕಾಗಿದ್ದರೆ, ಈಗಿನ ಬಳಕೆ ದಿನಕ್ಕೆ, ವ್ಯಕ್ತಿಯೊಬ್ಬನಿಗೆ 4.76 ಔನ್ಸ್‌ಗಳಿವೆ. ಈ ಬಳಕೆಯನ್ನು ಕನಿಷ್ಠ 8 ಔನ್ಸ್‌ಗಳಿಗೆ ಏರಿಸುವ ಗುರಿಯನ್ನು ಮೂರನೆಯ ಯೋಜನೆಯಲ್ಲಿ ಹಾಕಿಕೊಳ್ಳಲಾಗಿದೆ. ಪಶುಸಂಪತ್ತು ಹೆಚ್ಚಿದಂತೆಲ್ಲಾ,

ಅದರ ಜೊತೆಜೊತೆಗೇ ಕೋಳಿಸಾಕಣೆಯನ್ನು ಲಾಭದಾಯಕವಾಗಿ ನಡೆಸುವ ಪ್ರಯತ್ನಗಳನ್ನು ಹೆಚ್ಚಿಸುವುದಕ್ಕೆ ಕ್ರಮಗಳನ್ನು ಪಂಚಾಯತಿಗಳು ತೆಗೆದುಕೊಳ್ಳಬೇಕು. ಇದು ಕೃಷಿ ಉತ್ಪಾದನೆಗೆ ಪೂರಕವಾಗುವುದಷ್ಟೇ ಅಲ್ಲದೆ ಆಹಾರೋತ್ಪಾದನೆಯನ್ನೂ ಕೂಡ ಹೆಚ್ಚಿಸಬಲ್ಲುದು. ಈಗಿರುವ ತಲಾ ನಾಲ್ಕು ಮೊಟ್ಟೆಗಳ ಬಳಕೆಯನ್ನು ಮೂರನೆಯ ಯೋಜನೆಯ ಅಂತ್ಯದ ವೇಳೆಗೆ ಹದಿನೈದು ಮೊಟ್ಟೆಗಳಿಗೆ ಏರಿಸುವ ಸಲುವಾಗಿ 33 ಕೋಟಿ ಮೊಟ್ಟೆಗಳನ್ನು ಉತ್ಪಾದಿಸುವ ಯೋಜನೆಯನ್ನು ಸರಕಾರವು ಹಾಕಿಕೊಂಡಿದೆ. ಹೇಂಟೆಗಳ ಸಂಖ್ಯೆಯನ್ನು ಶೇ 50ರಷ್ಟು ಅಧಿಕಗೊಳಿಸುವುದರಿಂದ, ಸ್ಥಳೀಯ ತಳಿಗಳನ್ನು ಉತ್ತಮಗೊಳಿಸುವುದರಿಂದ ಮತ್ತು ಅವುಗಳ ಮೊಟ್ಟೆ ಇಡುವ ಸಾಮರ್ಥ್ಯವನ್ನು ಹೆಚ್ಚಿಸುವುದರಿಂದ ಮಾತ್ರ ಈ ಗುರಿಯನ್ನು ಸಾಧಿಸಬಹುದು.

**ಬಿ. ಅಧಿಕಾರ ವಿಕೇಂದ್ರೀಕರಣ ಮತ್ತು ಗ್ರಾಮಪಂಚಾಯಿತಿ ಪಾತ್ರ :**

ಗ್ರಾಮ ಪಂಚಾಯತಿಗಳು ದುಡಿಯುವ ವರ್ಗದ ಆರ್ಥಿಕ ಪರಿಸ್ಥಿತಿಯನ್ನು ಸುಧಾರಿಸುವ ಮತ್ತೊಂದು ರೀತಿಯೆಂದರೆ, ಸೌಲಭ್ಯಗಳು ಇರುವ ಕಡೆಗಳಲ್ಲಿ ಒಳನಾಡು ಮೀನುಗಾರಿಕೆಯನ್ನು ಅಭಿವೃದ್ಧಿಪಡಿಸುವುದು. ಮೂರನೆಯ ಯೋಜನೆಯ ಅವಧಿಯಲ್ಲಿ ಒಳನಾಡು ಮೀನುಗಾರಿಕೆಯ ಸಂಶೋಧನಾ ಕೇಂದ್ರವೊಂದನ್ನು ರಾಜ್ಯದಲ್ಲಿ ಸ್ಥಾಪಿಸಲು ಉದ್ದೇಶಿಸಲಾಗಿದೆ. ಸೌಲಭ್ಯಗಳು ಇರುವೆಡೆಗಳಲ್ಲಿ ಒಳನಾಡು ಮೀನುಗಾರಿಕೆಯನ್ನು ಅಭಿವೃದ್ಧಿಪಡಿಸಲು ಈ ಸಂಶೋಧನಾ ಸಂಸ್ಥೆಯನ್ನು ಸ್ಥಾಪಿಸುವವರೆಗೆ ಕಾಯಬೇಕಾದ ಆವಶ್ಯಕತೆಯಿಲ್ಲ. ತಮ್ಮ ಬಳಿಬಂದ ಸಹಾಯಾಕಾಂಕ್ಷಿಗಳಿಗೆ ಅಗತ್ಯವಾದ ಎಲ್ಲಾ ಸಹಾಯಗಳನ್ನೂ ಮತ್ತು ತಾಂತ್ರಿಕ ನೆರವನ್ನೂ ನೀಡಲು ಮೀನುಗಾರಿಕಾ ಇಲಾಖೆಯ ನಿರ್ದೇಶಕರು ಯಾವಾಗಲೂ ಸಿದ್ಧರಿರುತ್ತಾರೆ. ಆದರೆ ಆಕಾಂಕ್ಷಿಗಳು ಅವರ ಬಳಿಗೆ ತಮ್ಮ ಅಹವಾಲನ್ನು ತೆಗೆದುಕೊಂಡು ಹೋಗಬೇಕು ಅಷ್ಟೇ.

ಆಧುನಿಕ ವಿಧಾನಗಳನ್ನು ಕೃಷಿ, ಪಶುಸಂಗೋಪನೆ, ತೋಟಗಾರಿಕೆ, ಒಳನಾಡು ಮೀನುಗಾರಿಕೆಗಳಲ್ಲಿ ಅಳವಡಿಸಿಕೊಳ್ಳುವುದು, ಮತ್ತು ಕುಟೀರ ಹಾಗೂ ಸಣ್ಣ ಪ್ರಮಾಣದ ಕೈಗಾರಿಕೆಗಳನ್ನು ಪ್ರಾರಂಭಿಸುವುದು ಇವುಗಳ ಮೂಲಕ ಆರ್ಥಿಕ ಪ್ರಗತಿಯನ್ನು ಸಾಧಿಸುವಲ್ಲಿ ಗ್ರಾಮಪಂಚಾಯತಿಗಳು ಸಹಾಯಮಾಡಬಹುದಾದ ವಿಧಾನಗಳನ್ನು ನಾನು ನಿಮಗೆ ಸಂಕ್ಷೇಪವಾಗಿ ತಿಳಿಸಿದ್ದೇನೆ. ಆಧುನಿಕ

ವಿಧಾನಗಳನ್ನು ಅರಿತುಕೊಳ್ಳುವ ಮನೋಧರ್ಮವನ್ನು ಗ್ರಾಮಪಂಚಾಯತಿಯ ಸದಸ್ಯರು ಹೊಂದಿದ್ದರೆ ಮತ್ತು ಸಮಸ್ಯೆಗಳನ್ನು ಪರಿಹರಿಸುವ ತಮ್ಮ ಪ್ರಯತ್ನಗಳನ್ನು ಸೇವಾ ಮನೋಭಾವದಿಂದ ಮಾಡಿದರೆ, ರಾಜ್ಯದಲ್ಲಿರುವ ಬಡತನದ ಭೂತವನ್ನು ಹೊಡೆದೋಡಿಸುವುದಷ್ಟೇ ಅಲ್ಲದೆ, ಆರ್ಥಿಕ ಪ್ರಗತಿಯ ವಿವಿಧ ಕ್ಷೇತ್ರಗಳಲ್ಲಿ ಆಶ್ಚರ್ಯಕರ ಅಭಿವೃದ್ಧಿಯನ್ನು ಅವರು ಸಾಧಿಸಬಹುದು.

ನಿಮ್ಮಲ್ಲಿರುವ ಉತ್ಸಾಹ ಮತ್ತು ಅವಿರತವಾದ ಶ್ರಮದಿಂದ ಹಳ್ಳಿಗಳ ಪ್ರಗತಿಗೆ ಹೊಸ ದಾರಿಯನ್ನು ತೋರಿಸುವ ಮೂಲಪ್ರವರ್ತಕರಾಗುವುದಷ್ಟೇ ಅಲ್ಲದೆ, ಗ್ರಾಮೀಣ ಪ್ರದೇಶಗಳಲ್ಲಿ ಹೊಸ ನಾಯಕತ್ವದ, ಆಸೆಗಳ, ಸಂಸದ, ಪ್ರಗತಿಯ ಕಾಂತಿಯುಕ್ತವಾದ ವಾತಾವರಣವನ್ನು ನೀವು ಸೃಷ್ಟಿಸಬಹುದು. ಅದು ನಿಮ್ಮ ಜೀವನಕ್ಕೆ ಅತ್ಯಂತ ಆಪ್ತವಾದ ಗುರಿಯಾಗಿರಬೇಕು. ಯಾವ ಮೂಲದಿಂದಲೇ ಬಂದಿರಲಿ ಮತ್ತು ಎಲ್ಲೇ ಇರಲಿ ಅನ್ಯಾಯದ ವಿರುದ್ಧ ನೀವು ಹೋರಾಡಬೇಕು. ಆದರೆ ಅಷ್ಟಕ್ಕೇ ನಿಲ್ಲದೆ, ಮುಖಂಡತ್ವವನ್ನು ಬೆಳೆಸುವಾಗ ಅಂತಹ ಸನ್ನಿವೇಶಗಳು ಮೂಡಿದರೆ, ಅದರ ವಿರುದ್ಧ ಹೋರಾಡುವ ಮನೋಭಾವವನ್ನೂ ಬೆಳೆಸಿಕೊಳ್ಳಬೇಕು. ಯಾರಿಗಾದರೂ ಆಗಲಿ ಅನ್ಯಾಯವು ಆಗಿದ್ದರೆ ಅಥವಾ ಆಗುವುದರಲ್ಲಿ ಇದ್ದರೆ, ಅಸಮಾನತೆಯು ಆಚರಣೆಯಲ್ಲಿದ್ದರೆ – ಅದು ನಿಮ್ಮ ರಾಷ್ಟ್ರಪ್ರೇಮಕ್ಕೆ ಮತ್ತು ಕಾರ್ಮಿಕ ವರ್ಗದ ಸಾಮಾಜಿಕ ಒಳಿತಿಗೆ ಕೆಡುಕನ್ನುಂಟುಮಾಡುವ ಹಾಗಿದ್ದರೆ – ಅದನ್ನು ನೀವು ಸಹಿಸಬಾರದು.

ಪ್ರಪಂಚದಲ್ಲಿ ಅಭಿವದ್ಧಿಹೊಂದಿರುವ ದೇಶಗಳಲ್ಲಿ ಮಾನವನ ಚಟುವಟಿಕೆಯ ಹಲವು ಕ್ಷೇತ್ರಗಳಲ್ಲಿ ಆಶ್ಚರ್ಯಕರವಾದ ಪ್ರಗತಿಯನ್ನು ಸಾಧಿಸಲಾಗಿದೆ. ಉದಾಹರಣೆಗೆ ರಷ್ಯಾ ದೇಶದಲ್ಲಿ ದಿನಕ್ಕೆ 40 ರಿಂದ 50 ಸೇರುಗಳವರೆಗೆ ಹಾಲನ್ನು ಕರೆಯುವ ಹಸುಗಳನ್ನು ನಾನು ನೋಡಿದ್ದೇನೆ. ಇಂತಹ ಅದ್ಭುತವಾದ ಪ್ರಗತಿಗೆ ಹೋಲಿಸಿದಾಗ, ಈ ಕ್ಷೇತ್ರದಲ್ಲಿನ ನಮ್ಮ ಪ್ರಗತಿಯು ಅತ್ಯಂತ ಕಳಪೆಯೆಂದೇ ಹೇಳಬೇಕು. ಇದೊಂದೇ ಕ್ಷೇತ್ರವಲ್ಲದೆ ನಮ್ಮ ಚಟುವಟಿಕೆಯ ಇತರ ಎಲ್ಲಾ ಕ್ಷೇತ್ರಗಳಲ್ಲಿಯೂ ಶೀಘ್ರವಾದ ಪ್ರಗತಿಯನ್ನು ಸಾಧಿಸಲು ನಾವು ಹೆಚ್ಚಿನ ಪ್ರಯತ್ನವನ್ನು ಹಾಕಬೇಕು. ಹಾಲಿನ ಉತ್ಪಾದನೆಗೆ ನಾವು ಆದ್ಯತೆಯನ್ನು ನೀಡಬೇಕು. ಏಕೆಂದರೆ, ಸಂವಿಧಾನದ ಪ್ರಕಾರ, 'ಸರಕಾರವು ತನ್ನ ಹಲವು

ಪ್ರಾಥಮಿಕ ಕರ್ತವ್ಯಗಳಲ್ಲಿ, ಪೌಷ್ಟಿಕತೆಯನ್ನು ಹೆಚ್ಚುಗೊಳಿಸುವುದಕ್ಕೆ, ತನ್ನ ಜನರ ಜೀವನಮಟ್ಟವನ್ನು ಏರಿಸುವುದಕ್ಕೆ ಮತ್ತು ಸಾರ್ವಜನಿಕ ಆರೋಗ್ಯವನ್ನು ಸುಧಾರಿಸುವುದಕ್ಕೆ ಆದ್ಯತೆಯನ್ನು ನೀಡಬೇಕು'. ಸರಕಾರವು ತನ್ನ ಕೈಲಾದುದೆಲ್ಲವನ್ನೂ ಈ ನಿಟ್ಟಿನಲ್ಲಿ ಮಾಡುತ್ತಿದೆ. ಮೂರನೆಯ ಯೋಜನೆಯ ಅಡಿಯಲ್ಲಿ ಕೂಡ ಸರಕಾರವು ಹಲವು ಯೋಜನೆಗಳನ್ನು ಹಮ್ಮಿಕೊಂಡಿದೆ. ಆದರೆ, ಜನತೆಯ ಮೇಲೆ ಹೆಚ್ಚಿನ ಜವಾಬ್ದಾರಿಯಿದೆ. ಸಂವಿಧಾನವು ನಮಗೆ ಆರ್ಥಿಕ, ಸಾಮಾಜಿಕ ಮತ್ತು ರಾಜಕೀಯ ಹಕ್ಕುಗಳನ್ನು ನೀಡಿರುವುದು ನಿಸ್ಸಂಶಯ. ಈ ಸಾಂವಿಧಾನಿಕ ಸವಲತ್ತುಗಳು ಆಲೋಚನಾ ಮಟ್ಟದಿಂದ ಇಳಿದು ಕಾರ್ಯಗತವಾಗುವ ಹಾಗೆ ಮಾಡುವ ಹೊಣೆ, ಗ್ರಾಮ ಪಂಚಾಯತಿಯ ಚುನಾಯಿತ ಸದಸ್ಯರಾದ ನಿಮ್ಮ ಮೇಲೆ ಇದೆ. ನಿಮ್ಮ, ನಿಮ್ಮ ಮೇಲೆ ಅವಲಂಬಿತರಾಗಿರುವವರ ಹಾಗೂ ಒಟ್ಟಾರೆಯಾಗಿ ಸಮಾಜದ ಕಲ್ಯಾಣಕ್ಕಾಗಿ ನಿಮ್ಮ ಹೊಣೆಗಾರಿಕೆಯು ನಿಮ್ಮ ಪ್ರಜ್ಞೆಯಲ್ಲಿ ಮೂಡುವಂತೆ ನೀವು ಪ್ರಯತ್ನಿಸಬೇಕು. ಸಂವಿಧಾನದ ಅಡಿಯಲ್ಲಿ ರೂಪಿಸಿರುವ ಎಲ್ಲಾ ಸೌಲಭ್ಯ ಮತ್ತು ಸವಲತ್ತುಗಳನ್ನು ನೀವು ನಿಮ್ಮ ಪ್ರಯತ್ನದಿಂದಲೇ ಪಡೆಯಬೇಕು. ಈ ಗುರಿಯನ್ನು ಸಾಧಿಸಲು ಅಗತ್ಯವಾದ ಧೈರ್ಯ ಮತ್ತು ಆತ್ಮವಿಶ್ವಾಸವನ್ನು ನಿಮಗೆ ನಿಮ್ಮ ಹಕ್ಕುಮತ್ತು ಹೊಣೆಗಾರಿಕೆಯ ಬಗೆಗಿನ ಅರಿವು ನೀಡುತ್ತದೆ. ಸೂಕ್ತವಾಗಿ ಆಲೋಚಿಸಿ ರೂಪಿಸಿರುವ ಸರಕಾರದಹಲವಾರು ಕಾರ್ಯಕ್ರಮಗಳು ನಿಮ್ಮ ಜೀವನದ ಗುಣಮಟ್ಟವನ್ನು ಹೆಚ್ಚಿಸಲು ಸೌಲಭ್ಯಗಳನ್ನು ಕಲ್ಪಿಸಿಕೊಡುತ್ತವೆ. ಆದರೆ ನೀವು ಇವುಗಳನ್ನು ಎಷ್ಟರ ಮಟ್ಟಿಗೆ ಉಪಯೋಗಿಸಿಕೊಳ್ಳುತ್ತೀರಿ ಎಂಬುದರ ಮೇಲೆ ನಿಮ್ಮ ಪ್ರಗತಿಯು ನಿಂತಿರುತ್ತದೆ.

ದೌರ್ಭಾಗ್ಯದ ಸಂಗತಿಯೆಂದರೆ, ಯಾವುದೇ ರೀತಿಯ ಶ್ರಮಪೂರ್ಣ ದುಡಿಮೆಯನ್ನಾಗಲೀ, ಒಂದು ತರಹದ ತಿರಸ್ಕಾರದ, ಕೀಳಾದ ದೃಷ್ಟಿಯಿಂದ ನೋಡುವ ಪ್ರವೃತ್ತಿ ನಮ್ಮ ಜನರಲ್ಲಿ ಬೆಳೆದು ಬಂದಿದೆ. ಈ ಪ್ರವೃತ್ತಿಗಾಗಿ ಜನರನ್ನು ದೂಷಿಸುವುದರಿಂದ ಯಾವುದೇ ಪ್ರಯೋಜನವಿಲ್ಲ. ಈ ಪ್ರವೃತ್ತಿಯ ಹಿಂದೆ ಆರ್ಥಿಕ ಮತ್ತು ಸಾಮಾಜಿಕ ಕಾರಣಗಳಿವೆ. ಕಾರ್ಮಿಕರಿಗೆ ನೀಡುವ ಕಡಿಮೆ ಕೂಲಿಯು ಇದಕ್ಕೆ ಮುಖ್ಯ ಕಾರಣವಾಗಿದೆ. ಕೃಷಿಕಾರ್ಮಿಕರಿಗಿಂತ ಹೆಚ್ಚಿನ ವೇತನ ಮತ್ತು ಇತರ ಸೌಲಭ್ಯಗಳನ್ನು ಗಳಿಸುವ ಕೈಗಾರಿಕಾ ಕಾರ್ಮಿಕರನ್ನು

ಇದೇ ಕಾರಣಕ್ಕಾಗಿ ಕೃಷಿಕಾರ್ಮಿಕರಿಗಿಂತ ಹೆಚ್ಚಿನ ಗೌರವದಿಂದ ಕಾಣಲಾಗುತ್ತಿದೆ. ಕೈಗಾರಿಕೆಗಳಲ್ಲಿ ದುಡಿಯುವವರಿಗೆ ವೈದ್ಯಕೀಯ ನೆರವು, ಭವಿಷ್ಯ ನಿಧಿ ಯೋಜನೆ, ವಿಮಾಯೋಜನೆ, ಗೃಹಭತ್ಯೆ, ಮತ್ತಿತರ ಭತ್ಯೆ, ಇವುಗಳಲ್ಲದೆ ನೌಕರಿಯಲ್ಲಿನ ಅವಿಚ್ಛಿನ್ನತೆ ಮತ್ತು ಅಪಘಾತಗಳ ವಿರುದ್ಧ ಪರಿಹಾರ – ಈ ಎಲ್ಲಾ ಸೌಲಭ್ಯಗಳಿವೆ. ಅವನ ದುಡಿಮೆಯ ಅವಧಿಯು ನಿಗದಿತವಾಗಿರುತ್ತದೆ. ಹೆಚ್ಚಿನ ವೇಳೆ ದುಡಿದರೆ, ಅವನಿಗೆ ಅದಕ್ಕೆ ಪ್ರತ್ಯೇಕ ಭತ್ಯ ಸಿಗುತ್ತದೆ. ಆದರೆ, ಕೃಷಿಕಾರ್ಮಿಕರ ಪಾಡು ಏನಾಗಿದೆ? ಅವರು ಬೆಳಗಿನಿಂದ ಸಂಜೆಯವರೆಗೂ ದುಡಿದರೂ, ಅವರಿಗೆ ಸಿಗುವುದು ಅವರ ಎರಡು ಹೊತ್ತಿನ ಊಟಕ್ಕೂ ಸಾಲದಷ್ಟಿರುತ್ತದೆ. ಅವರ ಪರಿಸ್ಥಿತಿಯಲ್ಲಿ ಯಾವ ಸುಧಾರಣೆಯೂ ಕಂಡುಬರದಿರುವುದು ದುರ್ದೈವದ ಸಂಗತಿಯಾಗಿದೆ. ನಮಗೆಲ್ಲಾ ತಿಳಿದಿರುವಂತೆ ನಮ್ಮ ದೇಶದ ಸಂಪತ್ತನ್ನು ಉತ್ಪಾದಿಸುವವರು ಬಹುತೇಕ ರೈತರು. ಆದ್ದರಿಂದ ಅವರನ್ನು ಸರಿಯಾಗಿ ನೋಡಿಕೊಳ್ಳಬೇಕಾದುದು ನ್ಯಾಯವೇ ಸರಿ. ಆದರೆ, ತಾವು ಹಸಿವಿನಿಂದ ಸತ್ತರೂ ಸರಿ, ಶ್ರಮದ ದುಡಿಮೆಯನ್ನು ಮಾಡುವುದಿಲ್ಲವೆಂದು ಸೋಮಾರಿತನದಿಂದ ಕಾಲಕಳೆಯುವಂತಹವರು ಹಲವರು ನಮ್ಮ ದೇಶದಲ್ಲಿದ್ದಾರೆ. ಕೆಲವು ನಿರ್ದಿಷ್ಟ ಸಮುದಾಯಗಳವರಿಗೆ ಕೆಲವು ನಿರ್ದಿಷ್ಟ ಬಗೆಯ ಕೆಲಸಗಳನ್ನು ನಿಗದಿಮಾಡಿರುವ ನಮ್ಮ ಹಳೆಯ ಪದ್ಧತಿಗಳೇ ಇದಕ್ಕೆ ಕಾರಣ. ಆಧುನಿಕ ಕಾಲದಲ್ಲಿ ಈ ಪದ್ಧತಿಗಳು ನಿಷ್ಫಲವೂ, ಅನಪೇಕ್ಷಣೀಯವೂ ಆಗಿವೆ. ನಿಧಾನವಾಗಿ ಜನರು ತಮ್ಮ ತಪ್ಪನ್ನು ತಿದ್ದಿಕೊಂಡು ದುಡಿಮೆಯ ಗೌರವವನ್ನು ಅರಿತುಕೊಳ್ಳಲು ಪ್ರಾರಂಭಿಸುತ್ತಿರುವುದು ಆನಂದದ ವಿಷಯ. ಶಿಕ್ಷಿತನಾದ ಯುವಕನೊಬ್ಬ, ಸ್ಕ್ರೂಡ್ರೈವರ್‌ನ್ನಾಗಲೀ, ಕಟಿಂಗ್ ಪ್ಲೈಯರ್‌ನ್ನಾಗಲೀ, ಗುದ್ದಲಿ, ಪಿಕಾಸಿಯನ್ನಾಗಲೀ ಮುಟ್ಟುವುದು ತನ್ನ ಅಂತಸ್ತಿಗೆ ಕುಂದು ಎಂದು ಭಾವಿಸುತ್ತಿದ್ದ ದಿನಗಳೂ ಈ ಹಿಂದೆ ಇದ್ದವು. ಬಾಲಕ–ಬಾಲಕಿಯರಿಗೆ ದುಡಿಮೆಯ ಗೌರವವನ್ನು ತಿಳಿಹೇಳುವ ಮತ್ತು ಅವರಿಗೆ ಕಲಿಕೆಯ ದಿನಗಳಲ್ಲಿಯೇ ಗಳಿಕೆಯನ್ನೂ ಪಡೆಯುವ ಅವಕಾಶಗಳನ್ನು ಕಲ್ಪಿಸಿದ ಶ್ರಮದಾನದಂತಹ ಕಾರ್ಯಕ್ರಮಗಳಿಗೆ ನಾವು ಕೃತಜ್ಞರಾಗಿರಬೇಕು. ಯುವ ಮನಸ್ಸುಗಳಲ್ಲಿ ಶಿಸ್ತನ್ನು ಮೂಡಿಸಿ, ಬೆಳೆಸಿ, ಅವರ ಚಾರಿತ್ರ್ಯವನ್ನು ರೂಪಿಸುವ, ತನ್ಮೂಲಕ ಅವರ ವ್ಯಕ್ತಿತ್ವವನ್ನು ಬೆಳೆಸಿಕೊಳ್ಳುವಂತೆ, ದುಡಿಮೆಯ ಬಗ್ಗೆ ಗೌರವವನ್ನು ಹೊಂದಿರುವಂತೆ, ಮಾಡುತ್ತಿರುವ ಭಾರತ ಸೇವಾದಳ, ಸ್ಕೌಟ್ ಮತ್ತು ಗೈಡ್‌ಗಳ

ಚಳವಳಿಗೂ ನಾವು ನಮ್ಮ ಕೃತಜ್ಞತೆಯನ್ನು ಸೂಚಿಸಬೇಕು. ಶ್ರಮದ ದುಡಿಮೆಯ ಬಗ್ಗೆ ಇದ್ದ ಜನರ ಧೋರಣೆಯನ್ನು ತಿದ್ದಲು ಇವು ಕೆಲಮಟ್ಟಿಗೆ ಸಹಾಯವನ್ನು ಮಾಡಿವೆ. ಅದರೆ ಇದೇ ದಿಕ್ಕಿನಲ್ಲಿ ಪಂಚಾಯತಿಗಳು ಬಹಳಷ್ಟನ್ನು ಸಾಧಿಸಿ, ಜನರ ಮನಸ್ಸನ್ನು ಬದಲಾಯಿಸಿ ದುಡಿಮೆಗೆ ಇರುವ ಮಹತ್ವವನ್ನು ಮತ್ತೆ ಸ್ಥಾಪಿಸುವ ಅವಕಾಶವನ್ನು ಹೊಂದಿವೆ.

ನಾನಾಗಲೇ ತಿಳಿಸಿದಂತೆ, ಹಳ್ಳಿಗಳ ಪ್ರಾಥಮಿಕ ಅಗತ್ಯಗಳನ್ನು ಪೂರೈಸುವುದು ಗ್ರಾಮಪಂಚಾಯತಿಗಳ ಮೂಲ ಕರ್ತವ್ಯವಾಗಿರುತ್ತದೆ. ನಂತರ ಅವುಗಳು ಹಳ್ಳಿಗಳ ಆರ್ಥಿಕಾಭಿವೃದ್ಧಿಯತ್ತ ತಮ್ಮ ಗಮನವನ್ನು ಹರಿಸಬಹುದು. ಕೃಷಿಯ, ತೋಟಗಾರಿಕೆಯ, ಪಶುಸಂಗೋಪನೆಯ ಮತ್ತು ಒಳನಾಡು ಮತ್ತು ಸಮುದ್ರದಲ್ಲಿನ ಮೀನುಗಾರಿಯ ಅಭಿವೃದ್ಧಿ, ಕುಟೀರ ಮತ್ತು ಸಣ್ಣಪ್ರಮಾಣದ ಕೈಗಾರಿಕೆಗಳೊಂದಿಗೆ ಒಂದು ಆರೋಗ್ಯಪೂರ್ಣ ಆರ್ಥಿಕತೆಯ ಬೆಳವಣಿಗೆಯಲ್ಲಿ ಸಮರ್ಥವಾದ ಪಾತ್ರವನ್ನು ವಹಿಸುತ್ತದೆ ಎಂಬುದನ್ನು ನಾನು ಮತ್ತೆ ಹೇಳುತ್ತೇನೆ. ನಮ್ಮ ಜೀವನಕ್ಕೆ ಅತ್ಯಗತ್ಯವಾದ ಆಹಾರವನ್ನು ಪೂರೈಸುವ ಕೃಷಿಯು ಇವುಗಳಲ್ಲೆಲ್ಲಾ ಮುಖ್ಯವಾದುದು.

ಸಿ. **ಕೃಷಿ ಮತ್ತು ಆಹಾರೋತ್ಪಾದನೆ :**

ಅಧಿಕ ಆಹಾರೋತ್ಪಾದನೆಗೆ ಕಾರಣವಾಗಿರುವ ಕೃಷಿಯ ಸರ್ವಾಂಗೀಣ ಬೆಳವಣಿಗೆಯು ಒಂದಲ್ಲ ಒಂದು ವಿಧದಲ್ಲಿ ಆಹಾರದ ಉತ್ಪಾದನೆಗೆ ಸಂಬಂಧಪಟ್ಟಿರುವ ಎಲ್ಲಾ ಅಭಿವೃದ್ಧಿ ಇಲಾಖೆಗಳ ನಡುವಿನ ಸಹಕಾರದ ನಡುವಿನ ಸಹಯೋಗದ ಮೇಲೆ ನಿಂತಿದೆ. ಉದಾಹರಣೆಗೆ, ಆಹಾರದ ಉತ್ಪಾದನೆ ಕೃಷಿಯಲ್ಲಿನ ಅಭಿವೃದ್ಧಿಯ ಮೇಲೆ ಅವಲಂಬಿತವಾಗಿದೆ. ಕೃಷಿಸಂಬಂಧವಿರುವ ಹಲವಾರು ಅಭಿವೃದ್ಧಿ ಇಲಾಖೆಗಳಿವೆ. ಸಾಧ್ಯವಾದ ಮಟ್ಟಿಗೂ ಈ ಎಲ್ಲಾ ಇಲಾಖೆಗಳೂ ಕೃಷಿ ಖಾತೆಯ ಅಡಿಯಲ್ಲಿಯೇ ಇರಬೇಕು. ಇದರಿಂದ ಈ ಇಲಾಖೆಗಳ ನಡುವಿನ ಹೊಂದಾಣಿಕೆ ಸುಲಭವಾಗುತ್ತದೆ. ಸದ್ಯದಲ್ಲಿ ಯೋಜನೆ ಮತ್ತು ಅಭಿವೃದ್ಧಿ ಇಲಾಖೆಯ ಒಟ್ಟು ಅಂದಾಜುವೆಚ್ಚದಲ್ಲಿ ಸುಮಾರು ಶೇ. 80ರಷ್ಟು ಅಂದಾಜು ವೆಚ್ಚವನ್ನು ಆಹಾರ ಉತ್ಪಾದನೆಗೆ ಹಲವು ಇಲಾಖೆಗಳ, (ಕೃಷಿ, ಪಶುಸಂಗೋಪನೆ, ತೋಟಗಾರಿಕೆ, ಮೀನುಗಾರಿಕೆ ಮೊದಲಾದ

ಲಾಖೆಗಳ) ವಿವಿಧ ಯೋಜನೆಗಳ ಅಡಿಯಲ್ಲಿ ನಿಗದಿಗೊಳಿಸಲಾಗಿದೆ. ಆದರ ಇಲಾಖೆಗಳ ಮೇಲೆ ನೇರವಾಗಿ ಅಧಿಕಾರವನ್ನು ಹೊಂದಿರುವ ಖಾತೆಗೆ, ಯೋಜನೆಗಳ ಅನುಷ್ಠಾನ ಮಾಡುವುದಕ್ಕೆ ಅಧಿಕಾರವಿಲ್ಲ. ಇದರಿಂದಾಗಿ, ಭಿವೃದ್ಧಿ ಖಾತೆಯಾಗಲೀ, ಅಥವಾ ಆಹಾರ ಉತ್ಪಾದನೆಯ ಖಾತೆಯಾಗಲೀ ದರ ಬಗ್ಗೆ ಹೊಣೆಗಾರಿಕೆಯನ್ನು ತಮ್ಮದೆಂದು ಹೊತ್ತುಕೊಳ್ಳುವುದಿಲ್ಲ. ಆದರೆ, ಲ್ಲಿಯಾದರೂ ಎಡವಟ್ಟಾದರೆ, ಯಾವುದಾದರೂ ಅಭಿವೃದ್ಧಿ ಕಾರ್ಯಕ್ರಮದ ರಿಯನ್ನು ಮುಟ್ಟುವಲ್ಲಿ ವಿಫಲವಾದಾಗ, ಒಂದು ಇಲಾಖೆಯು ಮತ್ತೊಂದು ಲಾಖೆಯ ಮೇಲೆ ದೂರನ್ನು ಹೊರಿಸುವುದರಲ್ಲಿ ನಿರತವಾಗಿರುತ್ತದೆ. ಈ ರಿಸ್ಥಿತಿಯು ಬದಲಾಗಬೇಕು ಮತ್ತು ಬೇಗ ಬದಲಾದಷ್ಟು ಸಂಬಂಧಿಸಿದವರೆಲ್ಲರಿಗೂ ಷ್ಟೇ ಒಳಿತಾಗುತ್ತದೆ. ಆಹಾರೋತ್ಪಾದನೆಯ ಮೇಲೆ ಹಲವು ಇಲಾಖೆಗಳ ಡಿತವಿರುವುದರಿಂದ ಆಗುವ ಪರಿಣಾಮವು ಹಳ್ಳಿಗಳ ಮಟ್ಟದಲ್ಲಿ ಸದ್ಯಕ್ಕೆ ಗುವುದಿಲ್ಲವಾದರೂ, ಅದು ನಿಧಾನವಾಗಿ ಹಳ್ಳಿಗಳನ್ನು ತಟ್ಟುತ್ತದೆ. ಅಭಿವೃದ್ಧಿ ಾರ್ಯಕ್ರಮದ ಈ ಜಟಿಲ ಸಮಸ್ಯೆಗೆ ಪರಿಹಾರವನ್ನು ಕಂಡುಹಿಡಿಯಲೇಬೇಕು. ಹುಶಃ, ಇದೇ ರೀತಿಯ ಸಮಸ್ಯೆಗಳನ್ನು ಇತರ ರಾಜ್ಯಗಳೂ ಅನುಭವಿಸುತ್ತಿರಬೇಕು. ದರೆ, ಮೂರನೆಯ ಪಾಂಚವಾರ್ಷಿಕ ಯೋಜನೆಯು ಆಹಾರೋತ್ಪಾದನೆಯ ವಿಧ ಕಾರ್ಯಕ್ರಮಗಳಿಗೆ ನಿಗದಿಗೊಳಿಸಿರುವ ಗುರಿಗಳನ್ನು ಸಂಪೂರ್ಣವಾಗಿ ಾಧಿಸಬೇಕಾದರೆ, ಈ ಎಲ್ಲಾ ಇಲಾಖೆಗಳನ್ನೂ ಒಂದೇ ಖಾತೆಯಲ್ಲಿ ಸೇರಿಸಬೇಕೆಂದು ಾನು ಮತ್ತೆ ಹೇಳುತ್ತೇನೆ. ಈ ವಿಷಯಕ್ಕೆ ನಾವು ಶೀಘ್ರವಾಗಿ ಗಮನವನ್ನು ೀಡಬೇಕು. ಇದು ದೇಶದ ಆಹಾರದ ಉತ್ಪಾದನೆಗೆ ಸಂಬಂಧಿಸಿದ ್ರಶ್ನೆಯಾದುದರಿಂದ, ನಾನು ಸಾಂದರ್ಭಿಕವಾಗಿ ಒಂದಲ್ಲ ಒಂದು ರೂಪದಲ್ಲಿ ದನ್ನು ಮತ್ತೆ ಮತ್ತೆ ಎತ್ತುತ್ತಲೇ ಇರುತ್ತೇನೆ.

ಈ ಸಮ್ಮೇಳನಕ್ಕೆ ಸಂಬಂಧಿಸಿದಂತೆ, ಸಮ್ಮೇಳನದ ಸಂಘಟಕರು ಾಂಚವಾರ್ಷಿಕ ಯೋಜನೆಗಳಲ್ಲಿ ನಿಗದಿಗೊಳಿಸಿದ ಗುರಿ ಹಾಗೂ ಸಾಧನೆಗಳನ್ನು ಿಂಬಿಸುವ ಒಂದು ವಸ್ತುಪ್ರದರ್ಶನವನ್ನು ಏರ್ಪಡಿಸಿರುವುದು ಸಂತೋಷಕರ ಿಷಯ. ನಿಮಗೆಲ್ಲಾ ತಿಳಿದಿರುವಂತೆ, ಯೋಜನೆಯಲ್ಲಿ ರೂಪಿಸಲಾಗಿರುವ ಹಲವು ಕಾರ್ಯಕ್ರಮಗಳ ಯಶಸ್ವೀ ಅನುಷ್ಠಾನದಲ್ಲಿ, ಜನತೆಯು ಪರಿಣಾಮಕಾರಿಯಾಗಿ ಹಾಗೂ ಸ್ವೇಚ್ಛೆಯಿಂದ ಭಾಗವಹಿಸುವಂತೆ ಮಾಡಲು

ಪ್ರಚಾರಕಾರ್ಯದ ಅಗತ್ಯದ ಪ್ರಾಮುಖ್ಯವನ್ನು ಅರಿತ ಸರಕಾರವು ಅಧಿಕ ಮೊತ್ತದ ಹಣವನ್ನು ಈ ಉದ್ದೇಶಕ್ಕಾಗಿ ಮೀಸಲಾಗಿಟ್ಟಿದೆ. ಪಾಂಚವಾರ್ಷಿಕ ಯೋಜನೆಯ ವಿವಿಧ ಅಭಿವೃದ್ಧಿ ಚಟುವಟಿಕೆಗಳಿಗೆ ವ್ಯಾಪಕವಾದ ಪ್ರಚಾರವನ್ನು ಗರಿಷ್ಠಪ್ರಮಾಣದಲ್ಲಿ ನೀಡಲು, ಸಿನೆಮಾ, ವಸ್ತುಪ್ರದರ್ಶನ, ಜಾಹಿರಾತು ಫಲಕ, ಹಾಡುಗಳು, ನಾಟಕಗಳು, ವೃತ್ತಪತ್ರಿಕೆಗಳಲ್ಲಿನ ಜಾಹಿರಾತು, ಕರಪತ್ರಗಳು, ಪುಸ್ತಕಗಳು ಇವುಗಳೇ ಮೊದಲಾದ ಹಲವು ಮಾಧ್ಯಮಗಳನ್ನು ಉಪಯೋಗಿಸಿಕೊಳ್ಳಲಾಗುತ್ತಿದೆ. ಈ ಹಲವು ತರಹದ ಮಾಧ್ಯಮಗಳಲ್ಲಿ, ವಸ್ತುಪ್ರದರ್ಶನವು ಬಹು ಪರಿಣಾಮಕಾರಿಯಾದದ್ದು. ಅದರಲ್ಲಿಯೂ ರಾಜ್ಯದ ಇತರ ಭಾಗಗಳಿಗೆ ಹೋಲಿಸಿದರೆ ಅಕ್ಷರಸ್ಥರ ಸಂಖ್ಯೆ ಕಡಿಮೆಯಿರುವ ಮಲೆನಾಡಿನಂತಹ ಪ್ರದೇಶಗಳಲ್ಲಿ ಅದು ಇನ್ನೂ ಪ್ರಮುಖವಾದ ಸಾಧನವಾಗುತ್ತದೆ. ಬಡತನದ ಕೋಟಲೆಗಳಿಂದ, ರೋಗರುಜಿನಗಳಿಂದ ಮತ್ತು ಅಜ್ಞಾನದಿಂದ ಸಾಮಾನ್ಯ ಮನುಷ್ಯನನ್ನು ಪಾರುಮಾಡಲು ನಡೆಯುತ್ತಿರುವ ಅಗಾಧವಾದ ಪ್ರಯತ್ನಗಳನ್ನು, ಸಾಧನೆಗಳನ್ನು ವಿವಿಧ ರೀತಿಯ ಛಾಯಾಚಿತ್ರಗಳ, ರೇಖಾಚಿತ್ರಗಳ, ಗ್ರಾಫ್‌ಗಳ ಮೂಲಕ ಪ್ರದರ್ಶಿಸಿದರೆ, ಅವು ಅಷ್ಟಾಗಿ ಶಿಕ್ಷಿತರಲ್ಲದವರ ಮನಸ್ಸಿನ ಮೇಲೆ ಅಗಾಧವಾದ ಪರಿಣಾಮವನ್ನು ಅಚ್ಚಳಿಯದ ಹಾಗೆ ಮೂಡಿಸುತ್ತದೆ. ಬಹಳ ಅಚ್ಚುಕಟ್ಟಾಗಿ, ಸುಂದರವಾಗಿ ಆಯೋಜಿಸಿರುವ ಈ ವಸ್ತುಪ್ರದರ್ಶನದ ಸಂಘಟಕರನ್ನು ನಾನು ಅಭಿನಂದಿಸುತ್ತೇನೆ. ಆದರೂ ಅವರಿಗೆ ನನ್ನದೊಂದು ಸಲಹೆ. ಪ್ರದರ್ಶಿತವಾಗಿರುವ ಇದೇ ವಸ್ತುಗಳನ್ನು, ಛಾಯಾಚಿತ್ರ ಹಾಗೂ ರೇಖಾಚಿತ್ರಗಳನ್ನು, ಗ್ರಾಫ್‌ಗಳನ್ನು ಅರ್ಥಮಾಡಿಕೊಳ್ಳಲು ಬರಹದ ಆವಶ್ಯಕತೆಯು ಇರದಿರುವ ಹಾಗೆ, ನೋಡಿದ ಕೂಡಲೇ ಅರ್ಥವನ್ನು ಮಾಡಿಕೊಳ್ಳುವ ರೀತಿಯಲ್ಲಿ ಇನ್ನುಮುಂದೆ ಸಿದ್ಧಗೊಳಿಸಿದರೆ, ಅನಕ್ಷರಸ್ಥರೂ ಸುಲಭವಾಗಿ ತಿಳಿದುಕೊಳ್ಳಬಹುದು. ಹೀಗೆ ಮಾಡಲು,ಈ ಪ್ರದರ್ಶನಗಳು ಹೆಚ್ಚಾಗಿ ಗ್ರಾಮಾಂತರ ಪ್ರದೇಶಗಳಲ್ಲಿಯೇ ನಡೆಯಬೇಕಾಗಿರುವುದರಿಂದ, ಸ್ವಲ್ಪ ಹೆಚ್ಚಿನ ತಾಂತ್ರಿಕ ಪರಿಣತಿ ಬೇಕಾಗುತ್ತದೆ. ಈ ಕ್ಷೇತ್ರದಲ್ಲಿ ನಾವು ಮಾಡಬೇಕಾದುದು ಇನ್ನೂ ಸಾಕಷ್ಟಿದೆ. ಪ್ರದರ್ಶನದ ಸಂಘಟಕರಿಗೆ ವಿಶೇಷವಾದ ತರಬೇತಿಯ ಆವಶ್ಯಕತೆಯಿದೆ.

ಮಾನವನ ಚಟುವಟಿಕೆಯ ಎಲ್ಲಾ ಕ್ಷೇತ್ರಗಳಲ್ಲಿಯೂ ಉನ್ನತ ಸಾಧನೆಯನ್ನು ಮಾಡಿರುವ ಇತರ ದೇಶಗಳ ಮಟ್ಟಕ್ಕೆ ನಾವು, ಅದು ಎಷ್ಟೇ ಕಷ್ಟವಾದರೂ, ಎಷ್ಟೇ ಖರ್ಚಾದರೂ, ಬೆಳೆಯಲು ಪ್ರಯತ್ನವನ್ನುಪಡಬೇಕು.

ನಾವು ಕ್ಷಣಕ್ಷಣಕ್ಕೆ ಬದಲಾಗುತ್ತಿರುವ ಪ್ರಪಂಚದಲ್ಲಿ ಬದಕುತ್ತಿದ್ದೇವೆ. ಮಾನವನ ಅಭಿವೃದ್ಧಿಯ ದಿಕ್ಕಿನಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನದ ಪ್ರಗತಿಯು ಹಲವಾರು ದಾರಿಗಳನ್ನು ತೆರೆದಿಟ್ಟಿದೆ. ನಮ್ಮ ಜನತೆಯು ಹಸಿವು, ರೋಗ ಮತ್ತು ಅಜ್ಞಾನಗಳಿಂದ ಬಿಡುಗಡೆಯನ್ನು ಪಡೆಯದೆ ಇದ್ದರೆ, ಈ ಎಲ್ಲಾ ಪ್ರಗತಿಯೂ ನಿಷ್ಪ್ರಯೋಜಕವಾಗುತ್ತದೆ. ಈ ಸಮ್ಮೇಳನ ಮತ್ತು ಅದಕ್ಕೆ ಸಂಬಂಧಿಸಿದ ವಸ್ತುಪ್ರದರ್ಶನಗಳು ಇಂತಹ ಬಿಡುಗಡೆಯ ಗುರಿಯನ್ನು ಸಾಧಿಸುವ ನಿಟ್ಟಿನಲ್ಲಿ ಇಟ್ಟಿರುವ ಹೆಜ್ಜೆಗಳು.

ಎಲ್ಲಾ ಜಿಲ್ಲಾ ಕೇಂದ್ರಗಳಲ್ಲೂ, ಸಾಧ್ಯವಾದರೆ ತಾಲ್ಲೂಕು ಕೇಂದ್ರಗಳಲ್ಲೂ, ವಸ್ತುಪ್ರದರ್ಶನಕ್ಕೆ ಶಾಶ್ವತವಾದ ಕಟ್ಟಡಗಳು ಇರಬೇಕು. ಈ ಕಟ್ಟಡಗಳಲ್ಲಿ ಕೆಲವು ಆಕೃತಿಗಳು, ಚಿತ್ರಗಳು, ಗ್ರಾಫ್‌ಗಳು – ಇಂತಹವುಗಳು ಮಾತ್ರ ಇದ್ದರೆ ಅದು ಹಳ್ಳಿಯ ಜನರ ಮನಸ್ಸಿನ ಮೇಲೆ ನೈಜವಾದವುಗಳು ಇದ್ದಿದ್ದರೆ ಬೀರುತ್ತಿದ್ದಷ್ಟು ಪರಿಣಾಮವನ್ನು ಬೀರುವುದಿಲ್ಲ. ನಾವು ಅಭಿವೃದ್ಧಿ ಹೊಂದಿದ ದೇಶಗಳಲ್ಲಿ ನೋಡುವ ಹಾಗೆ, ಸಹಜವಾದ ಜಮೀನಿನಲ್ಲಿ, ಸಹಜವಾದ ಪ್ರಾಣಿಗಳು, ಸಸ್ಯಗಳನ್ನು ಹೊಂದಿರಬೇಕು. ಹೀಗಿದ್ದರೆ ಮಾತ್ರ ನಮ್ಮ ರೈತರು ಹಳೆಯ ವಿಧಾನಗಳು ಮತ್ತು ಹೊಸ ವೈಜ್ಞಾನಿಕ ಮತ್ತು ತಾಂತ್ರಿಕ ಸಾಧನೆಗಳಿಂದ ಸಾಧ್ಯವಾದ ವಿಧಾನಗಳು – ಇವೆರಡರ ನಡುವೆ ಇರುವ ವ್ಯತ್ಯಾಸವನ್ನು ಗುರುತಿಸಿ, ಅವುಗಳಲ್ಲಿ ಲಾಭಕರವಾದುದನ್ನು ಆಯ್ದುಕೊಳ್ಳುತ್ತಾರೆ. ಅವರ ಕಲ್ಪನೆಯನ್ನು ನಿಜವಾದ ಪ್ರಾಣಿಗಳು, ಸಸ್ಯಗಳು ಮತ್ತು ಅವುಗಳು ಹುಟ್ಟುವ, ಸಾಕಲ್ಪಡುವ, ಸಂಬಾಳಿಸುವ ವಿಧಾನಗಳು ಹಿಡಿದಿಡುವಷ್ಟು ಪ್ರತಿಮೆಗಳು, ರೂಪಕಗಳು ಇತ್ಯಾದಿ ನಿರ್ಜೀವ ವಸ್ತುಗಳು ಹಿಡಿದಿಡಲಾರವು. ಇನ್ನುಮುಂದೆ ಈ ರೀತಿಯ ಪ್ರದರ್ಶನಗಳನ್ನು ಏರ್ಪಡಿಸುವಾಗ ಇಂತಹ ವಿಷಯಗಳನ್ನು ಗಮನದಲ್ಲಿಟ್ಟುಕೊಂಡಿರಬೇಕು.

ಈ ಸಮ್ಮೇಳನವು ಜನಗಳ ಆಕಾಂಕ್ಷೆಯನ್ನು ಪೂರೈಸಲಿ ಎಂದು ಹಾರೈಸುತ್ತೇನೆ.

ಕೊನೆಯಲ್ಲಿ, ಅಭಿವೃದ್ಧಿ ಚಟುವಟಿಕೆಗಳಲ್ಲಿ, ಅದರಲ್ಲಿಯೂ ಆಹಾರೋತ್ಪಾದನೆಯ ಕ್ಷೇತ್ರದಲ್ಲಿ, ಬಹಳ ಆಸಕ್ತಿಯನ್ನು ಹೊಂದಿ ಕೆಲಸವನ್ನು ಮಾಡುತ್ತಿರುವ ಶ್ರೀ ಬದರೀನಾರಾಯಣ ಅವರನ್ನು ಅಭಿನಂದಿಸದೆ ನನ್ನ ಮಾತನ್ನು

ಮುಗಿಸಲು ಸಾಧ್ಯವಿಲ್ಲ. ಕೃಷಿ ಮತ್ತು ಪಶುಸಂಗೋಪನೆಯಲ್ಲಿ ನವೀನ ವಿಧಾನಗಳನ್ನು ಮತ್ತು ತಂತ್ರಗಳನ್ನು ರೈತರಿಗೆ ತಲುಪಿಸುವವರೆಗೂ, ಅವರು ಅದು ಎಷ್ಟೇ ಕಷ್ಟವಾದರೂ ಬಿಡದೆ, ದುಡಿಯುತ್ತಾರೆ. ದುಡಿಯುವ ವರ್ಗದವರಲ್ಲಿ ಅವರಿಗಿರುವ ಆಸಕ್ತಿಯು ಶ್ಲಾಘನೀಯವಾದುದು. ಅವರು ಇಮ್ಮಡಿ ಉತ್ಸಾಹದಿಂದ ಈ ಕೆಲಸವನ್ನು ಮುಂದುವರಿಸಿ, ಮೂರನೆಯ ಪಾಂಚವಾರ್ಷಿಕ ಯೋಜನೆಯ ಉದ್ದೇಶಗಳನ್ನು ಈ ಮಲೆನಾಡು ಪ್ರದೇಶದಲ್ಲಿ ಸಾಕಾರಗೊಳಿಸಲು ಸರಕಾರಕ್ಕೆ ಮತ್ತು ದೇಶಕ್ಕೆ ಸಹಾಯವನ್ನು ನೀಡುತ್ತಾರೆಂದು ನಾನು ಖಂಡಿತವಾಗಿ ಹೇಳುತ್ತೇನೆ.

ಈಗ, ಅಖಿಲ ಮೈಸೂರು ರಾಜ್ಯ ಪಂಚಾಯತ್ ರಾಜ್ಯದ ಪ್ರಥಮ ಸಮ್ಮೇಳನಕ್ಕೆ ಸಂಬಂಧಿಸಿದ ವಸ್ತುಪ್ರದರ್ಶನವು ಉದ್ಘಾಟನೆಯಾಗಿದೆಯೆಂದು ಹರ್ಷದಿಂದ ಘೋಷಿಸುತ್ತಿದ್ದೇನೆ.

## ♦ ಪಂಚಾಯತಿಗಳ ಮೂಲಕ ಯೋಜನೆಗಳ ಸಾಕಾರ

**1961ರ ಅಕ್ಟೋಬರ್ 12ರಂದು ಹೊಸಪೇಟೆಯಲ್ಲಿ ಜಿಲ್ಲಾಮಟ್ಟದ ಸಮ್ಮೇಳನದಲ್ಲಿ ಭಾಗವಹಿಸಿದ ಎನ್. ರಾಚಯ್ಯನವರು ಗ್ರಾಮೀಣ ಪ್ರದೇಶದ ಅಭಿವೃದ್ಧಿಯ ತಮ್ಮ ಕನಸುಗಳನ್ನು ಬಿಚ್ಚಿಟ್ಟಿದ್ದಾರೆ. ನಾಡಿನ ಸಂಪತ್ತು ಸಮಾನವಾಗಿ ವಿತರಣೆಯಾಗುವ ನೆಲೆಯಲ್ಲಿ ಸಂವಿಧಾನಾತ್ಮಕ ಪ್ರಜಾಪ್ರಭುತ್ವ ನಿರ್ವಚಿಸಿರುವ ಯೋಜನೆಗಳ ವಿವರ ಈ ಭಾಷಣ.**

ಬಳ್ಳಾರಿ ಜಿಲ್ಲೆಯ ಸಮ್ಮೇಳನಕ್ಕೆ ಆಗಮಿಸಿರುವ ಪ್ರತಿನಿಧಿಗಳ ಸಂಗಡ ಇರುವುದು ನನಗೆ ಬಹಳ ಸಂತೋಷವನ್ನು ತಂದಿದೆ. ವಿಭಾಗೀಯ ಮಟ್ಟದಿಂದ ರಾಜ್ಯಮಟ್ಟದವರೆಗಿನ ಸಮ್ಮೇಳನಗಳ ಸಾಲಿನಲ್ಲಿ ಈ ಜಿಲ್ಲಾ ಮಟ್ಟದ ಸಮ್ಮೇಳನವೂ ಒಂದು ಎಂದು ನನಗೆ ತಿಳಿದಿದೆ. ಗ್ರಾಮೀಣಾಭಿವೃದ್ಧಿಯಲ್ಲಿ ಪಾತ್ರವಹಿಸುವ ಅಧಿಕಾರಿ ಹಾಗೂ ಅಧಿಕಾರೇತರ ವ್ಯಕ್ತಿಗಳು ಈ ಅಭಿವೃದ್ಧಿಯ ವಿವಿಧ ಮುಖಗಳನ್ನು ಸಂಪೂರ್ಣವಾಗಿ ಮತ್ತು ನಿರ್ಭೀತಿಯಿಂದ ಚರ್ಚಿಸಲು ಇಂತಹ ಸಮ್ಮೇಳನಗಳು ಅತ್ಯುತ್ತಮ ಅವಕಾಶಗಳನ್ನು ನೀಡುತ್ತವೆ. ನಮ್ಮದು ಜನತೆಯ ಯೋಜನೆಯಾಗಿದ್ದು, ಅದರ ಯಶಸ್ಸು ಜನತೆಯ ಉತ್ಸಾಹ ಮತ್ತು ಬೆಂಬಲವನ್ನು ಆಧರಿಸಿರುತ್ತದೆ. ತಮಗೋಸ್ಕರ ಮತ್ತು ತಮ್ಮ ಶ್ರಮದಿಂದಲೇ ಉತ್ತಮವಾದ, ಸಮಗ್ರವಾದ ಮತ್ತು ಶ್ರೀಮಂತವಾದ ಬದುಕನ್ನು ರೂಪಿಸಿಕೊಳ್ಳುವ ಭಾರತದ ಜನರ ಸಂಕಲ್ಪದ ಸಂಕೇತವೂ ಹೌದು. ತಮ್ಮ ಕರ್ತವ್ಯ, ಗುರಿಗಳನ್ನು ಸಕಾಲದಲ್ಲಿ ಸಂಪೂರ್ಣವಾಗಿ ಸಾಧಿಸಲು, ಮನಃಪೂರ್ವಕವಾಗಿ ಕೆಲಸವನ್ನು ಮಾಡಬೇಕೆಂದು ಅದು ಕರೆನೀಡುತ್ತದೆ. ಪಂಚಾಯತ್ ರಾಜ್ಯವೆಂದು ಸಾಮಾನ್ಯವಾಗಿ ಎಲ್ಲರಿಗೂ ತಿಳಿದಿರುವ ಪ್ರಜಾತಾಂತ್ರಿಕ ವಿಕೇಂದ್ರೀಕರಣವು ಉದಯಿಸುತ್ತಿರುವ ಈ ಸಂದರ್ಭದಲ್ಲಿ, ಯೋಜನೆಗಳನ್ನು ರೂಪಿಸಿ ಕಾರ್ಯಗತಗೊಳಿಸುವ ಕಾರ್ಯದಲ್ಲಿ ಪಂಚಾಯತಿಯ ಮತ್ತು ತಾಲ್ಲೂಕು ಮಂಡಳಿಯ ಸದಸ್ಯರು ಕ್ರಿಯಾತ್ಮಕವಾಗಿ ಪಾಲುಗೊಳ್ಳುವುದು ಬಹಳ ಮುಖ್ಯವಾಗಿದೆ. ಈ ಕಾರಣದಿಂದಲೇ ನಾನು ಇಂತಹ ಸಮ್ಮೇಳನಗಳಲ್ಲಿನ ಚರ್ಚೆಗಳು ಅಧಿಕ ಮಹತ್ವದವು ಎಂದು ಭಾವಿಸಿದ್ದೇನೆ.

ಪಂಚಾಯತ್ ರಾಜ್ಯದ ವ್ಯವಸ್ಥೆಯ ಅಡಿಯಲ್ಲಿ ತಾಲ್ಲೂಕು ಮಂಡಳಿಗಳು ಮತ್ತು ಪಂಚಾಯತಿಗಳು ಸ್ಥಳೀಯ ಯೋಜನೆ, ಅಭಿವೃದ್ಧಿ ಮತ್ತು ಸ್ಥಳೀಯ ವ್ಯವಹಾರಗಳ ನಿರ್ವಹಣೆಗಾಗಿ ಇರುವ ಸಮರ್ಥ ಸಾಧನಗಳಾಗಿವೆ. ಆದ್ದರಿಂದಲೇ, ಬೇರುಮಟ್ಟದ ಯೋಜನೆಗಳ ವ್ಯವಸ್ಥೆಯನ್ನು ನಾವು ಸ್ವೀಕರಿಸಿದ್ದೇವೆ. ಈ ಮೂಲಕಲ್ಪನೆಯು ಸ್ಥೂಲವಾಗಿ ಯೋಜನೆಯ ಗುರಿ ಮತ್ತು ಉದ್ದೇಶಗಳ ವ್ಯಾಪ್ತಿಯಲ್ಲಿ ರಾಷ್ಟ್ರೀಯ ನೀತಿಯನ್ನು ಅನುಸರಿಸುತ್ತಾ ಜಿಲ್ಲೆ, ವಿಭಾಗ ಮತ್ತು ಹಳ್ಳಿಗಳ ಮಟ್ಟದಲ್ಲಿ ಸ್ಥಳೀಯ ಜನರ ಆಶೋತ್ತರಗಳನ್ನು ಬಿಂಬಿಸುವ ಯೋಜನೆಗಳನ್ನು ರೂಪಿಸಿಕೊಳ್ಳುತ್ತಾ ಹೋಗುತ್ತದೆ. ರಾಜ್ಯ ಹಾಗೂ ರಾಷ್ಟ್ರೀಯ ಯೋಜನೆಗಳ ಪರಿಧಿಯ ಒಳಗೇ, ಜಿಲ್ಲಾ ಮಟ್ಟದಲ್ಲಿ ತಮ್ಮ ಸ್ವಂತ ಯೋಜನೆಗಳನ್ನು ರೂಪಿಸಿಕೊಳ್ಳುವಂತೆ ನಾವು ಪ್ರತಿಯೊಂದು ಜಿಲ್ಲಾ ಅಭಿವೃದ್ಧಿ ಮಂಡಳಿಗಳನ್ನೂ ವಿನಂತಿಸಿಕೊಂಡಿದ್ದೇವೆ. ರಾಷ್ಟ್ರದ ಮತ್ತು ರಾಜ್ಯದ ಒಟ್ಟಾರೆ ಯೋಜನೆಗಳು ಈಗಾಗಲೇ ಪ್ರಕಟಗೊಂಡಿವೆ. ಜಿಲ್ಲೆಯ ಯೋಜನೆಗಳನ್ನು ಜಿಲ್ಲಾ ಅಭಿವೃದ್ಧಿ ಮಂಡಳಿಗಳು ತಯಾರಿಸಿದ್ದು, ಅವುಗಳನ್ನು ರಾಜ್ಯ ಸರಕಾರವು ಸದ್ಯದಲ್ಲಿಯೇ ಪ್ರಕಟಿಸಲಿದೆ. ಇದೇ ರೀತಿಯಲ್ಲಿ, ಪ್ರತಿಯೊಂದು ತಾಲ್ಲೂಕು ಮಂಡಳಿ ಮತ್ತು ಗ್ರಾಮ ಪಂಚಾಯತಿಯೂ ತನ್ನ ಪಾಂಚವಾರ್ಷಿಕ ಹಾಗೂ ವಾರ್ಷಿಕ ಯೋಜನೆಗಳನ್ನು ಸಿದ್ಧಗೊಳಿಸಿಕೊಳ್ಳಬೇಕು.

ನಾನು ಈಗ ಮೂರನೆಯ ಪಂಚವಾರ್ಷಿಕ ಯೋಜನೆಯ ಮುಖ್ಯ ವಿಷಯಗಳನ್ನು ವಿವರಿಸುತ್ತೇನೆ. ನಮ್ಮ ಸಂವಿಧಾನದ ನಿರ್ದೇಶಕ ತತ್ತ್ವಗಳಲ್ಲಿ ಲೇಖಿಸಿರುವ ಮೂಲಭೂತ ಸಾಮಾಜಿಕ ಮತ್ತು ಆರ್ಥಿಕ ಉದ್ದೇಶಗಳನ್ನು ಈಡೇರಿಸುವ ನಿರ್ಣಾಯಕ ಹಂತವನ್ನು ಮೂರನೆಯ ಪಂಚವಾರ್ಷಿಕ ಯೋಜನೆಯು ಬಿಂಬಿಸುತ್ತಿದೆ. ದೇಶದ ಪ್ರತಿಯೊಬ್ಬ ನಾಗರಿಕನಿಗೂ ಸುಮಾರಾದ ಜೀವನ ಗುಣಮಟ್ಟವನ್ನು ಮತ್ತು ತನ್ನ ಪ್ರಗತಿಯನ್ನು ಸಾಧಿಸಲು ಸಮಾನ ಅವಕಾಶಗಳನ್ನು ಒದಗಿಸುವುದು ಯೋಜನೆಗಳ ಮುಖ್ಯ ಉದ್ದೇಶ. ಇದಕ್ಕೆ ರಾಷ್ಟ್ರೀಯ ವರಮಾನದಲ್ಲಿನ ಹೆಚ್ಚಳವೊಂದೇ ಸಾಲದು, ಅದರ ಜೊತೆಗೆ, ರಾಷ್ಟ್ರೀಯ ಕನಿಷ್ಠ ಜೀವನ ಮಟ್ಟವನ್ನಾದರೂ ಸಮುದಾಯದಲ್ಲಿರುವ ದುರ್ಬಲವರ್ಗದವರು, ಬಡವರು ಮತ್ತು ಕೆಳವರ್ಗದವರು ಮುಟ್ಟುವಂತೆ ಮಾಡಲು

ಈ ರಾಷ್ಟ್ರೀಯ ವರಮಾನದ ವಿತರಣೆಯೂ ಆವಶ್ಯಕವಾಗಿದೆ. ಮೇಲೆ ಹೇಳಿದ ರಾಷ್ಟ್ರೀಯ ಕನಿಷ್ಠ ಜೀವನದ ಮಟ್ಟದ ಕೆಳಗೆ ದೇಶದ ಯಾವ ನಾಗರಿಕನೂ ಇರಬಾರದು. ಇದು ಒಂದೇ ಗತಿಯಲ್ಲಿ ಆದಾಯದ, ಸಂಪತ್ತಿನ ಮತ್ತು ಆರ್ಥಿಕ ಅಧಿಕಾರದ ಕೇಂದ್ರೀಕರಣವನ್ನು ಕಡಿಮೆಮಾಡುವುದು – ಇವನ್ನು ಒಳಗೊಂಡಿರುತ್ತದೆ. ಪ್ರತಿಯೊಬ್ಬನೂ ತನ್ನ ಜೀವನೋಪಾಯದ ಮತ್ತು ಉದ್ಯೋಗದ, ಶಿಕ್ಷಣದ ಹಕ್ಕುಗಳನ್ನು ಹೊಂದಿರಬೇಕು ಮತ್ತು ನಿರುದ್ಯೋಗ, ವೃದ್ಧಾಪ್ಯ, ಕಾಯಿಲೆ, ದೈಹಿಕ ಅನರ್ಹತೆಯಿಂದ ಪೀಡಿತನಾಗಿದ್ದರೆ ಸಾರ್ವಜನಿಕ ಸಹಾಯಕ್ಕೆ ಪಾತ್ರನಾಗಬೇಕು. ಇವು ದೇಶವು ಒಪ್ಪಿಕೊಂಡಿರುವ, ಎಲ್ಲಾ ಪಾಂಚವಾರ್ಷಿಕ ಯೋಜನೆಗಳ ಉದ್ದೇಶಗಳು. 1950–51 ಮತ್ತು 1971–72ರ ಅವಧಿಯಲ್ಲಿ ರಾಷ್ಟ್ರೀಯ ವರಮಾನವು ದುಪ್ಪಟ್ಟು ಆಗಬೇಕು ಮತ್ತು 1977–78ರ ವೇಳೆಗೆ ತಲಾ ವರಮಾನವು ಕೂಡ ಎರಡರಷ್ಟಾಗಬೇಕು. ಕೃಷಿ ಮತ್ತು ಕೈಗಾರಿಕೆಗಳ ಉತ್ಪಾದನೆಯನ್ನು ಒಂದೇ ಸಮನೆ ಮತ್ತು ಸಾಕಷ್ಟು ಹೆಚ್ಚಿಸುವುದರಿಂದ ಮಾತ್ರ ಜೀವನಮಟ್ಟದಲ್ಲಿನ ಏರಿಕೆಯು ಸಾಧ್ಯ. ಇದು ಆರ್ಥಿಕತೆಯು ಅಲ್ಲಿಂದ ಮುಂದಕ್ಕೆ ತಾನೇ ಮೇಲಕ್ಕೆ ಹಾರಲು ಸಿದ್ಧವಾದ ಸ್ಥಿತಿಯಲ್ಲಿರುತ್ತದೆ. ಈ ಸ್ಥಿತಿಯ ಅವಧಿಯಲ್ಲಿ ಅಲ್ಪವರಮಾನ, ಅಲ್ಪಬಳಕೆ, ಅಲ್ಪ ಉಳಿತಾಯ, ಅಲ್ಪ ಬಂಡವಾಳ ಹೂಡಿಕೆಯ ವಿಷವರ್ತುಲವು ಅಧಿಕ ವರಮಾನ, ಅಧಿಕ ಉಳಿತಾಯ, ಮತ್ತು ಅಧಿಕ ಉತ್ಪಾದನೆಯ ಪುಣ್ಯವರ್ತುಲಕ್ಕೆ ಬದಲಾಗುತ್ತದೆ. ಈ ಬದಲಾವಣೆಯನ್ನು, ಕೃಷಿಯ ಆಧುನಿಕೀಕರಣದಿಂದ ಮತ್ತು ದೊಡ್ಡ ಪ್ರಮಾಣದ ಕೈಗಾರಿಕೀ ಕರಣದಿಂದ ಸಾಧಿಸಬಹುದು. ಇದಕ್ಕೆ ವ್ಯಾಪಕವಾದ ಶಿಕ್ಷಣ ಮತ್ತು ಉತ್ತಮ ತರಬೇತಿಗಳು ಅಗತ್ಯ.

ನಮ್ಮ ಯೋಜನೆಗಳಿಗೆ ಕೃಷಿಯೇ ಆಧಾರ. ಅದು ನಮ್ಮ ಜೀವನಕ್ಕೆ ಮತ್ತು ಕೈಗಾರಿಕೆಗಳಿಗೆ ಅನುಕೂಲಗಳನ್ನು ಕಲ್ಪಿಸಿಕೊಡುತ್ತದೆ. ಅಮೆರಿಕ ಸಂಯುಕ್ತ ಸಂಸ್ಥಾನಗಳಲ್ಲಿ, ಇಡೀ ರಾಷ್ಟ್ರಕ್ಕೆ ಅಗತ್ಯವಾದಷ್ಟು ಆಹಾರಧಾನ್ಯಗಳನ್ನು ಅಲ್ಲಿನ ಶೇ 12ರಷ್ಟು ಜನರು ಉತ್ಪಾದಿಸುತ್ತಾರೆ. ಆದರೆ, ಶೇ. 70ರಷ್ಟು ಜನರು ಕೃಷಿಯಲ್ಲಿ ತೊಡಗಿಕೊಂಡಿದ್ದರೂ, ಭಾರತವು ಕೋಟ್ಯಂತರ ರೂಗಳ ವಿದೇಶೀ ವಿನಿಮಯವನ್ನು ತೆತ್ತು ಆಹಾರವನ್ನು ವಿದೇಶದಿಂದ ಆಮದುಮಾಡಿಕೊಳ್ಳಬೇಕು. ಇದಕ್ಕೆ ಕಾರಣ ಭಾರತದಲ್ಲಿನ ಉತ್ಪಾದಕತೆ ಕಡಿಮೆಯಾಗಿರುವುದು. ಭಾರತದಲ್ಲಿನ

ಉತ್ಪಾದಕತೆಯ ಪ್ರಮಾಣ ಅಭಿವೃದ್ಧಿಯಾಗಿರುವ ದೇಶಗಳ ಉತ್ಪಾದಕತೆಯ ಪ್ರಮಾಣದ ಮೂರನೆಯ ಒಂದು ಭಾಗದಿಂದ ಅರ್ಧದಷ್ಟು ಇದೆ. ನವ ದೇಶದ ಉದಾಹರಣೆಯನ್ನೇ ತೆಗೆದುಕೊಂಡರೂ, ನಾವು ಅಲ್ಲಲ್ಲಿ ಅತಿ ಹೆಚ್ಚಿ ಇಳುವರಿಯನ್ನು ಪಡೆಯುವ ರೈತರು ಇದ್ದಾರೆ. ನಾವು ಈಗ ಉತ್ಪಾದಕತೆಯ ಸರಾಸರಿ ಪ್ರಮಾಣವನ್ನು ಅಧಿಕಗೊಳಿಸಬೇಕು. ಈ ಉತ್ಪಾದನೆಯಲ್ಲಿನ ಅಧಿಕ ಉತ್ಪಾದಕತೆಗೆ ಉತ್ಪಾದಕನೇ ಪ್ರಯತ್ನಮಾಡಬೇಕು. ಆತ ಹೀಗ ಮಾಡಲ ಅನುವಾಗಲು, ಸರಕಾರವು ಪ್ರತಿ ಹಳ್ಳಿಗೂ, ಅಗತ್ಯ ವಸ್ತುಗಳ ಸರಬರಾಜು ಬೇಕಾದ ಸೇವೆ ಮತ್ತು ತಾಂತ್ರಿಕಪರಿಣತಿ ಮತ್ತು ಸಾಲಸೌಲಭ್ಯಗಳನ್ನು ಒದಗಿಸುತ್ತಿದ ರಾಷ್ಟ್ರೀಯ ವಿಸ್ತರಣಾ ಸೇವೆಯ ವಿಭಾಗಗಳ ಸೇವೆಯನ್ನು ಪಡೆಯುತ್ತಿರು ಹಳ್ಳಿಗಳಿಗೆ ವಿಸ್ತರಣಾ ಏಜೆನ್ಸಿಗಳ ವ್ಯಾಪಕವಾದ ಜಾಲವನ್ನು ರಚಿಸಲಾಗಿದ ಸೇವಾ ಸಹಕಾರ ಸಂಘ, ಭೂ ಅಡಮಾನ ಬ್ಯಾಂಕ್, ಜಿಲ್ಲಾ ಬ್ಯಾಂಕ್ ಮತ ಅಪೆಕ್ಸ್ ಬ್ಯಾಂಕ್‌ಗಳ ಜಾಲದ ಮೂಲಕ ಅಲ್ಪಾವಧಿ, ಮಧ್ಯಮಾವಧಿ ಮತ ದೀರ್ಘಾವಧಿ ಸಾಲಗಳನ್ನು ಒದಗಿಸಲಾಗುತ್ತಿದೆ. ಪ್ರತಿಯೊಂದು ಕುಟುಂಬವ ಸಹಕಾರೀ ಸಂಘಗಳ ಸದಸ್ಯನಾಗಬೇಕಾದದ್ದು ಅಗತ್ಯ. ಅಷ್ಟೇ ಅಗತ್ಯವಾದದ್ದು ಸಹಕಾರೀ ಸಂಘಗಳು ನೀಡುವ ಸಾಲವನ್ನು ಸರಿಯಾಗಿ ಪರಿಶೀಲಿಸಿ ಕೃಷಿಯ ಉದ್ದೇಶಕ್ಕೆ ಮಾತ್ರ ನೀಡಲಾಗುತ್ತಿದೆಯೆನ್ನುವುದನ್ನು ಖಚಿತಪಡಿಸಿಕೊಳ್ಳಬೇಕ ಏಕೆಂದರೆ ನೀಡುವ ಸಾಲವು ಉತ್ಪಾದಕ ಉದ್ದೇಶಗಳಿಗೆ ಮಾತ್ರ ದೊರಕುವಂ ಮಾಡಬೇಕು. ಸಹಕಾರದ ತತ್ತ್ವವನ್ನು ಗ್ರಾಮೀಣ ಸಾಲಗಳು, ಮಾರುಕ ಮತ್ತು ಸಂಸ್ಕರಣೆಯಂತಹ ಉದ್ದೇಶಗಳ ಜೊತೆಯಲ್ಲಿಯೇ ಬೇಸಾಯದಂತ ಹತ್ತು ಹಲವು ವಿಷಯಗಳಿಗೂ ವಿಸ್ತರಿಸಬೇಕು. ಪ್ರಾಮಾಣಿಕವಾದ ಸ್ಥಳೀಯ ಮುಖಂಡತ್ವವಿರುವ ಸ್ವ–ಇಚ್ಛೆಯಿಂದ ಮುಂದೆ ಬಂದ ಜನತೆಯ ಚಳವಳಿಯಾದ ಸಹಕಾರಿ ಕೃಷಿಯು ಗ್ರಾಮೀಣ ಅಭಿವೃದ್ಧಿಗೆ ಮಹತ್ತರವಾದ ಕಾಣಿಕೆಯನ ನೀಡಬಲ್ಲುದು. ಹಾಗಾದಾಗ ಇದು ಹಳ್ಳಿಗಳ ಮಟ್ಟದಲ್ಲಿ ಸಮುದಾಯ ಅಭಿವೃ ಮತ್ತು ಸಹಕಾರಗಳ ಸಮರ್ಥನೀಯ ಸಂಗಮವಾಗುತ್ತದೆ. ಮೂರನೆಯ ಪಾಂಚವಾರ್ಷಿಕ ಯೋಜನೆಯ ಅವಧಿಯಲ್ಲಿ ದೇಶದಲ್ಲಿ 3,200 ಪ್ರಾಯೋಗಿ ಸಹಕಾರಿ ಯೋಜನೆಗಳನ್ನು ಜಾರಿಗೆ ತರಲು ಉದ್ದೇಶಿಸಲಾಗಿದೆ ಮತ್ತು, ರಾ ಸರಕಾರವು ಮೈಸೂರು ರಾಜ್ಯದಲ್ಲಿ ಅಂತಹ ಐದು ಯೋಜನೆಗಳನ್ನು ಸ್ಥಾಪಿಸ

ಆಜ್ಞೆಯನ್ನು ನೀಡಿದೆ. ಸಹಕಾರಿ ಬೇಸಾಯಕ್ಕೂ ಸಾಮೂಹಿಕ ಬೇಸಾಯಕ್ಕೂ ವ್ಯತ್ಯಾಸವಿದೆ. ಸರ್ವಾಧಿಕಾರವುಳ್ಳ ಕೆಲವು ದೇಶಗಳಲ್ಲಿ ಸಾಮೂಹಿಕ ಬೇಸಾಯದ ಹಿಂದೆ ನಿರ್ಬಂಧವಿರುತ್ತದೆ, ಆದರೆ ಸಹಕಾರಿ ಬೇಸಾಯವು, ಸದಸ್ಯರು ತಮ್ಮ ಸ್ವಂತ ಇಚ್ಛೆಯಿಂದ ಭಾಗವಹಿಸಿ ಮತ್ತು ಸ್ವಯಂಪ್ರೇರಿತರಾಗಿ ಸಹಕಾರವನ್ನುನೀಡುವುದನ್ನು ಉತ್ತೇಜಿಸುತ್ತದೆ. ಹಾಗಾಗಿ, ಸಹಕಾರಿ ಬೇಸಾಯವು ನಮ್ಮ ದೇಶದ ಸಂಸ್ಕೃತಿಗೆ ಅನುಗುಣವಾಗಿಯೇ ಇದೆ. ಮೇಲೆ ಹೇಳಿದ ಐದು ಸಹಕಾರಿ ಯೋಜನೆಗಳಲ್ಲದೆ, ರೈತರು ಬೇಸಾಯದಲ್ಲಷ್ಟೇ ಅಲ್ಲದೆ, ಇತರ ಕ್ಷೇತ್ರಗಳಲ್ಲಿಯೂ ಸಾಧ್ಯವಿರುವ ಮಟ್ಟಿಗೆ ಸಹಕಾರಿ ತತ್ತ್ವವನ್ನು ಅನುಸರಿಸಬೇಕು. ಈ ಸಹಕಾರೀ ಸಂಸ್ಥೆಗಳ ಮೂಲಕವೇ ರಸಗೊಬ್ಬರ ಮತ್ತು ಕಬ್ಬಿಣದ ಸಲಕರಣೆಗಳನ್ನು ರೈತರಿಗೆ ಸರಬರಾಜು ಮಾಡು ವ್ಯವಸ್ಥೆಯನ್ನು ಮಾಡಿದೆ. ತಮ್ಮ ಹೊಸ ಹೊಣೆಯನ್ನು ನಿಭಾಯಿಸಲು ಸಹಕಾರಿ ಸಂಸ್ಥೆಗಳನ್ನು ಬಲಪಡಿಸಬೇಕು ಮತ್ತು ಇದರ ಜವಾಬ್ದಾರಿಯು ಸ್ಥಳೀಯ ಜನರ ಹೆಗಲ ಮೇಲೆಯೇ ಇದೆ. ಬೀಜಗಳನ್ನು ಒದಗಿಸಲು ಸರಕಾರವು ರಾಜ್ಯದ ಪ್ರತಿ ಜಿಲ್ಲೆಯಲ್ಲಿಯೂ ಬೀಜ ಅಭಿವರ್ಧನಾ ವ್ಯವಸಾಯ ಕೇಂದ್ರಗಳ ಯೋಜನೆಯನ್ನು ಜಾರಿಗೆ ತಂದಿದೆ. ಎರಡನೆಯ ಯೋಜನೆಯ ಅಂತ್ಯದ ವೇಳೆಗಾಗಲೇ ರಾಜ್ಯದಲ್ಲಿ ಅಂತಹ ಐವತ್ತಾರು ವ್ಯವಸಾಯ ಕೇಂದ್ರಗಳಿದ್ದವು. ಮೂರನೆಯ ಯೋಜನೆಯು ಸಾಕಷ್ಟು ಬೀಜಗಳನ್ನು ಒದಗಿಸಲಿದೆ. ಈ ಯೋಜನೆಯ ಅವಧಿಯಲ್ಲಿ ಇನ್ನೂ ಹೆಚ್ಚು ವ್ಯವಸಾಯ ಕೇಂದ್ರಗಳನ್ನು ಸ್ಥಾಪಿಸಿ ಅದರ ಮೂಲಕ ರಾಜ್ಯದ ಎಲ್ಲಾ ಹಳ್ಳಿಗಳಿಗೂ ಅದರ ವ್ಯಾಪ್ತಿಯನ್ನು ಹಬ್ಬಿಸಲಿದ್ದೇವೆ. ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ಅಂಶವೆಂದರೆ ಪ್ರತಿ ಹಳ್ಳಿಯಲ್ಲಿಯೂ ಪ್ರಗತಿಶೀಲರೆಂದು ಗುರುತಿಸಲಾದ ಕೆಲವು ರೈತರನ್ನು ಬೀಜಗಳನ್ನು ಬೆಳೆಯಲು ನೊಂದಾಯಿಸಿಕೊಂಡು ಅವರು ಹಳ್ಳಿಯ ಎಲ್ಲ ರೈತರಿಗೂ ಅಭಿವೃದ್ಧಿಪಡಿಸಿದ ಬೀಜಗಳನ್ನು ಒದಗಿಸುವಂತೆ ಮಾಡಲಾಗಿದೆ. ಉತ್ತಮ ಬೀಜ, ರಸಗೊಬ್ಬರ ಮತ್ತು ಸಾಲ ಸೌಲಭ್ಯಗಳಿಗಿಂತಲೂ ಮುಖ್ಯವಾದುದು ಉತ್ತಮ ಕೃಷಿಪದ್ಧತಿಗಳನ್ನು ಅನುಸರಿಸುವುದು. ಈ ಉದ್ದೇಶಕ್ಕಾಗಿ ಸಮುದಾಯ ಅಭಿವೃದ್ಧಿ ವಿಭಾಗಗಳಲ್ಲಿ ರೈತರಿಗೆ ಬೇಸಾಯದ ಉತ್ತಮ ಪದ್ದತಿಗಳಲ್ಲಿ ತರಬೇತಿಯನ್ನು ಕೊಡುವುದಕ್ಕಾಗಿ ಒಂದು ದೊಡ್ಡ ಕಾರ್ಯಕ್ರಮವನ್ನು ಹಮ್ಮಿಕೊಂಡಿದ್ದೇವೆ.

ಇವಿಷ್ಟೂ ರಾಜ್ಯವು ರೈತರಿಗೆ ಹೊರಗಿನಿಂದ ನೀಡುವ ಸಹಾಯಗಳು. ಆದರೆ, ಹಳ್ಳಿಗಳಲ್ಲಿ ಸ್ಥಳೀಯವಾಗಿ ದೊರೆಯುವ ಸಂಪನ್ಮೂಲಗಳನ್ನು ಕ್ರೋಢೀಕರಿಸಿ ಉಪಯೋಗಿಸಿಕೊಳ್ಳುವುದು ಬಹಳ ಮುಖ್ಯ. ಆದ್ದರಿಂದ ಪ್ರತಿ ಗ್ರಾಮ ಪಂಚಾಯತಿಯೂ ಹಳ್ಳಿಯ ಕೃಷಿ ಉತ್ಪಾದನೆಗೆ ಯೋಜನೆಗಳನ್ನು ತಯಾರಿಸಲು ಗ್ರಾಮ ಕೃಷಿ ಉತ್ಪಾದನಾ ಸಮಿತಿಯನ್ನು ರಚಿಸಬೇಕು. ಇಲ್ಲಿಂದ ಮುಂದಕ್ಕೆ, ಪ್ರತಿ ವರ್ಷವೂ ಇಂತಹ ಯೋಜನೆಗಳನ್ನು ತಯಾರಿಸುವುದು ಗ್ರಾಮೀಣ ಜನರ ಅಭ್ಯಾಸವಾಗಬೇಕು. ಅವರು ಯೋಜನೆಗಳಿಗೆ ಅಂಟಿಕೊಂಡವರಾಗಿರಬೇಕು. ಗ್ರಾಮ ಕೃಷಿ ಉತ್ಪಾದನಾ ಕಾರ್ಯಕ್ರಮವು ಮೂರು ಅಂಶಗಳನ್ನು ಹೊಂದಿರಬೇಕು: 1) ನಾನೀಗಾಗಲೇ ಹೇಳಿದ ಎಲ್ಲಾ ರೀತಿಯ ಸರಬರಾಜಿನ ವ್ಯವಸ್ಥೆ; 2) ಅಭಿವೃದ್ಧಿಗೊಳಿಸಿದ ಕೃಷಿ ಪದ್ಧತಿಗಳ ಬಗೆಗಿನ ಜ್ಞಾನವನ್ನು ಹಳ್ಳಿಯ ಎಲ್ಲಾ ಜನರಿರೂ ಹಂಚುವುದು. ಮತ್ತು, 3) ಭೂಮಿಯ ಅಭಿವೃದ್ಧಿ, ಮತ್ತು ಪರಿವರ್ತನೆ, ಸಣ್ಣ ಪ್ರಮಾಣದ ನೀರಾವರಿ ಮತ್ತು ಕಾಡುಗಳ ನಿರ್ಮಾಣ. ಹಳ್ಳಿಗಳಲ್ಲಿ ದೊರೆಯುವ ಮಾನವ ಸಂಪನ್ಮೂಲಗಳನ್ನು ಬಳಸಿಕೊಂಡು ಈ ಕಾರ್ಯಗಳನ್ನು ಕೈಗೆತ್ತಿಕೊಳ್ಳಬೇಕು. ಈ ರೀತಿಯ ಕಾರ್ಯಗಳು ಚೈನಾದಲ್ಲಿ ನಡೆದಿವೆ. ಅಂತಹವು ನಮ್ಮ ದೇಶದ ಎಲ್ಲಾ ಹಳ್ಳಿಗಳಲ್ಲೂ ನಡೆಯಬೇಕು. ಇದಕ್ಕೆ ಬೇಕಾದ ಉತ್ಸಾಹವನ್ನು ಸೃಜಿಸುವ ಮತ್ತು ಹಳ್ಳಿಯ ಜನರನ್ನು ಸಂಘಟಿಸುವ ಕೆಲಸದ ಜವಾಬ್ದಾರಿಯುನ್ನು ಸಮುದಾಯ ಅಭಿವೃದ್ಧಿ ಸಂಸ್ಥೆಗಳು ಹೊತ್ತುಕೊಳ್ಳಬೇಕು. ಹೀಗಾದರೆ ಅವರು ಹೆಚ್ಚಿನ ಸಂಖ್ಯೆಯಲ್ಲಿ ಇಂತಹ ಕಾರ್ಯಕ್ರಮಗಳನ್ನು ಪ್ರಾರಂಭಿಸಬಹುದು.

ಕೃಷಿಯ ಬಗ್ಗೆ ಮಾತನಾಡುತ್ತಿರುವಾಗ, ನಾನು ಭೂರಹಿತ ಕೃಷಿಕಾರ್ಮಿಕರ ಸ್ಥಿತಿಗತಿಗಳ ಬಗ್ಗೆಯೂ ವಿಶೇಷವಾಗಿ ಪ್ರಸ್ತಾಪಿಸಬೇಕು. ಎರಡನೆಯ ಕೃಷಿಕಾರ್ಮಿಕರ ವಿಚಾರಣಾ ಸಮಿತಿಯ ವಿಶ್ಲೇಷಣೆಯ ಪ್ರಕಾರ ಕೃಷಿ ಕಾರ್ಮಿಕರ ಪರಿಸ್ಥಿತಿಯು, ಕೆಲಸವು ದೊರಕುವ ಹಾಗೂ ಗಳಿಕೆಯ ದೃಷ್ಟಿಯಿಂದ ಕಳೆದ ಕೆಲವು ವರ್ಷಗಳಲ್ಲಿ ಇನ್ನೂ ಕೆಡುತ್ತಾ ಹೋಗಿದೆ. ಕೃಷಿಕಾರ್ಮಿಕರಿಗೆ ಕನಿಷ್ಠವೇತನವನ್ನು ನೀಡುವಂತೆ ಮಾಡುವುದು ಹಾಗೂ ಸಾಕಷ್ಟು ಉದ್ಯೋಗಾವಕಾಶಗಳನ್ನು ಒದಗಿಸುವುದು ಎರಡೂ ಅತ್ಯಂತ ಪ್ರಮುಖವಾದ ಅಂಶಗಳಾಗಿವೆ.

ಜನಸಂಖ್ಯೆಯು ಏರುತ್ತಲೇ ಇರುವಾಗ, ಎಲ್ಲರಿಗೂ ಕೃಷಿಯೊಂದೇ ಉದ್ಯೋಗವನ್ನು ನೀಡಲು ಸಮರ್ಥವಾಗುವುದಿಲ್ಲ. ಆದ್ದರಿಂದ ದೇಶದ ಕೈಗಾರಿಕೀಕರಣವನ್ನು ಆಗುಮಾಡಿಸುವುದು ಇಂದಿನ ತುರ್ತು ಅಗತ್ಯವಾಗಿದೆ. ಕೃಷಿಯ ಮೇಲೆ ಅವಲಂಬಿತವಾಗಿರುವವರ ಸಂಖ್ಯೆಯನ್ನು ಶೇ. 70ರಿಂದ ಶೇ. 60ಕ್ಕಾದರೂ ಇಳಿಸಬೇಕು ಎನ್ನುವುದು ಯೋಜನೆಯ ದೃಷ್ಟಿ. ಇದರಿಂದ ಶೇ. 40ರಷ್ಟು ಜನರು ಕೃಷಿಯುನ್ನು ಉಳಿದು ಇತರ ಕ್ಷೇತ್ರಗಳಲ್ಲಿ ದುಡಿಯುವಂತಾಗುತ್ತದೆ. ಕಚ್ಚಾವಸ್ತುಗಳನ್ನು ಒದಗಿಸುವುದು, ಹಣಕಾಸು ಸಂಸ್ಥೆಗಳ ಸ್ಥಾಪನೆ, ತರಬೇತಿಯನ್ನು ಪಡೆಯಲು ಸೌಲಭ್ಯಗಳು ಇವುಗಳ ಮೂಲಕ ನಾವು ಅಧಿಕ ಸಂಖ್ಯೆಯ ಸಣ್ಣ ಪುಟ್ಟ ಉದ್ದಿಮೆದಾರರನ್ನು ಅವರ ಉದ್ದಿಮೆಗಳನ್ನು ಅಭಿವೃದ್ಧಿಪಡಿಸುವಂತೆ ಪ್ರೋತ್ಸಾಹವನ್ನು ನೀಡಬೇಕು. ಅದೇ ಸಮಯದಲ್ಲಿ, ಇದರೊಟ್ಟಿಗೆ ಇಂಜನಿಯರಿಂಗ್ ಪದಾರ್ಥಗಳು, ಯಂತ್ರೋಪಕರಣಗಳು, ವಿಮಾನಗಳು, ಹಡಗುಗಳು, ರೈಲ್ವೆ, ಉಕ್ಕು, ಕಲ್ಲಿದ್ದಲು, ಹೆವಿ ಎಲೆಕ್ಟ್ರಿಕಲ್ಸ್, ರಾಸಾಯನಿಕ ಉದ್ದಿಮೆಗಳು, ಇವೇ ಮೊದಲಾದ ಮೂಲಭೂತ ಕೈಗಾರಿಕೆಗಳನ್ನೂ ಅಭಿವೃದ್ಧಿಗೊಳಿಸಬೇಕು. ಈ ಕೈಗಾರಿಕೆಗಳನ್ನು ಬೆಳೆಸುವ ಮೂಲಕವೇ ಪಾಶ್ಚಿಮಾತ್ಯ ರಾಷ್ಟ್ರಗಳು ಸಂಪದ್ಭರಿತವೂ, ಬಲಾಢ್ಯವೂ ಆಗಿವೆ.

ಕೃಷಿಯ ಆಧುನಿಕೀಕರಣಕ್ಕಾಗಿ ಮತ್ತು ಕೈಗಾರಿಕೆಗಳ ವೈವಿಧ್ಯೀಕರಣಕ್ಕಾಗಿಜೀವನ ಮೂಲಾವಶ್ಯಕತೆಗಳಾದ ವ್ಯಾಪಕ ಶಿಕ್ಷಣಕ್ಕೆ ಬೇಕಾದ ಸವಲತ್ತುಗಳು, ಸಂಪರ್ಕ ಸಾರಿಗೆ ವ್ಯವಸ್ಥೆಗಳು, ಗ್ರಾಮೀಣ ವಿದ್ಯುದೀಕರಣ, ಕುಡಿಯುವ ನೀರಿನ ಸರಬರಾಜು, ವೈದ್ಯಕೀಯ ಸೌಲಭ್ಯ ಮೊದಲಾದವುಗಳನ್ನು ನಾವು ಒದಗಿಸಬೇಕು. ನಮ್ಮ ಯೋಜನೆಯು ಆರರಿಂದ ಹನ್ನೊಂದು ವರ್ಷದ ಎಲ್ಲಾ ಮಕ್ಕಳಿಗೂ ಉಚಿತ ಹಾಗೂ ಕಡ್ಡಾಯ ಶಿಕ್ಷಣವನ್ನು ನೀಡುವ ಗುರಿಯನ್ನು ಹೊಂದಿದೆ. ಇದೇ ಸಮಯದಲ್ಲಿ, ಗ್ರಾಮೀಣ ಜನತೆಗೆ ತಾಂತ್ರಿಕ ಮತ್ತು ಪ್ರೌಢ ಶಿಕ್ಷಣಕ್ಕೂ ನೀಡುತ್ತಿರುವ ಸೌಲಭ್ಯವನ್ನು ಇನ್ನೂ ಹೆಚ್ಚಿಸಬೇಕು. ಇವುಗಳನ್ನು ಜನತೆಯು ಉಪಯೋಗಿಸಿಕೊಳ್ಳಲು ಜನತೆಯು ಮುಂದೆಬರಬೇಕು. ಎರಡನೆಯ ಯೋಜನೆಯಲ್ಲಿ 6,750 ಕೋಟಿ ರೂಗಳಷ್ಟಿದ್ದ ಅಂದಾಜು ವೆಚ್ಚವನ್ನು ಮೂರನೆಯ ಪಂಚವಾರ್ಷಿಕ ಯೋಜನೆಯಲ್ಲಿ 10,200 ಕೋಟಿ ರೂಗಳಿಗೆ ಹೆಚ್ಚಿಸಲಾಗಿದೆ.

ಎರಡನೆಯ ಯೋಜನೆಯಲ್ಲಿ 145 ಕೋಟಿ ರೂಗಳಷ್ಟಿದ್ದ ರಾಜ್ಯ ಸರಕಾರದ ಅಂದಾಜು ವೆಚ್ಚವು ಮೂರನೆಯ ಪಂಚವಾರ್ಷಿಕ ಯೋಜನೆಯುಲ್ಲಿ 250 ಕೋಟಿ ರೂಗಳನ್ನು ಮುಟ್ಟಿದೆ. ಯೋಜನೆಯ ಗಾತ್ರ ಹೆಚ್ಚಾದ ಹಾಗೆ ನಮ್ಮೆಲ್ಲರ ಹೊಣೆಗಾರಿಕೆಯ ಪ್ರಮಾಣವೂ ಹೆಚ್ಚಾಗುತ್ತಾ ಹೋಗುತ್ತದೆ.

ಯೋಜನೆಯ ಯಶಸ್ವೀ ಅನುಷ್ಠಾನದ ಮೊದಲ ನಿಯಮವೆಂದರೆ, ರಾಷ್ಟ್ರೀಯ ಐಕ್ಯತೆ. ಎಲ್ಲಾ ರೀತಿಯ ವಿಭಜಕ ಹಾಗೂ ವಿಚ್ಛಿದ್ರಕಾರಕ ಪ್ರವೃತ್ತಿಗಳಿಗೆ ಅಂಕುಶವನ್ನು ಹಾಕುವುದು ಸದ್ಯದ ಪ್ರಮುಖವಾದ ಕರ್ತವ್ಯ. ನಮ್ಮ ನಡುವೆ ಇರುವ ಕೆಡಕುಗಳಾದ ಜಾತೀಯತೆ, ಭಾಷಾಂಧತೆ, ಮತ್ತು ಇತರ ಪ್ರತ್ಯೇಕತಾ ಪ್ರವೃತ್ತಿಗಳನ್ನು ತೊರೆಯುವಂತೆ ಇತ್ತೀಚೆಗೆ ನಡೆದ ರಾಷ್ಟ್ರೀಯ ಐಕ್ಯತಾ ಸಮ್ಮೇಳನವು ಕಳಕಳಿಯಿಂದ ಕರೆಕೊಟ್ಟಿದೆ. ಇಂತಹ ಎಲ್ಲಾ ಪವೃತ್ತಿಗಳನ್ನೂ ನಾಶಮಾಡುವಂತಹ ಶಿಕ್ಷಣದ ವ್ಯವಸ್ಥೆಯಿಂದ ಮಾತ್ರ ಇದು ಸಾಧ್ಯವಾಗುತ್ತದೆ. ಈ ಸಮ್ಮೇಳನದ ಸದಸ್ಯರಾಗಿ ಭಾಗವಹಿಸಲು ಬಂದಿರುವ ನೀವೆಲ್ಲರೂ ರಾಷ್ಟ್ರೀಯ ಐಕ್ಯತಾ ಸಮ್ಮೇಳನದ ಈ ಸಂದೇಶವನ್ನು ಎಲ್ಲ ಹಳ್ಳಿಗಳಿಗೂ ಮುಟ್ಟಿಸಿ, ಗ್ರಾಮೀಣ ಸಮಾಜದಲ್ಲಿ ಐಕ್ಯತೆಯ ಸಂದೇಶವನ್ನು ಬಿತ್ತಿ ನಮ್ಮ ಯೋಜನೆಗಳ ಗುರಿಗಳನ್ನು ಸಾಧಿಸಲು ನೆರವಾಗುತ್ತೀರೆಂದು ನಾನು ಆಶಿಸುತ್ತೇನೆ.

## ♦ ಕೃಷಿ ಅಭಿವೃದ್ಧಿ ಮೂಲಕ ಗ್ರಾಮಾಭಿವೃದ್ಧಿ

**1961ರ ಮೇ 31ರಂದು ಮೈಸೂರು ರೈತರ ವೇದಿಕೆಯ ಸರ್ವಸದಸ್ಯರ ವಾರ್ಷಿಕ ಮಹಾಸಭೆಯಲ್ಲಿ ಮಾಡಿದ ಭಾಷಣ. ಕೃಷಿ ಭಾರತ ದೇಶದ ಬೆನ್ನೆಲುಬಾಗಿದ್ದು ಆಹಾರದ ಉತ್ಪಾದನೆಗೆ ಇಡೀ ದೇಶ ಕೃಷಿಯನ್ನೇ ಅವಲಂಬಿಸಿದೆ. ಹಾಗಾಗಿ ಕೃಷಿಯ ಅಭಿವೃದ್ಧಿಯೇ ದೇಶದ ಅಭಿವೃದ್ಧಿ ಎಂಬುದು ರಾಚಯ್ಯ ಅವರ ಅಭಿಮತ.**

ನಮಗೆ ಇದೇ ತಾನೆ ವೇದಿಕೆಯ ಪರಿಷ್ಕೃತ ಬೈಲಾಗಳು ಬಂದಿವೆ. ಇವು ವೇದಿಕೆಯ ಚಟುವಟಿಕೆಗಳನ್ನು ವಿಸ್ತರಿಸಲು ನಿಮಗಿರುವ ದೃಢಸಂಕಲ್ಪವನ್ನು ತೋರಿಸುತ್ತವೆ. ಇದಕ್ಕೆ ಸಂಬಂಧಿಸಿದಂತೆ, ಒಂದು ಒಳ್ಳೆಯ ಅನುಸರಣಾ ಕಾರ್ಯಕ್ರಮವನ್ನು ಹಾಕಿಕೊಳ್ಳಬಹುದು ಎಂದು ನಾನು ಬಲವಾಗಿ ನಂಬಿದ್ದೇನೆ. ನಾವು ಅಂದುಕೊಂಡದ್ದನ್ನೆಲ್ಲಾ ಮಾಡಿ ಮುಗಿಸುತ್ತೇವೆಂದುಕೊಂಡಿದ್ದ ಹಾಗೆ, ಕಳೆದ ಸರ್ವಸದಸ್ಯರ ವಾರ್ಷಿಕ ಮಹಾಸಭೆಯ ನಂತರ ಹಲವಾರು ಬಾರಿ ನಮ್ಮ ಕಾರ್ಯಕಾರಿ ಸಮಿತಿಯು ಸಭೆಯನ್ನು ನಡೆಸಿದೆ ಎಂದು ತಿಳಿಸಲು ನನಗೆ ಹರ್ಷವಾಗುತ್ತದೆ. ನಾವು ಈ ಸಭೆಗೆ ನಮ್ಮ ಸಾಧನೆಯ ಪರಿಚಯವನ್ನು ಮಾಡಿಕೊಡಲು ಸಮರ್ಥರಾಗಿದ್ದೇವೆ.

### ಎ. ಸದಸ್ಯತ್ವ:

ನಾವು ನಮ್ಮ ಗುರಿಯಾದ 10,000 ಸದಸ್ಯರ ನೊಂದಾವಣೆಗೆ ಬಹಳ ಹತ್ತಿರ ಬಂದಿದ್ದೇವೆ. ತಮ್ಮತಮ್ಮ ವ್ಯಾಪ್ತಿಯಲ್ಲಿ ರಾಜ್ಯದ ವೇದಿಕೆಗೆ ಹೆಚ್ಚು ಸದಸ್ಯರನ್ನು ನೊಂದಾಯಿಸುವವರಿಗೆ ಬಹುಮಾನವನ್ನು ನೀಡಲಾಗುವುದು ಎಂದು ಜಿಲ್ಲೆಯ ನಮ್ಮ ಸ್ನೇಹಿತರಿಗೆ ಸುತ್ತೋಲೆಯನ್ನು ಕಳುಹಿಸಿದ್ದೆವು. ನಾವೀಗ ನೊಂದಾವಣೆಯನ್ನು ಪರಿಶೀಲಿಸುವ ಹಂತದಲ್ಲಿದ್ದೇವೆ ಮತ್ತು ನಮ್ಮ ಸ್ಥಳೀಯ ಕಾರ್ಯಕರ್ತರ ಉತ್ಸಾಹವನ್ನು ಪೂರ್ಣವಾಗಿ ಅವಲಂಬಿಸಬಹುದು. ಪ್ರತಿಯೊಂದು ಜಿಲ್ಲಾ ವೇದಿಕೆಗೆ, ಸಮ್ಮೇಳನಗಳನ್ನು ನಡೆಸಲು ಸಾಂಕೇತಿಕ ಕೊಡುಗೆಯೆಂದು ಹಿಂದೆ ಕಳುಹಿಸುತ್ತಿದ್ದ 100 ರೂಗಳ ಬದಲು, 1,000 ರೂಗಳನ್ನು ಕಳುಹಿಸಬೇಕೆಂಬ ಇನ್ನೊಂದು ನಿರ್ಣಯವನ್ನು ತೆಗೆದುಕೊಂಡಿದ್ದೇವೆ. ಸದಸ್ಯತ್ವದ

ನೊಂದಾವಣೆಗೆ ಸುಮಾರಾದ ಒಂದು ಗುರಿಯನ್ನು ನೀಡಿ, ಅದನ್ನು ಸಾಧಿಸಿದರೆ ಈ ಹಣವನ್ನು ಪಡೆಯಬಹುದು ಎಂದು ತಿಳಿಸಿದ್ದೆವು. ಇಲ್ಲಿಯವರೆಗೆ, ಹಲವಾರು ಜಿಲ್ಲಾ ವೇದಿಕೆಗಳು ಈ ಹಣವನ್ನು ಪಡೆದುಕೊಂಡಿವೆ. ವೇದಿಕೆಗಳು ಇನ್ನೂ ಹೆಚ್ಚಿನ ಸಾಧನೆಯನ್ನು ಮಾಡುತ್ತವೆ ಎಂಬ ಆಶಯ ನಮ್ಮದು. ಜಿಲ್ಲಾ ವೇದಿಕೆಗಳ ಬಲದ ಮೇಲೆ ರಾಜ್ಯದ ವೇದಿಕೆ ನಿಂತಿರುತ್ತದೆ ಎಂಬ ವಿಷಯವನ್ನು ನಾವು ಒತ್ತಿ ಹೇಳಬೇಕಾಗಿಲ್ಲ.

**ಬಿ. ನಮ್ಮ ಪತ್ರಿಕೆ :**

ನಮ್ಮ ಕನ್ನಡ ಪತ್ರಿಕೆಯು ನಮ್ಮ ಎಲ್ಲಾ ಸದಸ್ಯರನ್ನೂ ತಲುಪುತ್ತದೆ. ಅದನ್ನು ಇನ್ನೂ ಆಕರ್ಷಕವಾಗಿ ಮಾಡಲು ಪ್ರಯತ್ನಗಳನ್ನು ಮಾಡಲಾಗುತ್ತಿದೆ. ನಮ್ಮ ಸದಸ್ಯರ ಬೇಡಿಕೆಗಳಿಗೆ ಪತ್ರಿಕೆಯ ಸಂಪಾದಕ ಮಂಡಳಿಯು ಸ್ಪಂದಿಸುತ್ತಿದೆ. ಬೆಳೆಯುತ್ತಿರುವ ಸದಸ್ಯರ ಸಂಖ್ಯೆಗೆ ಅನುಗುಣವಾಗಿ ಪತ್ರಿಕೆಯೂ ತನ್ನ ಆಯಾಮಗಳನ್ನು ಹಿಗ್ಗಿಸಿಕೊಳ್ಳುತ್ತಿದೆ. ಬೇಡಿಕೆಗೆ ಅನುಗುಣವಾಗಿ ಪತ್ರಿಕೆಯನ್ನೂ ಬೆಳೆಸಿಕೊಂಡುಹೋಗುವ ಉದ್ದೇಶ ನಮಗಿದೆ.

**ಸಿ. ಗ್ರಂಥಾಲಯ:**

ನಮ್ಮ ಗ್ರಂಥಾಲಯಕ್ಕೆ ಹೊಸದಾಗಿ 4,000 ರೂಗಳಷ್ಟು ಮೌಲ್ಯದ ಪುಸ್ತಕಗಳನ್ನು ತರಿಸಿಕೊಡಲಿದ್ದೇವೆ. ವಾಸ್ತವವಾಗಿ, ಪ್ರತಿವರ್ಷವೂ ನಾಲ್ಕರಿಂದ ಐದು ಸಾವಿರ ರೂ ಮೌಲ್ಯದ ಪುಸ್ತಕಗಳನ್ನು ಖರೀದಿ ಮಾಡುವ ಉದ್ದೇಶವಿದೆ. ಈ ಗ್ರಂಥಾಲಯವನ್ನು ಎಲ್ಲಾ ಸದಸ್ಯರಿಗೂ ಪರಾಮರ್ಶನ ಕೇಂದ್ರವನ್ನಾಗಿ ಮಾಡಲು ಯೋಚಿಸಲಾಗಿದೆ.

ಇವಲ್ಲದೆ, ಒಂದು ವಸ್ತುಸಂಗ್ರಹಾಲಯವನ್ನೂ ಮತ್ತು ಯೋಜನಾ ಕೇಂದ್ರವನ್ನೂ ತೆರೆಯುವುದು ನಮ್ಮ ದೃಷ್ಟಿಯಲ್ಲಿದೆ. ಇದರಿಂದ ನಮ್ಮ ಮಾಹಿತಿ ಕೇಂದ್ರದ ಉಪಯುಕ್ತತೆಯು ಹೆಚ್ಚಾಗುತ್ತದೆ.

**ಡಿ. ನಮ್ಮ ಸಹಕಾರ :**

ರೈತರ ವೇದಿಕೆಯು ಬಹಳ ಕಾಲದಿಂದ ಬೆಂಗಳೂರಿನಲ್ಲಿ ಸಹಕಾರ ತತ್ತ್ವದ ಆಧಾರದ ಮೇಲೆ ಶೈತ್ಯೀಕರಣದ ಘಟಕವೊಂದನ್ನು ಸ್ಥಾಪಿಸಲು ಪ್ರಯತ್ನಿಸುತ್ತಲೇ

ಇತ್ತು. ನಮ್ಮ ಕರುಣಾಳು ಸರಕಾರದ ಉದಾರವಾದ ಸಹಾಯದಿಂದ ಬೆಂಗಳೂರಿನಲ್ಲಿ ಒಂದು ಸಹಕಾರಿ ಶೈತ್ಯೀಕರಣ ಘಟಕವನವನ್ನು ಈಗ ಸ್ಥಾಪಿಸಲಾಗಿದೆ ಎಂದು ತಿಳಿಸಲು ನನಗೆ ಸಂತೋಷವಾಗುತ್ತಿದೆ. ಮೈಸೂರು ಸರಕಾರವು, ಮೈಸೂರು ರಾಜ್ಯದ ರೈತರ ವೇದಿಕೆಯ ಸಹಕಾರಿ ಶೈತ್ಯೀಕರಣ ಘಟಕಕ್ಕೆ ನಾಲ್ಕು ಲಕ್ಷ ರೂಗಳ ಸಾಲವನ್ನು ನೀಡಿದೆ. ಈ ಸಂಬಂಧ ಕೆಲಸಗಳು ಇನ್ನೇನು ಪ್ರಾರಂಭವಾಗಲಿವೆ. ಎಲ್ಲಾ ಹತ್ತೊಂಬತ್ತು ಜಿಲ್ಲೆಗಳಲ್ಲೂ, ಜಿಲ್ಲಾ ರೈತ ವೇದಿಕೆಯ ಆಶ್ರಯದಲ್ಲಿ ಸಹಕಾರಿ ಶೈತ್ಯೀಕರಣ ಘಟಕಗಳನ್ನು ಸ್ಥಾಪಿಸುವುದು ನಮ್ಮ ಪ್ರಯತ್ನವಾಗಿದೆ.

ಇದಲ್ಲದೆ, ಶೈತ್ಯೀಕರಣದ ಸೌಲಭ್ಯವನ್ನುಳ್ಳ ಸರಕು ಸಾಗಣೆ ವಾಹನಗಳನ್ನು ಸಾಕಷ್ಟು ಸಂಖ್ಯೆಯಲ್ಲಿ ಹೊಂದುವ ಬಗ್ಗೆ ಯೋಚಿಸುತ್ತಿದ್ದೇವೆ. ಇದರಿಂದ ತರಕಾರಿಗಳನ್ನು ಬೆಂಗಳೂರಿನಿಂದ ಬಾಂಬೆ ಮೊದಲಾದ ಊರುಗಳಿಗೆ ಕಳುಹಿಸಲು ಅನುಕೂಲವಾಗುತ್ತದೆ ಮತ್ತು ನಮ್ಮ ರೈತರು ತಮ್ಮ ಬೆಳೆಗಳಿಗೆ ಉತ್ತಮ ಬೆಲೆಯನ್ನು ಪಡೆಲೂ ಸಹಾಯವಾಗುತ್ತದೆ.

ಬೆಂಗಳೂರು ಜಿಲ್ಲಾ ವೇದಿಕೆಯು ಜಿಲ್ಲಾ ತರಕಾರಿ ಬೆಳೆಗಾರರ ಸಹಕಾರ ಒಕ್ಕೂಟವನ್ನು ಪ್ರಾಯೋಜಿಸಿ ಈ ದಿಕ್ಕಿನಲ್ಲಿ ಇತರ ವೇದಿಕೆಗಳಿಗಿಂತ ಒಂದು ಹೆಜ್ಜೆ ಮುಂದೆ ಇದೆ. ಈಗ ಅದು ತನ್ನ ಕೆಲಸವನ್ನು ಪ್ರಾರಂಭಿಸುವುದೊಂದು ಮಾತ್ರ ಬಾಕಿ ಇದೆ.

ಸಂಸ್ಕರಣಾ ಘಟಕ, ಗೊಬ್ಬರವನ್ನು ಬೆರೆಸುವ ಘಟಕಗಳ ಸ್ಥಾಪನೆ ಮತ್ತು ರೈತರಿಗೆ ಅಗತ್ಯವಾದ ವಸ್ತುಗಳನ್ನು ವಿತರಣೆ – ಈ ಉದ್ದೇಶಕ್ಕಾಗಿ ಕೃಷಿ ಬೆಳೆಗಾರರ ಸಹಕಾರಿ ಸಂಘಗಳನ್ನು ಜಿಲ್ಲಾ ಮಟ್ಟದಲ್ಲಿ ಪ್ರಾರಂಭಿಸುವುದರ ಬಗ್ಗೆ ನಾನು ಕಳೆದ ವರ್ಷದ ಭಾಷಣದಲ್ಲಿ ತಮಗೆ ತಿಳಿಸಿದ್ದೆ. ಈ ಸಹಕಾರಿ ಸಂಘಗಳನ್ನು ಜಿಲ್ಲಾ ಹಾಗೂ ತಾಲ್ಲೂಕು ಮಟ್ಟಗಳಲ್ಲಿ ಸ್ಥಾಪಿಸುವುದು ಅಗತ್ಯವಾಗಿದ್ದು, ಅದು ತ್ವರಿತವಾಗಿ ನೆರವೇರಿಸಲು ನಾವು ಕ್ರಮಗಳನ್ನು ತೆಗೆದುಕೊಳ್ಳಬೇಕು.

ಸಹಕಾರಿ ಸಂಘಗಳ ಬಗ್ಗೆ ಮಾತನಾಡುವಾಗ, ಕೃಷಿ ಯಂತ್ರೋಪಕರಣಗಳನ್ನು, ಬೆಳೆಗಳನ್ನು ಮತ್ತು ಜಾನುವಾರುಗಳನ್ನು ವಿಮೆಯ ವ್ಯಾಪ್ತಿಗೆ ತರಲು ವಿಮಾ

ಸಹಕಾರಿ ಸಂಘಗಳನ್ನೂ ನಾವು ಸ್ಥಾಪಿಸಬೇಕಾದ ಅಗತ್ಯವಿದೆ ಎಂಬುದನ್ನು ನೆನಪಿನಲ್ಲಿ ಇಟ್ಟುಕೊಳ್ಳಬೇಕು. ಈ ವಿಚಾರದಲ್ಲಿ ಇನ್ನೂ ಹೆಚ್ಚಿನ ಚರ್ಚೆಯಾಗಬೇಕು.

**ಇ. ವಿಸ್ತರಣೆ:**

ವೇದಿಕೆಯ ಬಹಳಷ್ಟು ವಿಭಾಗಗಳು ಕೃಷಿಕಾಲೇಜಿನ ಆಸುಪಾಸಿನಲ್ಲಿಯೇ ಇರಬೇಕೆಂದು ಹೇಳುವವನು ನಾನು. ಇದರಿಂದ ಕೃಷಿ ಶಿಕ್ಷಣದ ಕೇಂದ್ರ, ದುಡಿಯುತ್ತಿರುವ ರೈತರ ವಾಸ್ತವಿಕ ಸಮಸ್ಯೆಗಳು ಇವೆರಡರ ನಡುವೆ ಕೊಂಡಿಯೊಂದನ್ನು ಬೆಸೆಯಬಹುದು. ಇಷ್ಟೇ ಅಲ್ಲದೆ, ಇದರಿಂದ ಕೃಷಿ ವಿಸ್ತರಣೆಯನ್ನು ಸೂಕ್ತ ಮಾರ್ಗದಲ್ಲಿ ಹರಿಯುವಂತೆಯೂ ಮಾಡಬಹುದು. ಕೃಷಿ ಹಾಗೂ ಪಶುವೈದ್ಯ ಕಾಲೇಜುಗಳಲ್ಲಿ ತರಬೇತಿಯನ್ನು ಪಡೆಯುತ್ತಿರುವ ನಮ್ಮ ಭಾವೀ ರೈತರ ದೇಶದ ಕೃಷಿಯ ಹಿತಾಸಕ್ತಿಯನ್ನು ಕಾಪಾಡಲು ದುಡಿಯುತ್ತಿರುವ ರೈತರ ಸಂಸ್ಥೆಯ ಬಗ್ಗೆ ತಿಳಿದುಕೊಂಡಿರಬೇಕು.

**ಎಫ್. ಉತ್ಪನ್ನಗಳ ಸಮಿತಿ :**

ಕಳೆದ ವರ್ಷದ ಸರ್ವಸದಸ್ಯರ ಸಭೆಯಲ್ಲಿ ನಾಲ್ಕು ಉತ್ಪನ್ನಗಳ ಸಮಿತಿಗಳು 1) ಧಾನ್ಯಗಳು ಮತ್ತು ಬೇಳೆಕಾಳುಗಳು; 2) ಎಣ್ಣೆ ಬೀಜಗಳು; 3) ಹಣ್ಣು ಮತ್ತು ತರಕಾರಿಗಳು; ಮತ್ತು 4) ಹಾಲು ಮತ್ತು ಜಾನುವಾರುಗಳು– ಇವುಗಳ ಸಮಸ್ಯೆಗಳನ್ನು ಚರ್ಚಿಸಿದವು. ಇಂತಹುದೇ ಚರ್ಚೆಯು ಬೆಳೆಗಳು ಮತ್ತು ಉತ್ಪನ್ನಗಳ ಮೇಲೆ ನಿರ್ದಿಷ್ಟವಾಗಿ ನಮ್ಮ ವಿಭಾಗೀಯ ವೇದಿಕೆಗಳಲ್ಲಿ ನಡೆಯಿತು. ಉತ್ಪನ್ನಗಳ ಸಮಿತಿಯ ಸಭೆಗಳನ್ನು ನಡೆಸುವುದು, ಮತ್ತು ಅವುಗಳ ನಿರ್ಣಯಗಳನ್ನು ದಾಖಲಿಸುವುದು ಭಾರತದ ರೈತರ ವೇದಿಕೆಯ ಕಾರ್ಯಕ್ರಮದಲ್ಲಿದೆ. ಇಂತಹ ಸಭೆಗಳಲ್ಲಿ ನಮ್ಮ ಕೆಲವು ಸದಸ್ಯರು ಭಾಗವಹಿಸಿದ್ದಾರೆ.

ಸದಸ್ಯರ ಅಭಿಪ್ರಾಯಗಳನ್ನು ಸಂಗ್ರಹಿಸಿ, ಪರಿಶೀಲಿಸಿ ಅವುಗಳ ಮೇಲೆ ನಮ್ಮ ಕಾರ್ಯನೀತಿಯನ್ನು ಯೋಜಿಸುವುದಕ್ಕಾಗಿ ಎರಡು ಉಪಸಮಿತಿಗಳನ್ನು ರಚಿಸಲಾಗಿದೆ – ಒಂದು ಸ್ಥಾಯೀ ಸಮಿತಿ, ಮತ್ತೊಂದು ಯೋಜನಾ ಸಮಿತಿ. ಈ ಸಮಿತಿಗಳ ಇಲ್ಲಿಯವರೆಗಿನ ಸಭೆಯ ನಡಾವಳಿಗಳನ್ನು ದಾಖಲು

ಮಾಡಲಾಗಿದೆ. ನನ್ನ ಕಳೆದ ವರ್ಷದ ಭಾಷಣದಲ್ಲಿ ಬೆಳೆಗಳ ಉತ್ಪಾದನಾ ವೆಚ್ಚವು ಒಂದು ಪ್ರಮುಖ ಅಂಶವಾಗಿದ್ದು ಅವುಗಳನ್ನು ಸಂಗ್ರಹಿ... ಉಳಿದ ವಿಧಾನಗಳ ಜೊತೆಗೆ, ಸದಸ್ಯರೂ ತಮ್ಮ ಖರ್ಚುವೆಚ್ಚಗಳ ದಾಖಲೆಯನ್ನು ಬರೆದಿಟ್ಟರೆ ಅದು ಬಹಳ ಉಪಯೋಗಕ್ಕೆ ಬರುತ್ತದೆಯೆಂದು ಹೇಳಿದ್ದೆ. ಹೀಗೆ ಮಾಡಿದರೆ, ಬೇರೆ ಬೇರೆಯ ವಸ್ತುಗಳನ್ನು ಬೆಳೆಯುವಲ್ಲಿ ಮಾಡಿದ ವೆಚ್ಚಕ್ಕೆ ಅನುಗುಣವಾಗಿ ತಮಗೆ ಬೆಲೆಯು ಸಿಕ್ಕುತ್ತಿದೆಯೇ ಎಂಬುದನ್ನು ಲೆಕ್ಕಹಾಕಿ ತಿಳಿದುಕೊಳ್ಳಬಹುದು. ಈ ಉದ್ದೇಶಕ್ಕಾಗಿ ರೂಪಿಸಿರುವ ಪುಸ್ತಕವು ಈಗ ಮುದ್ರಿತವಾಗಿದೆ. ಅದನ್ನು ಕೆಲವು ರೈತರಾದರೂ ಉಪಯೋಗಿಸಿಕೊಂಡು ತಮ್ಮ ಖರ್ಚುವೆಚ್ಚಗಳನ್ನು ಶಿಸ್ತುಬದ್ಧವಾಗಿ ಬರೆದಿಡುವಂತೆ ಮಾಡಬೇಕಾಗಿದೆ.

**ಜಿ. ಅಖಿಲ ಭಾರತ ರೈತರ ಸಮ್ಮೇಳನ:**

ವಸ್ತುಪ್ರದರ್ಶನಗಳನ್ನು ಏರ್ಪಡಿಸುವ ತಮ್ಮ ನೀತಿಯ ಅನುಸಾರವಾಗಿ ಭಾರತ ರೈತ ವೇದಿಕೆಯು ತನ್ನ ಮೊದಲ ರಾಷ್ಟ್ರೀಯ ಕೃಷಿ ಮೇಳವನ್ನು ಕಲ್ಕತ್ತದಲ್ಲಿ ಏರ್ಪಡಿಸಿತ್ತು. ಈ ವಸ್ತು ಪ್ರದರ್ಶನದ ಅವಧಿಯಲ್ಲಿ ವೇದಿಕೆಯು ರೈತರ ರಾಷ್ಟ್ರೀಯ ಸಮ್ಮೇಳನವೊಂದನ್ನು ಕೂಡ ವ್ಯವಸ್ಥೆಮಾಡಿತ್ತು. ಹಲವಾರು ಸದಸ್ಯರು ಈ ಸಮ್ಮೇಳನದಲ್ಲಿ ಭಾಗವಹಿಸಿದ್ದರು.

**ಎಚ್. ವಿದೇಶದವರ ಭೇಟಿ ಮತ್ತು ವಿನಿಮಯ ಕಾರ್ಯಕ್ರಮ:**

ವರದಿಯ ವರ್ಷದಲ್ಲಿ ಅಮೆರಿಕದಿಂದ ಬಂದಿದ್ದ 17 ವ್ಯಕ್ತಿಗಳು ನಮ್ಮ ವೇದಿಕೆಗೆ ಭೇಟಿಕೊಟ್ಟಿದ್ದರು. ಅವರು ಇಲ್ಲಿ ಇದ್ದ ಅವಧಿಯು ಅಲ್ಪವಾಗಿದ್ದರೂ, ಅವರು ನಮ್ಮ ರೈತರ ಜೊತೆಯಲ್ಲಿಯೇ ವಾಸವಿದ್ದು ನಮ್ಮ ಸ್ಥಳೀಯ ಬೇಸಾಯ ಪದ್ಧತಿಗಳನ್ನು ಅವರು ಅಭ್ಯಸಿಸಿದರು. ಹಾಗೆ ಭೇಟಿಕೊಟ್ಟ ವಿದೇಶೀಯರು ತಮ್ಮ ದೇಶದಲ್ಲಿನ ರೈತರ ಸಂಘದ ಪದಾಧಿಕಾರಿಗಳಾಗಿದ್ದು, ಅವರ ಇಲ್ಲಿನ ವಾಸ ಒಂದು ಬಗೆಯ ಹಿತವಾದ ಅನುಭವವನ್ನು ನೀಡಿತು. ಅವರಿಗೆ ಆತಿಥ್ಯವನ್ನು ನೀಡಿದ ನಮ್ಮ ರೈತರಿಗೆ ನಾವು ಕೃತಜ್ಞರಾಗಿರಬೇಕು. ಅಷ್ಟೇ ಆಸಕ್ತಿದಾಯಕವಾಗಿದ್ದುದು ಜಪಾನಿ ಯುವಕರ ತಂಡದ ಮತ್ತು ಯೂರೋಪಿನ ಕ್ಯಾಥೊಲಿಕ್ ಯುವಕರ ಸಂಘದ ಕಾರ್ಯದರ್ಶಿಯ ಭೇಟಿಗಳು. ನಮ್ಮ ಸ್ನೇಹಿತರಲ್ಲಿ ನಾಲ್ವರು – ಶ್ರೀ ಮುಕುಂದ, ಶ್ರೀ ಪೂವಯ್ಯ, ಶ್ರೀ ಮಲ್ಲೇಶ ಗೌಡ ಮತ್ತು ಶ್ರೀ ದೇಶಮುಖ್ ಅವರು –

ಯುವಕರ ನಿಯೋಗದಲ್ಲಿದ್ದು ಯೂರೋಪಿಗೆ ಭೇಟಿಕೊಟ್ಟರು. ಹಾಗೆಯೇ, ಶ್ರೀ ಮುನಿಸ್ವಾಮಿ ಜಪಾನಿಗೆ ಭೇಟಿಕೊಟ್ಟರು. ಈ ರೀತಿಯಲ್ಲಿ ನಾವು ನಮ್ಮ ವಿನಿಮಯ ಮತ್ತು ಸಂಪರ್ಕಗಳ ಕಾರ್ಯಕ್ರಮವನ್ನು ಜಾರಿಯಲ್ಲಿ ಇಟ್ಟುಕೊಂಡಿದ್ದೇವೆ.

ನಮ್ಮ ವಿಧಾನ ಸಭೆಯ ಮತ್ತು ವಿಧಾನ ಪರಿಷತ್ತಿನ ಸದಸ್ಯರು ನಮ್ಮ ವೇದಿಕೆಗೆ ಭೇಟಿಕೊಡುವ ವ್ಯವಸ್ಥೆಯನ್ನು ಮಾಡಿದ್ದೆವು. ಇದೊಂದು ಹರ್ಷದಾಯಕ ಸಂಗತಿ. ಇದೇನೂ ಹೇಳಿಕೊಳ್ಳುವಂತಹ ವಿಷಯವಲ್ಲವಾದರೂ, ಭೇಟಿಯ ಸಮಯದಲ್ಲಿ ನಮ್ಮ ಸಂಘದ ಬಗ್ಗೆ ನಮ್ಮವರೇ ಆದ ಅವರ ಅನುಕಂಪ ಮತ್ತು ಸೇವೆಯನ್ನು ಪಡೆಯುವುದು ನಮ್ಮ ಉದ್ದೇಶವಾಗಿತ್ತು. ಕಳೆದ ರಾಷ್ಟ್ರೀಯ ರೈತರ ದಿನದಂದು ನಾವು ಹಿಂಗಾರು ಬೆಳೆಗಳ ಅಭಿವೃದ್ಧಿ ಪ್ರಚಾರದ ಕಾರ್ಯಕ್ರಮದ ಅಡಿಯಲ್ಲಿ ಬತ್ತ, ಜೋಳ ಮತ್ತು ರಾಗಿಗಳನ್ನು ಬೆಳೆಯುವಲ್ಲಿ ದಾಖಲೆಯನ್ನು ನಿರ್ಮಿಸಿದ್ದ ರೈತರಿಗೆ ಸನ್ಮಾನವನ್ನು ಏರ್ಪಡಿಸಿದ ಸಂದರ್ಭದಲ್ಲಿ ನಮ್ಮ ಮಿತ್ರರಾದ ವಿಧಾನಸಭೆಯ ಮತ್ತು ವಿಧಾನ ಪರಿಷತ್ತಿನ ಸದಸ್ಯರನ್ನು ಆಹ್ವಾನಿಸಿದ್ದೆವು.

**ಐ. ಕೃಷಿ ಅಭಿವೃದ್ಧಿಗಾಗಿ ವಾಹನ ಸೌಕರ್ಯ :**

ಈ ಹಿಂದೆ ಹಲವು ಬಾರಿ ನಿರ್ಣಯಿಸಿದ್ದ ಹಾಗೆ ನಾವು ಈಗ ಒಂದು ವ್ಯಾನ್‌ನ್ನು ವೇದಿಕೆಗಾಗಿ ಖರೀದಿಸಿದ್ದೇವೆ. ನಮ್ಮ ಸಂಘಟಕರು ವಿವಿಧ ಜಿಲ್ಲಾ ಸ್ಥಳಗಳಿಗೆ ಭೇಟಿನೀಡಿ ಎಲ್ಲ ಕಡೆಯಲ್ಲಿಯೂ ನಮ್ಮ ವೇದಿಕೆಯ ಜಾಲವು ಸರಿಯಾಗಿ ಹೆಣೆಯಲ್ಪಟ್ಟಿದೆಯೆಂಬುದನ್ನು ಖಚಿತಪಡಿಸಿಕೊಳ್ಳಲು ಇದು ಸಹಾಯಮಾಡುತ್ತದೆ.

ಈ ಕೆಲವು ಅಂಶಗಳು ವೇದಿಕೆಯು ಸಕ್ರಿಯವಾಗಿ ತನ್ನ ಕಾರ್ಯಗಳನ್ನು ಮಾಡಿಕೊಂಡು ಹೋಗುತ್ತಿದೆ ಎಂಬುದನ್ನು ತಮಗೆ ಮನವರಿಕೆ ಮಾಡಿಕೊಡುತ್ತದೆಯೆಂದು ನಾನು ನಂಬುತ್ತೇನೆ. ಉದ್ದೇಶಿತ ಕಾರ್ಯಕ್ರಮಗಳಲ್ಲಿ ಕೆಲವನ್ನು ನಾವು ಕಾರ್ಯರೂಪಕ್ಕೆ ಇಳಿಸಲಾಗಲಿಲ್ಲವೆಂಬುದೂ ನಿಜ – ಉದಾ. ರೈತ ಭವನದ ನಿರ್ಮಾಣ ಮತ್ತು ರೈತರ ರೈಲುಗಳನ್ನು ಓಡಿಸುವುದು. ರೈತರ ವೇದಿಕೆಗಳಲ್ಲಿ ಔಪಚಾರಿಕವಾಗಿ ಮತ್ತು ಅನೌಪಚಾರಿಕವಾಗಿ ಹಲವಾರು ವಿಷಯಗಳನ್ನು – ಉದಾ. ಅಖಿಲ ರಾಜ್ಯ ಕೃಷಿ ಮೇಳ, ಜಿಲ್ಲೆಗಳಲ್ಲಿ ಭೂಮಿಯನ್ನು ಖರೀದಿಸಿ ಪ್ರಾತ್ಯಕ್ಷಿಕಾ ಕೇಂದ್ರ ಹಾಗೂ ಕೃಷಿ ಶಾಲೆಗಳನ್ನು ನಡೆಸುವುದು ಮತ್ತು ತರಬೇತಿ ಶಿಬಿರಗಳನ್ನು ಏರ್ಪಡಿಸುವುದು – ಇವುಗಳನ್ನು ಚರ್ಚಿಸಲಾಯಿತು.

ನಾವು ಇವೆಲ್ಲವನ್ನೂ ನಮ್ಮ ಗಮನದಲ್ಲಿಟ್ಟುಕೊಂಡಿರುತ್ತೇವೆ. ನಿಮ್ಮ ಸಹಕಾರದೊಂದಿಗೆ, ವೇದಿಕೆಯು ಇನ್ನು ಮುಂದೆಯೂ ಹಲವಾರು ದಿಕ್ಕಿನಲ್ಲಿ ತನ್ನ ಪ್ರಗತಿಯನ್ನು ಸಾಧಿಸುತ್ತದೆ ಎಂಬುದರ ಬಗ್ಗೆ ನನಗೆ ಯಾವ ವಿಧವಾದ ಸಂಶಯವೂ ಇಲ್ಲ.

ನನ್ನ ಭಾಷಣದ ವಿಷಯದಿಂದ ವಿಷಯಾಂತರವನ್ನು ಮಾಡುವ ಸ್ವಾತಂತ್ರ್ಯವನ್ನು ನಾನು ಈಗ ತೆಗೆದುಕೊಳ್ಳುತ್ತಿದ್ದೇನೆ. ನಾವು ನಮ್ಮ ಕಾರ್ಯಕ್ರಮದ ಸಂದರ್ಭದಲ್ಲಿ ಭಾರತೀಯ ಸಂವಿಧಾನದ ದೃಷ್ಟಿಯಿಂದ ನಮ್ಮ ನಿಲುವೇನು, ನಮ್ಮ ಹೊಣೆಗಾರಿಕೆಗಳೇನು, ಮತ್ತು ಕೃಷಿ ಕಾರ್ಯಕರ್ತರಾಗಿ ನಮ್ಮ ನಿರೀಕ್ಷೆಗಳು ಏನು ಎಂಬುದನ್ನು ನಾವು ತಿಳಿದುಕೊಳ್ಳಲು ಇದರಿಂದ ಸಹಾಯವಾಗುತ್ತದೆ. ನಮ್ಮ ದೇಶದಲ್ಲಿ ಕೃಷಿಕಾರ್ಮಿಕರ ವೇತನ ಅತಿ ಕಡಿಮೆಯೆಂಬುದು ದುಃಖದ ಸಂಗತಿಯಾದರೂ, ಸತ್ಯವಾದ ವಿಷಯವೇ ಆಗಿದೆ. ಕೃಷಿಕಾರ್ಮಿಕರೇ ತಮ್ಮ ಶ್ರಮದ ದುಡಿಮೆಯಿಂದ ದೇಶದ ಸಂಪತ್ತನ್ನು ಉತ್ಪಾದಿಸುವವರಾಗಿರುವುದರಿಂದ ಮತ್ತು ಅವರೇ ದೇಶದ ಬೆನ್ನೆಲುಬಾಗಿರುವುದರಿಂದ, ಅವರ ಈ ಪರಿಸ್ಥಿತಿಯ ವಿರೋಧಾಭಾಸವು ತೀವ್ರವಾಗಿ ಕಾಣಿಸುತ್ತದೆ. ಕೃಷಿಕಾರ್ಮಿಕರು ಇಲ್ಲದಿದ್ದರೆ, ನಿಮಗೆ ಆಹಾರವು ಮತ್ತು ಕೈಗಾರಿಕೆಗಳಿಗೆ ಕಚ್ಚಾವಸ್ತುಗಳು ಎಲ್ಲಿಂದ ಬರುತ್ತವೆ? ಕೈಗಾರಿಕಾ ಕಾರ್ಮಿಕರು ಇವರಿಗಿಂತ ಹೆಚ್ಚಿನ ವೇತನ ಮತ್ತು ಸೌಲಭ್ಯಗಳನ್ನು ಅನುಭವಿಸುತ್ತಿರುವಾಗ ಆಹಾರದ ಉತ್ಪಾದಕರು ಬೆನ್ನುಮುರಿಯುವ ಸಾಲದ ಹೊರೆಯಲ್ಲಿ ನರಳುತ್ತಾ, ಅಪೌಷ್ಟಿಕತೆಗೆ ತುತ್ತಾಗಿ, ಹಸಿವಿನಿಂದ ಸಾಯುತ್ತಿರುವುದು ಶೋಚನೀಯವಾಗಿದೆ.

**ಜೆ. ಶ್ರಮ :**

ಪ್ರಪಂಚದೆಲ್ಲಡೆ ದುಡಿಮೆಯು ಗೌರವಕ್ಕೆ ಪಾತ್ರವಾಗಿದ್ದರೆ, ನಮ್ಮ ದೇಶದಲ್ಲಿ ಕಾರ್ಮಿಕರುಅದರಲ್ಲೂ [illegible] ದುಡಿಯುವವರು ಎಂದರೆ ಎಲ್ಲರಿಗೂ ಒಂದು ಬಗೆಯ ತಾತ್ಸಾರ. ದುಡಿ[illegible]ಯ ಗೌರವವು ಕಾಗದದ ಮೇಲಿನ ಘೋಷಣೆಯಾಗಷ್ಟೇ ನಮ್ಮಲ್ಲಿ ಉಳಿದಿದೆ. ಪ್ರೋತ್ಸಾಹವನ್ನು ನೀಡದಿದ್ದರೂ, ಸೋಮಾರಿತನವನ್ನು ನಾವು ಸಹಿಸಿಕೊಳ್ಳುತ್ತೇವೆ. ಸಮಾನ ಕೆಲಸಕ್ಕೆ ಸಮಾನ ವೇತನವೆಂದು ಸಂವಿಧಾನದ 39 (ಡಿ) ವಿಧಿಯು ವಿಧಿಸಿದ್ದರೂ, ಗಂಡಸರು ಮತ್ತು ಹೆಂಗಸರ ನಡುವೆ ಇದನ್ನು ನಾವು ಪಾಲಿಸುತ್ತಿಲ್ಲ. ಸಮಾನ ವೇತನ ಹೋಗಲಿ, ಕೃಷಿಕಾರ್ಮಿಕರಿಗೆ

ನಿಗದಿಗೊಳಿಸಿರುವ ಕನಿಷ್ಠ ವೇತನವಾಗಲೀ, ಬಿಡತಿಯಿಲ್ಲದೆ ಗಳಿಸುವ ಅವಕಾಶವೂ ದೊರೆಯುತ್ತಿಲ್ಲ. ಕೈಗಾರಿಕೆಗಳಲ್ಲಿ ದುಡಿಯುವವರಿಗೆ, ವೈದ್ಯಕೀಯ ನೆರವು, ಭವಿಷ್ಯ ನಿಧಿ ಯೋಜನೆ, ವಿಮಾಯೋಜನೆ, ಗೃಹಭತ್ಯೆ, ಮತ್ತಿತರ ಭತ್ಯೆ, ಇವುಗಳಲ್ಲದೆ ನೌಕರಿಯಲ್ಲಿನ ಅವಿಚ್ಛಿನ್ನತೆ ಮತ್ತು ಅಪಘಾತಗಳ ವಿರುದ್ಧ ಪರಿಹಾರ – ಈ ಎಲ್ಲಾ ಸೌಲಭ್ಯಗಳಿವೆ. ಅವನ ದುಡಿಮೆಯ ಅವಧಿಯು ನಿಗದಿತವಾಗಿರುತ್ತದೆ. ಹೆಚ್ಚಿನ ವೇಳೆ ದುಡಿದರೆ, ಅವನಿಗೆ ಅದಕ್ಕೆ ಪ್ರತ್ಯೇಕ ಭತ್ಯಸಿಗುತ್ತದೆ. ಆದರೆ, ಕೃಷಿಕಾರ್ಮಿಕರ ಪಾಡು ಏನಾಗಿದೆ? ಅವರು ಬೆಳಗಿನಿಂದ ಸಂಜೆಯವರೆಗೂ ದುಡಿದರೂ, ಅವರಿಗೆ ಸಿಗುವುದು ಅವರ. ಎರಡು ಹೊತ್ತಿನ ಊಟಕ್ಕೂ ಸಾಲದಷ್ಟಿರುತ್ತದೆ. ಸಂವಿಧಾನದ 2?ನೆಯ ವಿಧಿಯು ಮಾನವರ ವಿಕ್ರಯವನ್ನು ಮತ್ತು ಎಲ್ಲಾ ವಿಧದ ಬಲವಂತದ ದುಡಿಮೆಯನ್ನು ನಿಷೇಧಿಸಿದ್ದರೂ, ಪರಿಸ್ಥಿತಿಯಲ್ಲಿ ಯಾವ ಸುಧಾರಣೆಯೂ ಕಂಡುಬರದಿರುವುದು ದುರ್ದೈವದ ಸಂಗತಿಯಾಗಿದೆ. ಜನತೆಯಲ್ಲಿ ಜಾಗೃತಿಯನ್ನು ಉಂಟುಮಾಡಿರುವ ನಮ್ಮ ಮಹಾನ್ ನಾಯಕರ ಸತತ ಪ್ರಯತ್ನದಿಂದಾಗಿ, ಶೋಷಣೆಯ, ಕ್ರೌರ್ಯದ, ಸಾಮಾಜಿಕ ಅಸಮಾನತೆಯ ದಿನಗಳು ನಿಧಾನವಾಗಿ ಮರೆಯಾಗುತ್ತಿವೆ. ಸಂವಿಧಾನದ 43ನೆಯ ವಿಧಿಯು ಹೀಗೆ ಹೇಳುತ್ತದೆ:

'ಸರಕಾರವು ಸೂಕ್ತ ಕಾನೂನಿನ ಮೂಲಕವಾಗಲೀ, ಆರ್ಥಿಕ ವ್ಯವಸ್ಥೆಯ ಮೂಲಕವಾಗಲೀ, ಅಥವಾ ಇನ್ನಾವುದೇ ರೀತಿಯಲ್ಲಾಗಲೀ, ಕೃಷಿ, ಕೈಗಾರಿಕೆ ಅಥವಾ ಇನ್ನಾವುದೇ ಕಾರ್ಮಿಕರಿಗೆ ಕೆಲಸ, ಜೀವನ ನಿರ್ವಹಣೆಗೆ ಸಾಲುವಷ್ಟು ವೇತನ, ಕೆಲಸದ ವಾತಾವರಣ, ಸಾಕಷ್ಟು ವಿರಾಮ, ಸಾಂಸ್ಕೃತಿಕ ಅವಕಾಶಗಳು, ಇತ್ಯಾದಿಗಳು ದೊರಕುವ ಹಾಗೆ ಮತ್ತು ವಿಶೇಷವಾಗಿ ವೈಯಕ್ತಿಕ ಅಥವಾ ಸಹಕಾರಿ ಸಂಘಗಳ ಮಟ್ಟದಲ್ಲಿ ಕುಟೀರ ಕೈಗಾರಿಕೆಗಳು ಅಭಿವೃದ್ಧಿಯನ್ನು ಹೊಂದುವ ಹಾಗೆ ಪ್ರಯತ್ನಪಡಬೇಕು.'

ನಮ್ಮ ಕೃಷಿ ಕಾರ್ಮಿಕರು ಉದ್ಯೋಗಾವಕಾಶಗಳನ್ನು ಮತ್ತು ಜೀವನವನ್ನು ಸಾಗಿಸಲು ಅಗತ್ಯವಾದ ವೇತನವನ್ನು ಹಾಗೂ ಇತರ ಕ್ಷೇತ್ರಗಳ ಕಾರ್ಮಿಕರರಿಗೆ ದೊರೆಯುವ ಸೌಲಭ್ಯಗಳನ್ನು ಪಡೆಯುವುದು ಅವರ ಸಾಂವಿಧಾನಿಕ ಹಕ್ಕು. ಸರಕಾರವು ಇದನ್ನೆಲ್ಲಾ ಜಾರಿಗೆ ತರಬೇಕು. ಆದರೆ ಸರಕಾರವು ತಾನೇ ಇದನ್ನು

ಹೇಗೆ ಮಾಡಬಲ್ಲುದು? ಅದರಲ್ಲಿಯೂ, ಸರಕಾರವೆಂದರೆ ಏನು? ನಿಮ್ಮ ಪ್ರತಿನಿಧಿಗಳು ನಿಮಗಾಗಿ ಮತ್ತು ನಿಮ್ಮ ಪರವಾಗಿ ಕೆಲಸವನ್ನು ಮಾಡುತ್ತಿರುತ್ತಾರೆ. ನೀವು ಒಂದು ಕೆಲಸವನ್ನು ಮಾಡಬೇಕೆಂದು ಅವರಿಗೆ ಹೇಳಿದರೆ, ಅದನ್ನು ಮಾಡುವುದು ಅವರ ಕರ್ತವ್ಯವಾಗಿರುತ್ತದೆ. ನೀವು ನಿಮ್ಮ ಹಕ್ಕುಗಳ ಸಮರ್ಥನೆಯನ್ನು ಮಾಡಿಕೊಂಡು, ನಿಮ್ಮ ಜವಾಬ್ದಾರಿಯನ್ನು ನಿಭಾಯಿಸಿಕೊಂಡರೆ, ಅವರು ತಮ್ಮ ಕರ್ತವ್ಯಗಳನ್ನು ನಿರ್ವಹಿಸುವಂತೆ ನೀವು ಮಾಡಬಹುದು. ಸಹಕಾರ ತತ್ತ್ವದ ಆಧಾರದ ಮೇಲೆ ನೀವು ನಿಮ್ಮ ಬೇಡಿಕೆಯನ್ನು ಅವರ ಮುಂದಿಟ್ಟರೆ, ಅದನ್ನು ಖಂಡಿತವಾಗಿಯೂ ನೆರವೇರಿಸಲಾಗುವುದು. ಸಹಕಾರಿ ತತ್ತ್ವದ ಆಧಾರ ಮೇಲೆ ಸರಕಾರವು ಹಲವಾರು ಕಾರ್ಯಕ್ರಮಗಳನ್ನು ಜಾರಿಗೆ ತಂದಿದೆ. ಕೃಷಿಯ ಹಿತಾಸಕ್ತಿಗಳನ್ನು ಪ್ರತಿನಿಧಿಸುವ ನಾವು ಸರಕಾರವನ್ನು ಸಂಪರ್ಕಿಸಿ ನಮ್ಮ ಬೇಡಿಕೆಗಳನ್ನು ಅವರಿಗೆ ತಿಳಿಸಿ, ಅವುಗಳನ್ನು ನೆರವೇರಿಸಿಕೊಳ್ಳುವುದು ಈಗ ನಮ್ಮ ಕರ್ತವ್ಯವಾಗಿದೆ.

ಕೃಷಿಯ ವಿವಿಧ ವಿಭಾಗಗಳಿಗೆ ಸಂಬಂಧಿಸಿದಂತೆ ಕೃಷಿಕಾರ್ಮಿಕರಿಗೆ ನೀಡಬೇಕಾದ ಕನಿಷ್ಠವೇತನದ ಬಗ್ಗೆ 'ಕನಿಷ್ಠ ವೇತನದ ಕಾನೂನು' ಜಾರಿಯಲ್ಲಿದೆ. ಆದರೆ ನಾವು ಬಯಸಿದಷ್ಟು ಮಟ್ಟಿಗೆ ಅದು ಪರಿಣಾಮಕಾರಿಯಾಗಿ ಜಾರಿಗೆ ಬಂದಿಲ್ಲ. ಆಡಳಿತಾತ್ಮಕ ತೊಂದರೆಗಳು ಇರುವುದರಿಂದ ಅವುಗಳನ್ನು ಜಾರಿಗೆ ತರುವಲ್ಲಿ ವಿಳಂಬವಾಗುತ್ತಿದೆ. ಈ ತೊಂದರೆಗಳನ್ನು ಸರಕಾರದ ಗಮನಕ್ಕೆ ಈಗಾಗಲೇ ತರಲಾಗಿದೆ ಮತ್ತು ಸದ್ಯದಲ್ಲಿಯೇ ಈ ಕಾನೂನನ್ನು ಸಂಪೂರ್ಣವಾಗಿ ಮತ್ತು ಪರಿಣಾಮಕಾರಿಯಾಗಿ ಜಾರಿಗೆ ತರುವುದು ಸಾಧ್ಯವಾಗುತ್ತದೆ ಎಂಬ ನಂಬಿಕೆ ನನಗಿದೆ.

ಕೃಷಿಯನ್ನು ಆಧುನಿಕೀಕರಿಸುವುದಕ್ಕೆ ನಾವೆಲ್ಲರೂ ಸರ್ವ ಪ್ರಯತ್ನವನ್ನು ಮಾಡುತ್ತಿದ್ದೇವೆ. ವಿಜ್ಞಾನ ಮತ್ತು ತಂತ್ರಜ್ಞಾನದ ಅನುಕೂಲಗಳನ್ನು ನಾವು ಹೊಲಗದ್ದೆಗಳಲ್ಲಿ ಕೆಲಸಮಾಡುವವರಿಗೆ ತೋರಿಸಿಕೊಡಬೇಕು. ಈ ಉದ್ದೇಶಕ್ಕಾಗಿ ಪ್ರತಿಯೊಂದು ಜಿಲ್ಲಾಕೇಂದ್ರಗಳಲ್ಲಿಯೂ, ಸಾಧ್ಯವಾದರೆ ತಾಲ್ಲೂಕು ಕೇಂದ್ರಗಳಲ್ಲಿಯೂ, ವಸ್ತುಪ್ರದರ್ಶನಕ್ಕೆ ಖಾಯಂ ಆದ ಕಟ್ಟಡಗಳನ್ನು ಹೊಂದಿರಬೇಕು ಎನ್ನುವುದು ನನ್ನ ಅಭಿಪ್ರಾಯ. ಈ ಕಟ್ಟಡಗಳಲ್ಲಿ ಕೆಲವು ಆಕೃತಿಗಳು, ಚಿತ್ರಗಳು, ಗ್ರಾಫ್‌ಗಳು

– ಇಂತಹವುಗಳು ಮಾತ್ರ ಇದ್ದರೆ ಅದು ಹಳ್ಳಿಯ ಜನರ ಮನಸ್ಸಿನ ಮೇಲೆ ನೈಜವಾದವುಗಳು ಇದ್ದಿದ್ದರೆ ಬೀರುತ್ತಿದ್ದಷ್ಟು ಪರಿಣಾಮವನ್ನು ಬೀರುವುದಿಲ್ಲ. ನಾವು ಅಭಿವೃದ್ಧಿಹೊಂದಿದ ದೇಶಗಳಲ್ಲಿ ನೋಡುವ ಹಾಗೆ, ಸಹಜವಾದ ಜಮೀನಿನಲ್ಲಿ, ಸಹಜವಾದ ಪ್ರಾಣಿಗಳು, ಸಸ್ಯಗಳನ್ನು ಹೊಂದಿರಬೇಕು. ಹೀಗಿದ್ದರೆ ಮಾತ್ರ ನಮ್ಮ ರೈತರು ಹಳೆಯ ವಿಧಾನಗಳು ಮತ್ತು ಹೊಸ ವೈಜ್ಞಾನಿಕ ಮತ್ತು ತಾಂತ್ರಿಕ ಸಾಧನೆಗಳಿಂದ ಸಾಧ್ಯವಾದ ವಿಧಾನಗಳು – ಇವೆರಡರ ನಡುವೆ ಇರುವ ವ್ಯತ್ಯಾಸವನ್ನು ಗುರುತಿಸಿ, ಅವುಗಳಲ್ಲಿ ಲಾಭಕರವಾದುದನ್ನು ಆಯ್ದುಕೊಳ್ಳುತ್ತಾರೆ. ಅವರ ಕಲ್ಪನೆಯನ್ನು ನಿಜವಾದ ಪ್ರಾಣಿಗಳು, ಸಸ್ಯಗಳು ಮತ್ತು ಅವುಗಳು ಹುಟ್ಟುವ, ಸಾಕಲ್ಪಡುವ, ಸಂಬಾಳಿಸುವ ವಿಧಾನಗಳು ಹಿಡಿದಿಡುವಷ್ಟು ಪ್ರತಿಮೆಗಳು, ರೂಪಕಗಳು ಇತ್ಯಾದಿ ನಿರ್ಜೀವ ವಸ್ತುಗಳು ಹಿಡಿದಿಡಲಾರವು. ಈ ವಿಷಯಕ್ಕೆ ಇನ್ನೂ ಹೆಚ್ಚಿನ ಗಂಭೀರವಾದ ಗಮನವನ್ನು ನೀಡುವುದು ಅಗತ್ಯ. ಅಂದರೆ, ಆದಷ್ಟು ಹೆಚ್ಚಿನ ಸಂಖ್ಯೆಯಲ್ಲಿ ನಮ್ಮ ಸ್ವಂತದ ವಸ್ತುಪ್ರದರ್ಶನದ ಕಟ್ಟಡಗಳನ್ನು ಬೇರೆ ಬೇರೆಯ ಮಟ್ಟಗಳಲ್ಲಿ ಹೊಂದಿರಬೇಕು.

ಕಬ್ಬಿಣ, ರಸಗೊಬ್ಬರಗಳು, ಬೀಜಗಳು, ವ್ಯವಸಾಯೋಪಕರಣಗಳು – ಇವುಗಳ ವಿತರಣೆಯಲ್ಲಿನ ಲೋಪಗಳ ಬಗ್ಗೆ ಹಲವಾರು ದೂರುಗಳು ಬಂದಿವೆ. ದಾಸ್ತಾನನ್ನು ಅದರ ಅಗತ್ಯವು ಮುಗಿದ ಮೇಲೆ ವಿತರಣೆ ಮಾಡುತ್ತಿದ್ದಾರೆ, ಅವುಗಳನ್ನು ರೈತರ ಬೇಡಿಕೆಗಳಿಗೆ ಅನುಗುಣವಾಗಿ ವಿತರಣೆ ಮಾಡುತ್ತಿಲ್ಲ, ಅವುಗಳಲ್ಲಿನ ಬಹುಪಾಲು ಕಾಳಸಂತೆಯ ಮಾರ್ಗವನ್ನು ಹಿಡಿದು ದಾಸ್ತಾನುಗಾರರ, ಲಾಭಬಡುಕರ ಮತ್ತು ಕದ್ದುಮಾರುವವರ ಕೈಯನ್ನು ಸೇರುತ್ತಿವೆ ಎಂಬ ದೂರುಗಳು ಕೇಳಿಬರುತ್ತಿವೆ. ಅದರಲ್ಲಿ ಸತ್ಯವಿರಬಹುದು ಅಥವಾ ಇಲ್ಲದಿರಬಹುದು. ಆದರೆ, ಈ ಕೆಲಸವನ್ನು ರೈತರ ವೇದಿಕೆಯ ಹಾಗೆಯೆ, ರೈತರೇ ಕೈಗೆತ್ತಿಕೊಂಡರೆ ಇಂತಹ ದೂರುಗಳನ್ನು ಪಕ್ಕಕ್ಕೆ ಸರಿಸಬಹುದು. ನಿಮಗೆ ತಿಳಿದಿರುವಂತೆ, ಈ ಕಾರ್ಯವನ್ನು ಸಹಕಾರಿ ಸಂಘಗಳಿಗೆ ನೀಡಿದ್ದು, ಈ ವಿತರಣೆಗಳನ್ನು ನಿರ್ವಹಿಸುವವರು ರೈತರಲ್ಲದವರು ಮತ್ತು ಅಧಿಕಾರಿಗಳಲ್ಲದವರು. ಮೂರನೆಯ ಪಾಂಚವಾರ್ಷಿಕ ಯೋಜನೆಯ ಅವಧಿಯಲ್ಲಿ ಸರಬರಾಜು ಮತ್ತು ವಿತರಣೆಗಳು ಸುಧಾರಿಸುತ್ತವೆಯೆಂದು ನಾನು ಆಶಿಸುತ್ತೇನೆ. ಈ ಜವಾಬ್ದಾರಿಯನ್ನು ರೈತರ ವೇದಿಕೆಯ ವಹಿಸಿಕೊಳ್ಳುವುದು ಸೂಕ್ತವಾಗುತ್ತದೆ.

ನಮ್ಮ ವ್ಯಾವಸಾಯಿಕ ಸಂಕಷ್ಟಗಳನ್ನು ಆಳವಾಗಿ ಅಧ್ಯಯನ ಮಾಡಿದ ಮೇಲೆ ನನ್ನಲ್ಲಿ ಮೂಡಿದ ಅಭಿಪ್ರಾಯವೆಂದರೆ, ಖಾತ್ರಿಯಾದ ಉದ್ಯೋಗಗಳ ಮತ್ತು ಜೀವನಕ್ಕೆ ಸಾಲುವಷ್ಟು ವೇತನದ ಬಗ್ಗೆ ಇರುವಷ್ಟು ಆಸಕ್ತಿ, ಜಮೀನನ್ನು ತಮ್ಮ ತಾವೇ ಹೊಂದುವುದರಲ್ಲಿ ನಮ್ಮ ಕೃಷಿಕಾರ್ಮಿಕರಿಗೆ ಇಲ್ಲ. ಅವರಿಗೆ ಬೇಕಾಗಿರುವುದು, ಕನಿಷ್ಠ ವೇತನ, ಸಾತತ್ಯವಿರುವ ಉದ್ಯೋಗಾವಕಾಶ, ಮತ್ತು ಇತರ ಕ್ಷೇತ್ರಗಳಲ್ಲಿನ ಕೆಳಮಟ್ಟದ ಕಾರ್ಮಿಕರಿಗೆ ಸಿಗುತ್ತಿರುವ ಸೌಲಭ್ಯಗಳು ಅಷ್ಟೆ. ಸಂವಿಧಾನವು ನೀಡಿರುವ ಸವಲತ್ತುಗಳ ಹಾಗೂ ಈ ಕಾರ್ಮಿಕರು ತೊಡಗಿಕೊಂಡಿರುವ ಅತಿ ಮುಖ್ಯವಾದ ಚಟುವಟಿಕೆಗಳ ದೃಷ್ಟಿಯಿಂದ ನೋಡಿದರೆ ಇವರ ಬೇಡಿಕೆ ಸಾಧುವಾದುದು ಎಂದೇ ಹೇಳಬೇಕು. ಆದರೆ ಈ ಪ್ರಶ್ನೆಯ ಪ್ರಾಮುಖ್ಯವನ್ನು ಹೇಗೆ ಅರ್ಥಮಾಡಿಸುವುದು? ಇದರೊಂದಿಗೇ ಇರುವ ಮತ್ತೊಂದು ಪ್ರಶ್ನೆಯೆಂದರೆ, ಸಾಕಷ್ಟು ಲಾಭವಿಲ್ಲದ ಮತ್ತು ಸಾಕಷ್ಟು ಉದ್ಯೋಗಾವಕಾಶಗಳನ್ನೊದಗಿಸದ ಭೂಮಿಯ ಒಡೆತನ. ವಿಶಾಲವಾದ ಜಮೀನನ್ನು ಹೊಂದಿರುವವರಿಗೆ ಕೇವಲ ಒಡೆತನದ ಮೇಲೆ ಆಸಕ್ತಿಯಿದೆ ಆದರೆ ಆ ಒಡೆತನದಿಂದ ಬರಬೇಕಾದ ಗರಿಷ್ಠ ವರಮಾನದ ಬಗ್ಗೆ ಅದೇ ಮಟ್ಟದ ಆಸಕ್ತಿಯಿರುವುದಿಲ್ಲ. ಅಂತಹ ಭೂಮಾಲಿಕರಿಗೆ ಇತರ ಉದ್ಯೋಗಗಳಿದ್ದು ಅವರು ಕೃಷಿಯಲ್ಲಿನ ವರಮಾನದ ಬಗ್ಗೆ ತಲೆಯನ್ನು ಕೆಡಿಸಿಕೊಳ್ಳುವುದಿಲ್ಲ. ಅವರು ತಮ್ಮ ಆವಶ್ಯಕತೆಗಳನ್ನು ಪೂರೈಸಿಕೊಳ್ಳಲು ಸ್ವಲ್ಪ ಜಮೀನಿನಲ್ಲಿ ಮಾತ್ರ ಬೇಸಾಯಮಾಡಿಸಿಕೊಳ್ಳುತ್ತಾರೆ ಮತ್ತು ಉಳಿದ ಜಮೀನನ್ನು ಪಾಳುಬಿಡುತ್ತಾರೆ. ಇಂತಹ ಪಾಳು ಜಮೀನಿನಿಂದ ಅವರಿಗಾಗಲೀ, ಅಥವಾ ಹಸಿವಿನಿಂದ ನರಳುತ್ತಿರುವ ಕೃಷಿಕಾರ್ಮಿಕರಿಗಾಗಲೀ ಯಾವ ಪ್ರಯೋಜನವೂ ಇರುವುದಿಲ್ಲ. ವೇತನವು ಸಿಗದ ಕೃಷಿಕಾರ್ಮಿಕರು ಕೆಲಸಕ್ಕಾಗಿ ಹಪಹಪಿಸುತ್ತಿರುತ್ತಾರೆ. ಭೂಮಾಲಿಕರು ಈ ವಿಷಯದಲ್ಲಿ ಕಿವುಡಾಗಿರುತ್ತಾರೆ ಅಥವಾ ತಮ್ಮ ಲಾಭಕ್ಕಾಗಿ ಈ ಕಾರ್ಮಿಕರನ್ನು ಶೋಷಿಸುತ್ತಾರೆ. ಒಂದು ಕಡೆಯಲ್ಲಿ ಕೃಷಿಕಾರ್ಮಿಕರಿಗೆ ಕೆಲಸವು ಸಿಕ್ಕುವುದಿಲ್ಲ, ಮತ್ತೊಂದು ಕಡೆ, ಕೃಷಿಯೋಗ್ಯ ಭೂಮಿ ಪಾಳುನೆಲವಾಗಿ ಬಿದ್ದಿರುತ್ತದೆ. ಇದು ಭೂಮಿಯ ಒಡೆತನಕ್ಕೆ ಮಾಡುವ ಅನ್ಯಾಯ, ಕೃಷಿಯನ್ನೇ ಅವಲಂಬಿಸಿರುವ ಕಾರ್ಮಿಕರಿಗೆ ಮಾಡುವ ದ್ರೋಹ ಮತ್ತು, ಹೇಳಬೇಕೆಂದರೆ, ಆಹಾರೋತ್ಪಾದನೆಯನ್ನು ಅಧಿಕಗೊಳಿಸುವ ಸರಕಾರದ ಹಲವಾರು ಮಹತ್ತರವಾದ

ಮತ್ತು ಸದುದ್ದೇಶದ ಕಾರ್ಯಕ್ರಮಗಳನ್ನು ಬುಡಮೇಲು ಮಾಡುವ ವಿಧಾನ ಇಲ್ಲಿ ಸಹಕಾರಿ ತತ್ತ್ವಗಳ ಆಧಾರದ ಮೇಲೆ, ಪರಸ್ಪರವಾಗಿರುವ ಸದ್ಭಾವನೆಯ ಮೇಲೆ, ಮತ್ತು ಉತ್ಪನ್ನವಾಗುವ ಲಾಭವನ್ನು ಹಂಚಿಕೊಳ್ಳುವ ಸಾಧ್ಯತೆಯ ಮೇ ನಡೆಸಬಹುದಾದ ಕೃಷಿಯ ಪ್ರಶ್ನೆಯೊಂದು ಇಲ್ಲಿ ಅಡಗಿದೆ. ಈ ಕಾರಣಕ್ಕಾಗಿಯೆ ಸಹಕಾರಿ ವ್ಯವಸಾಯವು ಇತ್ತೀಚಿನ ದಿನಗಳಲ್ಲಿ ಸುದ್ದಿಯಲ್ಲಿರುವುದು. ಮುಂದುವರಿ ಕೆಲವು ದೇಶಗಳ ಸಾಧನೆಯನ್ನು ಪರೀಕ್ಷಿಸಿದಾಗ, ಸಹಕಾರಿ ವ್ಯವಸಾಯವೊಂದೆ ನಮ್ಮ ಈಗಿನ ಸಮಸ್ಯೆಗಳಿಗೆ ರಾಮಬಾಣವಾಗಿದೆ ಎಂದು ಹೇಳಬಹುದು. ಕೃಷಿಯ ಲಾಭದಾಯಕವಾಗಬೇಕಾದರೆ, ಅದನ್ನು ಒಂದು ಕೈಗಾರಿಕೆಯೆಂದು ನಾಷ ಪರಿಷ್ಕರಿಸಬೇಕು. ಹಾಗೆ ಮಾಡಿದರೆ, ದೊಡ್ಡ ದೊಡ್ಡ ಜಮೀನುಗಳು ಮತ ತುಂಡು ಜಮೀನುಗಳು ಒಟ್ಟಿಗೆ ಸಹಕಾರಿ ವ್ಯವಸಾಯದ ತೆಕ್ಕೆಗೆ ಬಂದ ಕೃಷಿಕಾರ್ಮಿಕರಿಗೆ ಸಾತತ್ಯವಿರುವ ಉದ್ಯೋಗಾವಕಾಶಗಳನ್ನು ಒದಗಿಸುತ್ತದ ದೊರಕುತ್ತಿರುವ ಅನುಕೂಲಗಳ ಮೇಲೆ ಅವಲಂಬಿತವಾಗಿ, ಪ್ರತಿಯೊಂದು ದೊ ಜಮೀನಿನಲ್ಲಿ ಮತ್ತು ಸಹಕಾರಿ ಸಂಘಗಳಿಗೆ ಒಳಪಟ್ಟ ಸಣ್ಣ ಸಣ್ಣ ಜಮೀನುಗಳ ಹುಲ್ಲುಗಾವಲು, ಜಾನುವಾರುಗಳ ಸಾಕಣೆ ಕೇಂದ್ರ, ಕೋಳಿಸಾಕಣೆ ಕೇಂದ್ರ, ಹಾ ಉತ್ಪಾದನಾ ಕೇಂದ್ರ, ತರಕಾರಿಗಳ ತೋಟ, ಹಣ್ಣುಗಳ ತೋಟ, ಮೀನುಗಾರಿ ಮೊದಲಾದವುಗಳನ್ನು ಅಭಿವೃದ್ಧಿಪಡಿಸಬಹುದು. ಈ ವೈವಿಧ್ಯಮಯ ಉದ್ದಿಮೆಗ ಕಾರ್ಮಿಕರಿಗೆ ಉದ್ಯೋಗಾವಕಾಶಗಳನ್ನು ತಾವೇ ನೀಡುವುದರ ಜೊತೆಗೆ, ತಮ ಪೂರಕವಾಗಿರುವ ಉದ್ದಿಮೆಗಳಾದ ಸಂಸ್ಕರಣಾ ಘಟಕಗಳು, ಆಹಾರಪದಾರ್ಥಗಳನ ಡಬ್ಬಿಗಳಲ್ಲಿ ಹಾಕುವ ಘಟಕಗಳು, ಸಂಪರ್ಕಸೇವೆ ಮೊದಲಾದವುಗಳ ಮೂಲಕವು ಹೆಚ್ಚುವರಿ ಉದ್ಯೋಗಾವಕಾಶಗಳನ್ನು ಸೃಷ್ಟಿಸಬಲ್ಲುವು.

ಬುದ್ಧಿಜೀವಿಗಳಲ್ಲಿನ ಇತ್ತೀಚಿನ ಯೋಚನಾ ಲಹರಿಯು ಹೀಗಿದೆ: ಒ ಮನುಷ್ಯನಿಗೆ ಸ್ವಲ್ಪ ಜಮೀನನ್ನು ಅವನ ಸ್ವಂತ ವ್ಯವಸಾಯದ ಉದ್ದೇಶಕ್ಕಾ ನೀಡಿದರೆ ಅವನಿಗೆ ಕೃಷಿ ಕಾರ್ಯವನ್ನು ಪ್ರಾರಂಭಿಸಲು ಬೇಕಾದ ಅನುಕೂಲಗಳನ ಪಡೆಯುವುದು ಕಷ್ಟವಾಗುತ್ತದೆ. ಹಾಗೆ ಪ್ರಾರಂಭಿಸಿದರೂ ಕೂಡ ಅಗತ್ಯವಾ ನೀರಿನ ಸರಬರಾಜಿನ ಖಾತರಿ ಇರುವುದಿಲ್ಲ; ಜಮೀನನ್ನು ವ್ಯವಸಾ ಯೋಗ್ಯವನ್ನಾಗಿ ಮಾಡಲು, ಅಗತ್ಯವಾದ ದನದ ಗೊಬ್ಬರ, ರಸಗೊಬ್ಬರ, ಉಳುವ ಒಳ್ಳೆಯ ಬೀಜ, ವ್ಯವಸಾಯೋಪಕರಣಗಳು, ಋತುಮಾನಕ್ಕನುಗುಣವಾ

ಬೇಕಾಗುವ ಕಾರ್ಮಿಕರು ಇವೆಲ್ಲವುಗಳ ಅಗತ್ಯ ಮತ್ತು ಅವುಗಳಿಗಾಗಿ ಹೂಡಬೇಕಾದ ಬಂಡವಾಳದ ಪ್ರಶ್ನೆ ಎದ್ದುಕೂರುತ್ತದೆ; ಕಡಿಮೆ ಬಡ್ಡಿದರದಲ್ಲಿ ಹಣವು ಒದಗುವುದಿಲ್ಲ; ಇದರಿಂದಾಗಿ ಅವನು ದುಬಾರಿ ಬಡ್ಡಿಯನ್ನು ವಿಧಿಸುವ ಹಳ್ಳಿಯ ಲೇವಾದೇವಿಗಾರರ ಬಲಿಪಶುವಾಗಿಬೇಕಾಗುತ್ತದೆ; ಇದರ ಪರಿಣಾಮವೆಂದರೆ ಆತ ಒಂದು ವಿಷವರ್ತುಲದಲ್ಲಿ ಸಿಕ್ಕಿಬೀಳುತ್ತಾನೆ ಮತ್ತು ಆದ್ದರಿಂದ ಅವನು ಎಂದಿಗೂ ಸಂತೋಷ ಮತ್ತು ತೃಪ್ತಿಗಳಿಂದ ದೂರವಾಗಿಯೇ ಉಳಿಯಬೇಕಾಗುತ್ತದೆ. ಅಲ್ಲದೆ, ಭೂಮಿಯಿಂದ ಬರಬಹುದಾದ ಉತ್ಪನ್ನವು ಪ್ರಕೃತಿಯ ಹುಚ್ಚಾಟಗಳ ಮೇಲೆ ಅವಲಂಬಿಸಿರುತ್ತದೆ. ಇಷ್ಟೆಲ್ಲಾ ತೊಂದರೆಗಳಿರಬೇಕಾದರೆ, ಒಬ್ಬ ಬಡವ ಹೇಗೆ ಈ ಸಾಹಸಕ್ಕೆ ಕೈ ಹಾಕಿಯಾನು? ಇದರ ಬದಲಿಗೆ ದೊಡ್ಡ ದೊಡ್ಡ ಜಮೀನುಗಳನ್ನು ಸಂಯುಕ್ತ ಕೃಷಿಪದ್ಧತಿಗೆ ಒಳಪಡಿಸಿದರೆ ಮತ್ತು ಕಾರ್ಮಿಕರಿಗೆ ಮಾಡಿದ ಕೆಲಸಕ್ಕೆ ತಕ್ಕ ಹಾಗೆ ವೇತನವನ್ನು ನೀಡಿದರೆ, ಅದು ಕಾರ್ಮಿಕರಿಗೆ ತೃಪ್ತಿಯನ್ನು ನೀಡಿ, ಸಾಕಷ್ಟು ಲಾಭವನ್ನು ತಂದುಕೊಡುವುದಿಲ್ಲವೇ? ಮುಂದಿನ ಪ್ರಶ್ನೆ, ಅದನ್ನು ಯಾರು ನಿರ್ವಹಿಸಬೇಕು ಎನ್ನುವುದು. ಸರಕಾರ ಅಥವಾ ಖಾಸಗಿ ಕ್ಷೇತ್ರ ಎನ್ನುವುದು ಅದಕ್ಕಿರುವ ಉತ್ತರ.

ಸಂಕ್ಷೇಪವಾಗಿ ಹೇಳಬೇಕೆಂದರೆ, ಮೂರನೆಯ ಪಾಂಚವಾರ್ಷಿಕ ಯೋಜನೆಯಲ್ಲಿ ರೂಪಿಸಲಾಗಿರುವ ಎಲ್ಲಾ ಅಭಿವೃದ್ಧಿ ಕಾರ್ಯಕ್ರಮಗಳನ್ನು ಕೈಗೆತ್ತಿಕೊಂಡು, ಅವುಗಳನ್ನು ಅನುಷ್ಠಾನಕ್ಕೆ ತರಲು ಖಾಸಗಿ ಕ್ಷೇತ್ರದಲ್ಲಿ ಇರುವ ಸಂಸ್ಥೆಗಳಲ್ಲಿ ರೈತರ ವೇದಿಕೆಯು ಅತ್ಯಂತ ವಿಶ್ವಾಸಾರ್ಹವಾದವುಗಳಲ್ಲಿ ಒಂದಾಗಿರಬೇಕೆಂದು ನಾನು ಬಯಸುತ್ತೇನೆ. ಸಹಕಾರಿ ಕೃಷಿಯ ಪರಿಣಾಮಕಾರಿ ಕಾರ್ಯಕ್ರಮಗಳ ಮೂಲಕ, ಸೇವಾ ಸಹಕಾರ ಸಂಘಗಳ ಮೂಲಕ, ಸಾಲಸೌಲಭ್ಯಗಳನ್ನೊದಗಿಸುವ ಸಹಕಾರಿ ಸಂಘಗಳ ಮತ್ತು ಸಂಶೋಧನಾ ಕೇಂದ್ರಗಳ ಮೂಲಕ, ಇವೆಲ್ಲಕ್ಕಿಂತಲೂ ಹೆಚ್ಚಾಗಿ ಕಾರ್ಮಿಕರ ಮನಸ್ಸಿನಲ್ಲಿ ರೈತರ ವೇದಿಕೆಯು ತನ್ನ ಉದ್ದೇಶಿತ ಗುರಿಗಳನ್ನು ಸಾಧಿಸುತ್ತದೆ ಎಂಬ ಬಗ್ಗೆ ವಿಶ್ವಾಸವು ಮೂಡುವ ಹಾಗೆ ಮಾಡುವ ಮೂಲಕ ರೈತರ ವೇದಿಕೆಯು ಆಹಾರದ ಸಮಸ್ಯೆಯನ್ನು ಪರಿಹರಿಸುವಲ್ಲಿ, ಮತ್ತು ನಮ್ಮ ದೇಶದ ಸಂಪತ್ತಾಗಿರುವ ಮತ್ತು ಯಾರ ಪ್ರಗತಿಯು ದೇಶದ ಪ್ರಗತಿಯೇ ಆಗಿರುವುದೋ ಅಂತಹ ಶ್ರಮಜೀವಿ ಕೃಷಿಕಾರ್ಮಿಕರಿಗೆ ಆರ್ಥಿಕ ಹಾಗೂ ಸಾಮಾಜಿಕ ನ್ಯಾಯವನ್ನು ಒದಗಿಸಿಕೊಡುವಲ್ಲಿ ಪ್ರಮುಖ ಪಾತ್ರವನ್ನು ವಹಿಸಬಹುದು.

## ◆ ಸಹಕಾರಿ ಕೃಷಿಯ ಸಾಧಕ–ಬಾಧಕಗಳು

**ಕೃಷಿಯೇ ಭಾರತದ ಜೀವಾಳ. ಜೈ ಜವಾನ್ ಜೈ ಕಿಸಾನ್ ಎಂಬುದು ಮೂಲ ಮಂತ್ರ. ಎನ್. ರಾಚಯ್ಯನವರು 1962 ರ ಜನವರಿ 12 ರಂದು ಹೆಗ್ಗಡದೇವನ ಕೋಟೆ ವಿಭಾಗದ ಸಹಕಾರಿ ಕೃಷಿಯ ಪ್ರಾಯೋಗಿಕ ಯೋಜನೆಯ ಉದ್ಘಾಟನಾ ಸಮಾರಂಭನಲ್ಲಿ ಮಾಡಿದ ಭಾಷಣ. ಸಹಕಾರ ಖಾತೆಯ ಸಚಿವರಾದ ಶ್ರೀ ಮಾಲಿ ಮರಿಯಪ್ಪನವರು ಅಧ್ಯಕ್ಷತೆಯನ್ನು ವಹಿಸಿದ್ದರು. ಕೃಷಿಯನ್ನು ಸಹಕಾರಿ ತತ್ತ್ವದ ಅಡಿಯಲ್ಲಿ ಸೇರಿಸಿ, ಪರಸ್ಪರ ಸಹಕಾರ ಬೆಳೆಸಿಕೊಂಡಾಗ ಮಾತ್ರ ಅಭಿವೃದ್ಧಿ ಸಾಧ್ಯ ಎಂಬ ತುಡಿತ ಇಲ್ಲಿದೆ.**

ಸಹಕಾರಿ ಕೃಷಿಯೆಂದರೆ, ಒಟ್ಟುಗೂಡಿಸಿದ ಜಮೀನುಗಳಲ್ಲಿ, ಒಂದೇ ಯೋಜನೆಯ ಅಡಿಯಲ್ಲಿ, ಕೂಡಿ ಬೇಸಾಯಮಾಡುವುದು. ಹತ್ತು ಅಥವಾ ಅದಕ್ಕಿಂತ ಹೆಚ್ಚಿನ ರೈತರು ತಮ್ಮ ಜಮೀನುಗಳನ್ನು ಕನಿಷ್ಠ ಐದುವರ್ಷಗಳ ಅವಧಿಗೆ, ಒಟ್ಟುಗೂಡಿಸಿ, ಸಹಕಾರಿ ಕೃಷಿಯನ್ನು ಪ್ರಾರಂಭಿಸಬಹುದು. ಅವರೆಲ್ಲರೂ ಸೇರಿ ಒಟ್ಟು ಜಮೀನಿಗೆ ಉತ್ಪಾದನಾ ಯೋಜನೆಯನ್ನು ತಯಾರಿಸಿಕೊಳ್ಳುತ್ತಾರೆ. ಒಟ್ಟಿಗೆ ಬೇಸಾಯವನ್ನು ಮಾಡಿ ಈ ಯೋಜನೆಗಳನ್ನು ಅನುಷ್ಠಾನಕ್ಕೆ ತರುತ್ತಾರೆ. ಈ ಕೂಡು ಬೇಸಾಯದಲ್ಲಿ ಅವರು ತಮ್ಮಲ್ಲಿರುವ ಎತ್ತುಗಳನ್ನು, ಕೃಷಿ ಉಪಕರಣಗಳನ್ನು ಎಲ್ಲರ ಉಪಯೋಗಕ್ಕಾಗಿ ಬಳಸಿಕೊಳ್ಳುತ್ತಾರೆ.

ಹೊರಗಿನ ಯಾವುದೇ ಅಧಿಕಾರಿಗಳ ಮಧ್ಯಪ್ರವೇಶವಿಲ್ಲದೆಯೇ, ಮತ್ತು ಒಳಗೆ ಒಬ್ಬರೇ ಸದಸ್ಯರ ಅಧಿಕಾರ ಚಲಾವಣೆಗೆ ಒಳಗಾಗದೆ, ತಮ್ಮ ಎಲ್ಲಾ ಕೆಲಸಗಳನ್ನೂ ತಾವೇ ಒಟ್ಟುಗೂಡಿ ನಿರ್ವಹಿಸಿಕೊಳ್ಳುತ್ತಾರೆ. ಬಂದ ಲಾಭದಿಂದ ಮಾಡಿದ ಖರ್ಚುಗಳನ್ನು ಕಳೆದು, ಕೆಲವು ನಿಧಿಗಳಿಗಾಗಿ ಸ್ವಲ್ಪ ಹಣವನ್ನು ತೆಗೆದಿರಿಸಿ, ಉಳಿದ ಲಾಭದ ಸ್ವಲ್ಪ ಭಾಗವನ್ನು ಅವರವರ ಜಮೀನುಗಳ ಆಧಾರದ ಮೇಲೆ, ಉಳಿದುದನ್ನು ಅವರವರ ಶ್ರಮದ ಆಧಾರದ ಮೇಲೆ ಹಂಚಿಕೊಳ್ಳುತ್ತಾರೆ.

ಸಹಕಾರಿ ಜಮೀನು ಎಂದರೆ ದುಡಿಯುವ ರೈತರ ಸಹಕಾರವೆಂದು ಅರ್ಥ. ಆದ್ದರಿಂದ ಕನಿಷ್ಠಪಕ್ಷ ನಾಲ್ಕನೆಯ ಮೂರುಭಾಗದಷ್ಟು ಸದಸ್ಯರು ಜಮೀನಿನಲ್ಲಿ

ಶ್ರಮದ ಕೆಲಸಗಳನ್ನು ಮಾಡಬೇಕು. ಉಳಿದ ಒಂದು ಭಾಗವು ಕೆಲಸಮಾಡಲಾಗದ ಅಂಗವಿಕಲತೆಯನ್ನುಳ್ಳವರು ಅಥವಾ ತಮ್ಮ ಜಮೀನಿನಿಂದ ಬರುವ ಆದಾಯಕ್ಕೆ ತೃಪ್ತರಾಗುವಂತಹರನ್ನು ಒಳಗೊಂಡಿರುತ್ತದೆ.

**ಎ. ಸಹಕಾರ ಕೃಷಿಯ ಆವಶ್ಯಕತೆ :**

ಭಾರತವು ಮುಖ್ಯವಾಗಿ ಕೃಷಿಪ್ರಧಾನ ದೇಶ. ನಮ್ಮ ಜನತೆಯಲ್ಲಿನ ಶೇ. 80 ಭಾಗ ಕೃಷಿಯ ಮೇಲೆ ಅವಲಂಬಿಸಿದೆ. ಕೃಷಿಯು ಜನರಿಗೆ ಆಹಾರವನ್ನೂ, ಕೈಗಾರಿಕೆಗೆ ಕಚ್ಚಾವಸ್ತುಗಳನ್ನೂ ಮತ್ತು ರಾಷ್ಟ್ರಕ್ಕೆ ಅದರ ವರಮಾನದಲ್ಲಿ ಶೇ. 50ರಷ್ಟು ಭಾಗವನ್ನೂ ನೀಡುತ್ತದೆ. ಕೃಷಿಯನ್ನು ಅಭಿವೃದ್ಧಿಪಡಿಸದೆ ಹೋದರೆ, ನಮ್ಮ ದೇಶವು ಪ್ರಗತಿಯನ್ನು ಸಾಧಿಸಲು ವಿಫಲವಾಗುತ್ತದೆ ಮತ್ತು ಜನರೂ ಸಂತೋಷವಾಗಿರುವುದು ಸಾಧ್ಯವಿಲ್ಲ. ಈ ಕಾರಣದಿಂದಲೇ, ಈ ಸರಕಾರವು ಹಲವಾರು ಕೃಷಿ ಕಾರ್ಯಕ್ರಮಗಳ ಮೇಲೆ ಮತ್ತು ನೀರಾವರಿಯ ಕಾರ್ಯಕ್ರಮಗಳ ಮೇಲೆ ಲಕ್ಷಾಂತರ, ಕೋಟ್ಯಂತರ ರೂ.ಗಳನ್ನು ತೊಡಗಿಸುತ್ತಿದೆ. ಈ ಎಲ್ಲಾ ಪ್ರಯತ್ನಗಳಿಂದಾಗಿ ನಾವು ಶ್ಲಾಘನೀಯವಾದ ಪ್ರಗತಿಯನ್ನು ಸಾಧಿಸಿದ್ದೇವೆ.

ಆದರೆ ನಾವು ಈಗ ಸಾಧಿಸಿರುವಷ್ಟರಲ್ಲಿಯೇ ತೃಪ್ತಿಪಟ್ಟುಕೊಳ್ಳುವಂತಿಲ್ಲ. ಹೊಸಹೊಸ ಯೋಜನೆಗಳ ಮೂಲಕ ನಾವು ನಮ್ಮ ಕೃಷಿ ಆಧಾರಿತ ಆರ್ಥಿಕತೆಯನ್ನು ಮುಂದುಮುಂದಕ್ಕೆ ಕೊಂಡೊಯ್ಯಬೇಕು. ಸ್ವರಾಜ್ಯವು ಪ್ರಾಪ್ತವಾದ ಹದಿನಾಲ್ಕುವರ್ಷಗಳ ನಂತರವೂ ನಾವು ನಮಗೆ ಅಗತ್ಯವಾಗಿರುವಷ್ಟು ಆಹಾರವನ್ನು ಉತ್ಪಾದಿಸಲು ಶಕ್ತರಾಗಿಲ್ಲ. ಪರಿಣಾಮವಾಗಿ ಪ್ರತಿವರ್ಷವೂ ನಾವು ಹೊರದೇಶಗಳಿಂದ ದೊಡ್ಡ ಪ್ರಮಾಣದಲ್ಲಿ ಆಹಾರಧಾನ್ಯಗಳನ್ನು ಆಮದು ಮಾಡಿಕೊಳ್ಳುತ್ತಿದ್ದೇವೆ. ನಮ್ಮ ಆಹಾರಧಾನ್ಯಗಳ ವಿಷಯದಲ್ಲಿ ಪರರ ಮೇಲೆ ಅವಲಂಬಿಸಿರುವುದು ದೇಶದ ಕ್ಷೇಮದ ದೃಷ್ಟಿಯಿಂದ ಒಳ್ಳೆಯದಲ್ಲ.

ಕೃಷಿ ಕ್ಷೇತ್ರದಲ್ಲಿ ಹಿಂದುಳಿದಿರುವಿಕೆಯೇ ಅಧಿಕ ಉತ್ಪಾದನೆಯನ್ನು ಮಾಡವಲ್ಲಿನ ನಮ್ಮ ಅಸಾಮರ್ಥ್ಯಕ್ಕೂ ಕಾರಣ. ಸರಕಾರವು ರೈತರಿಗೆ ನೀಡುತ್ತಿರುವ ಎಲ್ಲಾ ಸಹಾಯದ ಹೊರತಾಗಿಯೂ, ನಮ್ಮ ರೈತರು ವೈಜ್ಞಾನಿಕ ಕೃಷಿ ವಿಧಾನಗಳನ್ನು ಹೆಚ್ಚಿನ ಪ್ರಮಾಣದಲ್ಲಿ ಅಳವಡಿಸಿಕೊಳ್ಳುತ್ತಿಲ್ಲ. ಆಧುನಿಕ ಕೃಷಿ ಪದ್ಧತಿಗಳನ್ನು ಅಳವಡಿಸಿಕೊಳ್ಳಲು, ಅವರಿಗಿರುವ ಜಮೀನಿನ ಕಡಿಮೆ ವಿಸ್ತೀರ್ಣವೂ

ಕಾರಣವಾಗಿದೆ. ಈಗಿರುವ ಪರಿಸ್ಥಿತಿಯಲ್ಲಿ, ಅವರು ತಮ್ಮ ಅಲ್ಪಸ್ವಲ್ಪ ಸಂಪನ್ಮೂಲವನ್ನು ಮತ್ತು ತಮ್ಮ ತುಂಡು ಜಮೀನುಗಳನ್ನು ಸಂಪೂರ್ಣವಾಗಿ ಪ್ರಕೃತ ಉಪಯೋಗಿಸಿಕೊಳ್ಳುತ್ತಿಲ್ಲ. ಈಗಿರುವ ತಮ್ಮ ಸಣ್ಣ ಹಿಡುವಳಿಯನ್ನು ಲಾಭದಾಯಕವಾಗುವಂತಹ ದೊಡ್ಡ ಹಿಡುವಳಿಗಳನ್ನಾಗಿ ಪರಿವರ್ತಿಸಿಕೊಂಡ ಮೇಲೆ ಮಾತ್ರ ಅವರು ತಮ್ಮ ಸಂಪನ್ಮೂಲವನ್ನು ಹೊಸ ಪದ್ಧತಿಯಲ್ಲಿ ಗರಿಷ್ಠ ಲಾಭಕ್ಕಾಗಿ ತೊಡಗಿಸಬಹುದು. ಸ್ವಯಂಪ್ರೇರಿತ ಸಹಕಾರಿ ಕೃಷಿಯನ್ನು ಪ್ರಜಾತಾಂತ್ರಿಕ ವಿಧಾನಗಳ ಮೂಲಕ ಪ್ರೋತ್ಸಾಹಿಸಿದರೆ ಮಾತ್ರ ಇದು ಸಾಧ್ಯವಾಗುತ್ತದೆ.

ನಮ್ಮ ರೈತರು ಇಡೀ ದೇಶದಲ್ಲಿ ಸಹಕಾರಿ ಕೃಷಿಯನ್ನು ಅನುಷ್ಠಾನಕ್ಕೆ ತಂದರೆ, ಅಪಾರವಾಗಿರುವ ನಮ್ಮ ಮಾನವ ಸಂಪನ್ಮೂಲ ಹಾಗೂ ಅಗಾಧವಾಗಿರುವ ಪ್ರಾಕೃತಿಕ ಸಂಪತ್ತನ್ನು ನಾವು ಸಂಪೂರ್ಣವಾಗಿ ಉಪಯೋಗಿಸಿಕೊಳ್ಳಬಹುದು. ಹೀಗಾದರೆ, ನಮ್ಮ ದೇಶವು ಸಾಕಷ್ಟು ಉತ್ಪಾದನೆಯನ್ನು ಸಾಧಿಸಬಹುದು ಮತ್ತು ಇತರ ಮುಂದುವರಿದ ದೇಶಗಳಿಗೆ ಸಮನಾಗಿ ನಮ್ಮ ದೇಶವೂ ಪ್ರಗತಿಯನ್ನು ಹೊಂದಬಹುದು. 'ನಮ್ಮ ರೈತರಲ್ಲಿ ಸಹಕಾರಿ ಕೃಷಿಯನ್ನು ಜನಪ್ರಿಯಗೊಳಿಸುವುದಕ್ಕಾಗಿ ನಾನು ಹಳ್ಳಿಯಿಂದ ಹಳ್ಳಿಗೆ, ಹೊಲದಿಂದ ಹೊಲಕ್ಕೆ ಹೋಗಲು ತಯಾರಿದ್ದೇನೆ' ಎಂದು ಈ ಕಾರಣದಿಂದಲೇ ನಮ್ಮ ಶ್ರದ್ಧಾವಂತ ಮುಂದಾಳುಗಳೂ ಪ್ರಧಾನಮಂತ್ರಿಗಳೂ ಆದ ನೆಹ್ರೂ ಅವರು ಘೋಷಿಸಿದ್ದಾರೆ. ಕೃಷಿಯಿಂದ ಗರಿಷ್ಠ ಪ್ರಮಾಣದ ಲಾಭವನ್ನು ಪಡೆದುಕೊಳ್ಳಲು ಸಹಕಾರಿ ಕೃಷಿಯ ಪರವಾಗಿ ರಾಷ್ಟ್ರಪಿತ ಮಹಾತ್ಮ ಗಾಂಧಿಯವರು ವಾದಿಸುತ್ತಿದ್ದರು.

**ಬಿ. ರೈತರಿಗೆ ವೈಯಕ್ತಿಕವಾಗಿ ಆಗುವ ಲಾಭಗಳು :**

ಹಳ್ಳಿಗಳಲ್ಲಿರುವ ನಮ್ಮ ರೈತರು ಸಾಮಾನ್ಯವಾಗಿ ತಿಳಿವಳಿಕೆಯಿಲ್ಲದವರು ಮತ್ತು ದೇಶದ ಬಗ್ಗೆ ಯೋಚಿಸಲು ಅಗತ್ಯವಾದ ದೂರದೃಷ್ಟಿಯಿಲ್ಲದವರು. ಅವರು ತಮ್ಮ ವೈಯಕ್ತಿಕ ಲಾಭವನ್ನಷ್ಟೇ ಗುರಿಯನ್ನಾಗಿರಿಸಿಕೊಂಡವರು. ಸಣ್ಣ ಮತ್ತು ಬಡ ರೈತರು ಸಹಕಾರಿ ಸಂಘಗಳ ಮೂಲಕ ಒಟ್ಟುಗೂಡಿದರೆ, ಅವರು ತಮ್ಮ ಜಮೀನನ್ನು, ಎತ್ತುಗಳನ್ನು ಮತ್ತು ವ್ಯವಸಾಯೋಪಕರಣಗಳನ್ನುಇನ್ನೂ ಹೆಚ್ಚು ವ್ಯಾಪಕವಾಗಿ ಮತ್ತು ಫಲಪ್ರದವಾಗಿ ಉಪಯೋಗಿಸಿಕೊಳ್ಳಬಹುದು. ತಮ್ಮ

ದುಡಿಮೆಯಿಂದಲೇ ಹಲವು ರಚನಾತ್ಮಕ ಅಭಿವೃದ್ಧಿ ಕೆಲಸಗಳನ್ನು ಮಾಡಬಹುದು, ಬಾವಿಗಳನ್ನು ತೋಡಬಹುದು. ಅವರು ತಮ್ಮ ಬೆಳೆಗಳನ್ನು ಯೋಜಿಸಿಕೊಳ್ಳಬಹುದು, ಮತ್ತು ಸಾಂದ್ರೀಕೃತ ಬೇಸಾಯದಿಂದ ಹೆಚ್ಚಿನ ಫಲವನ್ನು ಪಡೆಯಬಹುದು. ತಮ್ಮ ಜಮೀನಿನಷ್ಟರಿಂದ, ತಮ್ಮ ವೈಯಕ್ತಿಕ ಪ್ರಯತ್ನದಿಂದ ಕನಸಿನಲ್ಲಿಯೂ ನಡೆಸಲಾಗದಷ್ಟು ಚಟುವಟಿಕೆಗಳನ್ನು – ಉದಾ. ತೋಟಗಾರಿಕೆ, ಹಾಲು ಉತ್ಪಾದನೆ, ಜಾನುವಾರು ತಳಿ ಅಭಿವೃದ್ಧಿ, ಮೊದಲಾದ ಹಲವಾರು ಚಟುವಟಿಕೆಗಳನ್ನು – ನಡೆಸಿ ಲಾಭವನ್ನು ಗಳಿಸಬಹುದು.

ಸಹಕಾರಿ ಕೃಷಿಯಿಂದ, ದಲಿತ ವರ್ಗದ ಭೂರಹಿತ ನಿರ್ಗತಿಕರು ಕೂಡಾ ಗರಿಷ್ಠಪ್ರಮಾಣದ ಲಾಭವನ್ನು ಪಡೆಯಬಹುದು. ಸರಕಾರವು ಅವರಿಗೆ ಉದಾರವಾಗಿ ನೀಡಿರುವ ಜಮೀನುಗಳನ್ನು ಅವರು ಪೂರ್ಣವಾಗಿ ಬಳಸಿಕೊಳ್ಳಲು ಅವರಲ್ಲಿ ಬಹುತೇಕರಿಗೆ ಸಾಧ್ಯವಾಗುತ್ತಿಲ್ಲ. ಅಂತಹವರು ತಮ್ಮ ಜಮೀನುಗಳನ್ನು ಅಭಿವೃದ್ಧಿಪಡಿಸಲಾಗದೆ, ಬೇರೆಯವರ ಭೂಮಿಯಲ್ಲಿ ಬಿಡಿಗಾಸಿನಾಸೆಗೆ ಕತ್ತೆಚಾಕರಿಯನ್ನು ಮಾಡುವ ಪ್ರಸಂಗಗಳು ಅಪರೂಪವೇನಲ್ಲ. ಅವರು ಸರಕಾರದ ಸಹಾಯದೊಂದಿಗೆ ಸಹಕಾರಿ ಕೃಷಿಯನ್ನು ಪ್ರಾರಂಭಿಸಿದರೆ, ತಮ್ಮ ದುಡಿಮೆಯಿಂದಲೇ ಅವರು ತಮ್ಮ ಜಮೀನನ್ನು ಗರಿಷ್ಠಮಟ್ಟದವರೆಗೆ ಉಪಯೋಗಿಸಿಕೊಳ್ಳಬಹುದು ಮತ್ತು ಆರ್ಥಿಕ ಮತ್ತು ಸಾಮಾಜಿಕ ಮುಕ್ತಿಯನ್ನು ಪಡೆಯಬಹುದು.

**ಸಿ. ನೀತಿಗಳು ಮತ್ತು ಕಾರ್ಯಕ್ರಮಗಳು :**

ಸಹಕಾರಿ ಕೃಷಿಯಿಂದ ದೊರಕುವ ಅಷ್ಟೊಂದು ಲಾಭಗಳನ್ನು ಪರಿಗಣಿಸಿಯೇ ಸರಕಾರವು ಒಂದು ಸಹಕಾರೀ ಚಳವಳಿಯ ಕಾರ್ಯಕ್ರಮವನ್ನು ಘೋಷಿಸಿದೆ. ಮೂರನೆಯ ಪಾಂಚವಾರ್ಷಿಕ ಯೋಜನೆಯ ಅವಧಿಯಲ್ಲಿ ಪ್ರತಿ ಜಿಲ್ಲೆಯಲ್ಲಿಯೂ ಹತ್ತು ಸಹಕಾರೀ ಕೃಷಿ ಸಂಘಗಳನ್ನುಳ್ಳ ಪ್ರಾಯೋಗಿಕ ಯೋಜನೆಯನ್ನು ಸಂಘಟಿಸುವ ಯೋಜನೆಯಿದೆ. ಇದಲ್ಲದೆ, ಸಹಕಾರಿ ಕೃಷಿಯ ಲಾಭಗಳನ್ನು ಅರಿತುಕೊಂಡು ಮುಂದೆಬರುವ ರೈತರು ಇರುವ ಎಡೆಗಳಲ್ಲಿ, ಅಗತ್ಯವಾದಷ್ಟು ಸಂಖ್ಯೆಯಲ್ಲಿ ಇಂತಹ ಸಹಕಾರಿ ಕೃಷಿ ಸಂಘಗಳನ್ನು ಸಂಘಟಿಸಲಾಗುವುದು. ಆಹಾರೋತ್ಪಾದನೆಯನ್ನು ಹೆಚ್ಚಿಸಲು, ಸರಕಾರವು ಸಾಧ್ಯವಿರುವ ಎಲ್ಲಾ

ಮೂಲಗಳಿಂದ ಸಹಾಯವನ್ನು ರೈತರಿಗೆ ಅವರು ಸಂಘಟಿಸುವ ಸಂಘಗಳಿಗೆ ನೀಡಲು ಸಿದ್ಧವಿದೆ. ಆದರೆ, ಸರಕಾರವು ಈ ಸಹಕಾರಿ ಚಳವಳಿಯಲ್ಲಿ ರೈತರು ಭಾಗವಹಿಸುವಂತೆ ಅವರನ್ನು ಯಾವ ವಿಧದಲ್ಲಿಯೂ ಬಲವಂತ ಮಾಡುವುದಿಲ್ಲ ಎಂಬುದನ್ನು ಮನಸ್ಸಿನಲ್ಲಿ ಇಟ್ಟುಕೊಂಡಿರಬೇಕು. ಆದರೆ ರೈತರಿಗೆ ಈ ವಿಷಯದಲ್ಲಿ ಶಿಕ್ಷಣವನ್ನು ನೀಡಲಾಗುವುದು, ಮತ್ತು ಸ್ವಯಂಪ್ರೇರಿತರಾಗಿ ಸಹಕಾರಿ ಕೃಷಿಗಾಗಿ ಸಂಘಗಳನ್ನು ಸ್ಥಾಪಿಸಿಕೊಳ್ಳಲು ಎಲ್ಲಾ ವಿಧದಲ್ಲಿಯೂ ಅವರಿಗೆ ಮನವರಿಕೆ ಮಾಡಿಕೊಡಲಾಗುವುದು, ಪ್ರೇರಣೆಯನ್ನು ನೀಡಲಾಗುವುದು ಮತ್ತು ಪ್ರೋತ್ಸಾಹಿಸಲಾಗುವುದು.

ಮುಂದೆ ಹೇಳುವ ಆರ್ಥಿಕ ಸಹಾಯಗಳನ್ನು ಪ್ರಾಯೋಗಿಕ ಯೋಜನೆಯ ಅಡಿಯಲ್ಲಿ ಸಹಕಾರಿ ಕೃಷಿ ಸಂಘಗಳಿಗೆ ನೀಡಲಾಗುವುದು:

ಪ್ರಾಯೋಗಿಕ ಕ್ಷೇತ್ರಗಳಲ್ಲಿ ಕೃಷಿ ಸಂಘಗಳನ್ನು ಸ್ಥಾಪಿಸಲು, ಸರಕಾರವು ಸಂಘದ ಬಂಡವಾಳಕ್ಕೆ ಅನುಗುಣವಾಗಿ 2,000 ರೂಗಳವರೆಗೆ ಧನಸಹಾಯವನ್ನು ಮಾಡುತ್ತದೆ. ಇದರ ಜೊತೆಗೆ, ಸಂಘಕ್ಕೆ 4,000 ರೂಗಳವರೆಗೆ ಮಧ್ಯಮ ಹಾಗೂ ಧೀರ್ಘಾವಧಿಯ ಸಾಲಗಳನ್ನು ನೀಡುತ್ತದೆ. ಉಗ್ರಾಣ/ಕೊಟ್ಟಿಗೆಗಳನ್ನು ಕಟ್ಟಿಕೊಳ್ಳಲು 3,750 ರೂಗಳ ಸಾಲವನ್ನೂ, 1,250 ರೂಗಳ ಧನಸಹಾಯವನ್ನೂ ನೀಡುತ್ತದೆ. ಈ ಧನಸಹಾಯ ಮತ್ತು ಸಾಲಗಳ ಹೊರತಾಗಿ ಪ್ರತಿ ಸಂಘವೂ 1,200 ರೂಗಳನ್ನು ನಿರ್ವಹಣಾ ವೆಚ್ಚಗಳಿಗಾಗಿ ಸರಕಾರದಿಂದ ಪಡೆಯಬಹುದು.

ಪ್ರಾಯೋಗಿಕ ಕ್ಷೇತ್ರಗಳಲ್ಲದೆಡೆಗಳಲ್ಲಿ ಕೃಷಿಸಂಘಗಳನ್ನು ಪ್ರಾರಂಭಿಸಿದರೆ, ಅವುಗಳಿಗೆ ಬಂಡವಾಳದ ಸಹಾಯವನ್ನು ಬಿಟ್ಟು ಮೇಲೆ ಹೇಳಿದ ಎಲ್ಲಾ ಸೌಲಭ್ಯಗಳೂ ದೊರೆಯುತ್ತವೆ.

ಮೂರನೆಯ ಪಾಂಚವಾರ್ಷಿಕ ಅವಧಿಯಲ್ಲಿ ರಾಜ್ಯದ 19 ಪ್ರಾಯೋಗಿಕ ಕ್ಷೇತ್ರಗಳಲ್ಲಿ 190 ಸಹಕಾರಿ ಕೃಷಿ ಸಂಘಗಳನ್ನು ಸಂಘಟಿಸಬೇಕಾಗಿದೆ. 1961–62ರಲ್ಲಿ ಐದು ಯೋಜನೆಗಳಿಗಾಗಿ ಐದು ಜಿಲ್ಲೆಗಳನ್ನು ಆಯ್ಕೆಮಾಡಿಕೊಳ್ಳಲಾಗಿದೆ. ಮೈಸೂರು ಜಿಲ್ಲೆಯಲ್ಲಿ ಹೆಗ್ಗಡದೇವನ ಕೋಟೆ ಇವುಗಳಲ್ಲಿ ಒಂದು. ಇಲ್ಲಿ ಸಹಕಾರಿ ಕೃಷಿಯನ್ನು ಅಭಿವೃದ್ಧಿಗೊಳಿಸಲು ಅಗತ್ಯವಾದ ಎಲ್ಲಾ ಅನುಕೂಲಗಳೂ ಇಲ್ಲಿವೆ. ಪ್ರಕೃತಿಯು ನೀಡಿರುವ ಸಮೃದ್ಧತೆ, ಇಲ್ಲಿನ ಜನರ ಮತ್ತು ಅವರ

ಮುಖಂಡರ ಸಹಜವಾದ ಸಹಕಾರಿ ಮನೋವೃತ್ತಿ, ಸಾಕಷ್ಟು ಮಳೆ, ಫಲವತ್ತಾದ ಭೂಮಿ, ನೀರಾವರಿಗಾಗಿ ಇರುವ ಸೌಲಭ್ಯಗಳು ಇವೆಲ್ಲವೂ ಇಲ್ಲಿವೆ. ಬಡ ಕೃಷಿಕಾರ್ಮಿಕರಿಗೆ ವಿವಿಧ ಎಡೆಗಳಲ್ಲಿ ಅವರ ಪುನರ್ವಸತಿಗಾಗಿ ಜಮೀನನ್ನು ನೀಡಲಾಗುತ್ತಿದೆ. ಸಹಕಾರಿ ಕೃಷಿಯ ಲಾಭಗಳ ಬಗ್ಗೆ ಅವರಿಗೆ ಮನದಟ್ಟು ಮಾಡಿ, ಅವರನ್ನು ಸಹಕಾರಿ ಕೃಷಿಗೆ ಪ್ರೇರೇಪಿಸಬೇಕು. ಆಗ ಮಾತ್ರ ಅವರ ಪುನರ್ವಸತಿಯು ಸಾರ್ಥಕವಾಗುತ್ತದೆ. ನೀರಾವರಿ ಯೋಜನೆಗಳಿಂದ ಮುಳುಗಡೆಯಾಗಿ ತಮ್ಮ ಜಮೀನನ್ನು ಕಳೆದುಕೊಂಡವರು ಈ ತಾಲ್ಲೂಕಿನಲ್ಲಿ ಉತ್ಕೃಷ್ಟವಾದ ಅವಕಾಶಗಳನ್ನು ಹೊಂದಿದ್ದಾರೆ. ಅವರು ಸಹಕಾರಿ ಕೃಷಿಗೆ ಮನಸ್ಸು ಮಾಡಿದರೆ ಅವರು ತಮ್ಮ ಜಮೀನು ಮತ್ತು ಜೀವನವನ್ನು ಉದ್ಧಾರಮಾಡಿಕೊಳ್ಳಬಹುದು ಮತ್ತು ಅವರ ಗ್ರಾಮ ದೇಶದ ಇತರ ಗ್ರಾಮಗಳಿಗೆ ಮಾದರಿಯಾಗುತ್ತದೆ.

ಕೆಲವರಿಗೆ ಸಹಕಾರಿ ಕೃಷಿಯ ಬಗ್ಗೆ ಒಂದು ಬಗೆಯಅಳುಕು ಮತ್ತುಪೂರ್ವಗ್ರಹಗಳು ಇವೆ. ಮತ್ತೆ ಕೆಲವರು ಈ ಚಳವಳಿಯ ಭವಿಷ್ಯದ ಬಗ್ಗೆ ನಿರಾಶಾವಾದಿಗಳಾಗಿದ್ದಾರೆ. ಸಹಕಾರಿ ಕೃಷಿಯು ರಾಷ್ಟ್ರ ನಿರ್ಮಾಣದಲ್ಲಿ ಒಂದು ಹೊಸ ಕಾರ್ಯಕ್ರಮವಾಗಿದ್ದು ಅದಕ್ಕೆ ತೀವ್ರವಾದ ಮತ್ತು ಶ್ರದ್ಧಾಯುಕ್ತವಾದ ವ್ಯಾಪಕ ಶಿಕ್ಷಣದ ಅಗತ್ಯವಿದೆ. ಆದರೆ, ಕೆಲವು ಹಿತಾಸಕ್ತಿಗಳು ಭಯವನ್ನು ಹುಟ್ಟಿಸಿ ಜನಗಳ ಮನಸ್ಸನ್ನು ಕೆಡಿಸುತ್ತಾರೆ. ಇದು ವಿಷಾದನೀಯ. ಯಾವುದೇ ಜನಪ್ರಿಯ ಚಳವಳಿಯೇ ಆದರೂ, ಸತತ ಪ್ರಯತ್ನ ಮತ್ತು ಶ್ರದ್ಧಾವಂತ ಸೈದ್ಧಾಂತಿಕ ಹೋರಾಟದ ಮೂಲಕವೇ ಜಾರಿಗೆ ಬರಬೇಕು. ರಾಷ್ಟ್ರೀಯ ಚಳವಳಿಯಲ್ಲಿದ್ದ ಸ್ವಾತಂತ್ರ್ಯ ಹೋರಾಟಗಾರರನ್ನು ಅಪಹಾಸ್ಯಮಾಡುತ್ತಿದ್ದ ಕಾಲವೂ ಇತ್ತು, ಅವರಿಗೆ ತಮ್ಮ ಜೀವಿತ ಕಾಲದಲ್ಲಿಯೇಸ್ವರಾಜ್ಯವನ್ನು ಕಾಣುತ್ತೇವೆ ಎಂಬುದನ್ನು ಕನಸಿನಲ್ಲಿಯೂ ಎಣಿಸಲಾಗುತ್ತಿರಲಿಲ್ಲ. ಆದರೆ, ಮಹಾತ್ಮ ಗಾಂಧಿಯವರ ಸ್ಫೂರ್ತಿದಾಯಕ ಮುಖಂಡತ್ವದಲ್ಲಿ ನಮ್ಮ ಜನರಿಗೆ ವಿವೇಕೋದಯವಾಗಿ ಅಭೂತಪೂರ್ವ ತ್ಯಾಗಗಳನ್ನು ಮಾಡಿದರು. ಇದರ ಪರಿಣಾಮವಾಗಿ ಸ್ವರಾಜ್ಯವು ಇಂದು ಸಾಕಾರವಾಗಿದೆ. ಹಾಗೆಯೇ ಅಂತಹುದೇ ಶ್ರದ್ಧಾಯುಕ್ತ ಪ್ರಯತ್ನಗಳಿಂದ ಮತ್ತು ತ್ಯಾಗದಿಂದ ಸಹಕಾರಿ ಕೃಷಿಯು ಒಂದು ದೊಡ್ಡ ಜನಾಂದೋಲನವಾಗಿ ಪರಿವರ್ತಿತವಾಗುತ್ತದೆ ಮತ್ತು ನಮ್ಮ ರಾಷ್ಟ್ರದ ನಿರ್ಮಾಣಕ್ಕೆ ಒಂದು ಬಲವಾದ ಆಧಾರವನ್ನು ನೀಡುತ್ತದೆ.

ಇಲ್ಲಿ ಸೇರಿರುವ ಹಳ್ಳಿಯ ಎಲ್ಲಾ ಜನರಿಗೂ, ಅವರ ಮುಖಂಡರಿಗೂ ನಾನು ವಿನಂತಿಸುವುದೆಂದರೆ, ಈ ಕಾರ್ಯಕ್ರಮದ ಮಹತ್ವವನ್ನು ಅರಿತುಕೊಂಡು ಹಳ್ಳಿಗಳಲ್ಲಿ ಅದನ್ನು ಜನಪ್ರಿಯಗೊಳಿಸಬೇಕು ಮತ್ತು ಅದರಿಂದ ಗರಿಷ್ಠ ಲಾಭವನ್ನು ಪಡೆದು ತಮ್ಮ ಒಳಿತನ್ನೂ ಹಾಗೆಯೇ ದೇಶದ ಒಳಿತನ್ನೂ ಸಾಧಿಸಬೇಕು. ಹೆಗ್ಗಡದೇವನ ಕೋಟೆಯ ಜನರು ಇದಕ್ಕೆ ಪ್ರೋತ್ಸಾಹಕರವಾಗಿ ಸ್ಪಂದಿಸಿ ಈ ಕ್ರಾಂತಿಕಾರಿ ಕಾರ್ಯಕ್ರಮವನ್ನು ಸಂಪೂರ್ಣವಾಗಿ ಯಶಸ್ವಿಗೊಳಿಸುತ್ತಾರೆಂಬ ಪೂರ್ಣ ನಂಬಿಕೆ ನನಗಿದೆ.

ಆಹಾರೋತ್ಪಾದನೆಯನ್ನು ಹೆಚ್ಚಿಸಬೇಕಾದರೆ ಹಲವಾರು ಅಂಶಗಳನ್ನು ನಾವು ಹೊಂದಿರಬೇಕು, ಅವೆಂದರೆ, ಫಲವತ್ತಾದ ಭೂಮಿ, ಸಾಕಷ್ಟು ನೀರಿನ ಸರಬರಾಜು, ಸುಧಾರಿತ ಬೀಜಗಳು, ಬಲವಾದ ಮತ್ತು ಆರೋಗ್ಯಪೂರ್ಣ ಎತ್ತುಗಳು, ಇತ್ಯಾದಿ. ಇವಲ್ಲದೆ, ಕೀಟನಾಶಕಗಳನ್ನು ಉಪಯೋಗಿಸಿ ಸಸ್ಯಗಳನ್ನು ಕಾಪಾಡಬೇಕು ಎಂಬುದನ್ನೂ ನಾವು ಗಮನಿಸಬೇಕು. ಆದರೆ, ಬಹಳಷ್ಟು ಬಾರಿ ಸರಕಾರದಲ್ಲಿ ಜವಾಬ್ದಾರಿ ಸ್ಥಾನಗಳಲ್ಲಿರುವವರು ಕೂಡ ಕೃಷಿ ಕಾರ್ಮಿಕರ ಅಂಶವನ್ನು ಮರೆತುಬಿಡುತ್ತಾರೆ. ಈ ಅಂಶವನ್ನು ನಾವು ಮರೆತರೆ, ಉಳಿದೆಲ್ಲಾ ಅಂಶಗಳು ನಮ್ಮ ಬಳಿ ಇದ್ದರೂ ಅವುಗಳಿಂದ ನಮಗೆ ನಾವು ಅಪೇಕ್ಷಿಸಿದ ಫಲಿತಾಂಶವು ದೊರಕುವುದಿಲ್ಲ. ನನ್ನ ಅಭಿಪ್ರಾಯದಲ್ಲಿ, ಕಾರ್ಮಿಕರ ಅಂಶಕ್ಕೆ ನಾವು ಆದ್ಯತೆಯನ್ನು ನೀಡಬೇಕು ಮತ್ತು ಸಂವಿಧಾನದಲ್ಲಿ ನೀಡಿರುವ ಎಲ್ಲಾ ಸಂರಕ್ಷಣೆಗಳನ್ನೂ ನೀಡಬೇಕು. ಕೃಷಿ ಕಾರ್ಮಿಕರಿಗೆ ಭೂಮಿಯನ್ನು ನೀಡಿ ಸಹಕಾರಿ ಕೃಷಿಯಲ್ಲಿ ಅವರ ಪುನರ್ವಸತಿಯನ್ನು ಏರ್ಪಡಿಸುವುದು ಬಹಳ ಮುಖ್ಯವಾದ ಸಮಸ್ಯೆಯಾಗಿದ್ದು ಅದನ್ನು ನಾವು ಪರಿಹರಿಸಬೇಕು ಮತ್ತು ಅವರಿಗೆ ಪರಿಣಾಮಕಾರಿಯಾದ ಸಂರಕ್ಷಣೆಯನ್ನು ನೀಡಬೇಕು ಎಂದು ಯೋಜನಾ ಆಯೋಗದ ಕೃಷಿ ವಿಭಾಗದ ಸದಸ್ಯರೊಬ್ಬರು ಹೇಳಿದ್ದಾರೆ. ಯಾವುದೇ ದೇಶದಲ್ಲಿ ಯಾವುದಾದರೂ ಕ್ರಾಂತಿಯು ನಡೆದರೆ ಯಾವಾಗಲೂ ಅದರ ಮೂಲಕಾರಣ ದುಡಿಯುವ ವರ್ಗದಲ್ಲಿರುವ ಅತೃಪ್ತಿ, ನಿರಾಶೆ ಹಾಗೂ ಹಸಿವೆಯಾಗಿರುತ್ತವೆ. ನಮ್ಮ ದೇಶದಲ್ಲಿ ನಾವು ಈ ಸಮಸ್ಯೆಯನ್ನು ಶಾಂತಿಯುತವಾಗಿ ಪರಿಹರಿಸಲು ಆದ್ಯತೆಯನ್ನು ನೀಡುತ್ತಿದ್ದೇವೆ. ಕೃಷಿ ಕಾರ್ಮಿಕರನ್ನು ಹಸಿವೆಯಿಂದ, ಆರ್ಥಿಕ ಮತ್ತು ಸಾಮಾಜಿಕ ತೊಡಕುಗಳಿಂದ, ಅನಕ್ಷರತೆಯಿಂದ, ಶೋಷಣೆಯಿಂದ

ಮತ್ತು ಅಮಾನವೀಯವಾಗಿ ನಡೆಸಿಕೊಳ್ಳುವುದರಿಂದ ಬಿಡುಗಡೆಗೊಳಿಸಲು ನಾವು ಪ್ರತಿಜ್ಞಾಬದ್ಧರಾಗಿದ್ದೇವೆ. ಪ್ರಜಾಪ್ರಭುತ್ವದಲ್ಲಿ ಕಾರ್ಮಿಕರ ಹಕ್ಕು ಮತ್ತು ಸವಲತ್ತುಗಳು ರಕ್ಷಿಸಲ್ಪಡುತ್ತವೆ. ಸಂವಿಧಾನದ 43ನೆಯ ವಿಧಿಯು ಹೀಗೆ ಹೇಳುತ್ತದೆ: ಸರಕಾರವು ಸೂಕ್ತ ಕಾನೂನಿನ ಮೂಲಕವಾಗಲೀ, ಆರ್ಥಿಕ ವ್ಯವಸ್ಥೆಯ ಮೂಲಕವಾಗಲೀ, ಅಥವಾ ಇನ್ನಾವುದೇ ರೀತಿಯಲ್ಲಾಗಲೀ, ಕೃಷಿ, ಕೈಗಾರಿಕೆ ಅಥವಾ ಇನ್ನಾವುದೇ ಕಾರ್ಮಿಕರಿಗೆ ಕೆಲಸ, ಜೀವನ ನಿರ್ವಹಣೆಗೆ ಸಾಲುವಷ್ಟು ವೇತನ, ಕೆಲಸದ ವಾತಾವರಣ, ಸಾಕಷ್ಟು ವಿರಾಮ, ಸಾಂಸ್ಕೃತಿಕ ಅವಕಾಶಗಳು, ಇತ್ಯಾದಿಗಳು ದೊರಕುವ ಹಾಗೆ ಮತ್ತು ವಿಶೇಷವಾಗಿ ವೈಯಕ್ತಿಕ ಅಥವಾ ಸಹಕಾರಿ ಸಂಘಗಳ ಮಟ್ಟದಲ್ಲಿ ಕುಟೀರ ಕೈಗಾರಿಕೆಗಳು ಅಭಿವೃದ್ಧಿಯನ್ನು ಹೊಂದುವ ಹಾಗೆ ಪ್ರಯತ್ನಪಡಬೇಕು.' ಆದ್ದರಿಂದ ಈ ಸಂರಕ್ಷಣಾ ವಿಧಾನಗಳನ್ನು ಜಾರಿಗೆ ತರುವುದು ಸರಕಾರದ ಪ್ರಾಥಮಿಕ ಕರ್ತವ್ಯವಾಗಿದೆ. ಇಷ್ಟೇ ಅಲ್ಲದೆ ಸರಕಾರವು ಕಾರ್ಮಿಕರನ್ನು, ಅದರಲ್ಲಿಯೂ ನಮ್ಮ ಆರ್ಥಿಕವ್ಯವಸ್ಥೆಯಲ್ಲಿ ಅತ್ಯಂತ ದಯನೀಯವಾದ ಸ್ಥಿತಿಯಲ್ಲಿರುವ ಕೃಷಿಕಾರ್ಮಿಕರನ್ನು ಅವರ ಹಸಿವೆ, ಅಪೌಷ್ಟಿಕತೆ, ಅನಕ್ಷರತೆ, ಶೋಷಣೆ, ನಿರುದ್ಯೋಗ, ಭಯ ಮತ್ತು ಬಡತನ ಮೊದಲಾದ ದುಃಸ್ಥಿತಿಗಳಿಂದ ರಕ್ಷಿಸಿ ಅವರಿಗೆ ಪುನರ್ವಸತಿಯನ್ನು ಕಲ್ಪಿಸಬೇಕು. ಇದನ್ನು ಕೇವಲ ಅವರ ಹಿತದೃಷ್ಟಿಯಿಂದ ಮಾತ್ರವಲ್ಲ, ದೇಶವು ಪರಿಹರಿಸಬೇಕಾಗಿರುವ ಮೊದಲ ಸಮಸ್ಯೆಯಾದ ಆಹಾರದ ಉತ್ಪಾದನೆಯನ್ನು ಅಧಿಕಗೊಳಿಸುವ ದೃಷ್ಟಿಯಿಂದಲೂ ನಾವು ಮಾಡಬೇಕಾಗಿದೆ. ನಮ್ಮ ಯೋಜನೆಗಳನ್ನೆಲ್ಲಾ ಛಿದ್ರಗೊಳಿಸುವುದು ಹಸಿವೆಯ ಸಮಸ್ಯೆ. ಜನರು ಹಸಿವಿನಿಂದ ಬಾಧಿತರಾಗಿದ್ದರೆ, ಅವರು ದೇಶದ ಸಮಸ್ಯೆಯನ್ನು ಅರ್ಥಮಾಡಿಕೊಳ್ಳುವ ಸ್ಥಿತಿಯಲ್ಲಿ ಇರುವುದಿಲ್ಲ. ಅವರ ಭಾಗವಹಿಸುವಿಕೆಯಿಲ್ಲದಿದ್ದರೆ ಸರಕಾರವು ಹಮ್ಮಿಕೊಳ್ಳುವ ಎಲ್ಲಾ ಕಾರ್ಯಕ್ರಮಗಳೂ ಕಾಗದದ ಮೇಲೆಯೇ ಉಳಿದುಕೊಳ್ಳುತ್ತದೆ. ಆದ್ದರಿಂದ ಕಾರ್ಮಿಕ ವರ್ಗಕ್ಕೆ, ಅದರಲ್ಲಿಯೂ ದೇಶಕ್ಕೆ ಆಹಾರ ಮತ್ತು ಸಂಪತ್ತನ್ನು ಉತ್ಪಾದಿಸಿಕೊಡುವ ಕೃಷಿಕಾರ್ಮಿಕರಿಗೆ, ಎಲ್ಲಾ ರಕ್ಷಣೆಗಳನ್ನೂ ನೀಡಬೇಕು ಮತ್ತು ದುರಾಸೆಯಿಂದ ಪೀಡಿತರಾಗಿರುವ ಪಟ್ಟಭದ್ರ ಹಿತಾಸಕ್ತಿಗಳ ಕಪಿಮುಷ್ಟಿಯಿಂದ ಅವರ ಬಿಡುಗಡೆಯಾಗಬೇಕು. ಕಳೆದ ವರ್ಷ ನವದೆಹಲಿಯಲ್ಲಿ ನಡೆದ ಕೃಷಿ ಸಚಿವರ ಅನೌಪಚಾರಿಕ ಸಮ್ಮೇಳನದಲ್ಲಿ ಕೃಷಿಕಾರ್ಮಿಕರ ರಕ್ಷಣೆ ಮತ್ತು ಪುನರ್ವಸತಿಯನ್ನು ಅತ್ಯಂತ ಆದ್ಯತೆಯ ಮೇಲೆ ಕೈಗೆತ್ತಿಕೊಳ್ಳಬೇಕೆಂದು ಏಕಕಂಠದಿಂದ ತೀರ್ಮಾನಿಸಲಾಯಿತು. ಇದನ್ನು ಆಧರಿಸಿಯೇ, ರಾಜ್ಯ ಸರಕಾರವು ಕೃಷಿಕಾರ್ಮಿಕರ

ಪುನರ್ವಸತಿಯ ಪ್ರಕೃತ ಯೋಜನೆಯನ್ನು ಕೈಗೆತ್ತಿಕೊಂಡಿದೆ. ಈ ಯೋಜನೆಯನ್ನು ಸಂಪೂರ್ಣವಾಗಿ ಕಾರ್ಯಗತಗೊಳಿಸಿದರೆ ಮಾತ್ರ ರಾಜ್ಯ ಸರಕಾರವು ಕೇಂದ್ರ ಸರಕಾರದ ಅನುದಾನವನ್ನು ಸಂಪೂರ್ಣವಾಗಿ ಬಳಸಿಕೊಳ್ಳಬಹುದು ಮತ್ತು ನಮ್ಮ ಆಹಾರ ಮತ್ತು ಕಾರ್ಮಿಕ ಸಮಸ್ಯೆಯನ್ನು ಪರಿಣಾಮಕಾರಿಯಾಗಿ ಪರಿಹರಿಸಿಕೊಳ್ಳಬಹುದು. ರಾಜ್ಯ ಸರಕಾರವು ಹಾಕಿಕೊಂಡಿರುವ ಯೋಜನೆಗಳ ಜೊತೆಗೆ ಈ ಯೋಜನೆಯು ಕಾರ್ಯಗತಗೊಳಿಸಲ್ಪಡುತ್ತಿದೆ.

ಸಹಕಾರ ಚಳುವಳಿಗೆ ರಕ್ತಮಾಂಸಗಳನ್ನು ತುಂಬಿದ ಮತ್ತು ಅದು ಇಂದು ರಾಜ್ಯದಲ್ಲಿ ಇರುವ ಅದರ ದಷ್ಟಪುಷ್ಟ ಸ್ಥಿತಿಗೆ ಕಾರಣರಾದ ನನ್ನ ಸಹೋದ್ಯೋಗಿ ಮಾನ್ಯ ಶ್ರೀ ಮಾಲಿ ಮರಿಯಪ್ಪನವರು ಇಂದು ನಮ್ಮ ಮಧ್ಯದಲ್ಲಿರುವುದು ನಮ್ಮ ಭಾಗ್ಯ. ಅವರು ದಯವಿಟ್ಟು ಈ ಸಮ್ಮೇಳನವನ್ನು ಉದ್ಘಾಟಿಸಲು ಒಪ್ಪಿಕೊಂಡಿರುತ್ತಾರೆ. ಇದು ಮುಂದಿನ ಒಳ್ಳೆಯ ದಿನಗಳಿಗೆ ಇಂದು ಬರೆಯುತ್ತಿರುವ ಅತ್ಯಂತ ಒಳ್ಳೆಯ ಮುನ್ನುಡಿಯಾಗಿದೆ.

ಸುಮಾರು ಶೇ. 95ರಷ್ಟು ಜನರು ಕೃಷಿಯಲ್ಲಿ ತೊಡಗಿಕೊಂಡಿರುವ ಈ ಹೆಗ್ಗಡದೇವನ ಕೋಟೆ ತಾಲ್ಲೂಕು ಅತಿ ಹಿಂದುಳಿದ ತಾಲ್ಲೂಕಾಗಿದೆ. ಆದ್ದರಿಂದ ಈ ತಾಲ್ಲೂಕಿನಲ್ಲಿ ಸರಕಾರವು ಇಂತಹ ಕಾರ್ಯಕ್ರಮವನ್ನು ಪ್ರಾರಂಭಿಸಿರುವುದು ಸೂಕ್ತವೇ ಆಗಿದೆ. ಈ ಪ್ರಾಯೋಗಿಕ ಮತ್ತು ಪ್ರಮುಖವಾದ ಯೋಜನೆಯೊಂದು ನನ್ನ ಸಹೋದ್ಯೋಗಿ ಶ್ರೀ ಮಾಲಿ ಮರಿಯಪ್ಪನವರಿಂದ ಉದ್ಘಾಟನೆಗೊಳ್ಳುತ್ತಿರುವುದು ನನ್ನ ಸಂತೋಷವನ್ನು ಇಮ್ಮಡಿಸಿದೆ. ಅನ್ಯಾಯ ಮತ್ತು ಶೋಷಣೆಗೆ ಒಳಗಾಗಿರುವ ಜನರ ಸಮಸ್ಯೆಗಳನ್ನು ಬಿಡಿಸುವ ಉದ್ದೇಶವನ್ನು ಹೊಂದಿರುವುದರಿಂದ ಈ ಯೋಜನೆಯು ಈ ವರ್ಗದ ಜನರಿಗಷ್ಟೇ ಅಲ್ಲದೆ ಇಡೀ ದೇಶಕ್ಕೇ ಸರಕಾರದ ಎಲ್ಲಾ ಯೋಜನೆಗಳಿಗಿಂತಲೂ ಹೆಚ್ಚು ಉಪಯುಕ್ತವಾದ ಯೋಜನೆಯಾಗಿದೆ. ಈ ಪ್ರಾಯೋಗಿಕ ಯೋಜನೆಯು ಕೃಷಿ ಕಾರ್ಮಿಕರಿಗೆ ಉದ್ಯೋಗದ ಖಾತ್ರಿಯನ್ನು, ಧೈರ್ಯ ಹಾಗೂ ಆತ್ಮವಿಶ್ವಾಸದಿಂದ ಹಾಗೂ ಕಷ್ಟಪಟ್ಟು ದುಡಿಯಲು ಅವರದೇ ಆದ ಭೂಮಿಯನ್ನು ನೀಡುತ್ತದೆ. ಇದರಿಂದಾಗಿ ಅವರ ಶ್ರಮದ ದುಡಿಮೆಯ ಫಲವು ಅವರಿಗೇ ದಕ್ಕುತ್ತದೆ ಮತ್ತು ಅವರು ತೃಪ್ತ ಹಾಗೂ ಸಭ್ಯ ಜೀವನವನ್ನು ನಡೆಸಬಹುದು.

ಈ ಯೋಜನೆಯನ್ನು ಸಂಪೂರ್ಣವಾಗಿ ಉಪಯೋಗಿಸಿಕೊಳ್ಳುವಂತೆ ಕಾರ್ಮಿಕರಲ್ಲಿ, ಅದರಲ್ಲಿಯೂ ಅತ್ಯಂತ ಶ್ರಮದಿಂದ ದುಡಿಯುವ ಕೃಷಿಕಾರ್ಮಿಕರಲ್ಲಿ, ನಾನು ವಿನಂತಿಸಿಕೊಳ್ಳುತ್ತೇನೆ. ಈ ಪ್ರಾಯೋಗಿಕ ಯೋಜನೆಯು ಅದರಲ್ಲಿ ಭಾಗವಹಿಸುವವರಿಗೆ ಸಮೃದ್ಧಿಯನ್ನು ತಂದುಕೊಡುತ್ತದೆ ಮತ್ತು ಇದೇ ರೀತಿಯ ಇನ್ನೂ ಹಲವು ಯೋಜನೆಗಳಿಗೆ ದಾರಿಯನ್ನು ಮಾಡಿಕೊಡುತ್ತದೆ ಎಂದು ನಾನು ಆಶಿಸುತ್ತೇನೆ. ಮೂರನೆಯ ಪಾಂಚವಾರ್ಷಿಕ ಯೋಜನೆಯಲ್ಲಿ ಇಂತಹ 19 ಯೋಜನೆಗಳಿದ್ದು, ಮೊದಲನೆಯ ವರ್ಷದಲ್ಲಿ ಐದು ಯೋಜನೆಗಳಿವೆ. ನಾವು ಇಂದು ಉದ್ಘಾಟಿಸುತ್ತಿರುವುದು ಅವುಗಳಲ್ಲಿ ಮೊದಲನೆಯದು.

ನಮ್ಮ ಸಮಾಜದಲ್ಲಿ ಕೆಲವು ವೇಳೆ ದುಡಿಮೆಗೆ ಇರುವ ಘನತೆಯನ್ನು ಗುರುತಿಸುವುದಿಲ್ಲ. ಈ ಯೋಜನೆಯು ಚಾಲನೆಯನ್ನು ಪಡೆದುಕೊಂಡಿರುವುದರಿಂದ ಸಹಕಾರಿ ತತ್ತ್ವದ ಆಧಾರದ ಮೇಲೆ ಆ ಘನತೆಯು ಗುರುತಿಸಲ್ಪಡುತ್ತದೆ ಮತ್ತು ಅದರಲ್ಲಿ ಭಾಗವಹಿಸುವವರು ಅದರಿಂದ ದೊರೆಯುವ ಲಾಭವನ್ನು ಅರಿತುಕೊಳ್ಳುತ್ತಾರೆ. ಅವರೇ ಈ ದೇಶವನ್ನು ನಿರ್ಮಿಸುತ್ತಿರುವವರು ಮತ್ತು ದೇಶದ ಸಂಪತ್ತನ್ನು ಸೃಷ್ಟಿಸುತ್ತಿರುವವರು. ರಾಷ್ಟ್ರದ ನಿರ್ಮಾಣದಲ್ಲಿ ಶಾರೀರಿಕ ಶ್ರಮವು ತನ್ನ ಅರ್ಹ ಗೌರವವನ್ನು ಪಡೆದುಕೊಳ್ಳಬೇಕು ಮತ್ತು ಈ ಯೋಜನೆಯು ಅದಕ್ಕೆ ಹಾದಿಯನ್ನು ಸಿದ್ಧಪಡಿಸಿಕೊಡುತ್ತದೆ.

ಕೃಷಿ ಕಾರ್ಮಿಕರು ಇಷ್ಟಕ್ಕೇ ತೃಪ್ತರಾಗಿಬಿಡುವ ವಿರುದ್ಧ ನಾನು ಅವರನ್ನು ಎಚ್ಚರಿಸುತ್ತೇನೆ. ಸವಲತ್ತುಗಳನ್ನು ಪಡೆದುಕೊಂಡ ಮಾತ್ರಕ್ಕೆ ಅವರು ತಮ್ಮ ಕರ್ತವ್ಯವನ್ನು ನಿರ್ವಹಿಸುವಲ್ಲಿ ಸಡಿಲಬಿಡಬಾರದು. ಅವರು ತಮಗೆ ದೊರೆತ ಸೌಲಭ್ಯ ಮತ್ತು ಸವಲತ್ತುಗಳ ಋಣವನ್ನುತೀರಿಸುತ್ತಾರೆ ಮತ್ತು ಸಂಪಾದನೆಯನ್ನು ಅಧಿಕಗೊಳಿಸಿಕೊಂಡು ಉ[illegible] ಜೀವನವನ್ನು ನಡೆಸುತ್ತಾರೆಂಬ ನಂಬಿಕೆ ನನಗಿದೆ.

ಯಾಂತ್ರೀಕೃತ ಬೇ[illegible]ಯಕ್ಕೆ ನಮಗೆ ಇನ್ನೂ ಹೆಚ್ಚಿನ ಸಮಯ ಬೇಕು. ಇಂದಿನ ಚಿಕ್ಕ ಚಿಕ್ಕ ಹಿಡುವಳಿಗಳ ಪರಿಸ್ಥಿತಿಯಲ್ಲಿ ನಾವು ಈಗ ಯೋಜಿಸಿರುವ ಸಹಕಾರಿ ಪದ್ಧತಿಯ ಕೃಷಿಯು ಮಾತ್ರ ಲಾಭಕರವಾಗಿರಬಲ್ಲುದು. ಭೂಮಿಯನ್ನು ಗರಿಷ್ಠ ಪ್ರಮಾಣದಲ್ಲಿ ಬಳಸಿಕೊಳ್ಳಲು ಇರುವ ಕಾರ್ಯಸಾಧುವಾದ ಏಕಮಾತ್ರ ಹಾದಿ. ಯಾಂತ್ರೀಕರಣದತ್ತ ನಮ್ಮ ಪ್ರಯತ್ನವನ್ನು ಪ್ರಾರಂಭಿಸುವ ಮುನ್ನ

ರೈತರ ಮತ್ತು ಕೃಷಿಕಾರ್ಮಿಕರ ಮಕ್ಕಳಿಗೆ ಈ ನಿಟ್ಟಿನಲ್ಲಿ ಉನ್ನತ ಶಿಕ್ಷಣ ಮತ್ತು ತರಬೇತಿಯು ದೊರೆಯುವ ಹಾಗೆ ಮಾಡಬೇಕು. ಈ ಕಾರಣಕ್ಕಾಗಿಯೇ ನಾವು ಈಗಾಗಲೇ ಎರಡು ಕೃಷಿ ಕಾಲೇಜುಗಳನ್ನೂ ಒಂದು ಪಶುವೈದ್ಯ ಕಾಲೇಜನ್ನೂ ಪ್ರಾರಂಭಿಸಿದ್ದೇವೆ. ಸರಕಾರವು ಕೃಷಿ ವಿಶ್ವವಿದ್ಯಾನಿಲಯವನ್ನು ಸ್ಥಾಪಿಸಲು ಯೋಚಿಸುತ್ತಿದೆ. ಅಗತ್ಯವಾದ ಕೆಲಸಗಳು ನಡೆಯುತ್ತಿದ್ದು, ಮಸೂದೆಯು ವಿಧಾನ ಸಭೆಯಲ್ಲಿ ಮಂಡಿಸಲು ಸಿದ್ಧವಾಗಿದೆ. ಕೃಷಿ, ಪಶುಸಂಗೋಪನೆ, ಪಶುವೈದ್ಯ, ತೋಟಗಾರಿಕೆ, ಮೀನುಸಾಕಣೆ, ಮತ್ತು ಇತರ ವಿಜ್ಞಾನದ ಶಾಖೆಗಳಲ್ಲಿ ಶಿಕ್ಷಣವನ್ನು ಮುಖ್ಯವಾಗಿ ರೈತರ ಮಕ್ಕಳಿಗೆ ನೀಡುವ ಉದ್ದೇಶವನ್ನು ಹೊಂದಿವೆ. ರೈತರ ಮತ್ತು ಕೃಷಿ ಕಾರ್ಮಿಕರ ಮಕ್ಕಳು ಸರಕಾರವು ಪ್ರಾರಂಭಿಸಿರುವ ಮತ್ತು ನೋಡಿಕೊಂಡು ಹೋಗುತ್ತಿರುವ ಈ ಕಾಲೇಜುಗಳಲ್ಲಿ ನೀಡುವ ಹಲವು ವಿಜ್ಞಾನದ ಹಲವು ಶಾಖೆಗಳಲ್ಲಿ ಉನ್ನತ ಶಿಕ್ಷಣ, ತರಬೇತಿ ಮತ್ತು ಜ್ಞಾನವನ್ನು ಪಡೆದುಕೊಳ್ಳುವಲ್ಲಿ ಅವುಗಳನ್ನು ಸಂಪೂರ್ಣವಾಗಿ ಉಪಯೋಗಿಸಿಕೊಳ್ಳಬೇಕು. ವೈಯುಕ್ತಿಕವಾಗಿ ಮಕ್ಕಳು ಪಡೆಯುವ ಜ್ಞಾನವು ಅವರಿಗೆ ಮಾತ್ರ ಉಪಯುಕ್ತವಾಗಿರುವುದಿಲ್ಲ, ಬದಲಿಗೆ ಮಕ್ಕಳ ಸಾಮೂಹಿಕ ಜ್ಞಾನವು ದೇಶದ ಆಹಾರ ಸಮಸ್ಯೆಯನ್ನು ಬಗೆಹರಿಸುವಲ್ಲಿ, ಶಾಶ್ವತವಾಗಿ ದೇಶವನ್ನು ಆಹಾರದ ವಿಷಯದಲ್ಲಿ ಸ್ವಾವಲಂಬಿಯನ್ನಾಗಿ ಮಾಡುವಲ್ಲಿ ಉಪಯೋಗಕ್ಕೆ ಬರುತ್ತದೆ.

ತಮ್ಮ ಕಾರ್ಯಭಾರದ ನಡುವೆಯೂ, ನನ್ನ ಆಹ್ವಾನವನ್ನು ಮನ್ನಿಸಿ ಈ ಯೋಜನೆಯನ್ನು ಉದ್ಘಾಟಿಸಲು ಬಂದಿರುವ ಶರೀ ಮಾಲಿ ಮರಿಯಪ್ಪನವರು ತಮ್ಮ ಉಪಸ್ಥಿತಿಯಿಂದ ನಮಗೆ ಪ್ರೇರಣೆಯನ್ನು ನೀಡಿ ನಮ್ಮ ಕಾರ್ಯಕ್ರಮವನ್ನು ಪ್ರೋತ್ಸಾಹಿಸಿದ್ದಾರೆ. ಅದಕ್ಕೆ ನಾನು ಅವರಿಗೆ ನನ್ನ ಹೃತ್ಪೂರ್ವಕ ಕೃತಜ್ಞತೆಯನ್ನು ಅರ್ಪಿಸುತ್ತೇನೆ. ನನಗೆ ಇಂತಹ ಉತ್ತಮ ಕಾರ್ಯಕ್ರಮವೊಂದರ ಅಧ್ಯಕ್ಷತೆಯನ್ನು ವಹಿಸುವ ಅವಕಾಶವನ್ನು ನೀಡಿದ ಇದರ ಸಂಘಟಕರಿಗೆ ಮತ್ತು ಜನನಾಯಕರಿಗೆ ಹಾಗೂ ಹೆಗ್ಗಡದೇವನ ಕೋಟೆಯ ಜನತೆಗೆ ನಾನು ಆಭಾರಿಯಾಗಿದ್ದೇನೆ.

## ♦ ಹಿಂಗಾರು ಕಾರ್ಯಾಚರಣೆ ಹಾಗೂ ಅಭಿವೃದ್ಧಿ

**ವಿದೇಶಗಳ ಕೃಷಿಯ ಬಗ್ಗೆ ರಾಚಯ್ಯನವರಿಗೆ ಸಂಪೂರ್ಣ ಅರಿವಿತ್ತು. 1959ರ ಜುಲೈ 13ರಂದು ಬೆಟ್ಟದಪುರದಲ್ಲಿ ಹಿಂಗಾರು ಕಾರ್ಯಾಚರಣೆಯ ಸಂದರ್ಭದಲ್ಲಿ ಮಾಡಿದ ಉದ್ಘಾಟನಾ ಭಾಷಣದಲ್ಲಿ ವಿದೇಶಗಳ ಹಾಗೆ ಭಾರತದ ಕೃಷಿಯಲ್ಲಿ ಆಧುನಿಕ ತಂತ್ರಜ್ಞಾನ ಬಳಸಿಕೊಳ್ಳಬೇಕಾದ ಅಗತ್ಯದ ಬಗ್ಗೆ ಮಾಹಿತಿ ಒದಗಿಸಿದ್ದಾರೆ.**

ಶೇ 90ರಷ್ಟು ಜನರು ಕೃಷಿಯನ್ನೇ ವೃತ್ತಿಯನ್ನಾಗಿ ಮಾಡಿಕೊಂಡಿರುವ ದೇಶ ನಮ್ಮದು. ಆದರೆ ವಿರೋಧಾಭಾಸವೆಂದರೆ, ನಾವು ಆಹಾರದ ಉತ್ಪಾದನೆಯಲ್ಲಿ ಕೊರತೆಯನ್ನು ಅನುಭವಿಸುತ್ತಿದ್ದೇವೆ. ಇತರ ದೇಶಗಳಲ್ಲಿ ಶೇ. 50ಕ್ಕೂ ಕಡಿಮೆ ಸಂಖ್ಯೆಯ ಜನರು ಕೃಷಿಯಲ್ಲಿ ತೊಡಗಿಕೊಂಡಿದ್ದರೂ, ಆಹಾರೋತ್ಪಾದನೆಯಲ್ಲಿ ಸ್ವಾವಲಂಬಿಗಳಾಗಿರುವುದಷ್ಟೇ ಅಲ್ಲದೆ, ಹೊರದೇಶಗಳಿಗೂ ರಫ್ತುಮಾಡುವಷ್ಟು ಬೆಳೆಯನ್ನು ಬೆಳೆಯುತ್ತಾರೆ. ಅಮೆರಿಕಾ ಅತ್ಯಂತ ಹೆಚ್ಚಿನ ಪ್ರಮಾಣದಲ್ಲಿ ಆಹಾರವನ್ನು ಉತ್ಪಾದನೆಯನ್ನು ಮಾಡುವ ದೇಶವಾಗಿದ್ದು, ತಮ್ಮ ಹೆಚ್ಚುವರಿ ಆಹಾರಧಾನ್ಯಗಳಿಗೆ ಮಾರುಕಟ್ಟೆ ಸಿಗದಿದ್ದರೆ, ಅವುಗಳನ್ನು ಸುಡುತ್ತಾರೆ ಅಥವಾ ಸಮುದ್ರಕ್ಕೆ ಸುರಿಯುತ್ತಾರೆ. ಅವರು ಕೆಲವು ವೇಳೆ ತಮ್ಮ ಹೆಚ್ಚುವರಿ ಧಾನ್ಯದ ಕೆಲವು ಭಾಗವನ್ನು ಹಿಂದುಳಿದ ದೇಶಗಳಿಗೆ ಕಳುಹಿಸಿಕೊಡುತ್ತಾರೆ. ಪಾಶ್ಚಾತ್ಯ ದೇಶಗಳಲ್ಲಿ ಕೃಷಿಯನ್ನು ದೊಡ್ಡ ಪ್ರಮಾಣದಲ್ಲಿ ಕೈಗೆತ್ತಿಕೊಂಡಿದ್ದರೆ, ನಮ್ಮ ದೇಶದಲ್ಲಿ ಸಣ್ಣ ಹಿಡುವಳಿಯೂ ಸೇರಿದಂತೆ ಹಲವಾರು ಕಾರಣಗಳಿಂದ ಸಣ್ಣ ಪ್ರಮಾಣದಲ್ಲಿ ನಡೆಸಲಾಗುತ್ತಿದೆ. ಜಪಾನ್ ಮತ್ತು ಚೈನಾ ದೇಶಗಳಲ್ಲಿ ಕೃಷಿಯು ಹೆಚ್ಚುಕಡಿಮೆ ಜನಗಳ ಶ್ರಮದ ದುಡಿಮೆಯಿಂದ, ಸ್ಥಳೀಯ ಪದ್ಧತಿಗಳನ್ನೂ ಅನುಸರಿಸಿ ನಡೆಸಲ್ಪಡುತ್ತಿದ್ದರೂ, ಆ ದೇಶಗಳು ಆಹಾರೋತ್ಪಾದನೆಯಲ್ಲಿ ಸ್ವಾವಲಂಬಿಗಳಾಗಿವೆ. ಹಾಗಿದ್ದರೆ, ನಮ್ಮ ದೇಶದಲ್ಲಿನ ಕಡಿಮೆ ಉತ್ಪಾದನಾ ಗತಿಗೆ ಕಾರಣಗಳು ಯಾವುವು? ಇವುಗಳಲ್ಲಿ ಮೊದಲನೆಯದು ನಮ್ಮ ಜನರಲ್ಲಿರುವ ಸೋಮಾರಿತನ ಮತ್ತು ಎರಡನೆಯದಾಗಿ ಕೃಷಿಯ ಪದ್ಧತಿಯಲ್ಲಿ ಆಗಿರುವ ಇತ್ತೀಚಿನ ಬೆಳವಣಿಗೆಗೆ ಸಂಬಂಧಪಟ್ಟ ಜ್ಞಾನದ

ಅಭಾವ. ಮೈಸೂರು ಸರಕಾರವು ರಾಜ್ಯದ ರೈತರಿಗೆ ರಸಗೊಬ್ಬರಗಳನ್ನು, ಸಂಸ್ಕರಿಸಿದ ಬೀಜಗಳನ್ನು, ಪರಿಣತ ಸಲಹೆಗಳನ್ನು, ಕೀಟನಾಶಕಗಳನ್ನು ಮತ್ತು ಇತರ ಸೌಲಭ್ಯಗಳನ್ನು ಒದಗಿಸುತ್ತಿದೆ. ಈ ಸೌಲಭ್ಯಗಳಲ್ಲಿ ಹಲವು ಸರಿಯಾಗಿ ಬಳಸಿಕೊಳ್ಳಲ್ಪಡುತ್ತಿಲ್ಲ, ಅಷ್ಟೇ ಅಲ್ಲ, ಕೆಲವೆಡೆ, ದುರದೃಷ್ಟದಿಂದ ಅವುಗಳ ದುರುಪಯೋಗವೂ ನಡೆಯುತ್ತಿದೆ. ಆರ್ದ್ರ ಬೆಳೆಗಳಿಗೆ ಸರಿಯಾದ ಕಾಲದಲ್ಲಿ, ಸರಿಯಾದ ಪ್ರಮಾಣದಲ್ಲಿ ರಂಜಕದ ರಸಗೊಬ್ಬರಗಳನ್ನು ನೀಡಿದರೆ ಆ ಬೆಳೆಗಳು ಹುಲುಸಾಗಿ ಬೆಳೆಯುತ್ತವೆ ಎಂಬುದು ಈಗ ಸಿದ್ಧವಾದ ಅಂಶ. ಕಾಂಪೋಸ್ಟ್ ಗೊಬ್ಬರಗಳನ್ನು ವೈಜ್ಞಾನಿಕವಾಗಿ ತಯಾರಿಸಿ ಉಪಯೋಗಿಸಬಹುದು, ಆದರೆ ನಮ್ಮ ರೈತರು ಅದರ ಬಗ್ಗೆ ಸಂವೇದನಾಶೂನ್ಯರಾಗಿದ್ದಾರೆ.

ಬೆಳೆಗಳ ಪರ್ಯಾಯವು ಇನ್ನೂ ರೈತರ ಕಲ್ಪನೆಯ ಪರಿಧಿಯ ಒಳಗಡೆಗೆ ಬಂದಿಲ್ಲ. ಬೆಳೆಗಳ ವೈವಿಧ್ಯವು ಅಪೇಕ್ಷಣೀಯವಷ್ಟೇ ಅಲ್ಲ, ಅದರ ಜೊತೆಗೆ ಭೂಮಿಯ ಫಲವತ್ತತೆಯನ್ನು ರಕ್ಷಿಸಿಕೊಂಡು ಹೋಗುವಲ್ಲಿಯೂ ಅದು ಮಹತ್ವದ್ದಾಗಿದೆ. ನಾವು ಮಣ್ಣಿನ ಸಂರಕ್ಷಣೆಗೆ ಅಗತ್ಯವಾದ ಗಮನವನ್ನು ನೀಡಿಲ್ಲ. ಇದರ ಪರಿಣಾಮವಾಗಿ ಭೂಮಿಯ ಫಲವತ್ತತೆಯು ಅದರ ಮೇಲ್ಮೈ ಮಣ್ಣಿನ ಜೊತೆ ನಿಧಾನವಾಗಿ ಕೊಚ್ಚಿಹೋಗುತ್ತಿದೆ. ನಮ್ಮ ದೇಶದಲ್ಲಿ ಪ್ರತಿ ಎಕರೆಗೆ ಸಿಗುವ ಉತ್ಪಾದನೆಯ ಒಂದೂವರೆಯಷ್ಟು ಉತ್ಪಾದನೆಯು ಜಪಾನ್ ಮತ್ತು ಚೈನಾ ದೇಶಗಳಲ್ಲಿ ದೊರಕುತ್ತಿದೆ. ಅಮೆರಿಕದಂತಹ ದೇಶಗಳಲ್ಲಿ, ಅಗಾಧವಾದ ಜಮೀನುಗಳಲ್ಲಿ ಆಧುನಿಕ ರೀತಿಯ ವ್ಯವಸಾಯವು ಜಾರಿಯಲ್ಲಿದೆ. ಹಿಡುವಳಿಗಳ ಪ್ರಮಾಣ ಚಿಕ್ಕದಿರುವುದರಿಂದ, ನಮ್ಮ ದೇಶದಲ್ಲಿ ಸಾಂದ್ರ ಬೇಸಾಯವು ಸೂಕ್ತವಾಗಿದೆ. ಕೃಷಿಯ ಜೊತೆಜೊತೆಯಲ್ಲಿಯೇ ಪಶುಸಂಗೋಪನೆ, ತೋಟಗಾರಿಕೆ, ಮೊದಲಾದವನ್ನು ಅಭಿವೃದ್ಧಿ ಪಡಿಸುವ ಆವಶ್ಯಕತೆ ನಮ್ಮ ದೇಶದಲ್ಲಿ ಇದೆ. ಕೃಷಿಗೆ ಬೆಂಬಲವಾಗಿ ಕುಟೀರ ಕೈಗಾರಿಕೆಗಳು ಅಭಿವೃದ್ಧಿ ಹೊಂದಿದರೆ ನಮ್ಮ ರೈತರ ಆರ್ಥಿಕತೆ ಸುಧಾರಿಸುತ್ತದೆ. 'ಅಧಿಕ ಆಹಾರೋತ್ಪಾದನೆಯನ್ನು ಮಾಡಿ' ಚಳವಳಿಯ ಹೊರತಾಗಿಯೂ ನಮ್ಮಲ್ಲಿನ ಆಹಾರದ ಉತ್ಪಾದನೆಯ ಮಟ್ಟ ಆಶಾದಾಯಕವಾಗಿಲ್ಲ. ಪ್ರಕೃತ ಇರುವ ಆಹಾರದ ಕೊರತೆಯನ್ನು ನಿವಾರಿಸಲು, ಕೃಷಿ ಪದ್ಧತಿಯ ಬಗೆಗೆ ನಮಗೆ ಹಿಂದಿನಿಂದ ಬಂದಿರುವ ಪೂರ್ವಗ್ರಹಗಳನ್ನು ನಾವು ತ್ಯಜಿಸಬೇಕು ಮತ್ತು ವೈಜ್ಞಾನಿಕ

ಮಾರ್ಗವನ್ನು ಅನುಸರಿಸಬೇಕು. ನವೀನ ಪದ್ಧತಿಗಳ ಪ್ರಕಾರ ಹಾಲು ಉತ್ಪಾದನೆ, ಕೋಳಿಸಾಕಣೆ, ವ್ಯವಸಾಯ, ತೋಟಗಾರಿಕೆ, ಮತ್ತು ಜಾನುವಾರುಗಳ ತಳಿ ಅಭಿವೃದ್ಧಿಯನ್ನು ನಾವು ಕೈಗೆತ್ತಿಕೊಳ್ಳಬೇಕು. ಅಲ್ಲದೆ, ನಾವು ಪರಂಪರೆಯಿಂದ ಬಂದ ಆಹಾರ ಸೇವನೆಯ ಕ್ರಮಗಳನ್ನು ಬದಲಾಯಿಸಿಕೊಳ್ಳಬೇಕು. ಇದು ಪೌಷ್ಟಿಕತೆಯ ದೃಷ್ಟಿಯಿಂದಲೂ ಅಗತ್ಯವಾಗಿದೆ. ಕೋಳಿಯನ್ನು ಸೇವಿಸುವುದಕ್ಕೆ ಆತ್ಮಸಾಕ್ಷಿಯು ಒಪ್ಪದೆ ಇರುವವರು, ಕನಿಷ್ಠ ಪಕ್ಷ ಕೋಳಿಗಳನ್ನು ಸಾಕಿ ಅವುಗಳನ್ನು ಮತ್ತು ಅವುಗಳ ಮೊಟ್ಟೆಯನ್ನು ಅವುಗಳನ್ನು ಸೇವಿಸುವವರಿಗೆ ಮಾರಿದರೆ ಆಹಾರದ ಕೊರತೆಯು ಸ್ವಲ್ಪ ಮಟ್ಟಿಗಾದರೂ ಕಡಿಮೆಯಾಗುತ್ತದೆ. ಹಾಗೆಯೇ, ನಿಮ್ಮಲ್ಲಿ ಹಲವರು ಚಿಕ್ಕ ಚಿಕ್ಕ ಕೊಳಗಳಲ್ಲಿ ಅಥವಾ ನಿಮ್ಮ ಮನೆಯ ಕಾಂಪೌಂಡಿನಲ್ಲಿ ಮೀನುಗಳನ್ನು ಸಾಕಿ ಅದನ್ನು ಸೇವಿಸುವವರಿಗೆ ಮಾರಬಹುದು. ನನ್ನ ಉದಾಹರಣೆಯನ್ನೇ ತೆಗೆದುಕೊಳ್ಳಿ, ಕೃಷಿ ಸಚಿವನಾಗುವುದಕ್ಕೆ ಮೊದಲೇ ನಾನು ನನ್ನದೇ ಆದ ತರಕಾರಿ ತೋಟವನ್ನು, ಕೋಳಿಸಾಕಣೆ ಕೇಂದ್ರವನ್ನು, ಜೇನು ಸಾಕಣೆಯ ವ್ಯವಸ್ಥೆಯನ್ನು, ಮೀನಿನ ಕೊಳವನ್ನು, ದನಗಳನ್ನು ಹೊಂದಿದ್ದೆ. ನನಗೆ ಇವುಗಳಿಂದ ಬರುವ ಲಾಭವು ವೈಜ್ಞಾನಿಕ ವಿಧಾನಗಳನ್ನು ಅಳವಡಿಸಿಕೊಂಡ ಮೇಲೆ ಆಶ್ಚರ್ಯಕರವಾಗಿರುವಷ್ಟು ಅಧಿಕವಾಗಿದೆ.

ಇಲ್ಲಿ 'ವಿದ್ಯಾರ್ಥಿಗಳ ಕೃಷಿ ವೇದಿಕೆ' ಎಂಬ ಕ್ಲಬ್ ಇದೆಯೆಂದು ತಿಳಿದು ನನಗೆ ಸಂತೋಷವಾಯಿತು. ಅಂತಹ ವೇದಿಕೆಗಳನ್ನು ನಾವು ಪ್ರೋತ್ಸಾಹಿಸಬೇಕು. ಬೆಂಗಳೂರಿನಲ್ಲಿ ಒಂದು ವೇದಿಕೆಯಿದೆ. ನೀವು ಅಲ್ಲಿಗೆ ಬಂದು ಅದರ ಸದಸ್ಯರಾಗಿ ನಿಮ್ಮ ಅನುಭವಗಳನ್ನು, ವಿಚಾರಗಳನ್ನು ಅಲ್ಲಿನ ಇತರ ಸದಸ್ಯರ ಸಂಗಡ ವಿನಿಮಯಮಾಡಿಕೊಂಡು ಅದರ ಲಾಭವನ್ನು ಪಡೆಯಲು ನಿಮ್ಮನ್ನು ಸ್ವಾಗತಿಸುತ್ತೇನೆ. ನಿಮಗೆ ಸಂಪರ್ಕ ಹಾಗೂ ಮಾರುಕಟ್ಟೆಯ ವಿಷಯದಲ್ಲಿ ಕೆಲವೊಂದು ತೊಡಕುಗಳು ಇವೆಯೆಂಬುದು ನನಗೆ ತಿಳಿದಿದೆ. ವ್ಯವಸಾಯೋಪಕರಣಗಳನ್ನು ಮತ್ತು ಗೊಬ್ಬರಗಳನ್ನು ಪಡೆಯುವಲ್ಲಿಯೂ ಸಹ ತೊಂದರೆಗಳಿವೆ. ಸರಕಾರಕ್ಕೆ ನಿಮ್ಮ ಈ ತೊಂದರೆಗಳ ಬಗ್ಗೆ ಅರಿವಿದೆ. ಈಗಾಗಲೇ ಹಲವಾರು ತೊಡಕುಗಳನ್ನು ನಿವಾರಿಸಲಾಗಿದೆ ಮತ್ತು ಇಷ್ಟರಲ್ಲಿಯೇ ಈ ಉಳಿದ ತೊಂದರೆಗಳನ್ನೂ ಪರಿಹರಿಸುತ್ತಾರೆಂದು ನಾನು ಆಶಿಸುತ್ತೇನೆ. ನೀವು ರೈತರಾಗಿರುವುದರಿಂದ, ದೇಶದ ಆಹಾರೋತ್ಪಾದನೆಯ ಹೊಣೆಯನ್ನು ಹೊತ್ತುಕೊಂಡಿದ್ದೀರಿ. ನಿಮ್ಮನ್ನು ಬಿಟ್ಟು – ಸಾಕಷ್ಟು ಆಹಾರದ ಉತ್ಪಾದನೆ ಇಲ್ಲದಿದ್ದರೆ

– ಯಾವ ಆಡಳಿತವೂ ಸಾಗುವುದಿಲ್ಲ, ಅಷ್ಟೇ ಅಲ್ಲ, ಯಾವ ಚಟುವಟಿಕೆಯೂ ಮುಂದುವರಿಯುವುದಿಲ್ಲ. ಸ್ವತಂತ್ರ ಭಾರತದ ದೇಶಭಕ್ತ ರೈತರಾಗಿ ನೀವು ನಿಮ್ಮ ಜವಾಬ್ದಾರಿಯನ್ನು ಅರಿತುಕೊಂಡು ಆಹಾರೋತ್ಪಾದನೆಯನ್ನು ಅಧಿಕಗೊಳಿಸುವುದಕ್ಕೆ ಸರ್ವಪ್ರಯತ್ನವನ್ನೂ ಮಾಡುವುದು ನಿಮ್ಮ ಮೇಲಿದೆ.

## ♦ ತೋಟಗಾರಿಕೆಯಲ್ಲಿ ತರಬೇತಿ ಅಗತ್ಯತೆ

**ತೋಟಗಾರಿಕೆ ತರಬೇತುದಾರರಿಗೆ ಹೇಳಿದ ಕಿವಿಮಾತುಗಳಿವು. 1960ರ ಸೆಪ್ಟೆಂಬರ್ 1 ರಂದು ಬೆಂಗಳೂರಿನ ಲಾಲ್‌ಬಾಗ್‌ನಲ್ಲಿ ತೋಟಗಾರಿಕೆಯ ಸರ್ಟಿಫಿಕೇಟ್‌ಗಳನ್ನು ತರಬೇತಿಯನ್ನು ಪಡೆದವರಿಗೆ ಪ್ರಧಾನಮಾಡುವ ಸಂದರ್ಭದಲ್ಲಿ ಮಾಡಿದ ಸಮಾರೋಪ ಭಾಷಣದ ಸಾರ. ರಷ್ಯಾ ದೇಶದ ಕೃಷಿಯ ಅನುಭವಗಳನ್ನು ಇಲ್ಲಿ ಹಂಚಿಕೊಂಡಿದ್ದಾರೆ.**

ತೋಟಗಾರಿಕೆಯಲ್ಲಿ ತರಬೇತಿಯ ಕೋರ್ಸ್‌ನ್ನು ಮುಗಿಸಿದ ನಂತರ ಈಗ ನೀವು ಹೊರಗೆ ಹೋಗುತ್ತಿದ್ದೀರಿ. ಹಾಗೆ ಹೋಗುವಾಗ ನಿಮ್ಮೊಂದಿಗೆ ನಮ್ಮ ಶುಭಾಕಾಂಕ್ಷೆಗಳನ್ನೂ ಒಯ್ಯುತ್ತಿದ್ದೀರಿ. ನೀವು ಗಳಿಸಿರುವ ತೋಟಗಾರಿಕೆಯ ತಿಳಿವಳಿಕೆ ಉದ್ಯೋಗಕಕ್ಕೆ ಮಾತ್ರ ಸೀಮಿತವಾಗಿರಬಾರದು. ನಿಮ್ಮ ಹೆಗಲ ಮೇಲೆ ಅದಕ್ಕಿಂತ ಹೆಚ್ಚಿನ ಜವಾಬ್ದಾರಿಯಿದೆ. ನೀವು ರಾಷ್ಟ್ರದ ಆಹಾರ ಸಮಸ್ಯೆಯನ್ನು ಶೀಘ್ರವಾಗಿ ಪರಿಹರಿಸಲು ಭುಜಕ್ಕೆ ಭುಜ ಕೊಟ್ಟು ನಿಲ್ಲಬೇಕು. ನಮ್ಮ ದೇಶವು ತೋಟಗಾರಿಕೆಯಲ್ಲಿ ಅಷ್ಟಾಗಿ ಮುಂದುವರಿದಿಲ್ಲ. ನಮ್ಮ ದೇಶದಲ್ಲಿ ಇನ್ನೂ ಶೈಶವಾವಸ್ಥೆಯಲ್ಲಿರುವ ಈ ವಿಜ್ಞಾನಕ್ಕೆ ಅರ್ಹವಾದ ಸ್ಥಾನವನ್ನು ರಾಷ್ಟ್ರೀಯ ಮಟ್ಟದಲ್ಲಿ ಗಳಿಸಿಕೊಡುವಲ್ಲಿ ನಿಮ್ಮ ಚಾಲಕ ಶಕ್ತಿ, ಕರ್ತವ್ಯಪ್ರಜ್ಞೆ ಕೆಲಸಮಾಡಬೇಕು.

ನನ್ನ ಇತ್ತೀಚಿನ ರಷ್ಯಾ ದೇಶದ ಪ್ರವಾಸದ ಸಮಯದಲ್ಲಿ ನಾನು ಗಮನಿಸಿದ ಹಾಗೆ ತೋಟಗಾರಿಕೆಗೆ ಆ ದೇಶದಲ್ಲಿ ಉನ್ನತ ಸ್ಥಾನವನ್ನು ನೀಡಿದ್ದಾರೆ. ತೋಟಗಾರಿಕೆಯು ಹೆಚ್ಚಿನ ಆದ್ಯತೆಯನ್ನು ಪಡೆಯುವ ಕೃಷಿ ಮತ್ತು ಪಶುಸಂಗೋಪನೆಗಳ ಒಂದು ಅವಿಭಾಜ್ಯ ಅಂಗವಾಗಿದೆ. ಈ ಕಾರಣದಿಂದಲೇ ರಷ್ಯಾದಲ್ಲಿ ತರಕಾರಿಗಳು ಮತ್ತು ಹಣ್ಣುಗಳು ಸಮೃದ್ಧಿಯಾಗಿ ದೊರೆಯುತ್ತವೆ.

ಅಲ್ಲಿನ ಹೆಚ್ಚು ಕಡಿಮೆ ಎಲ್ಲಾ ನಗರಗಳೂ ಯೋಜಿತವಾದ ಮತ್ತು ಮನೋಹರವಾದ ತೋಟಗಳನ್ನೊಳಗೊಂಡು ಉದ್ಯಾನನಗರಿಗಳೇ ಆಗಿವೆ. ಅಲ್ಲಿನವರ ಆಹಾರದಲ್ಲಿ ಸ್ವಲ್ಪ ಬ್ರೆಡ್ ಮತ್ತು ಹಾಲು ಇದ್ದರೆ ಹೆಚ್ಚಿನ ಭಾಗ ಹಣ್ಣುಗಳಿಂದ ಕೂಡಿರುತ್ತವೆ. ಅಲ್ಲಿ ಆಹಾರದ ಅಥವಾ ಮೇವಿನ ಅಭಾವವೆಂಬುದೇ ಇಲ್ಲ.

ವಿಜ್ಞಾನ ಮತ್ತು ತಂತ್ರಜ್ಞಾನದಲ್ಲಿ ಆಗಿರುವ ಇತ್ತೀಚಿನ ಆವಿಷ್ಕಾರಗಳನ್ನು ಕೃಷಿ ಮತ್ತು ಪಶುಸಂಗೋಪನೆಯಲ್ಲಿ ಅವರು ಬಳಸಿಕೊಳ್ಳುತ್ತಾರೆ. ಸರಕಾರದ ಪ್ರತಿಯೊಂದು ಕೃಷಿಕ್ಷೇತ್ರವೂ, ಅಥವಾ ಸಾಮೂಹಿಕ ಕೃಷಿಕ್ಷೇತ್ರವೂ 50,000ದಿಂದ 2,00,000 ಎಕರೆಯಷ್ಟು ವಿಸ್ತೀರ್ಣವಾಗಿದ್ದು, ಗೃಹಸೌಲಭ್ಯ, ವೈದ್ಯಕೀಯ ಮತ್ತು ಶೈಕ್ಷಣಿಕ ವ್ಯವಸ್ಥೆ, ಸಾಂಸ್ಕೃತಿಕ ಕಾರ್ಯಕ್ರಮಗಳು ಮೊದಲಾದವುಗಳಿಗೂ ಇದು ಸಾಕಾಗುತ್ತದೆ. ಪ್ರತಿಯೊಂದರಲ್ಲಿಯೂ, 500ರಿಂದ 2,000 ಕುಟುಂಬಗಳು ವಾಸಿಸುತ್ತವೆ. ಅವರ ಯೋಜನಾ ವಿಧಾನದಲ್ಲಿ, ರಸ್ತೆಗಳನ್ನು ಮತ್ತು ಕಟ್ಟಡಗಳನ್ನು ನಿರ್ಮಿಸುವುದಕ್ಕೆ ಎರಡನೆಯ ಆದ್ಯತೆ. ದೇಶವು ಮೊದಲು ಜನತೆಯ ಕಲ್ಯಾಣಕಾರ್ಯಗಳಲ್ಲಿ ತನ್ನ ಸಂಪನ್ಮೂಲವನ್ನು ವಿನಿಯೋಗಿಸಬೇಕು ಮತ್ತು ಪ್ರತಿಯೊಬ್ಬ ಪ್ರಜೆಯೂ ದೇಶದ ಆಸ್ತಿ ಎಂದು ಅವರು ನಂಬುತ್ತಾರೆ. ಆದ್ದರಿಂದಲೇ, ಅಲ್ಲಿ ಮಕ್ಕಳ ಶಿಕ್ಷಣವು ತೀವ್ರವಾದ ಗಮನವನ್ನು ಮತ್ತು ಸಹಾಯವನ್ನು ಪಡೆದುಕೊಂಡಿದೆ. ಪ್ರತಿಯೊಂದು ಮಗುವಿನ ಮೇಲೂ, ದಿನಕ್ಕೆ ಏಳರಿಂದ ಹದಿನೈದು ರೂಗಳವರೆಗೆ ಶಿಕ್ಷಣ ಮತ್ತು ಯೋಗಕ್ಷೇಮಕ್ಕಾಗಿ ಅವರು ಖರ್ಚುಮಾಡುತ್ತಾರೆ. ಅಲ್ಲಿ ಜಮೀನು ಖಾಸಗಿ ಒಡೆತನದಲ್ಲಿ ಇರುವುದೇ ಇಲ್ಲ. ಪ್ರತಿಯೊಬ್ಬರೂ ಆದಾಯದ ಮೇಲೆ ಗಮನವನ್ನು ಇಟ್ಟಿರುತ್ತಾರೆಯೇ ಹೊರತು ಆಸ್ತಿಯ ಮೇಲೆ ಅಲ್ಲ. ಆದರೆ, ಇಲ್ಲಿ ನಮಗ ಆದಾಯಕ್ಕಿಂತ ಆಸ್ತಿಯ ಮೇಲೆಯೇ ಗಮನ ಹೆಚ್ಚಾಗಿರುತ್ತದೆ. ಬೆಳೆಗಾರ ಮತ್ತು ಬಳಕೆದಾರ ಇಬ್ಬರ ನಡುವೆ ಸರಕಾರವು ಏಜೆನ್ಸಿಯಂತೆ ಕೆಲಸಮಾಡುತ್ತದೆ. ಅಲ್ಲಿ ಪ್ರತಿಯೊಂದೂ ಸಹಕಾರ ತತ್ತ್ವದ ಮೇಲೆಯೇ ನಡೆಯುತ್ತದೆ. ಪ್ರತಿಯೊಬ್ಬರಿಗೂ ಕನಿಷ್ಠವೇತನವು ದೊರೆತೇ ದೊರೆಯುತ್ತದೆ ಮತ್ತು ವೇತನದ ಪ್ರಮಾಣವು ಅವರ ವಿಶೇಷ ನೈಪುಣ್ಯ, ಪ್ರತಿಭೆ, ಅರ್ಹತೆ ಮತ್ತು ಉತ್ಪಾದನಾ ಸಾಮರ್ಥ್ಯದ ಮೇಲೆ ಅವಲಂಬಿಸಿರುತ್ತದೆ. 60 ವರ್ಷ ದಾಟಿದ ಎಲ್ಲಾ ಗಂಡಸರಿಗೂ ಮತ್ತು 55 ವರ್ಷಕ್ಕಿಂತ ಹೆಚ್ಚು ವಯಸ್ಸಾದ ಎಲ್ಲಾ ಹೆಂಗಸರಿಗೂ ವೃದ್ಧಾಪ್ಯ ವೇತನ ದೊರೆಯುತ್ತದೆ. ಈ ವೇತನವು ಅವರು ನಿವೃತ್ತರಾಗುವ ಮೊದಲು ಪಡೆಯುತ್ತಿದ್ದ ವೇತನದ ಸುಮಾರು ಮೂರನೆಯ ಎರಡರಷ್ಟು (ಶೇ. 60) ಇರುತ್ತದೆ. ಪರಿಶ್ರಮಕ್ಕೆ ಅಲ್ಲಿ ಬೆಲೆಯಿದೆ. ಉತ್ಪಾದನೆಯಲ್ಲಿ ಹೆಚ್ಚಿನ ಪ್ರಗತಿಯನ್ನು ತೋರುವ ಕಾರ್ಮಿಕರನ್ನು ವೀರಪುರುಷರಂತೆ ಗೌರವಿಸಲಾಗುತ್ತದೆ. ಅವರ ಛಾಯಾಚಿತ್ರಗಳನ್ನು ಮತ್ತು

ಪ್ರತಿಮೆಗಳನ್ನು ಪ್ರಮುಖವಾಗಿ ಕಾಣುವಂತೆ ಪ್ರದರ್ಶಿಸುತ್ತಾರೆ. ಕಷ್ಟಪಟ್ಟು ಹಾಗೂ ಪ್ರಾಮಾಣಿಕವಾಗಿ ದುಡಿಯುವವರಿಗೆ ಎಲ್ಲಾ ಬಗೆಯ ಪ್ರೋತ್ಸಾಹಧನವೂ ಸಿಗುತ್ತದೆ. ವೈಯಕ್ತಿಕ ಆಸೆ ಅಥವಾ ಸಂಗ್ರಹದ ಚಟವನ್ನು ಅಲ್ಲಿ ನಿಷೇಧಿಸಲಾಗಿದೆ. ಸರಕಾರವು ಎಲ್ಲರ ಯೋಗಕ್ಷೇಮವನ್ನೂ ನೋಡಿಕೊಳ್ಳುತ್ತದೆ, ಎಲ್ಲರೂ ಶ್ರದ್ಧೆಯಿಂದ ಮತ್ತು ಪ್ರಾಮಾಣಿಕವಾಗಿ ಕೆಲಸವನ್ನು ಮಾಡಬೇಕು. ವಿಶ್ರಾಂತಿ ಮತ್ತು ವಿರಾಮದ ವೇಳೆ ಪ್ರತಿಯೊಬ್ಬ ಕಾರ್ಮಿಕನ ಹಕ್ಕು ಮತ್ತು ಅವರು ಅದನ್ನು ಕಡ್ಡಾಯವಾಗಿ ಅನುಭವಿಸಲೇಬೇಕು. ಈ ಎಲ್ಲಾ ವ್ಯವಸ್ಥೆಯಿಂದಾಗಿ ಅವರು ಪ್ರಗತಿಯಲ್ಲಿ ದಾಪುಗಾಲನ್ನು ಹಾಕುತ್ತಿದ್ದಾರೆ. ಸರಕಾರದ ತೋಟಗಾರಿಕಾ ಸಂಶೋಧನಾ ಸಂಸ್ಥೆಗಳಿಂದ ಹೆಚ್ಚು ಇಳುವರಿ ಹಾಗೂ ಉತ್ತಮ ರುಚಿಯ ಫಲಗಳನ್ನು ಕೊಡುವ ಹಣ್ಣು ಮತ್ತು ತರಕಾರಿ ಸಸ್ಯಗಳ ಬೀಜಗಳನ್ನು ಒದಗಿಸುತ್ತಾರೆ. ತಳಿ ಅಭಿವೃದ್ಧಿ, ಅಡ್ಡ–ಪರಾಗಸ್ಪರ್ಶ ಮೊದಲಾದ ತಂತ್ರಗಳ ಮೂಲಕ ಸತತ ಪ್ರಯತ್ನದಿಂದ ಇನ್ನೂ ಹೆಚ್ಚಿನ ಪ್ರಗತಿಯನ್ನು ಸಾಧಿಸುತ್ತಲೇ ಹೋಗುತ್ತಾರೆ. ಕೃಷಿ, ಪಶುಸಂಗೋಪನೆ ಮತ್ತು ತೋಟಗಾರಿಕೆಗಳಿಗೆ ಹಲವಾರು ಅಕಾಡೆಮಿಗಳು ಇವೆ. ಸಾವಿರಾರು ಜನರು ಬಾಲ್ಯದಿಂದಲೇ ತಜ್ಞರಿಂದ ತರಬೇತಿಯನ್ನು ಪಡೆಯುತ್ತಾರೆ. ರಷ್ಯಾದಲ್ಲಿನ ದೊಡ್ಡ ದೊಡ್ಡ ನಗರಗಳನ್ನು ನೋಡುವುದೇ ಆನಂದ, ಇದು ಅಲ್ಲಿರುವ ದೊಡ್ಡ ದೊಡ್ಡ ಕಟ್ಟಡಗಳಿಂದಾಗಿ ಅಲ್ಲ, ಬದಲಿಗೆ ಯೋಜಿತವಾಗಿ ನಿರ್ಮಿಸಿರುವ ಹಣ್ಣಿನ ತೋಟಗಳಿಂದ, ಉದ್ಯಾನವನಗಳಿಂದ ಅಲ್ಲದೆ, ಅವುಗಳ ಬಗ್ಗೆ ಅವರು ನೀಡುವ ಲಕ್ಷ್ಯದಿಂದ. ರಷ್ಯಾದಲ್ಲಿ ಸೋಮಾರಿಯನ್ನು, ನಿರುದ್ಯೋಗಿಯನ್ನು, ಅನಕ್ಷರಸ್ಥನನ್ನು, ಅಥವಾ ಶೋಷಕರನ್ನು ನೀವು ಕಾಣಲಾರಿರಿ.

ರಷ್ಯಾದ ಬಗ್ಗೆ ಹೇಳುವುದು ಸಾಕಷ್ಟಿದೆ. ಆದರೆ ಇಲ್ಲಿನ ಪರಿಸ್ಥಿತಿ ಬೇರೆಯಾಗಿದೆ. ಒಟ್ಟಿನಲ್ಲಿ ಹೇಳುವುದಾದರೆ, ನಾವು ಅವರ ಉದಾಹರಣೆಯನ್ನು ನಮ್ಮ ರೀತಿಯಲ್ಲಿ ಅನುಸರಿಸಬಹುದು. ಅದಕ್ಕೆ ಶ್ರದ್ಧಾಪೂರ್ಣ ಹಾಗೂ ಪ್ರಾಮಾಣಿಕ ದುಡಿಮೆಗೆ ಸಲ್ಲುವ ಗೌರವವು ಸಲ್ಲಬೇಕು. ನಾವು ಶ್ರಮಪೂರ್ಣ ದುಡಿಮೆಯನ್ನು ಮತ್ತು ಸಾಮರ್ಥ್ಯವನ್ನು ನಾವು ಗುರುತಿಸಿ ಗೌರವಿಸಿದರೆ ಜಾತಿಪದ್ಧತಿ ತನಗೆ ತಾನೇ ಮಾಯವಾಗುತ್ತದೆ.

## ♦ ಹಣ್ಣು ಮತ್ತು ತರಕಾರಿಗಳ ಸಂರಕ್ಷಣೆಯ ಸಾಧ್ಯತೆಗಳು

**ನಮ್ಮ ದೇಶದ ಕೃಷಿಯ ಬಹುದೊಡ್ಡ ಸಮಸ್ಯೆ ಬೆಳೆದ ಬೆಳೆಗಳನ್ನು ಸಂರಕ್ಷಿಸುವುದು. ಅದರಲ್ಲೂ ಹಣ್ಣು – ತರಕಾರಿ ಸಂರಕ್ಷಣೆ ಕಷ್ಟ. 1961ರ ಫೆಬ್ರವರಿ 16ರಂದು ಮೈಸೂರಿನ ಆಹಾರ ತಾಂತ್ರಿಕ ಸಂಶೋಧನಾಲಯ ಸಂಸ್ಥೆಯಲ್ಲಿ ನಡೆದ ಹಣ್ಣು ಮತ್ತು ತರಕಾರಿ ಸಂರಕ್ಷಣೆಯ ಸಮ್ಮೇಳನದಲ್ಲಿ ಮಾಡಿದ ಅಧ್ಯಕ್ಷ ಭಾಷಣ.**

ಈ ಹಣ್ಣು ಮತ್ತು ತರಕಾರಿ ಸಂರಕ್ಷಣೆಯ ಸಮ್ಮೇಳನದ ಇಂದಿನ ಸಭೆಯ ಅಧ್ಯಕ್ಷತೆಯನ್ನು ವಹಿಸಲು ನನಗೆ ನೀಡಿರುವ ಆಹ್ವಾನಕ್ಕಾಗಿ ನಾನು ಪ್ರಾಯೋಜಕರಿಗೆ ಮತ್ತು ಸಂಘಟಕರಿಗೆ ನನ್ನ ಕೃತಜ್ಞತೆಯನ್ನು ಅರ್ಪಿಸುತ್ತೇನೆ. ನಾನು ಅವರ ಆಹ್ವಾನವನ್ನು ಒಪ್ಪಿಕೊಳ್ಳಲು ನನಗೆ ಎರಡು ಕಾರಣಗಳಿದ್ದವು. ಮೊದಲನೆಯದಾಗಿ, ಬೇಸಾಯಗಾರರ ಕುಟುಂಬದಿಂದ ಬಂದಿರುವ ನನಗೆ, ವೈಯಕ್ತಿಕವಾಗಿ ತೋಟಗಾರಿಕೆಯಲ್ಲಿ, ಹಣ್ಣುಗಳನ್ನು ಸಂರಕ್ಷಿಸುವತ್ತ ಸಹಜವಾಗಿಯೇ ಆಸಕ್ತಿಯಿದೆ ಮತ್ತು ಈ ಆಸಕ್ತಿಯು ನಾನು ಕೃಷಿ ಸಚಿವನಾದ ಮೇಲೆ ಮತ್ತೂ ಅಧಿಕವಾಯಿತು. ಎರಡನೆಯದಾಗಿ. ಈ ಸಂದರ್ಭವು ನನಗೆ ತಮ್ಮನ್ನು ಹಣ್ಣು ಮತ್ತು ತರಕಾರಿಗಳ ಸಂರಕ್ಷಣೆಯ ಕ್ಷೇತ್ರಕ್ಕೆ ಅರ್ಪಿಸಿಕೊಂಡಿರುವ ಅನೇಕ ಪ್ರತಿಭಾವಂತ ವಿಜ್ಞಾನಿಗಳನ್ನೂ, ಆಹಾರ ತಂತ್ರಜ್ಞರನ್ನೂ ಮತ್ತು ಸಂಶೋಧನಾ ವಿದ್ವಾಂಸರನ್ನೂ ಭೇಟಿಮಾಡುವ ಒಂದು ಸಂತಸದ ಅವಕಾಶವನ್ನು ಕೊಟ್ಟಿದೆ. ಇವರಿಂದ ನಾನು ಬಹಳ ವಿಷಯಗಳನ್ನು ಕಲಿತುಕೊಳ್ಳಬಹುದು. ಭಾರತದಲ್ಲಿನ ಹಣ್ಣುಗಳ ಉತ್ಪಾದನೆ ವರ್ಷಕ್ಕೆ 60ರಿಂದ 65 ಲಕ್ಷ ಟನ್ನುಗಳಷ್ಟು ಇದೆ. ಇಷ್ಟು ಅತ್ಯಲ್ಪವಾದ ಉತ್ಪಾದನೆಯಲ್ಲಿಯೂ, ಸರಿಯಾದ ಸಂರಕ್ಷಣಾ ಸೌಲಭ್ಯಗಳು ಇಲ್ಲದ ಕಾರಣದಿಂದ ಸುಮಾರು ಶೇ. 20ರಷ್ಟು ಭಾಗ ಹಾಳಾಗುತ್ತಿದೆ. ಉತ್ಪಾದನೆಯಲ್ಲಿನ ನಮ್ಮ ಹಿಂದುಳಿದಿರುವಿಕೆ ಮತ್ತು ಡಬ್ಬಗಳಲ್ಲಿ ಹಾಕಿದ ಸಂಸ್ಕರಿಸಿದ ಹಣ್ಣು ಮತ್ತು ತರಕಾರಿಗಳ ಉಪಯೋಗವನ್ನು ಬಿಟ್ಟರೂ, ಉಳಿದಂತೆ ತಲಾವಾರು ತಾಜಾ ಹಣ್ಣುಗಳ ಸೇವನೆಯ ಅಲ್ಪ ಪ್ರಮಾಣ – ಇವು, ಪಾಶ್ಚಿಮಾತ್ಯ ದೇಶಗಳಿಗೆ ಹೋಲಿಸಿದಾಗ ಕಣ್ಣಿಗೆ ರಾಚುವ ಹಾಗೆ ಕಾಣುತ್ತದೆ. ನಮ್ಮ ದೇಶದ ಜನಸಂಖ್ಯೆಯ

ಅರ್ಧದಷ್ಟೂ ಜನಸಂಖ್ಯೆಯಿಲ್ಲದ ಅಮೆರಿಕ ಸಂಯುಕ್ತ ಸಂಸ್ಥಾನಗಳಲ್ಲಿ ವರ್ಷಕ್ಕೆ ಅರವತ್ತು ಲಕ್ಷ ಟನ್ನುಗಳಷ್ಟು ಸಂಸ್ಕರಿಸಿದ ಹಣ್ಣುಗಳನ್ನು ಉತ್ಪಾದಿಸಿದರೆ, ನಮ್ಮ ದೇಶದಲ್ಲಿ ಅದರ ಪ್ರಮಾಣ ಐವತ್ತು ಸಾವಿರ ಟನ್ನುಗಳನ್ನೂ ಮುಟ್ಟುವುದಿಲ್ಲವೆಂಬ ಅಂಶ ನಿರಾಶೆಯನ್ನು ಹುಟ್ಟಿಸುತ್ತದೆ. ಪ್ರಪಂಚದ ಇತರ ಮುಂದುವರಿದ ದೇಶಗಳ ಮಟ್ಟವನ್ನು ತಲುಪುವುದಕ್ಕೆ ಭಾರತವು ಸಾಕಷ್ಟು ದೂರವನ್ನು ಈ ದಿಶೆಯಲ್ಲಿ ಕ್ರಮಿಸಬೇಕಾಗಿದೆ. ಈ ಅಗಾಧವಾದ ಸಮಸ್ಯೆಗೆ ಸಾಕಷ್ಟು ಪರಿಹಾರವನ್ನು ಕಂಡುಕೊಳ್ಳುವಲ್ಲಿ ಈ ಸಮ್ಮೇಳನದಲ್ಲಿ ನಡೆಯುವ ಚರ್ಚೆಗಳು ಬಹಳ ಉಪಯುಕ್ತವಾಗಿರುತ್ತವೆಯೆಂದು ನಾನು ಆಶಿಸುತ್ತೇನೆ. ಹಣ್ಣುಗಳನ್ನು ಬೆಳೆಯುವುದನ್ನು ಅಭಿವೃದ್ಧಿಪಡಿಸುವುದಕ್ಕೆ ಮತ್ತು ಅವುಗಳನ್ನು ಸಂರಕ್ಷಿಸುವುದಕ್ಕೆ ನಾವು ಹೆಚ್ಚಿನ ಗಮನವನ್ನು, ಯೋಜನೆಗಳ ಮೂಲಕ ಆರ್ಥಿಕ ಪ್ರಗತಿಯನ್ನು ಸಾಧಿಸುವ ಈ ಸಮಯದಲ್ಲಿ, ನೀಡಬೇಕು. ವೈಜ್ಞಾನಿಕ ರೀತಿಯಲ್ಲಿ ಹಣ್ಣುಗಳ ಕೃಷಿಯನ್ನು ಮಾಡುವ ಪ್ರದೇಶಗಳನ್ನು ವಿಸ್ತರಿಸಲು ಎಲ್ಲಾ ವಿಧವಾದ ನೆರವನ್ನೂ ನೀಡಿ ಪ್ರೋತ್ಸಾಹಿಸಬೇಕು. ಇದಲ್ಲದೆ, ಆಸ್ಟ್ರೇಲಿಯಾ, ಕೆನಡಾ, ಅಮೆರಿಕಾ ಸಂಯುಕ್ತ ಸಂಸ್ಥಾನಗಳು, ಮತ್ತು ದಕ್ಷಿಣ ಆಫ್ರಿಕಾ ದೇಶಗಳಲ್ಲಿ ನೀಡುವ ಸೌಲಭ್ಯಗಳನ್ನು, ಇಲ್ಲಿಯೂ ಹಣ್ಣುಗಳನ್ನು ಸಂಸ್ಕರಿಸುವವರಿಗೆ ನಾವು ನೀಡುವಂತಾಗಬೇಕು. ಫಲಸಂಸ್ಕರಣಾ ಉದ್ಯಮವನ್ನು ಅಭಿವೃದ್ಧಿಪಡಿಸುವುದರಿಂದ ಸಮೃದ್ಧಿಯ ಕಾಲದಲ್ಲಿ ದೊರಕುವ ಹಣ್ಣುಗಳು ಹಾಳಾಗದಂತೆ ಕಾಪಾಡಿ ತನ್ಮೂಲಕ ಬೆಳೆಗಾರರ ಆರ್ಥಿಕ ಸಮಸ್ಯೆಗಳಿಗೂ ಕಡಿವಾಣವನ್ನು ಹಾಕಬಹುದು. ಜನತೆಗೆ ವರ್ಷಪೂರ್ತಿ ಹಣ್ಣುಗಳನ್ನು ಮತ್ತು ಹಣ್ಣುಗಳಿಂದ ಮಾಡಿದ ಪದಾರ್ಥಗಳನ್ನು ಕಡಿಮೆ ಬೆಲೆಯಲ್ಲಿ ಒದಗಿಸಿದರೆ, ಅವರ ಆಹಾರದಲ್ಲಿನ ಪೌಷ್ಟಿಕತೆಯ ಮಟ್ಟ ಉತ್ತಮಗೊಳ್ಳುವುದರಲ್ಲಿ ಸಂದೇಹವೇ ಇರುವುದಿಲ್ಲ. ಅಪೌಷ್ಟಿಕತೆಯು ನಮ್ಮ ದೇಶದಲ್ಲಿನ ಸಾರ್ವಜನಿಕ ಆರೋಗ್ಯ ಕ್ಷೇತ್ರದಲ್ಲಿನ ಹಲವಾರು ಪ್ರಮುಖ ಸಮಸ್ಯೆಗಳಲ್ಲಿ ಒಂದಾಗಿದೆ. ಪೌಷ್ಟಿಕತೆಯಲ್ಲಿನ ಕೊರತೆಯನ್ನು ನೀಗಿಸಲು ನಾವು ತೋಟಗಾರಿಕೆ ಮತ್ತು ಫಲಸಂರಕ್ಷಣೆಯ ಉದ್ದಿಮೆಯನ್ನು ಪ್ರೋತ್ಸಾಹಿಸಬೇಕು ಎಂದು ನಾನು ಭಾವಿಸುತ್ತೇನೆ.

ಕೃಷಿ, ಪಶುಸಂಗೋಪನೆ, ಮೀನುಗಾರಿಕೆ ಮತ್ತು ತೋಟಗಾರಿಕೆ ಇವು ನಮ್ಮ ಆಹಾರೋತ್ಪಾದನೆಯ ಕ್ಷೇತ್ರಗಳು. ಇಂಗ್ಲೆಂಡ್, ಫ್ರಾನ್ಸ್, ರಷ್ಯಾ, ಮತ್ತು

ಇತರ ಪಾಶ್ಚಾತ್ಯ ದೇಶಗಳಲ್ಲಿ ಈ ಕ್ಷೇತ್ರಗಳು ಆಹಾರೋತ್ಪಾದನೆಗಾಗಿ ಪರಸ್ಪರ ಪೂರಕವಾಗಿ ಕಾರ್ಯವನ್ನು ನಿರ್ವಹಿಸುತ್ತವೆ ಮತ್ತು ಅವುಗಳನ್ನು ಸಮಾನದೃಷ್ಟಿಯಿಂದ ನೋಡಲಾಗುತ್ತಿದೆ. ಉಳಿದ ಕ್ಷೇತ್ರಗಳು ಹೋಗಲಿ, ಕೃಷಿಕ್ಷೇತ್ರವೂ ನಮ್ಮ ದೇಶದಲ್ಲಿ ಇದುವರೆಗೂ ಸಂಪೂರ್ಣವಾಗಿ ಆಧುನಿಕೀಕರಣಗೊಂಡಿಲ್ಲ. ಉತ್ತಮ ಬೀಜಗಳನ್ನು ಉತ್ಪಾದಿಸಲು ಮತ್ತು ವಿತರಣೆ ಮಾಡಲು ಪ್ರತ್ಯೇಕವಾದ ಇಲಾಖೆಯನ್ನೇ ಕೇಂದ್ರ ಹಾಗೂ ರಾಜ್ಯಗಳ ಮಟ್ಟದಲ್ಲಿ ತೆರೆಯಬೇಕು ಎಂದು ನಾನು ಭಾವಿಸುತ್ತೇನೆ.

ಹಣ್ಣು ಮತ್ತು ತರಕಾರಿಗಳನ್ನು ಸಮೃದ್ಧವಾಗಿ ಸರಬರಾಜು ಮಾಡಿದರೆ, ಅಪೌಷ್ಟಿಕತೆಯ ಅಥವಾ ಪೌಷ್ಟಿಕತೆಯ ಕೊರತೆಯ ಸಮಸ್ಯೆಯನ್ನು ನಾವು ಪರಿಹರಿಸಬಹುದು. ಮೈಸೂರು ರಾಜ್ಯದಲ್ಲಿ ಸರಕಾರಿ ಉದ್ಯಾನವನಗಳ ಉಸ್ತುವಾರಿಯನ್ನು ನಿರ್ದೇಶಕರೊಬ್ಬರು ನೋಡಿಕೊಳ್ಳುತ್ತಿದ್ದಾರೆ. ಬೇರೆಬೇರೆ ಪ್ರದೇಶಗಳ ವಾತಾವರಣಕ್ಕೆ ಸರಿಹೊಂದುವ ಹಣ್ಣುಗಳು ಮತ್ತು ತರಕಾರಿಗಳನ್ನು ಬೆಳೆಯುವ, ಮತ್ತು ಅವುಗಳ ಸಸ್ಯ ಅಥವಾ ಬೀಜಗಳನ್ನು ವಿತರಣೆ ಮಾಡುವ, ಸರಕಾರೀ ಹಣ್ಣು ಮತ್ತು ತರಕಾರಿ ತೋಟಗಳನ್ನು ನೋಡಿಕೊಳ್ಳುವ ಹಾಗೂ ಈ ನಿಟ್ಟಿನಲ್ಲಿ ಖಾಸಗಿಯವರನ್ನೂ ತೊಡಗಿಸಿಕೊಳ್ಳುವ ಹೆಚ್ಚುವರಿ ಕರ್ತವ್ಯವನ್ನೂ ಈ ಅಧಿಕಾರಿಗೆ ವಹಿಸುವ ಆಲೋಚನೆ ಸರಕಾರಕ್ಕಿದೆ. ನಾನು ಮೇಲೆ ಹೇಳಿದ ಎಲ್ಲಾ ಕರ್ತವ್ಯಗಳನ್ನೂ ನಿರ್ವಹಿಸಲು ಪ್ರತ್ಯೇಕವಾದ ತೋಟಗಾರಿಕಾ ಇಲಾಖೆಯನ್ನು ಮೂರನೆಯ ಪಾಂಚವಾರ್ಷಿಕ ಯೋಜನೆಯ ಅವಧಿಯಲ್ಲಿಯೇ ತೆರೆಯುವಂತೆ ಈ ಸಮ್ಮೇಳನವು ಕೇಂದ್ರ ಹಾಗೂ ರಾಜ್ಯ ಸರಕಾರಗಳನ್ನು ಒತ್ತಾಯಿಸಬೇಕು ಎಂದು ನಾನು ಸೂಚಿಸಬಯಸುತ್ತೇನೆ.

ಫಲಸಂರಕ್ಷಣಾ ಉದ್ದಿಮೆಯ ಪ್ರಗತಿಯು ಹಲವಾರು ಅಂಶಗಳ ಮೇಲೆ ನಿಂತಿದೆ. ಈ ಉದ್ಯಮದ ಸಮಸ್ಯೆಗಳು ಹೇಗಿವೆಯೆಂದರೆ, ಅವುಗಳನ್ನು ತಕ್ಷಣವೇ ಪರಿಹರಿಸಲು ಸಾಧ್ಯವಿಲ್ಲ. ಅವುಗಳೆಂದರೆ ಈ ಉದ್ಯಮದಲ್ಲಿರುವವರು ಮತ್ತು ಅದರಲ್ಲಿ ಆಸಕ್ತಿಯಿರುವವರಿಗೆ ಅಗತ್ಯವಾದ ತಾಂತ್ರಿಕ ಸಲಹೆಗಳನ್ನು ಪಡೆಯುವ ಅವಕಾಶ, ಆವಶ್ಯಕವಾದ ಯಂತ್ರೋಪಕರಣಗಳನ್ನು ವಿದೇಶದಿಂದ ಆಮದು ಮಾಡಿಕೊಳ್ಳುವುದು ಅಥವಾ ದೇಶೀಯವಾಗಿಯೇ ತಯಾರಿಸುವುದು,

ಸಕ್ಕರೆಯನ್ನು ಕಡಿಮೆ ಬೆಲೆಯಲ್ಲಿ ಒದಗಿಸುವುದು, ಶೈತ್ಯೀಕರಣದ ಸೌಲಭ್ಯವಿರುವ ಸಾಗಣೆ ವಾಹನಗಳನ್ನು ಒದಗಿಸುವುದು, ಹಾಗೂ ಮತ್ತಿತರ ಸಮಸ್ಯೆಗಳು, ಇತ್ಯಾದಿ.

ಈ ಉದ್ಯಮದ ಪ್ರಾಮುಖ್ಯವನ್ನು ಗುರುತಿಸಲಾಗಿದೆ ಮತ್ತು ಒಂದು ಒಳ್ಳೆಯ, ಪ್ರಮಾಣದ ದೃಷ್ಟಿಯಿಂದ ಅತಿ ಮಹತ್ವದಲ್ಲದಿದ್ದರೂ, ಪ್ರಾರಂಭವನ್ನು ಎರಡನೆಯ ಪಾಂಚವಾರ್ಷಿಕ ಯೋಜನೆಯಲ್ಲಿ ಮಾಡಲಾಗಿದೆ. ಮೂರನೆಯ ಪಾಂಚವಾರ್ಷಿಕ ಯೋಜನೆಯಲ್ಲಿ ಇದಕ್ಕೆ ಇನ್ನೂ ಹೆಚ್ಚಿನ ಪ್ರೋತ್ಸಾಹವನ್ನು ನೀಡಲಾಗುವುದು. ಈ ಅವಧಿಯಲ್ಲಿ ಒಂದು ಲಕ್ಷ ಟನ್ ಹಣ್ಣುಗಳ ಉತ್ಪಾದನೆಯಲ್ಲಿ ಹದಿನೈದು ಸಾವಿರ ಟನ್‌ಗಳಷ್ಟು ಹಣ್ಣನ್ನು ರಫ್ತುಮಾಡಬೇಕೆಂಬ ಗುರಿಯನ್ನು ಹಾಕಿಕೊಳ್ಳಲಾಗಿದೆ. ತರಕಾರಿಗಳ ಮತ್ತು ಫಲಸಂರಕ್ಷಣೆಯ ಕಲೆಯನ್ನು ಕುಟೀರ ಕೈಗಾರಿಕೆಗಳಿಗೆ ನೀಡಬೇಕೆಂಬ ಉದ್ದೇಶದಿಂದ ಬೆಳೆಗಾರರಿಗೆ, ಸಮುದಾಯ ಯೋಜನೆ, ಮತ್ತು ರಾಷ್ಟ್ರೀಯ ವಿಸ್ತರಣಾ ಯೋಜನೆಯ ಅಡಿಯಲ್ಲಿ ನೀಡಲು ಯೋಚಿಸಲಾಗಿದೆ. ರಾಜ್ಯ ಸರಕಾರವು, ಮೂರನೆಯ ಪಾಂಚವಾರ್ಷಿಕ ಯೋಜನೆಯ ಅವಧಿಯಲ್ಲಿ ಇಂತಹ ಐವತ್ತು ತರಬೇತಿ ಕೇಂದ್ರಗಳನ್ನು ತೆರೆಯುತ್ತದೆ. ಇವಲ್ಲದೆ, ಫಲಸಂರಕ್ಷಣಾ ಉದ್ಯಮವು ಅಧಿಕ ಉತ್ಪಾದನೆಗೆ ಬಲವನ್ನು ತುಂಬಲು ಇನ್ನಿತರ ಪ್ರಸ್ತಾಪಗಳೂ, ಯೋಜನೆಗಳೂ ಇವೆ. ಶೈತ್ಯಾಗಾರಗಳ ಬೇಡಿಕೆಯನ್ನು ಪೂರೈಸಲು ಬಹಳಷ್ಟು ಸೌಲಭ್ಯಗಳನ್ನು ಒದಗಿಸಲು ಸಿದ್ಧತೆಗಳು ನಡೆದಿವೆ ಮತ್ತು ಫಲಸಂರಕ್ಷಣಾ ಉದ್ಯಮಕ್ಕೆ ಅಗತ್ಯವಾದ ಪೂರಕ ಉದ್ದಿಮೆಗಳನ್ನು ಬೆಳೆಸಲು ಕೂಡ ಗಮನವನ್ನು ಹರಿಸಲಾಗಿದೆ. ಹಣ್ಣು ಮತ್ತು ತರಕಾರಿಗಳನ್ನು ಜನಪ್ರಿಯಗೊಳಿಸುವುದರ ಜೊತೆಗೆ, ವಿದೇಶಗಳಲ್ಲಿಯೂ ಅವುಗಳ ಮಾರಾಟವನ್ನು ಮಾಡುವ ವ್ಯವಸ್ಥೆಯನ್ನು ಮಾಡುತ್ತಿರುವುದು ಹರ್ಷದಾಯಕ ಸಂಗತಿ.

ಉದ್ದೇಶಿತ ಹಲವಾರು ಯೋಜನೆಗಳನ್ನು ಕಾರ್ಯಗತಗೊಳಿಸಿದರೆ, ಫಲಸಂರಕ್ಷಣಾ ಉದ್ಯಮವು ಭಾರತದ ಜನತೆಯ ಬೇಡಿಕೆಯನ್ನು ಪೂರೈಸುವುದರ ಜೊತೆಗೆ, ಸದ್ಯದಲ್ಲಿಯೇ ಸಾಕಷ್ಟು ವಿದೇಶೀ ವಿನಿಮಯವನ್ನು ಗಳಿಸಲೂ ಶಕ್ತವಾಗುತ್ತದೆ ಎಂಬುದನ್ನು ತೋರಿಸಿಕೊಡುತ್ತದೆ ಎಂದು ನಾನು ಆಶಿಸುತ್ತೇನೆ.

## ♦ ತಂಬಾಕು ಸಂಶೋಧನೆ ಮತ್ತು ಅಭಿವೃದ್ಧಿ

**ಕೃಷಿಯ ಬೆಳೆಯಲ್ಲಿ ತೋಟದ ರಾಜ ತಂಬಾಕು. ಇದೊಂದು ವಾಣಿಜ್ಯ ಬೆಳೆ. ೧೯೭೧ರ ಸೆಪ್ಟೆಂಬರ್ ೮ರಂದು ಮೈಸೂರು ಜಿಲ್ಲೆಯ ಹುಣಸೂರಿನ ತಂಬಾಕು ಸಂಶೋಧನಾ ಕೇಂದ್ರದ ಉದ್ಘಾಟನಾ ಸಮಾರಂಭದಲ್ಲಿ ಮಾಡಿದ ಅಧ್ಯಕ್ಷ ಭಾಷಣದ ಸಂಕ್ಷಿಪ್ತ ಸಾರಾಂಶ.**

ಗಾಂಧಿಜಯಂತಿಯ ಸಪ್ತಾಹದ ಅವಧಿಯಲ್ಲಿ ನಾವು ಈ ಸಂಶೋಧನಾ ಕೇಂದ್ರವನ್ನು ಪ್ರಾರಂಭಿಸುತ್ತಿರುವುದು ಹರ್ಷದಾಯಕ ವಿಷಯ. ಇದನ್ನು ನಮ್ಮ ರಾಷ್ಟ್ರಪಿತ ಪೂಜ್ಯ ಮಹಾತ್ಮ ಗಾಂಧಿಯವರ ನೆನಪಿಗೆ ಅರ್ಪಿಸಿರುವುದು ಸೂಕ್ತವಾಗಿಯೇ ಇದೆ ಮತ್ತು ಇದರ ಸತತವಾದ ಯಶಸ್ಸಿಗೆ ಮಹಾತ್ಮರ ಆಶೀರ್ವಾದವನ್ನು ಬೇಡೋಣ.

ನಮ್ಮ ರಾಷ್ಟ್ರೀಯ ಜೀವನದಲ್ಲಿ ತಂಬಾಕು ಒಂದು ಪ್ರಮುಖ ಬೆಳೆಯಾಗಿ ನಿಂತಿದೆ. ಅದಕ್ಕೆ ನಮ್ಮ ಕೃಷಿಯ ಮತ್ತು ಕೈಗಾರಿಕೆಯ ಆರ್ಥಿಕತೆಯಲ್ಲಿ ಮುಖ್ಯವಾದ ಪಾತ್ರವಿದೆ. ತಂಬಾಕನ್ನು ಬೆಳೆಯುವುದರಲ್ಲಿ ಭಾರತವು ಜಗತ್ತಿನಲ್ಲಿ ಮೂರನೆಯ ರಾಷ್ಟ್ರವಾಗಿದೆ ಮತ್ತು ಭಾರತದಲ್ಲಿ ಮೈಸೂರು ಮೂರನೆಯ ಸ್ಥಾನವನ್ನು ಪಡೆದಿದೆ. ರಫ್ತು ಮಾರುಕಟ್ಟೆಯಿಂದ ತಂಬಾಕು ದೇಶಕ್ಕೆ ವಾರ್ಷಿಕ 15 ಕೋಟಿ ರೂಗಳ ವಿದೇಶೀ ವಿನಿಮಯವನ್ನು ತಂದುಕೊಡುತ್ತಿದೆ. ಕೇಂದ್ರದ ಖಜಾನೆಗೆ ಉತ್ಪಾದನಾ ಸುಂಕದ ರೂಪದಲ್ಲಿ ಸುಮಾರು 51 ಕೋಟಿ ರೂಗಳ ಆದಾಯವನ್ನು ತುಂಬುತ್ತಿದೆ. ಹೆಚ್ಚು ಉತ್ಪಾದನಾ ಸುಂಕವನ್ನು ತಂದುಕೊಡುವ ಪದಾರ್ಥಗಳಲ್ಲಿ ಇದರ ಸ್ಥಾನ ಮೂರನೆಯದು. ಇಷ್ಟಾದರೂ ನಮ್ಮ ರಫ್ತು ಒಟ್ಟು ಉತ್ಪಾದನೆಯಲ್ಲಿ ಶೇ 14 ಭಾಗ ಮಾತ್ರ. ಆದ್ದರಿಂದ ಇನ್ನೂ ಅಧಿಕ ಪ್ರಮಾಣದ ತಂಬಾಕನ್ನು ರಫ್ತುಮಾಡಲು ಸಾಕಷ್ಟು ಅವಕಾಶಗಳಿವೆ. ಆದರೆ ನಮಗೆ ಇಲ್ಲಿ ಎದುರಾಗುವುದು ಅಂತರರಾಷ್ಟ್ರೀಯ ಮಟ್ಟದಲ್ಲಿನ ಸ್ಪರ್ಧೆ. ಉತ್ತಮ ಗುಣ ಮಟ್ಟ ಮತ್ತು ಅಧಿಕ ಉತ್ಪಾದನೆಗಳಿಂದ ಮಾತ್ರ ಇದನ್ನು ನಾವು ಎದುರಿಸಬಹುದು. ಇದಕ್ಕೆ ಸತತ ಪ್ರಯತ್ನ ಮತ್ತು ವೈಜ್ಞಾನಿಕ ತಂತ್ರಗಳು ಆವಶ್ಯಕ. ರಾಷ್ಟ್ರೀಯ ಮಟ್ಟದಲ್ಲಿ ತಂಬಾಕಿನ ಉತ್ಪಾದನೆ ಎಕರೆಗೆ ಸರಾಸರಿ 600

ಪೌಂಡುಗಳಿದ್ದರೆ, ಹುಣಸೂರು ತಾಲ್ಲೂಕಿನಲ್ಲಿ ಅದರ ಪ್ರಮಾಣ 1,000 ಪೌಂಡ್‌ಗಳಷ್ಟಿದೆ. ಇದು ಮನಸ್ಸಿಗೆ ಮುದಕೊಡುವ ವಿಷಯ. ಇದರಿಂದ ನಮ್ಮ ಸಂಶೋಧನೆಯನ್ನು ಈ ಕ್ಷೇತ್ರದಲ್ಲಿ ಇನ್ನೂ ಮುಂದುವರಿಸಿ, ಅಮೆರಿಕ ಸಂಯುಕ್ತ ಸಂಸ್ಥಾನಗಳ ಸರಾಸರಿಯಾದ 1,600 ಪೌಂಡ್‌ಗಳು ಅಥವಾ ಕೆನಡಾದ ಸರಾಸರಿಯಾದ 1,200 ಪೌಂಡ್‌ಗಳ ಆಜುಬಾಜಿಗಾದರೂ ಹೋಗುವುದಕ್ಕೆ ಪ್ರಯತ್ನಿಸಬೇಕು.

ಭಾರತ ಕೇಂದ್ರೀಯ ತಂಬಾಕು ಸಮಿತಿಯು ತನ್ನ ಪ್ರಗತಿ ಮತ್ತು ಯಶಸ್ಸಿನ ಹಾದಿಯಲ್ಲಿ ಉತ್ತಮವಾದ ದಾಖಲೆಯನ್ನು ನಿರ್ಮಿಸಿದೆ ಮತ್ತು ಹುಣಸೂರಿನಲ್ಲಿ ದೊರೆಯುವ ಪ್ರಕೃತಿದತ್ತವಾದ ಅನುಕೂಲಕರ ಪರಿಸ್ಥಿತಿಯಿಂದ ಅದು ಇನ್ನೂ ಹೆಚ್ಚಿನದನ್ನು ಸಾಧಿಸುತ್ತದೆ ಎಂಬುದು ನಿಸ್ಸಂಶಯ. ಈ ಸಮಿತಿಗೆ ಒಳ್ಳೆಯದಾಗಲಿ.

ಸಿಗರೆಟ್ ತಂಬಾಕು ಅಲ್ಪಾವಧಿಯ ಬೆಳೆಯಾಗಿದ್ದು, ಬತ್ತ ಅಥವಾ ನೀರಾವರಿ ರಾಗಿ ಬೆಳೆಗಳ ಪರ್ಯಾಯವಾಗಿ ಬೆಳೆಯಲು ಅದು ಸೂಕ್ತವಾಗಿದೆ. ತಂಬಾಕಿಗೆ ಹಾಕಿದ್ದ ಗೊಬ್ಬರಗಳಿಂದ ಮತ್ತು ತಂಬಾಕು ಸಸ್ಯದ ಕೂಳೆ ಹಾಗೂ ಇತರ ಉಳಿಕೆಗಳಿಂದಾಗಿ, ಈ ಬೆಳೆಯ ನಂತರ ಬೆಳೆಯುವ ಆಹಾರಧಾನ್ಯದ ಬೆಳೆಗಳು ಉತ್ತಮ ಫಸಲನ್ನು ನೀಡುತ್ತವೆ.

ಆರ್ಥಿಕತೆಯು ಸುಭದ್ರವಾಗಿರುವ ದೇಶಗಳಲ್ಲಿ ಹದಗೊಳಿಸಿ ಮಿಶ್ರಣಮಾಡುವುದಕ್ಕಾಗಿ ಉತ್ತಮ ಗುಣಮಟ್ಟದ ತಂಬಾಕಿಗೆ ಅಧಿಕ ಬೇಡಿಕೆಯಿದೆ. ಇದು ಅಧಿಕ ಪ್ರಮಾಣದಲ್ಲಿ ಮತ್ತು ಉತ್ತಮ ಗುಣಮಟ್ಟದ ತಂಬಾಕಿನ ಸತತ ಉತ್ಪಾದನೆಗೆ ಉತ್ತಮ ಪ್ರೋತ್ಸಾಹವನ್ನು ಒದಗಿಸುತ್ತದೆ. ಸಿಗರೆಟ್ ತಂಬಾಕು ಈಗ ಬೆಂಗಳೂರು, ತುಮಕೂರು, ಕೋಲಾರ, ಮಂಡ್ಯ ಮತ್ತು ಚಿತ್ರದುರ್ಗ ಜಿಲ್ಲೆಗಳಲ್ಲಿ ಬೆಳೆಯಲ್ಪಡುತ್ತಿದೆ. ಅದನ್ನು ಹುಣಸೂರಿನಂತಹ ಅರೆ-ಮಲೆನಾಡು ಪ್ರದೇಶಗಳಲ್ಲಿ ಬೆಳೆಯುವ ಸಾಧ್ಯತೆಗಳ ಬಗ್ಗೆ ಈಗ ಗಮನಹರಿಸಲಾಗುತ್ತಿದೆಯೆಂಬುದು ತೃಪ್ತಿಯ ವಿಷಯ. ಕರಾವಳಿ ಪ್ರದೇಶಗಳಲ್ಲಿಯೂ ಇದನ್ನು ಬೆಳೆಯುವ ಸಾಧ್ಯತೆಗಳನ್ನು ಪರಿಶೀಲಿಸಬೇಕೆಂದು ನಾನು ಸೂಚಿಸುತ್ತೇನೆ. ತಂಬಾಕನ್ನು ಸಂಪೂರ್ಣವಾಗಿ ವಾಣಿಜ್ಯ ಬೆಳೆಯನ್ನಾಗಿಯೂ, ಮತ್ತು ಬೆಳೆಗಳ ಪರ್ಯಾಯದಲ್ಲಿ

ಆಹಾರ ಧಾನ್ಯಗಳ ಮಧ್ಯೆ ನೀರಾವರಿ ಪ್ರದೇಶಗಳಲ್ಲಿ ಪರ್ಯಾಯ ಬೆಳೆಯನ್ನಾಗಿಯೂ ಪರಿಗಣಿಸಿ ಬೆಳೆಯುವ ಸಾಧ್ಯತೆಗಳನ್ನೂ ಗಮನಿಸಬೇಕು.

ಈ ಸಂದರ್ಭದಲ್ಲಿ ಮತ್ತೂ ಒಂದು ಅಂಶವನ್ನು ನಾವು ಗಮನಿಸಬೇಕು. ಅದೆಂದರೆ ತಂಬಾಕಿನ ವ್ಯವಸಾಯ ಮತ್ತು ಅದನ್ನು ಸಂಸ್ಕರಿಸುವ ಕೈಗಾರಿಕೆ ಎರಡರಲ್ಲೂ ಮಹಿಳಾ ಕಾರ್ಮಿಕರನ್ನು ಹೆಚ್ಚು ಹೆಚ್ಚಾಗಿ ನೇಮಿಸಿಕೊಳ್ಳುತ್ತಾರೆ. ಹಾಗೆ ಅವರನ್ನು ನೇಮಿಸಿಕೊಳ್ಳುವವರು, ಕೃಷಿಕಾರ್ಮಿಕರು ದೇಶದ ನಿಜವಾದ ಸಂಪತ್ತು ಮತ್ತು ಕನಿಷ್ಠ ವೇತನವನ್ನಾದರೂ ನೀಡುವ ಮತ್ತು ಇನ್ನೂ ಒಂದು ಹೆಜ್ಜೆ ಮುಂದೆಹೋಗಿ, ಅವರಿಗೆ ಇತರ ಸೌಲಭ್ಯಗಳನ್ನೂ ಒದಗಿಸುವ ಮೂಲಕ ಅವರ ಹಿತಾಸಕ್ತಿಗಳನ್ನು ಕಾಪಾಡಬೇಕು ಎನ್ನುವುದನ್ನು ಮನಗಾಣಬೇಕು.

ತಂಬಾಕು ಜೀವನದ ಅತ್ಯಾವಶ್ಯಕ ವಸ್ತುವಲ್ಲ. ಅದರೆ ಆಯಾಸವನ್ನು ಪರಿಹರಿಸುವ ಅದರ ಗುಣದಿಂದ, ದಿನದ ಶ್ರಮಪೂರ್ಣ ದುಡಿಮೆಯ ನಂತರ, ಅಥವಾ ದುಡಿಮೆಯ ಅವಧಿಯಲ್ಲಿ ಮಧ್ಯೆ ಮಧ್ಯೆ, ವೃದ್ಧರು–ಯುವಕರು, ಗಂಡಸರು–ಹೆಂಗಸರು ಎಲ್ಲರೂ ಧೂಮಪಾನ ಮಾಡುವ ಮೂಲಕವಾಗಿಯೋ, ನಶ್ಯದಂತೆ ಸೇದಿಕೊಳ್ಳಲೋ, ಅಥವಾ ಅಗಿಯುವುದಕ್ಕೋ ಉಪಯೋಗಿಸುವುದರಿಂದ ಅದರ ಸ್ಥಾನವು ಬಹಳ ಎತ್ತರದಲ್ಲಿದೆ. ಪಾನನಿಷೇಧವು ಜಾರಿಗೆ ಬಂದ ನಂತರ ಆಯಾಸಪರಿಹಾರಕ್ಕಾಗಿ ತಂಬಾಕಿನ ಮೇಲೆ ಹೆಚ್ಚು ಹೆಚ್ಚು ಜನರು ಅವಲಂಬಿತರಾಗುತ್ತಿದ್ದಾರೆ ಎಂದು ಕೇಳಿದ್ದೇನೆ. ಪಾರಂಪರಿಕ ವೈದ್ಯರ ಉಗ್ರ ಖಂಡನೆಯ ಹೊರತಾಗಿಯೂ, ಕಾರಣಗಳು ಏನೇ ಇದ್ದರೂ, ಒಂದಲ್ಲ ಒಂದು ರೀತಿಯಲ್ಲಿ, ತಂಬಾಕಿನ ಸೇವನೆಯ ಪ್ರಮಾಣ ಎಲ್ಲಾ ವಯೋಮಾನದವರಲ್ಲಿಯೂ, ಎಲ್ಲಾ ವರ್ಗಗಳವರಲ್ಲಿಯೂ ತನ್ನ ಬೇಡಿಕೆಯನ್ನು ಹೆಚ್ಚಿಸಿಕೊಳ್ಳುತ್ತಿದೆ ಎಂಬ ವಿಷಯವನ್ನಂತೂ ಯಾರೂ ತಳ್ಳಿಹಾಕುವಂತೆಯೇ ಇಲ್ಲ. ನಮ್ಮ ದೇಶದಲ್ಲಿ ತಂಬಾಕಿಗೆ ಉತ್ತಮವಾದ ಭವಿಷ್ಯವಿದೆ.

ಮೈಸೂರು ರಾಜ್ಯವು ದೇಶದಲ್ಲಿ ಅತಿ ಹೆಚ್ಚು ತಂಬಾಕನ್ನು ಬೆಳೆಯುವ ರಾಜ್ಯಗಳಲ್ಲಿ ಮೂರನೆಯ ಸ್ಥಾನವನ್ನು ಪಡೆದಿರುವುದು ಸಂತಸದ ವಿಷಯ. ಆದರೆ ಉತ್ಪಾದಕತೆಯ ಪ್ರಮಾಣದ ದೃಷ್ಟಿಯಿಂದ ನಮ್ಮ ರಾಜ್ಯದೇಶದ ಉತ್ಪಾದನೆಯಲ್ಲಿ ಹತ್ತನೆಯ ಒಂದು ಭಾಗವನ್ನು ಉತ್ಪಾದಿಸುತ್ತಿದೆ. ಮೂರನೆಯ

ಪಾಂಚವಾರ್ಷಿಕ ಯೋಜನೆಯ ಅವಧಿಯಲ್ಲಿ, ಉತ್ತಮವಾದ ಬೀಜ, ಒಳ್ಳೆಯ ತಳಿಯ ಸಸ್ಯಗಳನ್ನು ಒದಗಿಸುವ ಉದ್ದೇಶವಿರುವುದರಿಂದ ತಂಬಾಕಿನ ಉತ್ಪಾದನೆಯು ಇನ್ನೂ ಹೆಚ್ಚಾಗುತ್ತದೆ ಎಂದು ಆಶಿಸಹುದು. ಇದನ್ನು ಬೆಳೆಯುವ ಜಮೀನಿನ ವ್ಯಾಪ್ತಿಯೂ ಹೆಚ್ಚುತ್ತದೆ ಮತ್ತು ಅದರಿಂದ ಬರುವು ಗಳಿಕೆಯೂ ಹೆಚ್ಚುತ್ತದೆ ಎಂದು ನಿರೀಕ್ಷಿಸಲಾಗಿದೆ.

ನಮ್ಮ ಮುಂದೆ ಕಟುಸತ್ಯವನ್ನು ಇಟ್ಟುಕೊಂಡು ನಾವು ಚರ್ಚಿಸಬೇಕು. ಮೊದಲನೆಯದಾಗಿ, ತಂಬಾಕು ಬೆಳೆಯುವ ಪ್ರದೇಶಗಳ ವಿಸ್ತೀರ್ಣದಲ್ಲಿ ಹೆಚ್ಚಳ; ಎರಡನೆಯದಾಗಿ, ಸುಧಾರಿತ ಬೀಜ, ಗೊಬ್ಬರ ಹಾಗೂ ವೈಜ್ಞಾನಿಕ ರೀತಿಯಲ್ಲಿ ಪೋಷಿಸುವುದು; ಮೂರನೆಯದಾಗಿ, ಪ್ರಪಂಚದಲ್ಲಿಯೇ ಉತ್ತಮ ಗುಣಮಟ್ಟದ ತಂಬಾಕನ್ನು ಬೆಳೆಯುವ ಸಂಕಲ್ಪ. ಇವೆಲ್ಲವನ್ನೂ ಸಾಧಿಸುವುದು ಒಂದು ಅಂಶದ ಮೇಲೆ ಅವಲಂಬಿತವಾಗಿರುತ್ತದೆ. ಅದು, ಕಾರ್ಮಿಕರನ್ನು ತೃಪ್ತರನ್ನಾಗಿರಿಸುವುದು. ಏಕೆಂದರೆ ಕಡೆಯಲ್ಲಿ, ಸಂಘಟಿತ ಸಮಾಜದಲ್ಲಿ ಎಲ್ಲದರ ಫಲವೂ ದುಡಿಮೆಯನ್ನೇ ಅವಲಂಬಿಸಿರುತ್ತದೆ.

## ♦ ಕೃಷಿ ವಿಶ್ವವಿದ್ಯಾನಿಲಯದ ಸ್ಥಾಪನೆ ಮೂಲಕ ವ್ಯವಸಾಯ ಪ್ರಗತಿ

**ಕರ್ನಾಟಕದ ಕನಸಿನ ಕೂಸು ಕೃಷಿ ವಿಶ್ವವಿದ್ಯಾನಿಲಯ. ಅದನ್ನು ಸ್ಥಾಪಿಸಿದ ಕೀರ್ತಿ ರಾಚಯ್ಯನವರಿಗೆ ಸೇರಿದ್ದು. 1962ರ ಜನವರಿ 6 ರಂದು ಹೆಬ್ಬಾಳನಲ್ಲಿ ಪಶುವೈದ್ಯಕೀಯ ಕಾಲೇಜಿನ ಕಟ್ಟಡದ ಉದ್ಘಾಟನೆಯ ಸಂದರ್ಭದಲ್ಲಿ ಮಾಡಿದ ಅಧ್ಯಕ್ಷ ಭಾಷಣ. ಮೈಸೂರಿನ ಮಾನ್ಯ ರಾಜ್ಯಪಾಲರಾದ ಶ್ರೀ ಜಯಚಾಮರಾಜೇಂದ್ರ ಒಡೆಯರ್ ಅವರು ಕಾಲೇಜಿನ ಕಟ್ಟಡದ ಉದ್ಘಾಟನೆಯನ್ನು ಮಾಡಿದರು.**

ರಾಜ್ಯದಲ್ಲಿರುವ ಮೊದಲ ಹಾಗೂ ಏಕಮೇವ ಪಶುವೈದ್ಯಕೀಯ ಕಾಲೇಜಿನ ಹೊಸ ಕಟ್ಟಡವನ್ನು ಮಾನ್ಯ ರಾಜ್ಯಪಾಲರು ಔಪಚಾರಿಕವಾಗಿ ಉದ್ಘಾಟಿಸುತ್ತಿರುವುದು ಅತ್ಯಂತ ಸೂಕ್ತವಾಗಿದೆ. ಮಾನ್ಯ ರಾಜ್ಯಪಾಲರ ಹಿಂದಿನ ತಲೆಮಾರಿನವರು ತಮ್ಮ ಆದರ್ಶಪ್ರಾಯವಾದ ಆಳ್ವಿಕೆಯಲ್ಲಿ ದನಗಳ ಅಭಿವೃದ್ಧಿಗೆಂದೇ ಒಂದು ಪ್ರತ್ಯೇಕ ಇಲಾಖೆಯನ್ನು ತೆರೆದಿದ್ದರು. ಶ್ರೀಮಾನ್ ಚಿಕ್ಕದೇವರಾಜ ಒಡೆಯರ್ ಅವರು ಈ ಇಲಾಖೆಯನ್ನು ಪ್ರಾರಂಭಿಸಿದುದಷ್ಟೇ ಅಲ್ಲದೆ, ಅದನ್ನು ಇತರ ಪ್ರಮುಖ ಇಲಾಖೆಗಳ ಮಟ್ಟಕ್ಕೆ ಏರಿಸಿದರು. ಹೈದರ್ ಮತ್ತು ಟಿಪ್ಪೂ ಸುಲ್ತಾನನ ಅವಧಿಯಲ್ಲಿ ಇದು ಬಹಳ ಪ್ರಾಮುಖ್ಯವನ್ನು ಪಡೆಯಿತು ಎನ್ನುವುದು ನಿಜ. ಆದರೆ ಶ್ರೀಮಾನ್ ಚಿಕ್ಕದೇವರಾಜ ಒಡೆಯರ್ ಅವರ ಬೆನ್ನೆಚಾವಡಿಯಿಲ್ಲದಿದ್ದರೆ, ಟಿಪ್ಪೂ ಸುಲ್ತಾನನ ಅಮೃತ ಮಹಲ್ ಇಲಾಖೆಯು ಅಸ್ತಿತ್ವದಲ್ಲಿರುತ್ತಿತ್ತೇ ಎಂಬುದು ಅನುಮಾನ. ಟಿಪ್ಪೂ ಸುಲ್ತಾನನು ಮಾಡಿದ್ದೆಂದರೆ, ಚೆಂದವಾದ ಸ್ಥಳೀಯ ಹೆಸರನ್ನು ಬದಲಾಯಿಸಿ ಅದಕ್ಕೆ ಶಬ್ದಾಡಂಬರದ ನಾಮಕರಣ ಮಾಡಿದುದು.

ಶ್ರೀಮಾನ್ ಚಿಕ್ಕದೇವರಾಜ ಒಡೆಯರ ಕಾಲಕ್ಕೇ ಸರಕಾರದಲ್ಲಿ ಒಂದು ಪ್ರತ್ಯೇಕ ಇಲಾಖೆಯನ್ನು ಸ್ಥಾಪಿಸಿದ್ದಾರೆಂದರೆ, ಮೈಸೂರು ರಾಜ್ಯದಲ್ಲಿ ಜಾನುವಾರುಗಳ ತಳಿಯನ್ನು ಉತ್ತಮಗೊಳಿಸಲು ನೀಡುತ್ತಿದ್ದ ಮಹತ್ವವು ಎಂತಹುದು ಎಂಬುದನ್ನು ತಿಳಿಯಬಹುದು. ಈ ಇಲಾಖೆಯಲ್ಲಿಯೇ ವಿಖ್ಯಾತವಾದ ಅಮೃತ್ ಮಹಲ್ ತಳಿಯನ್ನು ಅಭಿವೃದ್ಧಿಪಡಿಸಲಾಗಿತ್ತು. ಈ

ತಳಿಯ ಉತ್ಕೃಷ್ಟತೆಯ ಬಗ್ಗೆ ವೆಲಿಂಗ್‌ಟನ್‌ನ ಡ್ಯೂಕ್ ತನ್ನ ಪತ್ರಗಳಲ್ಲಿ ಬಹಳವಾಗಿ ಶ್ಲಾಘಿಸಿದ್ದಾನೆ. ಫ್ರಾನ್ಸ್‌ನಲ್ಲಿ ತಾನು ನಡೆಸಿದ ಹೋರಾಟದಲ್ಲಿ ತನಗೇನಾದರೂ ಅಮೃತ ಮಹಲ್‌ಗಳ ಸಹಾಯವು ಸಿಕ್ಕಿದ್ದಿದ್ದರೆ, ತಾನು ನೆಪೋಲಿಯನ್‌ನನ್ನು ಇನ್ನೂ ಶೀಘ್ರವಾಗಿ ಸೋಲಿಸುತ್ತಿದ್ದೆ ಎಂದು ಒಂದು ಪತ್ರದಲ್ಲಿ ತಿಳಿಸಿದ್ದಾನೆ. ರಾಜ್ಯದಲ್ಲಿ ದನಗಳ ಸಾಕಣೆಗೆ ನೀಡುತ್ತಿದ್ದ ಪ್ರಾಧಾನ್ಯವನ್ನು ಮತ್ತೊಂದು ರಾಜ್ಯದ ನಡೆಯುವ ದನಗಳ ಜಾತ್ರೆಯ ಸಂಖ್ಯೆ. ಇದು ಹೆಮ್ಮೆ ಪಡುವಷ್ಟು ದೊಡ್ಡದಾಗಿದೆ. ರಾಜ್ಯದಲ್ಲಿ ಒಟ್ಟು 206 ದನಗಳ ಜಾತ್ರೆಯು ಪ್ರತಿವರ್ಷ ನಡೆಯುತ್ತಿದೆ. ದನಗಳ ಜಾತ್ರೆಯ ಸಂಖ್ಯೆಯ ಬಗ್ಗೆ ಮೈಸೂರು ಹೆಮ್ಮೆಯನ್ನು ತಾಳಿತ್ತು ಎಂಬ ಅಂಶವು ರಾಜ್ಯದಲ್ಲಿ ಇದ್ದ ದನಗಳ ಸಂಖ್ಯೆಯೂ ದೊಡ್ಡದಾಗಿದ್ದಿರಬೇಕೆಂದು ಊಹಿಸಲು ಅವಕಾಶವಿದೆ.

ಜಾನುವಾರುಗಳಿಗೆ ಇರುವ ಮಹತ್ವದ ಅರಿವಿನಿಂದಲೇ, ಸುಧಾರಿತ ತಳಿಗಳು, ರೋಗಗಳನ್ನು ತಡೆಗಟ್ಟುವುದು, ಮೊದಲಾದ ಅಭಿವೃದ್ಧಿ ಕಾರ್ಯಗಳನ್ನು ವ್ಯವಸ್ಥಿತವಾಗಿ ನೋಡಿಕೊಳ್ಳಲು ರಾಜ್ಯ ಪಶುಸಂಗೋಪನಾ ಇಲಾಖೆ ಒಂದು ವ್ಯಾಪಕವಾದ ಯೋಜನೆಯನ್ನು ಸಿದ್ಧಗೊಳಿಸಿದೆ. ಪಶುರೋಗಗಳನ್ನು ತಡೆಗಟ್ಟುವ ದೃಷ್ಟಿಯಿಂದ, ದೇಶದ ಈ ಭಾಗದಲ್ಲಿ ಸಾಮಾನ್ಯವಾಗಿ ಇರುವ ಪಶು ಹಾಗೂ ಕೋಳಿಗಳ ರೋಗಗಳಲ್ಲಿ ಹೆಚ್ಚಿನವುಗಳಿಗೆ ಪರಿಹಾರವನ್ನು ಅಭಿವೃದ್ಧಿಗೊಳಿಸುವಲ್ಲಿ ಈ ಇಲಾಖೆಯು ಪ್ರಶಂಸನೀಯುವಾದ ಪ್ರಗತಿಯುನ್ನು ಸಾಧಿಸಿದೆ. ರೋಗನಿಧಾನವನ್ನು ಕಂಡುಹಿಡಿಯಲು ಕ್ರಮಬದ್ಧವಾಗಿ, ಶೋಧನಾತ್ಮಕವಾಗಿ ರೋಗದ ಪರೀಕ್ಷೆಗಳನ್ನು ನಡೆಸಿ ರೋಗಗಳ ತಡೆಗೆ ಕ್ರಮಗಳನ್ನು ತೆಗೆದುಕೊಳ್ಳಲಾಗಿದೆ. ರಾಜ್ಯದ ರೋಗಗ್ರಸ್ತ ಜಾನುವಾರುಗಳಿಗೆ ಸೂಕ್ತ ಚಿಕಿತ್ಸೆಯನ್ನು ನೀಡಲು, ಗ್ರಾಮಾಂತರ ಪ್ರದೇಶಗಳಲ್ಲಿ ಪಶು ಔಷಧಶಾಲೆಗಳನ್ನು ತೆರೆಯಲಾಗಿದೆ. ಪ್ರಕೃತ ರಾಜ್ಯದಲ್ಲಿ 23,953 ಪ್ರಾಣಿಗಳಿಗೆ ಒಂದರಂತೆ ಪಶುರೋಗಗಳ ಔಷಧಾಲಯಗಳಿವೆ. ಮೂರನೆಯ ಪಾಂಚವಾರ್ಷಿಕ ಯೋಜನೆಯ ಅವಧಿಯಲ್ಲಿ ಇನ್ನೂ 50 ಅಂತಹಕೇಂದ್ರಗಳನ್ನು ಪ್ರಾರಂಭಿಸಲು ಮತ್ತು ಹಾಲಿ ಇರುವ 45 ಕೇಂದ್ರಗಳಿಗೆ ಹೆಚ್ಚುವರಿ ನೌಕರರನ್ನು ನೇಮಿಸಿ, ಕಟ್ಟಡಗಳನ್ನು ನೀಡಿ ಮತ್ತು ಇತರ ಸೌಲಭ್ಯಗಳನ್ನು ಕಲ್ಪಿಸಿ ಉತ್ತಮ ದರ್ಜೆಗೆ ಏರಿಸಲು ಯೋಜಿಸಲಾಗಿದೆ. ಪಶು ಔಷಧಾಲಯಗಳನ್ನು ತೆರೆಯುವುದರೊಂದಿಗೆ, ಉತ್ತಮ ತಳಿಯ

ಹೋರಿಗಳನ್ನು ಒದಗಿಸಲು, ಕೃತಕ ಗರ್ಭಧಾರಣಾ ಕೇಂದ್ರಗಳನ್ನು ಮತ್ತು ಉಪಕೇಂದ್ರಗಳನ್ನು ಪ್ರಾರಂಭಿಸಲು, ಹಳ್ಳಿಗಳ ಪ್ರಮುಖವಾದ ಯೋಜನೆಗಳನ್ನು ಕಾರ್ಯಗತಗೊಳಿಸಲು, ಪಶು ಆಹಾರ ಮತ್ತು ಮೇವುಗಳ ಆಕರಗಳನ್ನು ವೃದ್ಧಿಪಡಿಸಲು, ಹಂದಿ, ಕುರಿ ಮತ್ತು ಕೋಳಿ ಸಾಕಣೆಯನ್ನು ಅದರ ಜೊತೆಗೆ ಹಾಲು ಉತ್ಪಾದನಾ ವ್ಯವಸ್ಥೆಯನ್ನು ಅನುಷ್ಠಾನಕ್ಕೆ ತರಲು ಯೋಜನೆಗಳನ್ನು ಸಿದ್ಧಪಡಿಸಲಾಗಿದೆ. ಈ ಯೋಜನೆಗಳಲ್ಲೆಲ್ಲಾ ಅತಿ ಮಹತ್ವದ ಯೋಜನೆಯೆಂದರೆ ಜಾನುವಾರುಗಳ ತಳಿಯನ್ನು ಉತ್ತಮಗೊಳಿಸಲು ಮತ್ತು ರೋಗಗಳನ್ನು ತಡೆಗಟ್ಟಲು ನಮ್ಮ ಯುವಕರಿಗೆ ನೀಡುವ ತರಬೇತಿ.

ಜಾನುವಾರುಗಳ ಅಭಿವೃದ್ಧಿ ರಾಜ್ಯದಲ್ಲಿ ಯಾವಾಗಲೂ ಹೆಚ್ಚಿನ ಗಮನವನ್ನು ಪಡೆದುಕೊಂಡಿದ್ದರೂ, ಮತ್ತು ಪಶುಸಂಗೋಪನಾ ಇಲಾಖೆಯು ಹಲವಾರು ಹೆಮ್ಮೆಯ ಸಾಧನೆಗಳನ್ನು ಮಾಡಿದ್ದರೂ, ರಾಜ್ಯದಲ್ಲಿ ಪಶುವೈದ್ಯಕೀಯ ಕಾಲೇಜು ಮೂರು ವರ್ಷಗಳ ಹಿಂದಿನವರೆಗೂ ಇಲ್ಲದಿದ್ದುದದರಿಂದ ರಾಜ್ಯವು ಒಂದು ರೀತಿಯಲ್ಲಿ ಪಾರ್ಶ್ವವಾಯುವಿಕೆ ತುತ್ತಾಗಿದ್ದ ಹಾಗೆ ಇತ್ತು. ಬಹಳ ಹಿಂದಿನಿಂದಲೂ ಪಶುವೈದ್ಯ ಶಿಕ್ಷಣಕ್ಕಾಗಿ ಇದ್ದ ಬೇಡಿಕೆಯನ್ನು ಪೂರೈಸಲು, ಮೈಸೂರು ರಾಜ್ಯವು ಪಶುವೈದ್ಯಕೀಯ ಕಾಲೇಜೊಂದನ್ನು ಪ್ರಾರಂಭಿಸಲು ತೀರ್ಮಾನಮಾಡಿತು. ಕೇಂದ್ರ ಸರಕಾರದ ಉದಾರ ಧನಸಹಾಯದಿಂದ ಅಸ್ತಿತ್ವಕ್ಕೆ ಬಂದ ಈ ಪಶುವೈದ್ಯಕೀಯ ಕಾಲೇಜನ್ನು 1958ರ ಜುಲೈ 25ರಂದು ನಮ್ಮ ಮುಖ್ಯಮಂತ್ರಿಗಳಾದ ಶ್ರೀ ಬಿ.ಡಿ. ಜತ್ತಿಯವರು ಉದ್ಘಾಟಿಸಿದರು ಮತ್ತು 1959–60ರ ಶೈಕ್ಷಣಿಕ ವರ್ಷದಿಂದ ವೃತ್ತಿಪೂರ್ವ ವ್ಯಾಸಂಗವು ಪ್ರಾರಂಭವಾಯಿತು. ಮೊದಲನೆಯ ವರ್ಷದ ಬಿ.ವಿ.ಎಸ್‌ಸಿಗೆ 80 ಮಂದಿ ವಿದ್ಯಾರ್ಥಿಗಳಿಗೆ, ಅದರಲ್ಲಿ ಶೇ.25ನ್ನು ಇತರ ಸರಕಾರಗಳಿಂದ ನಾಮಕರಣಗೊಂಡವರಿಗೆ, ಪ್ರವೇಶವನ್ನು ನೀಡಬೇಕೆಂದು ತೀರ್ಮಾನಿಸಿದ್ದರೂ, ರಾಜ್ಯದ ವಿದ್ಯಾರ್ಥಿಗಳಿಂದ ಬಂದ ಉತ್ತಮವಾದ ಪ್ರತಿಕ್ರಿಯೆಯಿಂದ ಹಾಗೂ ಪಶುಸಂಗೋಪನಾ ಇಲಾಖೆಯಲ್ಲಿದ್ದ ತಾಂತ್ರಿಕ ಸಿಬ್ಬಂದಿಯ ಕೊರತೆಯನ್ನು ನಿವಾರಿಸಲು ಸ್ಥಾನಗಳ ಸಂಖ್ಯೆಯನ್ನು 100ಕ್ಕೆ ಏರಿಸಲಾಯಿತು. ಈಗ, ವೃತ್ತಿಪೂರ್ವ ವಿದ್ಯಾರ್ಥಿಗಳನ್ನೂ ಸೇರಿಸಿ ಒಟ್ಟು ವಿದ್ಯಾರ್ಥಿಗಳ ಸಂಖ್ಯೆಯು 300ನ್ನು ಮುಟ್ಟಿದೆ. ಈ ಕಾಲೇಜು 1958ರಲ್ಲಿಯೇ ಪ್ರಾರಂಭವಾದರೂ ಅದಕ್ಕೆ ತನ್ನದೇ ಆದ ಸ್ವಂತ ಕಟ್ಟಡವಿರಲಿಲ್ಲ. ಕಟ್ಟಡವನ್ನು

ಕಟ್ಟಿಕೊಡಲು, ಯೋಜಿಸಿ ವಿಳಂಬಮಾಡದೆ, ಕಾರ್ಯವನ್ನು ಪ್ರಾರಂಭಿಸಲಾಯಿತು. ಈ ದಿಸೆಯಲ್ಲಿ ಕೇಂದ್ರ ಸರಕಾರವು ನೀಡಿದ ಸಹಾಯಕ್ಕೆ ನಾವು ಕೃತಜ್ಞರಾಗಿದ್ದೇವೆ ಮತ್ತು, ವಿದ್ಯಾರ್ಥಿನಿಲಯವನ್ನೂ ಒಳಗೊಂಡಂತೆ ಮುಖ್ಯ ಕಟ್ಟಡಗಳನ್ನುದಾಖಲೆಯ ಸಮಯದಲ್ಲಿ ನಿರ್ಮಿಸಲಾಗಿದೆ. ಇಂದು ಉದ್ಘಾಟನೆಗೊಳ್ಳುತ್ತಿರುವ ಕಾಲೇಜಿನ ಹಾಗೂ ವಿದ್ಯಾರ್ಥಿನಿಲಯಗಳು ಭವ್ಯವಾಗಿ ಕಾಣಿಸುತ್ತಿವೆ. 75 ಎಕರೆಯಷ್ಟು ವಿಶಾಲವಾದ ಜಾಗದಲ್ಲಿ, 43 ಲಕ್ಷ ರೂಗಳ ವೆಚ್ಚದಲ್ಲಿ ಕಟ್ಟಲಾಗಿರುವ ಈ ಕಾಲೇಜು ಮತ್ತು ಅದರ ಪ್ರಯೋಗಶಾಲೆಗಳು ತಮ್ಮಲ್ಲಿ ಅತ್ಯಾಧುನಿಕ ಉಪಕರಣಗಳಿವೆ ಎಂದು ಹೆಮ್ಮೆಪಡಬಹುದು. ಈ ಕಾಲೇಜಿಗೆ ಸೇರಿದಹಾಗೆ ಉತ್ತಮವಾಗಿ ಯೋಜಿಸಿದ ಪಶುವೈದ್ಯಶಾಲೆ, ಅತಿಥಿ ಗೃಹ, ಸಭಾಂಗಣ, ಕ್ಲಬ್, ಉಪಹಾರಗೃಹ, ಕಾರ್ಯಾಗಾರ, ಆಟದ ಮೈದಾನ ಮತ್ತು ಸಿಬ್ಬಂದಿಯ ವಸತಿಗೃಹಗಳು ಇವೆ. ಇದು ವಸತಿ ವಿದ್ಯಾಸಂಸ್ಥೆಯಾದುದರಿಂದ, 250 ವಿದ್ಯಾರ್ಥಿಗಳು ಇರಲು ಅನುಕೂಲವಾಗುವಂತೆ ವಿದ್ಯಾರ್ಥಿನಿಲಯವನ್ನು ಕಟ್ಟಲಾಗುತ್ತಿದೆ. ಕಟ್ಟುವ ಕೆಲಸವು ಬಹುತೇಕ ಮುಗಿದಿದೆ ಮತ್ತು ಕೇವಲ ಮುಖ್ಯ ಕಟ್ಟಡದ ಹಿಂಬದಿಯ ಕಟ್ಟಡಗಳ ಕೆಲಸ ನಡೆಯುತ್ತಿದೆ. ಈ ಕೆಲಸವೂ ಇನ್ನೇನು ಮುಗಿಯಲಿದ್ದು ಕಾಲೇಜಿನ ಎಲ್ಲಾ ಚಟುವಟಿಕೆಗಳು ಶೀಘ್ರದಲ್ಲಿಯೇ ಹೊಸ ಕಟ್ಟಡಗಳಲ್ಲಿ ನಡೆಯಲಿವೆ. ಹೆಬ್ಬಾಳಿನಲ್ಲಿರುವ ಕಾಲೇಜಿನ ಈ ಹೊಸಕಟ್ಟಡವು ಇರುವ ಜಾಗವು ಬಹಳ ಅನುಕೂಲಕರವಾಗಿದೆ. ಬೆಂಗಳೂರಿನಲ್ಲಿ ಹಾಲಿ ಇರುವ ಪಶುವೈದ್ಯ ಚಿಕಿತ್ಸಾಲಯಗಳಲ್ಲಿ ಪ್ರಾಯೋಗಿಕ ತರಬೇತಿಯನ್ನು ಪಡೆಯಬಹುದು, ಮತ್ತು ಪಶುವೈದ್ಯ ಆಸ್ಪತ್ರೆಗಳಲ್ಲಿ ತಳಿ ಅಭಿವೃದ್ಧಿ, ಕೃಷಿಕ್ಷೇತ್ರಗಳ ವ್ಯವಸ್ಥೆ, ಮೇವನ್ನು ಬೆಳೆಯುವುದು, ಇತ್ಯಾದಿಗಳನ್ನು ಕಲಿಯಬಹುದು, ಮತ್ತು ಹೆಸರಘಟ್ಟದಲ್ಲಿರುವ ಸಂಶೋಧನಾ ಕೇಂದ್ರದಲ್ಲಿ ಸಂಯುಕ್ತ ಜಾನುವಾರು ಮತ್ತು ಕೃಷಿಕ್ಷೇತ್ರಗಳ ಬಗ್ಗೆ ತಿಳಿದುಕೊಳ್ಳಬಹುದು. ಕಾಲೇಜು ನೀಡುವ ಸೌಲಭ್ಯಗಳಲ್ಲಿ ಒಂದಾದ ಸುಸಜ್ಜಿತ ಗ್ರಂಥಾಲಯದಲ್ಲಿ ಪಶುವೈದ್ಯಕ್ಕೆ ಸಂಬಂಧಿಸಿದ ಸುಮಾರು 2000 ಪುಸ್ತಕಗಳು ಇವೆ. ಇವುಗಳಲ್ಲಿ 12,000 ರೂಗಳ ವೆಚ್ಚದಲ್ಲಿ ಟಿ.ಸಿ.ಎಮ್ ವ್ಯವಸ್ಥೆಯ ಅಡಿಯಲ್ಲಿ ತರಿಸಿದ 350 ಪುಸ್ತಕಗಳೂ ಸೇರಿವೆ. ಮುಂದಿನ ಶೈಕ್ಷಣಿಕ ವರ್ಷದಲ್ಲಿ ಪುಸ್ತಕಗಳ ಸಂಖ್ಯೆಯನ್ನು ಟಿ.ಸಿ.ಎಮ್‌ನ ಸಹಕಾರದೊಂದಿಗೆ, 4,000ಕ್ಕೆ ಏರಿಸುವ ಯೋಜನೆಯಿದೆ. 350 ಪುಸ್ತಕಗಳನ್ನು

ನೀಡಿದ ಟಿ.ಸಿ.ಎಮ್ ಈ ಕಾಲೇಜಿನ ಸಿಬ್ಬಂದಿಗೆ ಉನ್ನತ ಮಟ್ಟದ ತರಬೇತಿಯನ್ನು ನೀಡಲು ಕೂಡ ಒಪ್ಪಿಕೊಂಡಿದೆ. ಈ ಕಾರ್ಯಕ್ರಮದ ಅಡಿಯಲ್ಲಿ ಈಗಾಗಲೇ ನಮ್ಮ ಕಾಲೇಜಿನ ಆರು ಮಂದಿ ಸಿಬ್ಬಂದಿಗಳು ಉನ್ನತ ಮಟ್ಟದ ತರಬೇತಿಯನ್ನು ಪಡೆದುಕೊಂಡಿದ್ದಾರೆ ಮತ್ತು ಸದ್ಯದಲ್ಲಿಯೇ ಇನ್ನೂ ಕೆಲವು ಮಂದಿಗೆ ಇದರ ವ್ಯವಸ್ಥೆಯನ್ನು ಮಾಡಲಾಗಿದೆ. ಕಾಲೇಜಿನ ಬೋಧಕ ವರ್ಗದ ಸಿಬ್ಬಂದಿಗಳಲ್ಲಿ ಸುಮಾರು ಶೇ 80ರಷ್ಟು ಜನರು ಸ್ನಾತಕೋತ್ತರ ತರಬೇತಿಯನ್ನು ಭಾರತದಲ್ಲಿ ಹಾಗೂ ಹೊರದೇಶಗಳಲ್ಲಿ ಪಡೆದಿದ್ದಾರೆಂಬುದು ತೃಪ್ತಿಯನ್ನು ತರುವ ಅಂಶ. ರಾಜ್ಯದಲ್ಲಿರುವ ಪಶುವೈದ್ಯ ಸಂಸ್ಥೆಗಳ ಬೇಡಿಕೆಯನ್ನು ಪೂರೈಸಲು ಅಭ್ಯರ್ಥಿಗಳಿಗೆ ಸ್ಟಾಕ್‌ಮೆನ್‌ಗಳಾಗಿ ತರಬೇತಿಯನ್ನು ನೀಡಲು ಸ್ಟಾಕ್‌ಮೆನ್ ಟ್ರೈನಿಂಗ್ ಕೋರ್ಸ್‌ನ್ನು 1960–61ನೆಯ ಸಾಲಿನಲ್ಲಿ ಪ್ರಾರಂಭಿಸಲಾಗಿದೆ. ಮೂರನೆಯ ಪಾಂಚವಾರ್ಷಿಕ ಅವಧಿಯಲ್ಲಿ ಪಶುಯವೈದ್ಯಕೀಯದಲ್ಲಿ ಪದವಿಯನ್ನು ಪಡೆದು ಹೊರಬರುವವರ ಸಂಖ್ಯೆ 250ರ ಆಸುಪಾಸಿನಲ್ಲಿರುತ್ತದೆ. ಇದೇ ಸಂದರ್ಭದಲ್ಲಿ ಮತ್ತೊಂದು ಅಂಶವನ್ನೂ ನಾನು ಹೇಳಬೇಕು. ಈ ಕಾಲೇಜು ಆದಷ್ಟು ಬೇಗ ಪಶುಸಂಗೋಪನೆಯಲ್ಲಿ ಮತ್ತು ಪಶುವೈದ್ಯ ವಿಜ್ಞಾನದಲ್ಲಿ ಸ್ನಾತಕೋತ್ತರ ಪದವಿ ತರಗತಿಗಳನ್ನು ಪ್ರಾರಂಭಿಸುವ ಪ್ರಸ್ತಾಪವನ್ನು ಮುಂದೆ ಇಟ್ಟಿದೆ.

ಕಾಲೇಜಿನ ಕಟ್ಟಡದ ಒಟ್ಟು ಖರ್ಚು 43 ಲಕ್ಷ ರೂಗಳಷ್ಟಾಗುವ ನಿರೀಕ್ಷೆಯಿದೆ. ಕೇಂದ್ರ ಸರಕಾರವು ನೀಡಿರುವ ಧನಸಹಾಯ ಮತ್ತು ಸಾಲಗಳ ಒಟ್ಟು ಮೊತ್ತವು 28 ಲಕ್ಷ ರೂಗಳು. ಇದಲ್ಲದೆ ಭಾರತ–ಅಮೆರಿಕಾ ಸಾಂಸ್ಥಿಕ ಒಪ್ಪಂದದ ಅಡಿಯಲ್ಲಿ ಟೆನೆಸ್ಸಿ ವಿಶ್ವವಿದ್ಯಾನಿಲಯವು ಯಂತ್ರೋಪಕರಣಗಳ ಖರ್ಚನ್ನು ನೀಡುತ್ತದೆ. ಭಾರತ ಸರಕಾರಕ್ಕೆ ಮತ್ತು ಟೆನೆಸ್ಸಿ ವಿಶ್ವವಿದ್ಯಾನಿಲಯಕ್ಕೆ ಅವರು ನೀಡಿರುವ ಉದಾರ ಧನಸಹಾಕ್ಕಾಗಿ ನಾನು ರಾಜ್ಯ ಸರಕಾರದ ಪರವಾಗಿ ಕೃತಜ್ಞತೆಯನ್ನು ಈ ಸಂದರ್ಭದಲ್ಲಿ ಅರ್ಪಿಸುತ್ತಿದ್ದೇನೆ.

ರಾಜ್ಯದಲ್ಲಿ ಪಶುವೈದ್ಯ ಶಿಕ್ಷಣದ ಹಾಗೂ ಪಶುಸಂಗೋಪನೆಯ ಸೇವೆಯ ಅಭಿವೃದ್ಧಿಯಲ್ಲಿ ಈ ಕಾಲೇಜು ಒಂದು ಮೈಲಿಗಲ್ಲಾಗಿದೆ. ಉಳಿದೆಲ್ಲಾ ಸೇವೆಗಳಲ್ಲಿರುವಂತೆ ಇಲ್ಲಿಯ ಪ್ರಗತಿಯು ಕೂಡ ನುರಿತ ಸಿಬ್ಬಂದಿಗಳು

ದೊರಕುವುದರ ಮೇಲೆ ಅವಲಂಬಿತವಾಗಿರುತ್ತದೆ. ಪಶುವೈದ್ಯ ಔಷಧಾಲಯಗಳಂತಹವುಗಳನ್ನು ಸುಲಭವಾಗಿ ಪ್ರಾರಂಭಿಸಬಹುದು. ನುರಿತ ಸಿಬ್ಬಂದಿಗಳಿಲ್ಲದಿದ್ದರೆ ಇವು ಒಂದು ದಿನವೂ ನಡೆಯುವುದಿಲ್ಲ. ಅಭಿವೃದ್ಧಿಯಲ್ಲಿ ತರಬೇತಿ ಪಡೆದ ನುರಿತ ಸಿಬ್ಬಂದಿಗಳು ಅತ್ಯಗತ್ಯವಾಗಿರುವುದರಿಂದ ಈ ಪಶುವೈದ್ಯಕೀಯ ಕಾಲೇಜು ಪ್ರಮುಖ ಪಾತ್ರವನ್ನು ವಹಿಸುತ್ತದೆ. ಪಶುಸಂಗೋಪನೆಯ ಕ್ಷೇತ್ರದಲ್ಲಿನ ಚಟುವಟಿಕೆಗಳ ಗತಿಯ ಹೆಚ್ಚಳವು ತರಬೇತಿ ಪಡೆದ ಸಿಬ್ಬಂದಿಯ ಹೆಚ್ಚಳದ ಮೇಲೆ ಅವಲಂಬಿಸಿರುವ ಹಾಗೆಯೇ, ತರಬೇತಿ ಪಡೆದ ಶಿಕ್ಷಕರ ಸಮಸ್ಯೆಯು ಅಪ್ರತ್ಯಕ್ಷವಾಗಿ ಕೃಷಿಯ ಅಭಿವೃದ್ಧಿಯ ಮೇಲೆ ನಿಂತಿರುತ್ತದೆ. ಎಲ್ಲರಿಗೂ ತಿಳಿದಿರುವಂತೆ ನಮ್ಮ ಆರ್ಥಿಕತೆಯಲ್ಲಿ ಕೃಷಿಯು ಪ್ರಮುಖ ಪಾತ್ರವನ್ನು ವಹಿಸುತ್ತದೆ. ನಮ್ಮ ಜನತೆಯ ಬಹುಪಾಲು ತಮ್ಮ ಜೀವನ ನಿರ್ವಹಣೆಗೆ ಕೃಷಿಯನ್ನು ಅವಲಂಬಿಸಿರುವವರೆಗೆ, ನಮ್ಮ ರೈತರು ಜಾನುವಾರುಗಳನ್ನು ಕನಿಷ್ಠ ಮುಂದಿನ 50 ವರ್ಷಗಳವರೆಗಾದರೂ ಅವಲಂಬಿಸಿರಬೇಕು, ಏಕೆಂದರೆ ಕೃಷಿಯಲ್ಲಿ ದೊಡ್ಡ ಪ್ರಮಾಣದಲ್ಲಿ ಯಾಂತ್ರೀಕರಣವಾಗುವುದು ಸದ್ಯಕ್ಕೆ ಸಾಧ್ಯವಿಲ್ಲ. ಭೂಮಿತಿ ಕಾನೂನನ್ನು ಜಾರಿಗೆ ತಂದರೆ, ಈಗಾಗಲೇ ನಮ್ಮಿಂದ ದೂರದಲ್ಲಿರುವ ಯಾಂತ್ರೀಕರಣದ ಸಾಧ್ಯತೆಯು, ನಾವು ಸಂಪೂರ್ಣವಾಗಿ ಸಹಕಾರಿ ಕೃಷಿಯನ್ನು ಅವಲಂಬಿಸದಿದ್ದರೆ, ಇನ್ನು ಮುಂದೆ, ಇನ್ನೂ ದೂರಕ್ಕೆ ಹೋಗುತ್ತದೆ. ಹಸುವು ಒಳ್ಳೆಯ ಹಾಗೂ ಆರೋಗ್ಯಪೂರ್ಣ ಎತ್ತುಗಳನ್ನು ನಮಗೆ ನೀಡುತ್ತದೆ ಮತ್ತು ಪೌಷ್ಟಿಕ ಆಹಾರವಾದ ಹಾಲನ್ನೂ ಕೊಡುತ್ತದೆ. ಹಸುವು ರಾಜ್ಯದಲ್ಲಿ ಹಾಲಿನ ಉತ್ಪನ್ನಗಳ ಉದ್ದಿಮೆಗೂ ಅವಕಾಶವನ್ನು ಕಲ್ಪಿಸುತ್ತದೆ. ಈ ಉದ್ದಿಮೆಯು ಮೊದಲನೆಯ ಪಂಚವಾರ್ಷಿಕ ಯೋಜನೆಯಲ್ಲಾಗಲೀ, ಅಥವಾ ಎರಡನೆಯ ಪಂಚವಾರ್ಷಿಕ ಯೋಜನೆಯಲ್ಲಾಗಲೀ ಸಾಕಷ್ಟು ಪ್ರಾಧಾನ್ಯವನ್ನು ಪಡೆಯಲಿಲ್ಲ. ತನ್ನ ಇತರ ಗುರಿಗಳ ಜೊತೆಗೆ, ಮೂರನೆಯ ಪಂಚವಾರ್ಷಿಕ ಯೋಜನೆಯು, (1) ಎಲ್ಲರಿಗೂ ತಲಾ 10 ಔನ್ಸ್‌ಗಳಷ್ಟು ಹಾಲು ದೊರೆಯುವಷ್ಟು ಉತ್ಪಾದನೆಯನ್ನು ಸಾಧಿಸುವ, (2) ಕೈಗಾರಿಕಾ ಪ್ರದೇಶಗಳಿಗೆ ಮತ್ತು ಒಂದು ಲಕ್ಷಕ್ಕೂ ಹೆಚ್ಚು ಜನಸಂಖ್ಯೆಯಿರುವ ನಗರಗಳಿಗೆ ಶುದ್ಧ ಹಾಲನ್ನು ಸರಬರಾಜು ಮಾಡುವ, (3) ಒಂದು ಲಕ್ಷಕ್ಕೂ ಹೆಚ್ಚು ಜನಸಂಖ್ಯೆಯಿರುವ ನಗರಗಳಲ್ಲಿರುವ ದನಗಳನ್ನು ನೈರ್ಮಲ್ಯದ ದೃಷ್ಟಿಯಿಂದ

ಅಲ್ಲಿಂದ ಹೊರಹಾಕುವುದು, (4) ಉತ್ತಮ ಗುಣಮಟ್ಟದ ಬೆಣ್ಣೆ, ತುಪ್ಪ ಮತ್ತಿತರ ಹಾಲಿನ ಉತ್ಪಾದನೆಗಳನ್ನು ಒದಗಿಸುವುದು, ಮತ್ತು, (5) ಹಾಲು ಉತ್ಪಾದಕರ ಸಹಕಾರಿ ಸಂಘಗಳನ್ನು ಸ್ಥಾಪಿಸಲು ಸಹಾಯಮಾಡುವುದು, ಇವನ್ನು ಗುರಿಯಾಗಿ ಹೊಂದಿದೆ. ಈಗಾಗಲೇ ಗೊತ್ತುಮಾಡಿಕೊಂಡಿರುವ ಖರ್ಚುಗಳನ್ನು ಹೊರತುಪಡಿಸಿ, ಇದಕ್ಕೆ ಅಂದಾಜು ಮಾಡಿರುವ ವೆಚ್ಚವು ಸುಮಾರು 175 ಲಕ್ಷ ರೂಗಳಾಗಿವೆ. ಪ್ರತಿಯೊಂದೂ ದಿನಕ್ಕೆ 25,000 ಪೌಂಡ್ ಹಾಲನ್ನು ಸಂಸ್ಕರಿಸುವ ಸಾಮರ್ಥ್ಯದ ನಾಲ್ಕು ಹಾಲು ಸರಬರಾಜು ಯೋಜನೆಗಳನ್ನು ರಾಜ್ಯದಲ್ಲಿ ರೂಪಿಸಲಾಗಿದೆ. ಇವುಗಳನ್ನು ಮೈಸೂರು, ದಾವಣಗೆರೆ, ಬೆಳಗಾಂ ಮತ್ತು ಗುಲ್ಬರ್ಗಾಗಳಲ್ಲಿ 32 ಲಕ್ಷರೂಗಳ ವೆಚ್ಚದಲ್ಲಿ ಸ್ಥಾಪಿಸಲಾಗುವುದು. ಬೆಂಗಳೂರಿನಲ್ಲಿರುವ ಬೆಂಗಳೂರು ಹಾಲು ಸರಬರಾಜು ಯೋಜನೆಯ ಬದಲಿಗೆ ಬೆಂಗಳೂರು ಡೈರಿ ಯೋಜನೆಯನ್ನು, ಯುನಿಸೆಫ್‌ನ ನೆರವನ್ನೂ ಒಳಗೊಂಡಂತೆ ಒಟ್ಟು 1.5 ಕೋಟಿ ರೂಗಳ ವೆಚ್ಚದಲ್ಲಿ ಜಾರಿಗೆತರಲಾಗುವುದು. ಇದರ ಯೋಜಿತ ಸಾಮರ್ಥ್ಯ ಪ್ರಾರಂಭದಲ್ಲಿ ದಿನಕ್ಕೆ 50,000 ಲೀಟರ್‌ಗಳಿದ್ದು ಮುಂದಿನ ಎರಡರಿಂದ ಮೂರು ವರ್ಷಗಳಲ್ಲಿ 1,50,000 ಲೀಟರ್‌ಗಳಷ್ಟನ್ನು ಸಾಧಿಸಲಾಗುವುದು. ಇವು ಮೂರನೆಯ ಯೋಜನೆಯಲ್ಲಿ ಸೇರಿಸಲ್ಪಟ್ಟಿರುವ ಇತರ ಹಾಲು ಸರಬರಾಜು ಯೋಜನೆಗಳು ಪಶುವೈದ್ಯ ಪದವೀಧರರನ್ನು ಬೇಡುತ್ತವೆ. ಇಷ್ಟೊಂದು ಪಶುವೈದ್ಯ ಪದವೀಧರರನ್ನು ನೀಡುವುದು ಈ ಕಾಲೇಜಿಗೆ ಸಾಧ್ಯವಿಲ್ಲವಾದರೂ, ರಾಜ್ಯದಲ್ಲಿ ಈಗಾಗಲೇ ಇರುವ ಎರಡು ಸ್ಟಾಕ್‌ಮೆನ್ ತರಬೇತಿ ಕೇಂದ್ರಗಳು ಮತ್ತು ಸದ್ಯದಲ್ಲಿಯೇ ಪ್ರಾರಂಭವಾಗಲಿರುವ ಮೂರು ಕೇಂದ್ರಗಳು ಮೂರನೆಯ ಯೋಜನೆಯ ಸಂಪೂರ್ಣ ಬೇಡಿಕೆಯನ್ನು ಪೂರೈಸಲು ಶಕ್ತವಾಗಿರುತ್ತವೆ.

ಇತ್ತೀಚಿನ ಶಾಸನಸಭೆಯ ಅಧಿವೇಶನದಲ್ಲಿ ಹಸುಗಳ ರಕ್ಷಣೆಗಾಗಿ ಮಸೂದೆಯೊಂದನ್ನು ಅಂಗೀಕರಿಸಲಾಯಿತು. ಅದು ಸದ್ಯದಲ್ಲಿಯೇ ಕಾನೂನಾಗಿ ಹೊರಬರಲಿದೆ. ರಾಜ್ಯದಲ್ಲಿ ಪಶುಸಂಗೋಪನೆಯ ಚರಿತ್ರೆಯಲ್ಲಿ ಇದೂ ಒಂದು ಮುಖ್ಯ ಮೈಲಿಗಲ್ಲಾಗಿದೆ. ನಾವು ತೆಗೆದುಕೊಂಡ ಈ ಕ್ರಮದಿಂದ, ತರಬೇತಿ ಪಡೆದ ಪಶುವೈದ್ಯಕೀಯ ಸಿಬ್ಬಂದಿಗಳಿಗೆ ಬೇಡಿಕೆ ಇನ್ನೂ ಹೆಚ್ಚಾಗುತ್ತದೆ ಎಂಬುದನ್ನು ನಾನು ಮತ್ತೆ ಬಿಡಿಸಿ ಹೇಳಬೇಕಿಲ್ಲ.

ಹೊಸ ಕಟ್ಟಡದಲ್ಲಿ ತನ್ನ ಕಾರ್ಯವನ್ನು ಪ್ರಾರಂಭಿಸಿರುವ ಈ ಕಾಲೇಜು, ಪಶುಸಂಗೋಪನೆಯಲ್ಲಷ್ಟೇ ಅಲ್ಲದೆ ರಾಜ್ಯದ ಕೃಷಿಕ್ಷೇತ್ರದಲ್ಲಿಯೂ ಪ್ರಮುಖ ಪಾತ್ರವನ್ನು ನಿರ್ವಹಿಸಲಿದೆ. ನಾನಾಗಲೇ ಹೇಳಿದಂತೆ, ಈ ಕಾಲೇಜು ಅನುಕೂಲಕರ ಸ್ಥಳದಲ್ಲಿ ಇದೆ ಮತ್ತು ಸುಸಜ್ಜಿತವಾಗಿದೆ. ಆದ್ದರಿಂದ ಇದು ಉದ್ದೇಶಿತ ಕೃಷಿ ವಿಶ್ವವಿದ್ಯಾನಿಲಯದ ಕೇಂದ್ರಬಿಂದುವಾಗಲಿದೆ. ಇದನ್ನು ಕಾರ್ಯಗತಗೊಳಿಸಲು ಮಸೂದೆಯು ಸಿದ್ಧವಾಗಿದ್ದು, ಅದನ್ನು ಕಾನೂನು ಇಲಾಖೆಯು ಪರಿಶೀಲಿಸುತ್ತಿದೆ. ಕೃಷಿ ವಿಶ್ವವಿದ್ಯಾನಿಲಯವು ಸ್ಥಾಪಿತವಾದಮೇಲೆ, ರೈತರ ಮಕ್ಕಳಿಗೆ ತರಬೇತಿಯನ್ನು ಕೊಟ್ಟು ಅವರು ಖಾಸಗಿಯಾಗಿ ಸಂಯುಕ್ತ ಕೃಷಿ ಚಟುವಟಿಕೆಗಳನ್ನು ನಡೆಸಲು ಅಥವಾ ಸಂಬಂಧ ಪಟ್ಟ ಇಲಾಖೆಗಳಲ್ಲಿ ಸೇವೆಯನ್ನು ಸಲ್ಲಿಸಲುಸಾಧ್ಯವಾಗುವಂತೆ ಮಾಡುತ್ತದೆ. ಈ ಕಾಲೇಜಿನ ಮತ್ತು ಉದ್ದೇಶಿತ ಕೃಷಿ ವಿಶ್ವವಿದ್ಯಾನಿಲಯದ ಸದಸ್ಯರು ಮೈಸೂರು ರಾಜ್ಯದ ಕೃಷಿಯ ಮತ್ತು ಪಶುಸಂಗೋಪನೆಯ ಅಭಿವೃದ್ಧಿಯಲ್ಲಿ ಬಹುಮುಖ್ಯವಾದ ಪಾತ್ರವನ್ನು ವಹಿಸಲಿದ್ದಾರೆ.

ಈ ಕಾಲೇಜಿನ ಕಟ್ಟಡವನ್ನು ಉದ್ಘಾಟಿಸಿದುದಕ್ಕಾಗಿ ಸನ್ಮಾನ್ಯ ರಾಜ್ಯಪಾಲರಿಗೆ ನಾವು ಬಹಳ ಆಭಾರಿಗಳಾಗಿದ್ದೇವೆ. ತಮ್ಮಿಂದ ಉದ್ಘಾಟನೆಯಾದ ಈ ಕಾಲೇಜು ನಿಜವಾಗಿಯೂ ಧನ್ಯವಾಗಿದೆ.

## ♦ ಕುರಿಸಾಕಾಣಿಕೆಯ ಮೂಲಕ ಆರ್ಥಿಕ ಅಭಿವೃದ್ಧಿ

**ಕೃಷಿಯ ಆಯಾಮಗಳಲ್ಲಿ ಕುರಿ ಸಾಗಾಣಿಕೆ ಒಂದು. 1961ರ ಮೇ 18ರಂದು ರಾಣೆಬೆನ್ನೂರಿನಲ್ಲಿ ಕುರಿತಳಿ ಅಭಿವೃದ್ಧಿ ಸಂಘವನ್ನು ಉದ್ಘಾಟಿಸುತ್ತಾ ಕೃಷಿ ಮತ್ತು ಸಮಾಜ ಕಲ್ಯಾಣ ಸಚಿವರಾದ ಶ್ರೀ ಎನ್. ರಾಚಯ್ಯ ಅವರು ಮಾಡಿದ ಭಾಷಣ. ಕುರಿ ಸಾಕಾಣಿಕೆ ಆರ್ಥಿಕ ಮೂಲವೂ ಹೌದು. ಆಹಾರ ಮೂಲವೂ ಹೌದು. ಅದರ ಲಾಭವನ್ನು ಇಲ್ಲಿ ರಾಚಯ್ಯನವರು ವಿವರಿಸಿದ್ದಾರೆ.**

ದೇಶದ ಆಹಾರ ಮತ್ತು ಆರ್ಥಿಕ ಸಮಸ್ಯೆಗಳನ್ನು ಪರಿಹರಿಸುವಲ್ಲಿ ಪಶುಸಂಗೋಪನಾ ಇಲಾಖೆಯ ಅಭಿವೃದ್ಧಿಯ ಮಹತ್ವವನ್ನು ಸರಕಾರವು ಚೆನ್ನಾಗಿ ತಿಳಿದಿದೆ ಮತ್ತು ಈ ವಿಷಯಕ್ಕೆ ಆದ್ಯತೆಯನ್ನು ನೀಡುತ್ತಿದೆ. ಕುರಿಯ ತಳಿಯನ್ನು ಅಭಿವೃದ್ಧಿಗೊಳಿಸುವುದು ಗ್ರಾಮಾಂತರ ಪ್ರದೇಶಗಳ ಆರ್ಥಿಕತೆ ಮತ್ತು ಆಹಾರದ ಸಮಸ್ಯೆಗಳನ್ನು ಪರಿಹರಿಸುವಲ್ಲಿ ಬಹುಮುಖ್ಯವಾದ ಪಾತ್ರವನ್ನು ವಹಿಸುತ್ತದೆ. ಕುರಿಯು ಬಹು ಉಪಯುಕ್ತವಾದ ಪ್ರಾಣಿ. ಅದು ಆಹಾರವನ್ನು ನೀಡುತ್ತದೆ, ಉಣ್ಣೆಗೆ ಬೇಕಾದ ಕಚ್ಚಾವಸ್ತುವನ್ನು ನೀಡುತ್ತದೆ, ಮತ್ತು ವಿವಿಧ ಕುಟೀರ ಹಾಗೂ ಸಣ್ಣಪ್ರಮಾಣದ ಕೈಗಾರಿಕೆಗಳಿಗೆ ಚರ್ಮ, ಗೊರಸು, ಕೊಂಬು ಮತ್ತು ಮೂಳೆಗಳನ್ನು ಒದಗಿಸುತ್ತದೆ. ಇವುಗಳಿಂದ ಗ್ರಾಮೀಣ ಪ್ರದೇಶಗಳಲ್ಲಿ ಉದ್ಯೋಗಾವಕಾಶಗಳು ಸೃಷ್ಟಿಯಾಗುತ್ತವೆ. ವಿಶೇಷವಾಗಿ ನಮ್ಮ ರಾಜ್ಯದಲ್ಲಿ ಕುರಿಯ ತಳಿಯನ್ನು ಅಭಿವೃದ್ಧಿಪಡಿಸಲು ಬೇಕಾದ ಸಂಪನ್ಮೂಲಗಳು ಮತ್ತು ಸೌಲಭ್ಯಗಳು ಸಾಕಷ್ಟಿದೆ. ಸರಿಯಾಗಿ ಬೆಳೆಸಿದರೆ, ಕುರಿಯೂ ಗ್ರಾಮೀಣ ಪ್ರದೇಶಗಳ ಸಂಪತ್ತಾಗುತ್ತದೆ. ಸ್ಥಳೀಯ ತಳಿಗಳನ್ನು ಗುಣಮಟ್ಟದಲ್ಲಿ ನಿಧಾನವಾಗಿ ಉತ್ತಮಗೊಳಿಸಲಾಗುತ್ತಿದೆ ಮತ್ತ ಮರಿನೋ ತಳಿಯು ಇತ್ತೀಚೆಗೆ ತುಂಬ ಜನಪ್ರಿಯವಾಗುತ್ತಿದೆ ಎಂದು ತಿಳಿದು ನನಗೆ ಸಂತೋಷವಾಗಿದೆ. ಕುರಿಗಳಲ್ಲಿ ಕೃತಕ ಗರ್ಭಧಾರಣಾ ಕಾರ್ಯಕ್ರಮವನ್ನು ಜಾರಿಗೆ ತಂದರೆ, ಗ್ರಾಮಾಂತರ ಪ್ರದೇಶಗಳ ಆರ್ಥಿಕ ಪರಿಸ್ಥಿತಿಯು ಸಂಪೂರ್ಣವಾಗಿ ಬದಲಾಗುತ್ತದೆ. ನಾನು ಈ ವಿಷಯವನ್ನು ಬಹಳ ಗಂಭೀರವಾಗಿ ಪರಿಗಣಿಸುತ್ತಿದ್ದೇನೆ ಮತ್ತು

ಇದಕ್ಕಾಗಿ ಇಲ್ಲಿ ಒಂದು ಕೃತಕ ಗರ್ಭಧಾರಣಾ ಕೇಂದ್ರವನ್ನು ಸ್ಥಾಪಿಸಲು ಯೋಚಿಸುತ್ತಿದ್ದೇನೆ.

ಜಾನುವಾರುಗಳ ತಳಿ ಅಭಿವೃದ್ಧಿ ಮತ್ತು ಅದಕ್ಕೆ ಸಂಬಂಧಿಸಿದ ಉದ್ದಿಮೆಗಳನ್ನು ಪ್ರೋತ್ಸಾಹಿಸುವ ಮೂಲಕ ಮಾತ್ರ ದೇಶದ ಪ್ರಗತಿಯ ವೇಗವನ್ನು ಹೆಚ್ಚಿಸಬಹುದು. ಖಾಯಂ ಉದ್ಯೋಗ, ಕನಿಷ್ಠ ಮಾಸಿಕ ವೇತನ, ಮತ್ತು ಈ ಉದ್ಯೋಗದಲ್ಲಿರುವವರ ಮಕ್ಕಳಿಗೆ ವಿದ್ಯಾಭ್ಯಾಸದ ಸೌಲಭ್ಯ – ಇವುಗಳನ್ನು ದೊರಕಿಸಿಕೊಡಲು ಕೇಂದ್ರ ಮತ್ತು ರಾಜ್ಯ ಸರಕಾರಗಳು ವಿಶೇಷ ಯೋಜನೆಗಳನ್ನು ಪ್ರಾಯೋಜಿಸಬೇಕೆಂಬುದು ನನ್ನ ಅನಿಸಿಕೆ. ಅಗತ್ಯವಿರುವೆಡೆಗಳಲ್ಲೆಲ್ಲಾ, ಸೌಲಭ್ಯಗಳನ್ನು ಕಲ್ಪಿಸಿಕೊಡಲು, ಸಲಹೆ ಮತ್ತು ಸೇವೆಯನ್ನು ನೀಡಲು ಸರಕಾರವು ಯಾವಾಗಲೂ ಸಿದ್ಧವಿರುತ್ತದೆ. ಇದರ ಲಾಭವನ್ನು ಪಡೆದು ದೇಶದ ಪ್ರಗತಿಯ ವೇಗವನ್ನು ಹೆಚ್ಚಿಸುವುದು ಈಗ ಕಾರ್ಮಿಕರ ಮುಂದೆ ಇದೆ. ಜನತೆಯ ಸಹಕಾರದಿಂದ ಎಂತಹ ಕಠಿಣ ಸಮಸ್ಯೆಯನ್ನಾದರೂ ಪರಿಹರಿಸಬಹುದು.

ನಮ್ಮ ದೇಶದ ಜನಸಂಖ್ಯೆಯಲ್ಲಿ ಹಿಂದುಳಿದ ಹಾಗೂ ದುರ್ಬಲವರ್ಗಗಳ ಪಾಲು ಶೇ. 80ರಷ್ಟು. ಈ ವರ್ಗಗಳವರೇ ದೇಶದ ಸಂಪತ್ತನ್ನು ಉತ್ಪಾದಿಸುತ್ತಿರುವರು. ಅವರಿಗೆ ಖಾಯಂ ಉದ್ಯೋಗ, ನಿರ್ದಿಷ್ಟವಾದ ಮತ್ತು ಕನಿಷ್ಠ ವೇತನ ಹಾಗೂ ಅವರ ಮಕ್ಕಳಿಗೆ ಊಟ, ವಸತಿ ಹಾಗೂ ವಿದ್ಯಾಭ್ಯಾಸದ ಸೌಲಭ್ಯಗಳನ್ನು ಒದಗಿಸುವವರೆಗೆ ನಮ್ಮ ಸಮಸ್ಯೆಗಳನ್ನು ಅಂತಿಮವಾಗಿ ಮತ್ತು ಸಂಪೂರ್ಣವಾಗಿ ಪರಿಹರಿಸಲು ಸಾಧ್ಯವಿಲ್ಲ ಎಂಬುದು ನನ್ನ ಬಲವಾದ ನಂಬಿಕೆ. ಮುಂದಿನ 10 ವರ್ಷಗಳವರೆಗಾದರೂ ಈ ಹಿಂದುಳಿದ ವರ್ಗಗಳವರು ತಯಾರಿಸಿದ ವಸ್ತುಗಳಿಗೆ ಮಾರಾಟ ತೆರಿಗೆಯಲ್ಲಿ ವಿನಾಯತಿಯನ್ನು ನೀಡಿದರೆ ಅವರು ತಮ್ಮ ಸ್ಥಿತಿಯನ್ನು ಸುಧಾರಿಸಿಕೊಳ್ಳಲು ತಮ್ಮ ಕೈಗಾರಿಕೆಗಳಲ್ಲಿ ಸ್ಥಿರತೆಯನ್ನು ತರಲು ಅವರಿಗೆ ಸಾಧ್ಯವಾಗುತ್ತದೆ ಎಂಬುದು ನನ್ನ ಅನಿಸಿಕೆ. ಹೀಗೆ ಮಾಡುವುದು ಸಂವಿಧಾನದಲ್ಲಿ ಅವರ ರಕ್ಷಣೆಗಾಗಿ ನೀಡಿರುವ ಸವಲತ್ತುಗಳಿಗೆ ಅನುಗುಣವಾಗಿಯೇ ಇರುತ್ತದೆ. ಈ ಬಡ ಕಾರ್ಮಿಕರಿಗೆ ಸಾಕಷ್ಟು ಆಹಾರ, ಬಟ್ಟೆ, ವಸತಿ, ಮಕ್ಕಳ ವಿದ್ಯಾಭ್ಯಾಸಕ್ಕೆ ವ್ಯವಸ್ಥೆಯನ್ನು ಮಾಡುವವರೆಗೆ, ಅವರಲ್ಲಿ ಆತ್ಮವಿಶ್ವಾಸವು ಮೂಡುವುದಿಲ್ಲ ಮತ್ತು ದೇಶದ ಸಂಪತ್ತನ್ನು ಹೆಚ್ಚಿಸಲು ಅವರು ಪ್ರಾಮಾಣಿಕವಾಗಿ ದುಡಿಯುವುದಿಲ್ಲ.

ದುರದೃಷ್ಟದಿಂದ, ನಮ್ಮ ದೇಶದಲ್ಲಿ ಕಷ್ಟಪಟ್ಟು ದುಡಿಯುವವನನ್ನು ಅಸ್ಪೃಶ್ಯನೆಂದೂ, ಕಷ್ಟಪಟ್ಟು ದುಡಿಯುವ ವರ್ಗವನ್ನು ಹಿಂದುಳಿದ ವರ್ಗವೆಂದು ತುಚ್ಛೀಕರಿಸಲಾಗುತ್ತಿದೆ. ಸ್ವಾತಂತ್ರ್ಯಪೂರ್ವದಲ್ಲಿ ಅವರಿಗೆ ಅವರ ದುಡಿಮೆಯ ಫಲವು ಸಿಗದ ಹಾಗೆ ಮಾಡುತ್ತಿದ್ದರು ಎಂದೂ ಸಂಪತ್ತನ್ನು ಉತ್ಪಾದಿಸದ ಮುಂದುವರೆದ ವರ್ಗಗಳವರು, ಹಿಂದುಳಿದವರ್ಗಗಳವರನ್ನು ಮತಧರ್ಮದ ಹೆಸರಿನಲ್ಲಿ ಮತ್ತು ದೇವರ ಹೆಸರಿನಲ್ಲಿ ಶೋಷಿಸುತ್ತಿದ್ದರು. ಈ ನತದೃಷ್ಟ ವರ್ಗಗಳವರನ್ನು ಉದ್ದೇಶಪೂರ್ವಕವಾಗಿ ಅಜ್ಞಾನದಲ್ಲಿಯೇ, ಹಸಿವಿನಲ್ಲಿಯೇ, ಮತ್ತು ಬಡತನದಲ್ಲಿಯೇ ಇರಿಸಲಾಗುತ್ತಿತ್ತು. ಇವರು ಮೇಲುವರ್ಗಗಳವರ ಅಲ್ಪಸ್ವಲ್ಪ ದಯಾಭಿಕ್ಷೆಗಾಗಿ ಅವರ ಸೇವೆಯನ್ನು ಮಾಡಿಕೊಂಡೇ ಇರಬೇಕೆಂಬ ಹುನ್ನಾರವು ಅದರ ಹಿಂದೆ ಇತ್ತು. ಇವರನ್ನು ಯಾವಾಗಲೂ ಮೇಲುವರ್ಗವು ತಮಗಿಂತ ಕೀಳು ಎಂದೇ ಭಾವಿಸುತ್ತಿದ್ದರು. ರಾಷ್ಟ್ರಪಿತ ಮಹಾತ್ಮ ಗಾಂಧಿಯವರ ತ್ಯಾಗದಿಂದಾಗಿ, ಸ್ವಾತಂತ್ರ್ಯಾನಂತರ ಪರಿಸ್ಥಿತಿಯು ಬದಲಾಯಿತು. ಗಾಂಧೀಜಿಯವರು ದುರ್ಬಲವರ್ಗಗಳವರಿಗೆ ಎಲ್ಲವನ್ನೂ ನೀಡಬೇಕೆಂದು ಹೇಳಿದರು. ಸಂವಿಧಾನದ ಮೂಲಕ ಅವರು ದುಡಿಯುವ ಮಂದಿಗೆ ಆದ್ಯತೆ, ಸವಲತ್ತು, ರಕ್ಷಣೆ, ಮತ್ತು ವಿನಾಯತಿ – ಎಲ್ಲವನ್ನೂ ನೀಡುವ ಹಾಗೆ ಮಾಡಿದರು. ಅವರು, ಎಲ್ಲಕ್ಕಿಂತ ಹೆಚ್ಚಾಗಿ, ಇವರಿಗೆ ಮತದಾನದ ಹಕ್ಕನ್ನು ನೀಡಿದರು. ಈ ವರ್ಗಗಳವರು ದೇಶದ ಜನಸಂಖ್ಯೆಯಲ್ಲಿ ಶೇ. 80ರಷ್ಟು ಇರುವುದರಿಂದ ಇವರು ತಮ್ಮ ಮತವನ್ನು ಚಲಾಯಿಸುವ ಹಕ್ಕಿನಿಂದಾಗಿ, ಆ ಹಕ್ಕಿನಿಂದ ಸರಕಾರವನ್ನು ಚುನಾಯಿಸಬಲ್ಲವರಾಗಿ, ದೇಶದ ನಿಜವಾದ ಪ್ರಭುಗಳಾದರು.

ಶೇ. 80ರಷ್ಟು ಇದ್ದ ಹಿಂದುಳಿದ ವರ್ಗಗಳವರನ್ನು ಸ್ವಾತಂತ್ರ್ಯಪೂರ್ವದಲ್ಲಿ ತುಚ್ಛೀಕರಿಸಲ್ಪಡುತ್ತಿದ್ದರು, ಸ್ವಾತಂತ್ರ್ಯಾನಂತರ ಅವರನ್ನು ಅಸಮರ್ಥರು ಎಂದು ಹೀಯಾಳಿಸುತ್ತಿದ್ದಾರೆ. ಸ್ವಾತಂತ್ರ್ಯಪೂರ್ವದಲ್ಲಿ ತಿಳಿವಳಿಕೆಯಿಲ್ಲದ ಈ ವರ್ಗಗಳವರನ್ನು ದೇವರ ಹೆಸರಿನಲ್ಲಿ ಮತ್ತು ಮತಧರ್ಮದ ಹೆಸರಿನಲ್ಲಿ ಆರ್ಥಿಕವಾಗಿ ಮತ್ತು ಸಾಮಾಜಿಕವಾಗಿ ಶೋಷಿಸುತ್ತಿದ್ದರು, ಆದರೆ ಈಗ ರಾಜಕೀಯವಾಗಿಯೂ ಶೋಷಿಸುತ್ತಿದ್ದಾರೆ. ಆದರೆ, ತಮಗೆ ಸಾಮಾಜಿಕ, ಆರ್ಥಿಕ, ಆಡಳಿತಾತ್ಮಕ, ಶೈಕ್ಷಣಿಕ ಮತ್ತು ರಾಜಕೀಯ ಕ್ಷೇತ್ರಗಳಲ್ಲಿ ನ್ಯಾಯವನ್ನು ಒದಗಿಸುತ್ತಾರೆ ಎಂಬ ಕುರುಡು ನಂಬಿಕೆಯಿಂದ, ಅಚಲವಾದ ವಿಶ್ವಾಸದಿಂದ ಈ ದುರ್ಬಲ

ವರ್ಗಗಳವರು ಮತ್ತು ಹಿಂದುಳಿದ ವರ್ಗಗಳವರು ಅಲ್ಪಸಂಖ್ಯಾತರಾದ ಮೇಲುವರ್ಗದವರನ್ನು ಬೆಂಬಲಿಸುತ್ತಲೇ ಬಂದರು. ಇಷ್ಟಾದರೂ, ಇಲ್ಲಿಯವರೆಗೂ, ಸಂವಿಧಾನವು ಆಶ್ವಾಸನೆಯನ್ನು ಕೊಟ್ಟಿರುವ ರಕ್ಷಣೆಯು ಮತ್ತು ನಮ್ಮ ಪ್ರಧಾನಮಂತ್ರಿಗಳು ಒತ್ತಾಯಪೂರ್ವಕವಾಗಿ ವಿನಂತಿಸಿಕೊಂಡಿರುವ ಶೈಕ್ಷಣಿಕ ಸೌಲಭ್ಯಗಳನ್ನು ಈ ಶೋಷಿತ ವರ್ಗಕ್ಕೆ ಕೊಟ್ಟಿಲ್ಲ. ಅಧಿಕಾರದಲ್ಲಿರುವ ಮೇಲುವರ್ಗದವರು, ಸಂವಿಧಾನದ ವಿಧಿಗಳನ್ನು ಜಾರಿಗೊಳಿಸದಿರುವುದಷ್ಟೇ ಅಲ್ಲ, ಕೇಂದ್ರಸರಕಾರದ ಘೋಷಿತ ನಿರ್ದೇಶನಗಳ ವಿರುದ್ಧವಾಗಿ ಕೆಲಸಮಾಡುತ್ತಿದ್ದಾರೆ ಎಂದು ಕೆಲವು ವೇಳೆ ನನಗೆ ಅನಿಸುತ್ತದೆ. ಇಂದಿನ ದಿನಗಳಲ್ಲೂ ಮುಂದುವರಿದ ವರ್ಗಗಳವರು ರಾಜಕೀಯ ಮೇಲುಗೈಯನ್ನು ಸಾಧಿಸಲು ಆಡುತ್ತಿರುವ ಆಟಗಳನ್ನು ನೋಡಿದರೆ, ಹಿಂದುಳಿದ ಮತ್ತು ಅದು ದುರ್ಬಲವರ್ಗಗಳವರ ಹಾನಿಗೆ ಕಾರಣವಾದರೂ ತಾವೇ ಅಧಿಕಾರದಲ್ಲಿ ಏಕಸ್ವಾಮ್ಯವನ್ನು ಸಾಧಿಸಿಕೊಂಡಿರಬೇಕೆಂಬ ಮನೋಭಾವವನ್ನು ಹೊಂದಿರುವಂತೆ ಕಾಣುತ್ತದೆ. ತಮಗೆ ಅನುಕೂಲವಾಗುವುದಾದರೆ ಮುಂದುವರಿದ ವರ್ಗದವರು ಅವರನ್ನು ಕೈಬಿಟ್ಟು ಕೂಪಕ್ಕೆ ತಳ್ಳಲೂ ಅಥವಾ ತಮ್ಮ ಹಿಂಬಾಲಕರನ್ನಾಗಿ ಇಟ್ಟುಕೊಳ್ಳಲೂ ಹಿಂದೆಮುಂದೆ ನೋಡುವುದಿಲ್ಲ. ಈ ಧೋರಣೆಯು ಸರಿಯಾದುದಲ್ಲ. ಇವರ ಈ ಧೋರಣೆಯಿಂದಲೇ, ಹಿಂದುಳಿದವರು ಮತ್ತು ದುರ್ಬಲರು ತಮ್ಮ ಮೇಲೆ ಇರಿಸಿದ್ದ ವಿಶ್ವಾಸವನ್ನು ಮುಂದುವರಿದವರು ಕ್ರಮೇಣ ಕಳೆದುಕೊಳ್ಳುತ್ತಿದ್ದಾರೆ. ವಸ್ತುಸ್ಥಿತಿಯನ್ನು ಹಿಂದುಳಿದ ವರ್ಗಗಳವರು ಅರಿತುಕೊಳ್ಳಬೇಕು. ತಮಗೆ ಏನಾಗುತ್ತಿದೆ ಎಂಬುದನ್ನು ತಿಳಿದುಕೊಳ್ಳಬೇಕು ಹಾಗೂ ತಮಗೆ ನ್ಯಾಯವಾಗಿ ದೊರಕಬೇಕಾದುದನ್ನು ಪಡೆದುಕೊಳ್ಳಲು ಮುಂದಾಗಬೇಕು. ಇದಕ್ಕಾಗಿ ಹಿಂದುಳಿದವರ್ಗಗಳವರು ಒಂದಾಗಬೇಕು. ಅವರ ಮತದಾನದ ಬಲವು ಶೇ. 80ರಷ್ಟು ಇರುವಾಗ, ಮತ್ತು ಅವರೇ ರಾಷ್ಟ್ರದ ಸಂಪತ್ತೆಲ್ಲವನ್ನೂ ಉತ್ಪಾದಿಸುವವರಾಗಿರುವುದರಿಂದ, ಅವರು ಅದಕ್ಕೆ ಅನುಗುಣವಾಗಿ ಸರಕಾರದ ಎಲ್ಲಾ ಮಟ್ಟಗಳಲ್ಲಿಯೂ ರಾಜಕೀಯ ಮತ್ತು ಆರ್ಥಿಕ ಅಧಿಕಾರವನ್ನು ಪಡೆಯಬೇಕು. ಮುಂದುವರಿದ ವರ್ಗಗಳವರಲ್ಲಿ ಪ್ರಕೃತ ಇರುವ ಧೋರಣೆಯು ಅವರಿಗೂ ಒಳ್ಳೆಯದಲ್ಲ, ಮತ್ತು ದೇಶದ ಹಿತಕ್ಕೂ ಒಳ್ಳೆಯದಲ್ಲ.

ಮುಂದುವರಿದ ವರ್ಗದವರು ತಮ್ಮವರಿಗೆ ಏನನ್ನು ನೀಡಿದರೂ ಅದು ದೇಶದ ಹಿತದೃಷ್ಟಿಯಿಂದ ನೀಡಲ್ಪಟ್ಟಿದೆಯೆಂದು ಭಾವಿಸುತ್ತಾರೆ, ಆದರೆ, ಅವರಿಗೆ ಸಂವಿಧಾನದಲ್ಲಿ ಅಂತಹ ಯಾವ ರೀತಿಯ ರಕ್ಷಣೆಯೂ ಇಲ್ಲವೆಂಬುದು ಸ್ಪಷ್ಟವಾಗಿಯೇ ಇದೆ. ಹಿಂದುಳಿದ ವರ್ಗಗಳವರಿಗೆ ಮತ್ತು ದುರ್ಬಲವರ್ಗಗಳವರಿಗೆ ಏನನ್ನು ನೀಡಿದರೂ ಅದು ಅವರು ತಮ್ಮ ಹಕ್ಕಿನಿಂದ ಪಡೆದುದಲ್ಲ, ಬದಲಿಗೆ, ತಾವು ಕೃಪೆಯಿಂದ ನೀಡಿದುದೆಂದು ತಿಳಿದುಕೊಳ್ಳುತ್ತಾರೆ. ಅಧಿಕಾರದಲ್ಲಿರುವ ಮುಂದುವರಿದ ವರ್ಗದವರು ತಮ್ಮ ಜಾತಿಯವರಿಗೆ ಮಾಡಿದ ಪಕ್ಷಪಾತದ ಸಹಾಯವೆಲ್ಲವೂ ರಾಷ್ಟ್ರದ ಒಳಿತಿಗಾಗಿ ಮಾಡಿದುದೆಂದು ಹೇಳುತ್ತಾರೆ. ದುರ್ಬಲವರ್ಗದವರಿಗೆ ಮತ್ತು ಹಿಂದುಳಿದವರಿಗೆ ಏನಾದರೂ ಸಹಾಯವನ್ನು ಮಾಡಿದರೆ ಅದು ಇವರ ದೃಷ್ಟಿಯಲ್ಲಿ ಜಾತೀಯತೆಯಾಗುತ್ತದೆ. ಇದು ಅತ್ಯಂತ ಹೇಯವಾದ ಧೋರಣೆ, ರಾಷ್ಟ್ರವಿರೋಧಿ ಮತ್ತು ಜನತಂತ್ರವಿರೋಧಿ. ಶತಮಾನಗಳಿಂದ ಹರಿದು ಬಂದಿರುವ ಈ ಜಾತಿ–ವಿಷವು ದುರ್ಬಲ ವರ್ಗಗಳವರ ಮತ್ತು ಹಿಂದುಳಿದ ವರ್ಗಗಳವರ ಬಗ್ಗೆ ಅಸಹನೆಯನ್ನು ತಾಳಲು ಕಾರಣವಾಗಿದೆ. ಈ ವಿಷವು ರಾಷ್ಟ್ರದ ಐಕ್ಯತೆಗೆ ಭಂಗತರುತ್ತದೆ. ಮುಂದುವರಿದ, ಹಿಂದುಳಿದ, ದುರ್ಬಲ, ಎಲ್ಲಾ ವರ್ಗಗಳವರ ಹಿತದ ದೃಷ್ಟಿಯಿಂದ ಹಾಗೂ, ಅಂತಿಮವಾಗಿ ದೇಶದ ಸ್ವಾತಂತ್ರ್ಯದ ಮತ್ತು ಸಂಸದೀಯ ಪ್ರಜಾಪ್ರಭುತ್ವದ ದೃಷ್ಟಿಯಿಂದ ಇದು ಕೊನೆಯಾಗಲೇಬೇಕು. ಸಂವಿಧಾನವನ್ನು ತಿಳಿಯದವರು ಮಾತ್ರ ಇಂತಹ ವ್ಯವಸ್ಥೆಯಲ್ಲಿ ವಿಶ್ವಾಸವನ್ನಿಡುತ್ತಾರೆ. ಸಂವಿಧಾನದಲ್ಲಿ ನೀಡಿರುವುದು ಕೂಡ, ದುರ್ಬಲ ಹಾಗೂ ಹಿಂದುಳಿದವರ್ಗಗಳವರಿಗೆ ಅರ್ಹತಾದೃಷ್ಟಿಯಿಂದ, ಹಕ್ಕಿನ ದೃಷ್ಟಿಯಿಂದ ನೀಡಬೇಕಾದುದಕ್ಕಿಂತ ಬಹಳ ಕಡಿಮೆ ಇದೆ. ಆದರೆ, ದೇಶದ ಅಧಿಕಾರವು ತಮ್ಮ ಕೈಯಲ್ಲಿ ಇದ್ದರೆ ಮಾತ್ರ ರಾಷ್ಟ್ರಕ್ಕೆ ರಕ್ಷಣೆಯಿರುತ್ತದೆಂದೂ, ದುರ್ಬಲ ಮತ್ತು ಹಿಂದುಳಿದ ವರ್ಗಗಳವರಿಗೆ ಅದನ್ನು ನೀಡಿದರೆ, ದೇಶವು ಛಿದ್ರವಾಗುತ್ತದೆ, ಅನೈಕ್ಯತೆಯುಂಟಾಗುತ್ತದೆ ಮತ್ತು ದೇಶದಲ್ಲಿ ಸಂಪೂರ್ಣ ಅಸ್ತವ್ಯಸ್ತತೆಯುಂಟಾಗುತ್ತದೆ ಎಂದು ಮುಂದುವರಿದ ವರ್ಗಗಳವರು ಕೆಲವು ವೇಳೆ ಸಾರ್ವಜನಿಕ ವೇದಿಕೆಗಳಿಂದ ಹೇಳುತ್ತಾರೆ. ಇದು ಹಿಂದುಳಿದ ಮತ್ತು ದುರ್ಬಲ ವರ್ಗಗಳ ಮುಗ್ಧ ಜನರನ್ನು ವಂಚಿಸುವ ವಿಧಾನವಷ್ಟೆ. ತಮ್ಮ ಅಧಿಕಾರವನ್ನು ಉಪಯೋಗಿಸಿಕೊಂಡು, ತಾವು ತಮಗೆ ಬೇಕಾದ ಹಾಗೆ

ಸಂವಿಧಾನವನ್ನು ತಿರುಚಬಹುದು ಅಥವಾ ಮಾರಬಹುದು ಎಂಬ ಭಾವನೆ ಅವರದು. ಆದರೆ ಇದು ದೇಶದ ಹಿತಕ್ಕೆ ಮಾರಕವಾಗಿದೆ. ಯಾವ ಪಂಗಡಗಳವರೇ ಆದರೂ, ಇತರ ಎಲ್ಲಾ ಪಂಗಡಗಳವರು ಹೊಂದಿರಬೇಕಾದ ಅಧಿಕಾರವನ್ನು, ತಮ್ಮಲ್ಲಿಯೇ ಕೇಂದ್ರೀಕರಿಸಿಕೊಳ್ಳಬಾರದು. ತಾವು ಈಗ ಅನುಭವಿಸುತ್ತಿರುವ ಅಧಿಕಾರಗಳೆಲ್ಲವೂ ತಮ್ಮ ಹಕ್ಕಿನಿಂದ ಬಂದದಲ್ಲ, ದುರ್ಬಲ ಮತ್ತು ಹಿಂದುಳಿದ ವರ್ಗಗಳವರು ತಮ್ಮ ಮತಾಧಿಕಾರದ ಮೂಲಕ ಅದನ್ನು ನೀಡಿದ್ದಾರೆ ಎಂಬುದನ್ನು ಅರಿಯಬೇಕು.

ಸಂವಿಧಾನದಲ್ಲಿ ನೀಡಿರುವ ರಕ್ಷಣಾ ವಿಧಿಗಳಷ್ಟೇ ಅಲ್ಲ, ಇತ್ತೀಚೆಗೆ ಭಾರತದ ಪರಮೋಚ್ಚ ನ್ಯಾಯಾಲಯವು ತೀರ್ಪೊಂದನ್ನು ನೀಡಿ, ಸರಕಾರಿ ಸೇವೆಗಳಲ್ಲಿ ಬಡ್ತಿಯಲ್ಲಿ ಹಿಂದುಳಿದವರಿಗೆ, ದುರ್ಬಲರಿಗೆ ನೀಡಿರುವ ಮೀಸಲಾತಿಯು ಕೂಡ ಸಂವಿಧಾನಬದ್ಧವಾಗಿದೆಯೆಂದು ಹೇಳಿದೆ.

ಸರಕಾರಿ ಸೇವೆಯಲ್ಲಿಯೂ, ಮುಂದುವರ್ಗದವರು 'ಅರ್ಹತೆ'ಯ ಹೆಸರಿನಲ್ಲಿ ಆಡಳಿತದ ಎಲ್ಲಾ ವಿಭಾಗಗಳಲ್ಲಿಯೂ ಎಲ್ಲಾ ಹಂತಗಳಲ್ಲಿಯೂ, ತಮ್ಮವರನ್ನೇ ನೇಮಕಮಾಡಿಕೊಳ್ಳುತ್ತಾ ಅಧಿಕಾರವನ್ನೆಲ್ಲಾ ತಮ್ಮ ಏಕಸ್ವಾಮ್ಯದ ಕಬ್ಜೆಯೊಳಕ್ಕೆ ತಂದಿಟ್ಟುಕೊಂಡಿರುತ್ತಾರೆ. ಈ ಅರ್ಹತೆಯೆಂದರೆ ಪರೀಕ್ಷೆಯಲ್ಲಿ ಗಳಿಸುವ ಅಂಕಗಳಷ್ಟೇ. ಆದರೆ ಈ ಅಂಕಗಳನ್ನು ವ್ಯಕ್ತಿಯೊಬ್ಬನ 'ಅರ್ಹತೆ'ಯನ್ನು ಅಳೆಯುವ ಸಾಧನವನ್ನಾಗಿ ಮಾಡಿಕೊಳ್ಳಬಾರದು. ಬಾಯಿಪಾಠ ಮಾಡಿಕೊಂಡು ಯಾರುಬೇಕಾದರೂ ಒಳ್ಳೆಯ ಅಂಕಗಳನ್ನು ಪಡೆಯಬಹುದು. ಅದು ಅವನ ವ್ಯಕ್ತಿತ್ವದ ಸೂಚಿಯಾಗಲಾರದು. ಸಮಸ್ಯೆಗಳನ್ನು ಅರ್ಥಮಾಡಿಕೊಂಡು, ಯೋಚಿಸಿ ಅದನ್ನು ನಿವಾರಿಸುವಲ್ಲಿ ಇರುವ ಗುಣವು ನಿಜವಾದ ಅರ್ಹತಾಸೂಚಿಯಾಗಬೇಕು. ಅಗತ್ಯವಾಗಿರುವುದು ಧೈರ್ಯ, ಪ್ರಾಮಾಣಿಕತೆ, ಪಕ್ಷಪಾತರಾಹಿತ್ಯ ಮತ್ತು ಎಲ್ಲಕ್ಕೂ ಮಿಗಿಲಾಗಿ ದೇಶಪ್ರೇಮ. ಈ ಗುಣಗಳು ಶಿಸ್ತು, ಪ್ರವೃತ್ತಿ, ಕಷ್ಟಪಟ್ಟು ಕೆಲಸಮಾಡುವ ಸ್ವಭಾವ, ಮತ್ತು ಸರಕಾರದ ಕಾರ್ಯಕ್ರಮಗಳನ್ನು ಸ್ವಾರ್ಥರಹಿತವಾಗಿ ಅನುಷ್ಠಾನಕ್ಕೆ ತರುವ ತೀವ್ರ ಉತ್ಸಾಹಗಳನ್ನೂ ಒಳಗೊಂಡಿರಬೇಕು. ಅಧಿಕಾರವನ್ನು ಬಯಸುವವರು ಅದನ್ನು ತಮ್ಮ ಜನಗಳ ಹಿತಕ್ಕಾಗಿ ಬಳಸದೆ, ಸಂಕಷ್ಟದಲ್ಲಿರುವ ಇತರರಿಗೆ ಸಹಾಯವನ್ನು ಮಾಡುವ ಗುಣವಿದ್ದರೆ ಮಾತ್ರ ತಮ್ಮ ಬಯಕೆಯ ಅಧಿಕಾರಕ್ಕೆ ಅರ್ಹರಾಗುತ್ತಾರೆ.

## ◆ ದನಗಳ ರಕ್ಷಣೆಗಾಗಿ ಸರಕಾರದ ಸವಲತ್ತುಗಳು

**ರಾಚಯ್ಯನವರಲ್ಲಿ ವೈಚಾರಿಕ ಪ್ರಜ್ಞೆ ಸದಾ ಜಾಗೃತವಾಗಿರುತ್ತಿತ್ತು. ಅದರೊಂದಿಗೆ ಹಾಸ್ಯವೂ ಸೇರಿ ಜನಸಾಮಾನ್ಯರನ್ನು ತಲುಪಲು ಸಾಧ್ಯವಾಗುತ್ತಿತ್ತು. ಜನ-ದನ ವಾಸಿಸಲು ಜಾಗವಿಲ್ಲದಾಗ ದೇವರಿಗೆ ದೇವಾಲಯ ಕಟ್ಟುವುದನ್ನು ವಿಡಂಬನೆ ಮಾಡಿದ ಸೂಕ್ಷ್ಮಗ್ರಾಹಿ. 1960ರ ಮಾರ್ಚ್ 17ರಂದು ಮಧುಗಿರಿಯಲ್ಲಿ ನಡೆದ ದನಗಳ ಪ್ರದರ್ಶನದಲ್ಲಿ ಬಹುಮಾನ ವಿತರಣೆಯ ಸಂದರ್ಭದಲ್ಲಿ ಮಾಡಿದ ಭಾಷಣ**

ಕೆಲವು ಜನರು ನನ್ನ ಬಳಿ ಬಂದು ರಾಮಮಂದಿರ ಕಟ್ಟಲು ಜಾಗವನ್ನೋ ಅಥವಾ ಕಟ್ಟಡ ಸಾಮಗ್ರಿಗಳನ್ನೋ ನೀಡಬೇಕೆಂದು ತಮ್ಮ ಬೇಡಿಕೆಯನ್ನು ಸಲ್ಲಿಸುತ್ತಾರೆ. ಸಾಮಾನ್ಯವಾಗಿ ಇಂತಹವರು ಬಡವರು. ಶ್ರೀರಾಮದೇವರು ತನಗೆ ಒಂದು ಮಂದಿರವನ್ನು ಕಟ್ಟಿಕೊಳ್ಳಲಾರದಷ್ಟು ಬಡವನೇ ಎಂದು ನಾನು ಅವರನ್ನು ಕೇಳಿದರೆ ಅವರು ನಿರುತ್ತರರಾಗುತ್ತಾರೆ. 'ಹಾಗಿದ್ದರೆ, ಶ್ರೀರಾಮದೇವರು ನಿಮ್ಮನ್ನು ಮಂದಿರವನ್ನು ಕಟ್ಟಿಕೊಡು ಎಂದು ಪ್ರಾರ್ಥಿಸಿದರೆ, ನೀವು ನನ್ನ ಬಳಿ ಬನ್ನಿ, ಆಗ ನಾನು ನಿಮಗೆ ಧನಸಹಾಯವನ್ನು ಮಾಡುತ್ತೇನೆ' ಎನ್ನುತ್ತೇನೆ. ಎಂತಹ ತಮಾಷೆಯ ಸಂಗತಿ ಇದು ಎಲ್ಲೆಲ್ಲೂ ಇರುವ, ಇಡೀ ವಿಶ್ವವೇ ಮನೆಯಾಗಿ ಉಳ್ಳ ಪರಮಾತ್ಮನಿಗೆ ಮನೆಯನ್ನು ಕಟ್ಟಿಕೊಡುತ್ತೇವೆ ಎನ್ನುವುದನ್ನು ಯೋಚಿಸಲು ಸಾಧ್ಯವೇ ನಮಗೆ? ದೇವರು ಎಂದರೆ ಒಂದು ಬೊಂಬೆಯೋ, ಆಟದ ವಸ್ತುವೋ ಅಥವಾ ಮಗುವೋ, ಅದಕ್ಕೆ ನಾವು ಏನನ್ನಾದರೂ ನೀಡಿದರೆ ಅದು ತೃಪ್ತವಾಗುತ್ತದೆ ಎನ್ನುವುದಕ್ಕೆ? ಶೋಷಕರು ಬಡಜನತೆಯನ್ನು ವಂಚಿಸುವ ಪರಿ ಇದು.

ಮತ್ತೆ ಉದ್ದವಾದ ಗಡ್ಡವನ್ನು ಬಿಟ್ಟುಕೊಂಡ ಕೆಲವರು ನನ್ನ ಬಳಿಗೆ ಬಂದು ಧನಸಹಾಯವನ್ನು ಕೇಳುತ್ತಾರೆ. ನೀವೇಕೆ ಹೀಗೆ ಗಡ್ಡವನ್ನು ಬಿಟ್ಟಿದ್ದೀರಿ ಎಂದರೆ ದೂರದಲ್ಲಿರುವ ಯಾವುದೋ ದೇವಸ್ಥಾನಕ್ಕೆ ಇದನ್ನು ಮುಡಿಕೊಡಬೇಕೆಂದು ಬಿಟ್ಟಿದ್ದೇವೆ ಎಂದು ಅವರು ಹೇಳುತ್ತಾರೆ. ಹೀಗೆ ಮುಡಿಕೊಡುವುದಕ್ಕೆ ಅಷ್ಟು

ದೂರದ ಊರುಗಳಿಗೆ ಹೋಗಿ ಬರುವುದಕ್ಕೆ ಎಷ್ಟು ಖರ್ಚಾಗುತ್ತದೆ ಎಂದರೆ ಅವರ ಉತ್ತರ '300 ರಿಂದ 400 ರೂಗಳು'. ಅಷ್ಟು ದೂರದಲ್ಲಿರುವ ದೇವರಿಗೆ ತಮ್ಮ ಕೂದಲನ್ನು ಮುಡಿಕೊಡಲು ಅವರು ಅಷ್ಟೊಂದು ಹಣವನ್ನು ವ್ಯಯಮಾಡುತ್ತಾರೆ. ಆದರೂ, ಅವರು ನಮ್ಮ ಬಳಿಬಂದು ಉಚಿತ ಭೂಮಿ, ಕಟ್ಟಡ ಸಾಮಗ್ರಿ, ಮತ್ತು ಇತರ ಆರ್ಥಿಕ ಸಹಾಯವನ್ನು ಅಪೇಕ್ಷಿಸುತ್ತಾರೆ. ಇವರ ತಲೆಕೂದಲು ಮತ್ತು ಗಡ್ಡವನ್ನು ಯಾವ ದೇವರು ಬಯಸುತ್ತಾನೆ? ಇದನ್ನು ತೆಗೆಸಲು ಒಂದು ಆಣೆಯ ಕತ್ತಿಯನ್ನು ಕೊಂಡುಕೊಂಡರೆ ಸಾಕು ಎಂದು ಹೇಳಿದರೆ, ಅವರು ಒಪ್ಪುವುದಿಲ್ಲ. ಹಾಗೆ ಮಾಡದಿದ್ದರೆ ಏನಾದರೂ ಕೆಟ್ಟದ್ದು ಆಗಬಹುದು ಎಂದು ಅವರು ಭಯಪಡುತ್ತಾರೆ. ಇದು ಪುರೋಹಿತ ವರ್ಗದವರು ದುರ್ಬಲವರ್ಗಗಳವರನ್ನು ಶೋಷಿಸಲು ಸೃಷ್ಟಿಸಿರುವ, ಮತ್ತು ಅವರಲ್ಲಿ ಕಾಪಾಡಿಕೊಂಡು ಬಂದಿರುವ ಭಯದ ಮನೋವೃತ್ತಿ.ಇವು ವೈಚಾರಿಕತೆಯ ಮುಂದೆ ನಿಲ್ಲಲಾರವಾದರೂ, ಅದನ್ನು ಕೇಳುವವರು ಯಾರು? ಸರಿಯಾದ ಶಿಕ್ಷಣವು ಇಲ್ಲದಿದ್ದರೆ ತಾರ್ಕಿಕ ಪ್ರಜ್ಞೆ ಬೆಳೆಯುವುದಾದರೂ ಹೇಗೆ? ಈ ಕಾರಣಕ್ಕಾಗಿಯೇ ನಾನು ಶಿಕ್ಷಣದ ಮಹತ್ವವನ್ನು ಒತ್ತಿ ಹೇಳುವುದು.

ಒಂದು ಹಳ್ಳಿಯಲ್ಲಿ ಹರಿಜನರ ಪುನರ್ವಸತಿಗಾಗಿ ಸ್ವಲ್ಪ ಜಮೀನನ್ನು ವಶಪಡಿಸಿಕೊಳ್ಳುವ ಪ್ರಸ್ತಾಪವಿತ್ತು. ಅವರು ಕೊಳಕಾದ, ಅನಾರೋಗ್ಯಕರವಾದ, ನೀರಿನ ಸೌಲಭ್ಯವಿಲ್ಲದ ಕಿಷ್ಕಿಂಧೆಯಂತಹ ಜಾಗದಲ್ಲಿ ವಾಸಿಸುತ್ತಿದ್ದರು. ಆದರೆ ಆ ಹಳ್ಳಿಯ ಪೂಜಾರಿಯೋ, ಶಾನುಭೋಗರೋ ಅಲ್ಲಿನ ಹರಿಜನರ ತಲೆಯಲ್ಲಿ 'ನೀವು ನಿಮ್ಮ ವಾಸಸ್ಥಾನವನ್ನು ಇಲ್ಲಿಂದ ಬದಲಾಯಿಸಿದರೆ, ಮಾರಮ್ಮನ ಕೋಪಕ್ಕೆ ತುತ್ತಾಗುತ್ತೀರಿ' ಎಂಬ ಕುವಿಚಾರವನ್ನು ಬಿತ್ತಿದರು. ಇದರಿಂದ ಹೆದರಿದ ಹರಿಜನರು ಭಯಗೊಂಡು ಸ್ಥಳಾಂತರದ ವಿರುದ್ಧ ಪ್ರತಿಭಟಿಸಿದರು ಮತ್ತು ಸ್ಥಳೀಯ ಅಧಿಕಾರಿಗಳು ಈ ಪ್ರಸ್ತಾಪವನ್ನು ಕೈಬಿಡುವಂತೆ ಶಿಫಾರಸು ಮಾಡಿದರು. ನಾನು ಈ ಹಳ್ಳಿಗೆ ಭೇಟಿಕೊಟ್ಟು, ಹರಿಜನರು ಪ್ರಸ್ತುತ ವಾಸವಾಗಿದ್ದ ಸ್ಥಳವನ್ನೂ ಮತ್ತು ಅವರಿಗಾಗಿ ನಿಯೋಜಿತವಾಗಿದ್ದ ಸ್ಥಳವನ್ನೂ ಪರಿಶೀಲಿಸಿದೆ. ನಿಯೋಜಿತ ಸ್ಥಳವು ಎತ್ತರದ ಪ್ರದೇಶದಲ್ಲಿದ್ದು, ಆಧುನಿಕ ವಾಸದ ಬಡಾವಣೆಗೆ ಎಲ್ಲಾ ವಿಧದಲ್ಲಿಯೂ ಸೂಕ್ತವಾಗಿತ್ತು. ನಾನು ಅಲ್ಲಿನ ಜನರನ್ನು ಕರೆದು ಅವರು ಹೊಸ ಜಾಗಕ್ಕೆ ಹೋಗಲು ಪ್ರತಿಭಟಿಸಿದ್ದು ಏಕೆ ಎಂದು ವಿಚಾರಿಸಿದೆ. ಅದಕ್ಕೆ

ಅಲ್ಲಿನ ಹರಿಜನರು, ಜ್ಯೋತಿಷಿಯೂ ಆಗಿದ್ದ ಶಾನುಭೋಗರು ಹೊಸ ಜಾಗಕ್ಕೆ ಹೋದರೆ ತಾವು ನಾಶವಾಗುತ್ತೇವೆಂದು ಹೇಳಿದ್ದುದರಿಂದ ಹೊಸ ಜಾಗಕ್ಕೆ ಹೋಗಲು ತಾವು ಸಿದ್ಧರಿಲ್ಲವೆಂದು ಹೇಳಿದರು. ಅದಕ್ಕೆ ನಾನು 'ಮಾರಮ್ಮ ಶಕ್ತಿಯುತಳಾದ ದೇವತೆಯೆಂದರೆ, ಚಾಮುಂಡಿಯು ಅವಳಿಗಿಂತಲೂ ಶಕ್ತಿವಂತಳಾದ ದೇವತೆಯಲ್ಲವೆ? ಎಂದು ಅವರನ್ನು ಕೇಳಿದೆ. ಅವರು ಒಪ್ಪಿಕೊಂಡರು. ಅವರಿಗೆ ನಾನು ಅಂದು ಬೆಳಿಗ್ಗೆ ಚಾಮುಂಡೇಶ್ವರಿಯ ದೇವಸ್ಥಾನಕ್ಕೆ ಹೋಗಿ ಅವಳ ಅನುಗ್ರಹವನ್ನು ಬೇಡಿದೆ, ಅದಕ್ಕೆ ಆಕೆ 'ಈ ಹರಿಜನರು ತಮ್ಮ ಜಾಗದಿಂದ ಹೊಸ ಜಾಗಕ್ಕೆ ಹೋಗದಿದ್ದರೆ ಅವರಷ್ಟೇ ಅಲ್ಲ, ಅವರ ಮಕ್ಕಳು, ಮತ್ತು ಅವರು ತಮ್ಮ ಪ್ರೀತಿಪಾತ್ರವೆಂದು ಹೇಳಿಕೊಳ್ಳುವ ಎಲ್ಲವೂ ನನ್ನ ಕೋಪದಿಂದ ನಾಶವಾಗುತ್ತವೆ' ಎಂದು ಹೇಳಿದಳು. ಇದನ್ನು ಕೇಳಿದ ಹರಿಜನರು, ತಾವು ಹೊಸ ಪ್ರದೇಶಕ್ಕೆ ಸ್ಥಳಾಂತರಗೊಳ್ಳಲು ಒಪ್ಪಿಕೊಂಡರು. ಹಲವಾರು ಶತಮಾನಗಳಿಂದ ಅಲ್ಪಸಂಖ್ಯಾತರಾದ ಕೆಲವು ವರ್ಗಗಳವರು, ಬಹುಸಂಖ್ಯಾತರನ್ನು ದೇವರ, ಮತದ ಹೆಸರಿನಲ್ಲಿ ಗುಲಾಮಗಿರಿಯಲ್ಲಿ ಇಟ್ಟುಕೊಂಡು, ಅವರ ಸಾಮಾಜಿಕ, ಆರ್ಥಿಕ ಮತ್ತು ಶೈಕ್ಷಣಿಕ ಹಕ್ಕುಗಳನ್ನು ತಮ್ಮಲ್ಲಿ ಒತ್ತೆಯಿಟ್ಟುಕೊಂಡಿದ್ದಾರೆ. ಯುವ ಜನತೆ ಶಿಕ್ಷಣವನ್ನು ಪಡೆದುಕೊಂಡು ಮುಂದೆ ಬಂದು ಇದನ್ನೆಲ್ಲಾ ತೊಡೆದುಹಾಕದಿದ್ದರೆ, ಅವರಿಗೆ ಇದನ್ನೆಲ್ಲಾ ವಿವರಿಸುವವರು ಯಾರು?

ಹೀಗೆ, ಎಲ್ಲಾ ಹಂತದಲ್ಲಿಯೂ, ಎಲ್ಲಾ ಸಂದರ್ಭಗಳಲ್ಲಿಯೂ ಪಟ್ಟಭದ್ರ ಹಿತಾಸಕ್ತಿಗಳು ಬಡ ಮತ್ತು ತಿಳಿವಳಿಕೆಯಿಲ್ಲದ ಜನತೆಯ ಮೇಲೆ ತಮ್ಮ ಬಿಗಿ ಹಿಡಿತವನ್ನು ಇನ್ನೂ ಬಿಗಿಗೊಳಿಸುತ್ತಾ, ಅವರನ್ನು ಶೋಷಿಸುತ್ತಾ ಇರುವುದನ್ನು ನೀವು ಕಾಣಬಹುದು. ಈ ಹಿತಾಸಕ್ತಿಗಳು ಅವರನ್ನು ಸುಲಿಗೆ ಮಾಡುತ್ತಾ ಸುಲಿಗೆ ಮಾಡಿ ಅವರ ರಕ್ತವನ್ನು ಹೀರುತ್ತವೆ. ದುಡಿಮೆಯ ಫಲವು ಅವರಿಗೆ ದಕ್ಕದ ಹಾಗೆ ಮಾಡುತ್ತಾರೆ. ಶಿಕ್ಷಣವನ್ನು ಪಡೆಯದ ಹಾಗೆ ಮಾಡುತ್ತಾರೆ. ಸಿಗಬಹುದಾದ ಹೊಟ್ಟೆತುಂಬ ಊಟಕ್ಕೂ ಕಲ್ಲುಹಾಕುತ್ತಾರೆ. ಈ ರೋಗವನ್ನು ಗುಣಪಡಿಸಲೋಸುಗ ನಮ್ಮ ಸಂವಿಧಾನದ ಕರ್ತೃಗಳು ನತದೃಷ್ಟ ಜನತೆಗೆ ಸಂವಿಧಾನದಲ್ಲಿ ಕೆಲವು ವಿಶೇಷ ಸಂರಕ್ಷಣಾ ವಿಧಿಗಳನ್ನು, ಸವಲತ್ತುಗಳನ್ನು ಅಳವಡಿಸಿದ್ದಾರೆ. ಇದಕ್ಕೆ ಸವರ್ಣೀಯರ ಔದಾರ್ಯವೇ ಕಾರಣ ಮತ್ತು ಈ ಕಾರಣಕ್ಕಾಗಿ ನಾವು ಅವರಿಗೆ ಯಾವಾಗಲೂ ಕೃತಜ್ಞರಾಗಿರಬೇಕು.

ಪಶುಸಂಪತ್ತು ನಮಗೆ ಬಹಳ ಅಮೂಲ್ಯವಾದದ್ದು. ಕೈಗಾರಿಕೆಗಳಲ್ಲಿ ಮುಂದುವರಿದ ದೇಶಗಳಲ್ಲಿಯೂ ಪಶುಸಂಪತ್ತನ್ನು ಸದಾಕಾಲವೂ ಅಭಿವೃದ್ಧಿಪಡಿಸುತ್ತಲೇ ಇರುವುದನ್ನು ಸಂರಕ್ಷಿಸುತ್ತಲೇ ಇರುವುದನ್ನು ಕಾಣಬಹುದು. ನಾವು ಅಕ್ಕಿ, ಗೋಧಿ, ರಾಗಿ ಮೊದಲಾದ ಕೆಲವೇ ಧಾನ್ಯಗಳನ್ನು ಉಪಯೋಗಿಸುವುದರಿಂದ ನಮ್ಮಲ್ಲಿ ಆಹಾರದ ಅಭಾವ ತೀವ್ರವಾಗಿದೆ. ಬೇರೆಯ ದೇಶಗಳಲ್ಲಿ ಈ ಧಾನ್ಯಗಳು ಅಪ್ರಧಾನವಾಗಿವೆ. ಅಲ್ಲಿನ ಆಹಾರ ಪದ್ಧತಿಯಲ್ಲಿ ಮಾಂಸ, ಹಾಲು, ಮೀನು, ಮೊಟ್ಟೆ ಮತ್ತು ಇತರ ಸಂರಕ್ಷಿತ ಪ್ರಾಣಿಜನ್ಯ ಉತ್ಪನ್ನಗಳದ್ದೇ ಮೇಲುಗೈ. ನಾವು ಅವರ ಹಾಗೆ ಸಿಕ್ಕಿದ್ದೆಲ್ಲವನ್ನೂ ತಿನ್ನುವವರಲ್ಲ, ನಮ್ಮಲ್ಲಿ ಕೆಲವರು ಸಸ್ಯಾಹಾರಕ್ಕೆ ಸೀಮಿತವಾಗಿದ್ದಾರೆ. ನಮ್ಮ, ಕನಿಷ್ಠ ಮಾಂಸಾಹಾರಿಗಳ, ಆಹಾರ ಪದ್ಧತಿಯು ಬದಲಾದರೆ, ದೇಶದ ಆಹಾರ ಸಮಸ್ಯೆಯು ಸ್ವಲ್ಪಮಟ್ಟಿಗಾದರೂ ಕಡಿಮೆಯಾಗುತ್ತದೆ. ನಾವು ಸ್ಥಳೀಯ ದನಗಳ ಮತ್ತು ಕೋಳಿಗಳ ತಳಿಗಳನ್ನು ಉತ್ತಮಪಡಿಸಿದರೆ, ಹೆಚ್ಚಿನ ಮಾಂಸ ಮತ್ತು ಹಾಲು ಹಾಗೂ ಸಂಸ್ಕರಿಸಿದ ಉತ್ಪನ್ನಗಳು ಖಂಡಿತವಾಗಿಯೂ ನಮಗೆ ದೊರೆಯುತ್ತವೆ. ಇದರಿಂದ ಪ್ರಧಾನ ಆಹಾರಧಾನ್ಯಗಳ ಮೇಲಿನ ಅವಲಂಬನೆ ಕಡಿಮೆಯಾಗಿ ಪರಿಸ್ಥಿತಿ ಸ್ವಲ್ಪ ಸುಲಭವಾಗಬಹುದು. ನೀವು ಏನನ್ನಾದರೂ ಮಾಡುವಾಗ, ನಿಮ್ಮ ವೈಯಕ್ತಿಕ ಲಾಭದ ದೃಷ್ಟಿಯಿಂದ ಅದನ್ನು ಮಾಡದೆ, ರಾಷ್ಟ್ರದ ಹಿತದೃಷ್ಟಿಯಿಂದ ಮಾಡಿ. ಹಾಗೆ ಮಾಡಿದರೆ ನಿಮ್ಮ ವೈಯಕ್ತಿಕ ಹಾಗೂ ರಾಷ್ಟ್ರದ ಹಿತ ಎರಡೂ ಸಾಧಿತವಾಗುತ್ತದೆ. ಹಾಗಿದ್ದರೆ, ಹಾಗೇಕೆ ಮಾಡಬಾರದು? ನಮಗೆ ದೊರೆತಿರುವ ಉತ್ತಮ ಬೀಜ ಹಾಗೂ ಉತ್ತಮ ತಳಿಯ ಜಾನುವಾರುಗಳ ಸಹಾಯದಿಂದ, ನಾವು ಮೂರನೆಯ ಪಂಚವಾರ್ಷಿಕ ಯೋಜನೆಯ ಅಂತ್ಯದವೇಳೆಗೆ ಆಹಾರದ ಅಭಾವವನ್ನು ನಿವಾರಿಸಬಹುದು ಎಂಬ ಆಶ್ವಾಸನೆಯನ್ನು ನಾನು ನಿಮಗೆ ನೀಡುತ್ತಿದ್ದೇನೆ.

## ♦ ಪಶುಸಂಗೋಪನೆಯ ಕ್ಷೇತ್ರದಲ್ಲಿ ಆಗಬೇಕಾದ ಬದಲಾವಣೆಗಳು

**ವಿದ್ಯಾರ್ಥಿಗಳ ಶ್ರೇಯೋಭಿವೃದ್ಧಿಗಾಗಿ ಸದಾ ಸಿದ್ಧರಾಗಿರುತ್ತಿದ್ದ ರಾಚಯ್ಯನವರು ಉತ್ತಮ ದಾರಿಯಲ್ಲಿ ನಡೆಯಲು ಪ್ರೋತ್ಸಾಹಿಸುತ್ತಿದ್ದರು. ಅವರ ಕುಂದುಕೊರತೆಗಳನ್ನು ಆಲಿಸಿ ಪರಿಹರಿಸುವ ನಿಟ್ಟಿನಲ್ಲಿ ಕಾರ್ಯೋನ್ಮುಖರಾಗುತ್ತಿದ್ದರು. ಅಂತೆಯೇ 1960ರ ಮಾರ್ಚ್ 11ರಂದು ಹೆಬ್ಬಾಳನ ಪಶುವೈದ್ಯ ಕಾಲೇಜಿನ ಕಾಲೇಜು ದಿನದಂದು ಮಾಡಿದ ಸಮಾರೋಪ ಭಾಷಣ.**

ವಿದ್ಯಾರ್ಥಿಗಳು ಸಂಘಟಿಸುವ ಇಂತಹ ಸಮಾರಂಭಗಳಲ್ಲಿ ಭಾಗವಹಿಸುವುದು ನನಗೆ ಸಂತೋಷವನ್ನು ತರುವ ಸಂಗತಿ. ಅಂತಹ ವಿದ್ಯಾರ್ಥಿಗಳು ಕೃಷಿ ಅಥವಾ ಪಶುಸಂಗೋಪನಾ ಕಾಲೇಜಿನವರಾಗಿದ್ದರೆ ಅದು ನನಗೆ ಮತ್ತೂ ಹೆಚ್ಚಿನ ಸಂತೋಷವನ್ನು ತರುತ್ತದೆ. ನಾನು ಈ ಎರಡು ಖಾತೆಗಳ ಸಚಿವನಾಗಿದ್ದೇನೆಂಬ ಕಾರಣಕ್ಕಾಗಿ ಅಲ್ಲ. ನಾನು ಬೇಸಾಯಗಾರರ ಕುಟುಂಬದಲ್ಲಿ ಹುಟ್ಟಿದವನು ಮತ್ತು ನನಗೆ ಕೃಷಿಯಲ್ಲಿ ಬಹಳವಾದ ಆಸಕ್ತಿಯಿದೆ. ನಾನು ನಿಮ್ಮೊಡನೆ ಇರುವುದರಿಂದ ನನಗೆ ಇನ್ನೂ ಒಂದು ರೀತಿಯ ಸಂತೋಷವಾಗುತ್ತದೆ. ಅದೆಂದರೆ ನೀವು ಈ ಕಾಲೇಜಿನ ಶಿಸ್ತುಬದ್ಧ ಯುವಕರು. ಬೇರೆ ಕಾಲೇಜಿನ ವಿದ್ಯಾರ್ಥಿಗಳು ಹಿಂಸಾಚಾರದ ಪ್ರಚೋದನೆಗೆ ಒಳಗಾಗಿ ಸಾರ್ವಜನಿಕ ಗಲಭೆಗಳಲ್ಲಿ ದಾಂದಲೆಯನ್ನು ಮಾಡುತ್ತಿದ್ದಾಗ, ಸಮಾಜವಿರೋಧಿ ಚಟುವಟಿಕೆಗಳಲ್ಲಿ ತೊಡಗಿದ್ದಾಗ, ನೀವು, ಇದೊಂದು ಕಾಲೇಜಿನ ವಿದ್ಯಾರ್ಥಿಗಳು ಮಾತ್ರ, ಇವುಗಳಿಂದ ದೂರವಿದ್ದಿರಿ, ಶಾಂತವಾಗಿದ್ದಿರಿ ಮತ್ತು ಶಿಸ್ತನ್ನು ಕಾಯ್ದುಕೊಂಡಿರಿ. ನೀವು ಎಲ್ಲರಂತೆ ಗಲಭೆಯ ಮಹಾಪ್ರವಾಹಕ್ಕೆ ಬೀಳದೆ ಇದ್ದುದು ನಿಮ್ಮ ವಿವೇಕವನ್ನು ತೋರಿಸುತ್ತದೆ. ಇದರಿಂದಲೇ ನೀವು ಎಲ್ಲರ ಮೆಚ್ಚಿಗೆಗೆ ಪಾತ್ರವಾದಿರಿ. ನಿಮ್ಮ ಕಾಲೇಜು ನೇರವಾಗಿ ನನ್ನ ಅಧೀನದಲ್ಲಿಯೇ ಇರುವುದರಿಂದ, ನಿಮ್ಮ ನಡತೆಯ ಬಗ್ಗೆ ನನಗೆ ಹೆಮ್ಮೆಯಿದೆ. ಆಗಿನಿಂದಲೂ ನಾನು ನಿಮ್ಮನ್ನು ಭೇಟಿಯಾಗಬೇಕೆಂದು ತವಕಿಸುತ್ತಿದ್ದೆ. ಈಗ ಆ ಬಯಕೆ ಈಡೇರಿದೆ.

ನೀವು ನಿಮ್ಮ ಪ್ರತಿಭೆಯಿಂದ ಅಖಿಲ ಭಾರತ ವ್ಯವಸ್ಥೆಯಲ್ಲಿ ಎಂತಹ ಒಳ್ಳೆಯ ಗುರುತನ್ನು ಮಾಡಿದ್ದೀರಿ ಎಂಬುದು, ನಿಮ್ಮ ಅಧ್ಯಕ್ಷರು ಓದಿದ

ವರದಿಯಿಂದ ಗೊತ್ತಾಗುತ್ತದೆ. ನೀವು ಹಲವು ಬಹುಮಾನಗಳನ್ನು ಮತ್ತು ಪಾರಿತೋಷಕಗಳನ್ನು ಗೆದ್ದಿದ್ದೀರಿ, ನಿಮ್ಮಲ್ಲಿ ಕೆಲವು ನಾಯಕರು ಅಖಿಲ ಭಾರತ ಸಂಸ್ಥೆಯಲ್ಲಿ ಪ್ರಮುಖ ಪದಾಧಿಕಾರಿಗಳಾಗಿ ಚುನಾಯಿತರಾಗಿದ್ದೀರಿ. ಶೈಕ್ಷಣಿಕ ವಿಷಯಗಳಲ್ಲಿ ಮತ್ತು ಶಿಕ್ಷಣಕ್ಕೆ ಹೊರತಾದ ಚಟುವಟಿಕೆಗಳಲ್ಲಿ ನೀವು ಮಾಡಿರುವ ಸಾಧನೆಗಳನ್ನು ನಿಮ್ಮ ಪ್ರೊಫೆಸರ್ ಅವರಿಂದ ತಿಳಿದುಕೊಂಡು ಸಂತೋಷಪಟ್ಟಿದ್ದೇನೆ.

ನಿಮಗೆ ನಿಮ್ಮದೇ ಆದ ಕಾಲೇಜು ಕಟ್ಟಡವಿಲ್ಲ. ಆದರೂ ಇರುವಷ್ಟು ಸೌಲಭ್ಯಗಳಿಂದಲೇ ನೀವು ಒಳ್ಳೆಯ ಪ್ರಗತಿಯನ್ನು ಸಾಧಿಸಿದ್ದೀರಿ. ಈ ವರ್ಷ ನೀವು ಇಲ್ಲಿ ನಿಮ್ಮ ಸಮಾರೋಪ ಸಮಾರಂಭವನ್ನು ನಡೆಸುತ್ತಿದ್ದೀರಿ, ಮುಂದಿನ ವರ್ಷ ನಿಮ್ಮದೇ ಸ್ವಂತ ಕಟ್ಟಡದಲ್ಲಿ ಇದನ್ನು ಆಚರಿಸುವಿರಿ ಎಂದು ನಾನು ಆಶಿಸುತ್ತೇನೆ. ಕಟ್ಟಡದ ಕೆಲಸವು ಶೀಘ್ರವಾಗಿ ಮುಗಿಸಲು, ನಿಮಗೆ ಅಗತ್ಯವಾದ ಎಲ್ಲಾ ಸೌಲಭ್ಯಗಳನ್ನೂ ಒದಗಿಸಲು ಮತ್ತು ಮತ್ತೆ ನೀವು ನನ್ನಿಂದ ಏನನ್ನೂ ಕೇಳುವ ಹಾಗೆ ಇರಬಾರದು ಎಂಬ ಸ್ಥಿತಿಗೆ ತರಲು ನನಗೆ ಸಾಧ್ಯವಾದುದೆಲ್ಲವನ್ನೂ ಮಾಡುತ್ತಿದ್ದೇನೆ. ಆದಷ್ಟು ಶೀಘ್ರವಾಗಿ ಈ ಕಾಲೇಜು ಒಂದು ಮಾದರಿ ಕಾಲೇಜು ಆಗಬೇಕು, ಎಲ್ಲರೀತಿಯಿಂದಲೂ ಸ್ವಾವಲಂಬಿಯಾಗಿರಬೇಕೆಂಬುದು ನನ್ನ ಆಶಯ. ಇದಕ್ಕಾಗಿ ಎಲ್ಲರ ಮೇಲೂ ನಾನು ಒತ್ತಡವನ್ನು ಹೇರುತ್ತಿದ್ದೇನೆ ಮತ್ತು ನಾನು ಇದರಲ್ಲಿ ಯಶಸ್ವಿಯಾಗುತ್ತೇನೆಂದು ಆಶಿಸುತ್ತೇನೆ.

ನೀವು ನಿಮ್ಮ ಭಾಷಣದಲ್ಲಿ ನಿಮ್ಮ ಸಿಬ್ಬಂದಿಗಳಿಗೆ, ಪಶುವೈದ್ಯರಿಗೆ ಹೊಸ ವೇತನದ ಬಗ್ಗೆ ಪ್ರಸ್ತಾಪಿಸಿದ್ದೀರಿ. ಅಲ್ಲದೆ, ನಿಮ್ಮ ಮುಂದಿನ ವೃತ್ತಿಯ ಬಗ್ಗೆಯೂ ಆತಂಕವನ್ನು ವ್ಯಕ್ತಪಡಿಸಿದ್ದೀರಿ. ನಾನು ನಿಮಗೆ ಈಗ ಮತ್ತು ಇಲ್ಲೇ ಆಶ್ವಾಸನೆಯನ್ನು ನೀಡುತ್ತೇನೆ, ಮೂರನೆಯ ಪಾಂಚವಾರ್ಷಿಕ ಯೋಜನೆಯಲ್ಲಿ ಪಶುಸಂಗೋಪನೆಗೆ ಬಹಳ ಆದ್ಯತೆಯನ್ನು ನೀಡಲಾಗಿದೆ. ಅದು ಅರ್ಹವಾಗಿ ಈ ಆದ್ಯತೆಯನ್ನು ಪಡೆದುಕೊಂಡಿದೆ. ಪರಿಸ್ಥಿತಿಯು ಹೀಗಿರುವಾಗ ನಿಮ್ಮ ವೇತನ ಶ್ರೇಣಿಯು ಉತ್ತಮಗೊಳ್ಳುತ್ತದೆ, ಇತರ ಸೌಲಭ್ಯಗಳು ದೊರಕುತ್ತದೆ ಎಂಬ ಬಗ್ಗೆ ಸಂಶಯವೇಕೆ? ನನ್ನ ಮಟ್ಟಿಗೆ ಹೇಳುವುದಾದರೆ, ಪಶುಸಂಗೋಪನೆಯ ಇಲಾಖೆಯ ಸಿಬ್ಬಂದಿ, ಅಧಿಕಾರಿಗಳು ಮತ್ತಿತರರಿಗೆ ಸರಿಯಾದ ವೇತನಗಳು ಸಿಗದಿದ್ದರೆ, ಮೂರನೆಯ ಪಾಂಚವಾರ್ಷಿಕ ಯೋಜನೆಯು ಯಶಸ್ವಿಯಾಗುವುದರಲ್ಲಿ ಯಾವುದೇ ನಂಬಿಕೆ ಇರುವುದಿಲ್ಲ.

ಎಲ್ಲಕ್ಕಿಂತ ಮಿಗಿಲಾಗಿ, ರಾಜ್ಯದಲ್ಲಿ ಆಹಾರದ ಕೊರತೆಯನ್ನು ನಿವಾರಣೆಯು ಪಶುಸಂಗೋಪನಾ ಇಲಾಖೆ ಮತ್ತು ಮೀನುಗಾರಿಕೆ ಇಲಾಖೆಗಳ ಅಭಿವೃದ್ಧಿಯನ್ನು ಹೆಚ್ಚಾಗಿ ಅವಲಂಬಿಸಿರುತ್ತದೆ. ಶಕ್ತಿಯುತವಾದ ಮತ್ತು ಆರೋಗ್ಯಪೂರ್ಣ ಜಾನುವಾರುಗಳು ಇಲ್ಲದಿದ್ದರೆ, ದೇಶವು ಬಯಸುವ ಆಹಾರ ಮತ್ತು ಪೂರಕ ಆಹಾರಗಳ ಒದಗಣೆಯು ಸಾಧ್ಯವಿಲ್ಲ. ವಾಸ್ತವವಾಗಿ, ಮೂರನೆಯ ಪಂಚವಾರ್ಷಿಕ ಯೋಜನೆಯ ಯಶಸ್ಸಿನ ಹೆಚ್ಚು ಪಾಲು, ಪಶುಸಂಗೋಪನಾ ಇಲಾಖೆಯ ಅಭಿವೃದ್ಧಿ ಹಾಗೂ ಪಶುಸಂಪತ್ತಿನ ಅಭಿವೃದ್ಧಿಯ ಮೇಲೆ ನಿಂತಿದೆ. ಈ ದೃಷ್ಟಿಯಿಂದ ಪಶುಸಂಗೋಪನಾ ಇಲಾಖೆಯ ಸಿಬ್ಬಂದಿಗಳು ಮತ್ತು ಅಧಿಕಾರಿಗಳು ಇತರ ತಾಂತ್ರಿಕ ಮತ್ತು ಸಾಮಾನ್ಯ ಇಲಾಖೆಗಳ ಮಟ್ಟದ ಸೌಲಭ್ಯವನ್ನು ಪಡೆಯುವುದಷ್ಟೇ ಅಲ್ಲದೆ, ಅವರು ತಮ್ಮ ವೃತ್ತಿಯಲ್ಲಿ ಉತ್ತಮ ಭವಿಷ್ಯವನ್ನೂ ನಿರೀಕ್ಷಿಸಬಹುದು. ಇಂಜನಿಯರ್‌ಗಳು, ವೈದ್ಯರು ಅಥವಾ ವಕೀಲರು ಉತ್ತಮ ಭವಿಷ್ಯವನ್ನು ಬಯಸಿದರೆ, ಪಶುವೈದ್ಯರು ಮತ್ತು ಪಶುಸಂಗೋಪನಾ ಇಲಾಖೆಯ ಸಿಬ್ಬಂದಿಗಳು ಅವರಿಗಿಂತ ಹೆಚ್ಚಿನ ಸೌಲಭ್ಯವನ್ನು ಪಡೆಯಲು ಅರ್ಹರಾಗಿರುತ್ತಾರೆ, ಏಕೆಂದರೆ ಇವರು ಸಂಪತ್ತನ್ನು ಉತ್ಪಾದಿಸುವವರೆ ಹೊರತು, ಅದರ ಬಳಕೆದಾರರಾಗಿರುವುದಿಲ್ಲ. ಇಂದು ಅಮೆರಿಕಾ ಅಥವಾ ರಷ್ಯಾ ಬಹಳ ಮುಂದುವರಿದ ರಾಷ್ಟ್ರಗಳಾಗಿದ್ದರೆ, ಅದರ ಮೊದಲ ಕಾರಣ ಅವರು ಕೈಗಾರಿಕೀಕರಣಗೊಂಡಿರುವುದು ಮತ್ತು ಎರಡನೆಯ ಕಾರಣವೆಂದರೆ ಅವರ ಪಶುಸಂಪತ್ತು. ತನ್ನ ಜನಸಂಖ್ಯೆಯಲ್ಲಿ ಶೇ. 12ರಿಂದ 13ರಷ್ಟು ಜನರು ಮಾತ್ರ ಕೃಷಿಯಲ್ಲಿ ತೊಡಗಿದ್ದರೂ, ಅವರು ತಮ್ಮ ಅಗತ್ಯಕ್ಕೂ ಮೀರಿ ಆಹಾರಧಾನ್ಯಗಳನ್ನು ಬೆಳೆದು ಅಧಿಕವಾದುದನ್ನು ರಫ್ತುಮಾಡುತ್ತಾರೆ. ನಮ್ಮ ದೇಶದಲ್ಲಿ ಅಮೂಲ್ಯವೆಂದು ಪರಿಗಣಿಸುವ ಆಹಾರಧಾನ್ಯಗಳನ್ನು ಅಲ್ಲಿ ಹಂದಿಗಳಿಗೆ ಮತ್ತು ಇತರ ಪ್ರಾಣಿಗಳಿಗೆ ತಿನ್ನಿಸುತ್ತಾರೆ. ಅವರಲ್ಲಿ ಇನ್ನೂ ಉಳಿದ ಧಾನ್ಯಗಳನ್ನು ಸುಡುತ್ತಾರೆ ಇಲ್ಲವೆ ಸಮುದ್ರಕ್ಕೆ ಸುರಿಯುತ್ತಾರೆ. ಇತ್ತೀಚೆಗೆ ಅವರು ಹಾಗೆ ಉಳಿದುಹೋದ ಧಾನ್ಯವನ್ನು ಹಿಂದುಳಿದ ಮತ್ತು ಹಸಿವಿನಿಂದ ನರಳುತ್ತಿರುವ ದೇಶಗಳಿಗೆ ಕೊಡುಗೆಯಾಗಿ ನೀಡುತ್ತಿದ್ದಾರೆ. ನಾನು ಹೇಳಬಯಸಿರುವುದು ಏನೆಂದರೆ, ಕೇವಲ ಶೇ. 12ರಷ್ಟು ಜನರು ಕೃಷಿಯಲ್ಲಿ ತೊಡಗಿದ್ದರೂ, ಆ ದೇಶವು ಪಶುಸಂಗೋಪನೆ ಮತ್ತು ಕೃಷಿಯಲ್ಲಿ ಎಷ್ಟು ಮುಂದುವರಿದಿದ್ದಾರೆಂದರೆ, ತಮ್ಮ ಅಗತ್ಯಕ್ಕಿಂತ ಹೆಚ್ಚು ಆಹಾರಧಾನ್ಯವನ್ನು

ಬೆಳೆಯಬಲ್ಲರು. ನಮ್ಮ ದೇಶದಲ್ಲಿ ಕೃಷಿಯಲ್ಲಿ ತೊಡಗಿರುವವರು ದೇಶದ ಒಟ್ಟು ಜನಸಂಖ್ಯೆಯಲ್ಲಿ ಶೇ. 85ರಷ್ಟು ಇದ್ದರೂ, ನಾವು ಪ್ರಮುಖ ಬೆಳೆಗಳಲ್ಲಿಯೂ ಸ್ವಾವಲಂಬಿಗಳಾಗಿಲ್ಲ. ಇದಕ್ಕೆ ಕಾರಣವೆಂದರೆ, ನಾವು ಕೃಷಿಯಲ್ಲಿ ಮತ್ತು ಅದಕ್ಕಿಂತಲೂ ಹೆಚ್ಚಾಗಿ ಪಶುಸಂಗೋಪನೆಯಲ್ಲಿ ಬಹಳ ಹಿಂದೆ ಬಿದ್ದಿದ್ದೇವೆ. ನಮ್ಮ ಆಹಾರದ ಅಭ್ಯಾಸಗಳು ಬದಲಾಗಲೇ ಬೇಕು. ಪಾಶ್ಚಾತ್ಯ ದೇಶಗಳಲ್ಲಿ ಜನರು ಪ್ರಾಣಿಗಳು ಮತ್ತು ಪ್ರಾಣಿಜನ್ಯ ಪದಾರ್ಥಗಳನ್ನು ಆಹಾರಕ್ಕಾಗಿ ಬಳಸುತ್ತಾರೆ ಮತ್ತು ಧಾನ್ಯಗಳಿಗೆ ಎರಡನೆಯ ಸ್ಥಾನವನ್ನು ನೀಡುತ್ತಾರೆ. ನಮ್ಮ ದೇಶದಲ್ಲಿ ಆಹಾರ ಪದ್ಧತಿಯು ಇದಕ್ಕೆ ವಿರುದ್ಧವಾಗಿದೆ. ಸಸ್ಯಾಹಾರಿಗಳು ಮಾಂಸಾಹಾರಿಗಳಾಗಬೇಕೆಂದು ನಾನು ಹೇಳುತ್ತಿಲ್ಲ. ನಾನು ಒತ್ತುಕೊಡುತ್ತಿರುವುದು ಪ್ರಾಣಿಜನ್ಯ ಪದಾರ್ಥಗಳಾದ ಹಾಲು, ಬೆಣ್ಣೆ, ಮೊದಲಾದವುಗಳನ್ನು ಹೆಚ್ಚುಹೆಚ್ಚಾಗಿ ಬಳಸಬೇಕೆಂಬುದಕ್ಕೆ ಪ್ರಾಧಾನ್ಯ ನೀಡಬೇಕು ಎಂಬುದಕ್ಕೆ. ಇದಕ್ಕೆ ಉತ್ಪಾದನೆಯ ಗತಿ ಹೆಚ್ಚಬೇಕು. ಅಂದರೆ ನಾವು ವೈಜ್ಞಾನಿಕ ಪದ್ಧತಿಯನ್ನು ಅನುಸರಿಸಬೇಕು. ಪಶುವೈದ್ಯರ ಪಾತ್ರವು ಬರುವುದು ಇಲ್ಲಿ. ಈಗ ನೀವು ಪಶುವೈದ್ಯರಿಗೆ ವಹಿಸಿರುವ ಪಾತ್ರವು ಎಷ್ಟು ದೊಡ್ಡದು ಎಂಬುದನ್ನು ಅರಿಯಬಹುದು. ಸ್ವಾತಂತ್ರ್ಯಪೂರ್ವದಲ್ಲಿ ಈ ವಿಷಯಕ್ಕೆ ಅದಕ್ಕೆ ಸಿಕ್ಕಬೇಕಾಗಿದ್ದ ಮಹತ್ವವು ಸಿಕ್ಕಿರಲಿಲ್ಲ. ಈ ಕೊರತೆಯು ರಾಷ್ಟ್ರದ ಮೇಲೆ ಸಾಕಷ್ಟು ದುಷ್ಪರಿಣಾಮವನ್ನು ಬೀರಿದೆ. ನಮ್ಮ ಹಸಿವಿನ, ರೋಗಗಳ ಮತ್ತು ಅಪೌಷ್ಟಿಕತೆಯ ಸಮಸ್ಯೆಗಳಿಗೆ ಇದೇ ಕಾರಣ. ನಮ್ಮ ಸಮಾಜದಲ್ಲಿ ಬೇಸಾಯವನ್ನು ಗೌರವದಿಂದ ಕಾಣುತ್ತಿಲ್ಲ. ಇದು ನಮ್ಮ ಪತನ ಹಾಗೂ ಆರೋಗ್ಯದಲ್ಲಿನ ದೌರ್ಬಲ್ಯಗಳಿಗೆ ಕಾರಣವಾಗಿದೆ. ಬೇಸಾಯಗಾರನಿಗೆ ಮತ್ತು ಜಾನುವಾರುಗಳನ್ನು ಸಾಕುವವನಿಗೆ ಉನ್ನತವಾದ ಗೌರವವು ದೊರಕಬೇಕು, ಏಕೆಂದರೆ ಅವನು ದೇಶದ ಸಂಪತ್ತಿನ ನಿಜವಾದ ಉತ್ಪಾದಕ. ಕಚೇರಿಯ ಜವಾನನನ್ನು, ಪೂಜಾರಿಯನ್ನು ಗೌರವದಿಂದ ನೋಡುವ ಜನರು ಸಂಪತ್ತಿನ ಉತ್ಪಾದಕನನ್ನು ಹೀನಾಯವಾಗಿ ಕಾಣುತ್ತಾರೆ. ಈ ಧೋರಣೆ ಸರಿಯೇ? ಇದು ಬದಲಾಗಿ ಬೇಸಾಯಗಾರನಿಗೆ ಮತ್ತು ಜಾನುವಾರುಗಳನ್ನು ಸಾಕುವವನಿಗೆ ಹೆಚ್ಚಿನ ಗೌರವವು ದೊರಕಬೇಕು. ಇಂತಹ ವಾತಾವರಣವನ್ನು ಸೃಷ್ಟಿಸುವತನಕ ಆಹಾರದ ಸಮಸ್ಯೆಯನ್ನು ಪರಿಹರಿಸಲು ಸಾಧ್ಯವಿಲ್ಲ. ಇಲ್ಲಿಯವರೆಗೆ, ಕೃಷಿ, ಪಶುಸಂಗೋಪನೆ ಮತ್ತು ಮೀನುಗಾರಿಕೆಯ ಇಲಾಖೆಗಳ

ಸಿಬ್ಬಂದಿ ಮತ್ತು ಅಧಿಕಾರಿಗಳನ್ನು ಇತರ ಇಲಾಖೆಗಳ ಸಿಬ್ಬಂದಿ ಮತ್ತು ಅಧಿಕಾರಿಗಳಿಗಿಂತ ಕೀಳಾಗಿ ನೋಡಲಾಗುತ್ತಿತ್ತು. ಇದರಲ್ಲಿದ್ದ ದೋಷವನ್ನು ಅರಿತುಕೊಂಡ ಮೇಲೆ ಪರಿಸ್ಥಿತಿಯು ತಿರುಗುಮುರುಗಾಗುತ್ತಿದೆ. ಪಶುಸಂಗೋಪನೆಯ ಇಲಾಖೆಯವರು ಮೊದಲನೆಯ ಸ್ಥಾನದಲ್ಲಿಯೂ ರೈತರು ಎರಡನೆಯ ಸ್ಥಾನದಲ್ಲಿಯೂ ಇರುವ ದಿನಗಳು ದೂರವಿಲ್ಲ. ಇಂಜನಿಯರಿಂಗ್ ಮತ್ತು ವೈದ್ಯಕೀಯ ಕಾಲೇಜುಗಳಿಗೆ ಸೇರಲು ಮುಗಿಬಿದ್ದಿರುವ ವಿದ್ಯಾರ್ಥಿಗಳು ಪಶುವೈದ್ಯ ಕಾಲೇಜುಗಳಿಗೆ ಸೇರಿದರೆ ಅದು ವಿವೇಕಯುತವಾಗುತ್ತದೆ.

ತಮ್ಮ ಭವಿಷ್ಯದ ಬಗೆಗೆ ವಿದ್ಯಾರ್ಥಿಗಳು ಆತಂಕಪಡಬೇಕಾದ ಅಗತ್ಯವಿಲ್ಲ. ನೀವು ತೇರ್ಗಡೆಯಾಗಿ ಕಾಲೇಜಿನಿಂದ ಹೊರಬಂದ ತಕ್ಷಣ ನಿಮಗೆ ಉದ್ಯೋಗವು ದೊರೆಯುತ್ತದೆ, ನೀವು ರಾಜ್ಯದ ಸೇವೆಯಲ್ಲಿ ಸೇರಿಸಿಕೊಳ್ಳಲ್ಪಡುತ್ತೀರಿ. ಕೇಂದ್ರಸರಕಾರವೂ ಪದವೀಧರರನ್ನು ನೇಮಿಸಿಕೊಳ್ಳುವ ಸಾಧ್ಯತೆಗಳಿವೆ. ಉದ್ಯೋಗದ ಖಾತ್ರಿಯಿರುವುದರಿಂದ, ನೀವು ಇಲ್ಲಿಂದ ಮುಂದಕ್ಕೆ ಒಳ್ಳೆಯ ಅಧಿಕಾರಿಗಳಾಗುವುದಕ್ಕೆ ಪ್ರಯತ್ನಿಸಿ. ಈಗ ನಿಮಗೆ ಅಗತ್ಯವಾಗಿರುವುದು ಒಂದು ವಿಭಾಗದಲ್ಲಿನ ವಿಶೇಷ ತಜ್ಞತೆಯಷ್ಟೇ ಅಲ್ಲ, ಅದರ ಜೊತೆಗೆ ಪ್ರಾಮಾಣಿಕತೆ, ಪಕ್ಷಪಾತರಾಹಿತ್ಯ, ಋಜುತ್ವ, ಮತ್ತು ಇವೆಲ್ಲಕ್ಕಿಂತ ಹೆಚ್ಚಾಗಿ ವಿನಯಶೀಲತೆ. ನೀವು ಕಷ್ಟಪಟ್ಟು ಕೆಲಸವನ್ನು ಮಾಡುವ ಸ್ವಭಾವವನ್ನು ಬೆಳೆಸಿಕೊಂಡು ಒಳ್ಳೆಯ ನಾಗರಿಕರಾಗಿ ಮತ್ತು ದಕ್ಷ ಅಧಿಕಾರಿಗಳಾಗಬೇಕು.

ನಾವು ಸರಿಯಾಗಿ ಆಲೋಚಿಸಿದರೆ, ಪಶುಸಂಗೋಪನಾ ಇಲಾಖೆಯು ಎಲ್ಲಾ ಇಲಾಖೆಗಳ ತಾಯಿ ಎನ್ನುವುದು ಗೊತ್ತಾಗುತ್ತದೆ. ನಮ್ಮದು ಬಡದೇಶವಾಗಿರುವುದರಿಂದ ಬೃಹತ್ ವ್ಯವಸಾಯೋಪಕರಣಗಳನ್ನು ಬಳಸುವುದಕ್ಕಾಗಲೀ, ದೊಡ್ಡ ಪ್ರಮಾಣದ ಕೃಷಿಕ್ಷೇತ್ರಗಳನ್ನು ಹೊಂದಲಾಗಲೀ ಸಾಧ್ಯವಿಲ್ಲ. ಆದ್ದರಿಂದ, ಚೈನಾ, ಜಪಾನ್, ರಷ್ಯಾ ಮತ್ತು ಇತರ ದೇಶಗಳಲ್ಲಿರುವಂತೆ, ಪಶುಸಂಗೋಪನೆಯತ್ತ ಮುಖಮಾಡುವುದರಿಂದ ನಮ್ಮ ಆಹಾರದ ಸಮಸ್ಯೆಯನ್ನು ನಿವಾರಿಸಿಕೊಳ್ಳಬಹುದು. ಮುಂದಿನ 10ರಿಂದ 20 ವರ್ಷಗಳಲ್ಲಿ ಈ ಬದಲಾವಣೆಯು ಖಂಡಿತವಾಗಿಯೂ ಆಗುತ್ತದೆ. ಅದಕ್ಕೆ ಇಂದಿನಿಂದಲೇ ನಾವು ಸಿದ್ಧರಾಗಿರಬೇಕು. ನಾವು ಇನ್ನೂ ಹೆಚ್ಚು ಪಶುವೈದ್ಯ

ಕಾಲೇಜುಗಳನ್ನು ಪ್ರಾರಂಭಿಸಬೇಕು. ನಾನು ಅಮೆರಿಕಾದ ಕೃಷಿ ಮಳಿಗೆಗೆ ಭೇಟಿಕೊಟ್ಟಾಗ ಅಲ್ಲಿ ನಾಲ್ಕು ಅರ್ಥಗರ್ಭಿತ ಪದಗಳನ್ನು ದೊಡ್ಡದಾಗಿ ಪ್ರದರ್ಶಿಸಿದ್ದರು – 'ಆಹಾರ, ಕುಟುಂಬ, ಸ್ನೇಹ ಮತ್ತು ಸ್ವಾತಂತ್ರ್ಯ'. ಅಂದರೆ ಆಹಾರವು ಸ್ವಾತಂತ್ರ್ಯದ ಆಧಾರದ ಮೆಟ್ಟಿಲು. ನಾವು ಆಹಾರೋತ್ಪಾದನೆಯಲ್ಲಿ ಹಿಂದೆ ಇದ್ದೇವೆ, ಇದರಿಂದಾಗಿ ನಮ್ಮ ಸ್ವಾತಂತ್ರ್ಯವನ್ನು ಗಂಡಾಂತರದ ಸ್ಥಿತಿಗೆ ನೂಕುತ್ತಿದ್ದೇವೆ. ದೌರ್ಭಾಗ್ಯದ ಅಂಶವೆಂದರೆ, ನಾವು ದೈಹಿಕ ಶ್ರಮದ ಬಗ್ಗೆ ಒಳ್ಳೆಯ ಅಭಿಪ್ರಾಯವನ್ನು ಹೊಂದಿಲ್ಲ. ಕಷ್ಟಪಡುವವನನ್ನು, ದೈಹಿಕ ಶ್ರಮಪಡುವವನನ್ನು ಕೀಳಾಗಿ ನೋಡಿ, ಸೋಮಾರಿಯನ್ನು, ಶೋಷಕನನ್ನು ಗೌರವಿಸುತ್ತೇವೆ. ಇದು ನಮ್ಮ ಯೋಚನಾಕ್ರಮದಲ್ಲಿನ ವಿಪರ್ಯಯ. ಪಾಶ್ಚಾತ್ಯ ದೇಶಗಳಲ್ಲಿ, ದುಡಿಮೆಗೆ ಗೌರವವಿದೆ. ಅಲ್ಲಿ ಯಾರು ಹೆಚ್ಚು ಕಷ್ಟಪಡುತ್ತಾರೋ, ಯಾರು ದೈಹಿಕ ಶ್ರಮಪಡುತ್ತಾರೋ ಅವರಿಗೆ ಹೆಚ್ಚಿನ ಗೌರವನ್ನು ನೀಡಿ, ಸೋಮಾರಿಯನ್ನು ಮತ್ತು ಶೋಷಕನನ್ನು ಸಮಾಜದ ಮತ್ತು ರಾಷ್ಟ್ರದ ದ್ರೋಹಿಯೆಂದು ಪರಿಗಣಿಸುತ್ತಾರೆ. ಪ್ರಗತಿಯನ್ನು ಸಾಧಿಸಬೇಕಾದರೆ ಮತ್ತು ನಮ್ಮ ಸ್ವಾತಂತ್ರ್ಯವನ್ನು ರಕ್ಷಿಸಿಕೊಳ್ಳಬೇಕಾದರೆ ನಾವು ಅವರ ಈ ಗುಣವನ್ನು ರಕ್ತಗತಮಾಡಿಕೊಳ್ಳಬೇಕು. ನಮ್ಮಲ್ಲಿರುವ ವಾತಾವರಣ ಮತ್ತು ಫಲವತ್ತತೆ ಚೈನಾದೇಶದಲ್ಲಿನ ವಾತಾವರಣ ಮತ್ತು ಫಲವತ್ತತೆಗಳಿಗಿಂತ ಉತ್ತಮವಾಗಿದೆ ಎಂದು ಅಮೆರಿಕದ ತಜ್ಞರೊಬ್ಬರು ಹೇಳಿದ್ದಾರೆ. ಆ ದೇಶವು ಆಹಾರೋತ್ಪಾದನೆಯಲ್ಲಿ ಸ್ವಾವಲಂಬನೆಯನ್ನು ಸಾಧಿಸಿದ್ದಾರೆಂದರೆ, ಅಥವಾ ಆ ಗುರಿಯನ್ನು ಇನ್ನೇನು ಮುಟ್ಟುವುದರಲ್ಲಿ ಇದ್ದಾರೆಂದರೆ, ಅದಕ್ಕೆ ಕಾರಣ ಅವರು ಕೃಷಿಯಲ್ಲಿ ಪ್ರಗತಿಪರರಾಗಿದ್ದಾರೆ, ಮತ್ತು ಪಶುಸಂಗೋಪನೆಯಲ್ಲಿ ವೈಜ್ಞಾನಿಕ ಪದ್ಧತಿಗಳನ್ನು ಅಳವಡಿಸಿಕೊಂಡಿದ್ದಾರೆ ಮತ್ತು ಸಾಂದ್ರ ಬೇಸಾಯವನ್ನು ಮಾಡುತ್ತಾರೆ. ನಮ್ಮ ಪಾರಂಪರಿಕ ಮತ್ತು ಶಿಕ್ಷಿತ ಜನರು ಕೆಲಸದ ಬಗ್ಗೆ, ಹೆಚ್ಚಿನ ಕೆಲಸದ ಬಗ್ಗೆ, ಮತ್ತು ಕೆಲಸದ ಬಗ್ಗೆ ಮಾತ್ರ ಯೋಚಿಸುತ್ತಿರಬೇಕು. ಹಾಗಿದ್ದರೆ ಮಾತ್ರ ದೈಹಿಕ ಶ್ರಮಕ್ಕೆ ಗೌರವವು ಸಿಗುತ್ತದೆ.

ಬೇರೆಯದಕ್ಕಿಂತ ಹೆಚ್ಚಾಗಿ ನೀವು ನಿಮ್ಮ ಕ್ಷೇತ್ರದಲ್ಲಿ ಸಂಪೂರ್ಣವಾಗಿ ತೊಡಗಿಕೊಂಡು ಹೆಚ್ಚು ಹೆಚ್ಚಿನ ಜ್ಞಾನವನ್ನು ಗಳಿಸಿಕೊಳ್ಳಬೇಕು. ನಮ್ಮ ದೇಶದ ಭವಿಷ್ಯವು ನಿಮ್ಮ ಜ್ಞಾನ ಮತ್ತು ಸಂಶೋಧನೆಗಳ ಮೇಲೆ ನಿಂತಿದೆ. ಜ್ಞಾನವೇ

ಸರ್ವಶಕ್ತಿಯುತವಾದದ್ದು ಎಂಬುದು ನಿಮಗೆ ತಿಳಿದಿದೆ. ಆದ್ದರಿಂದ ನೀವು ಈಗ ಮತ್ತು ಇಲ್ಲಿ ಜ್ಞಾನಸಂಪಾದನೆಯನ್ನು ಮಾಡಿ ನಿಮ್ಮ ಕಾರ್ಯಕ್ಷೇತ್ರದ ಮೂಲಕ ಅದನ್ನು ದೇಶಕ್ಕೆ ನೀಡಿ. ಇಂಗ್ಲೆಂಡ್ ಮತ್ತು ಅಮೆರಿಕಾ ದೇಶಗಳಲ್ಲಿನ ಕೃಷಿ ಕಾರ್ಮಿಕನ ಸ್ಥಾನಗೌರವವು, ನಮ್ಮಲ್ಲಿನ ಕೃಷಿ ಸಚಿವರ, ಪಶುಸಂಗೋಪನಾ ಇಲಾಖೆಯ ನಿರ್ದೇಶಕರ ಗೌರವಕ್ಕಿಂತ ಹೆಚ್ಚಾಗಿರುತ್ತದೆ. ಕೃಷಿಕಾರ್ಮಿಕನು ಅಲ್ಲಿ ಮಾಸಿಕ 1000 ದಿಂದ 1500 ರೂಗಳ ವರೆಗಿನ ವೇತನವನ್ನು ಪಡೆಯುತ್ತಾರೆ. ಮತ್ತು ಅವನ ಜೀವನದ ಗುಣಮಟ್ಟ ನಮ್ಮ ರಾಜ್ಯದ ಅಧಿಕಾರಿಗಳಿಗಿಂತಲೂ ಹೆಚ್ಚಿನದು. ನೀವು ನಿಮ್ಮ ಕ್ಷೇತ್ರದಲ್ಲಿ ಪ್ರಾಮಾಣಿಕತೆಯಿಂದ ನಿಮ್ಮ ಪ್ರತಿಭೆಯನ್ನು ದುಡಿಯಲು ಹಚ್ಚಿದರೆ ನೀವು ಯಾರ ಮುಂದೆಯೂ ಕೀಳಾಗಬೇಕಿಲ್ಲ.

ನಿಮ್ಮ ಕಾಲೇಜಿನಲ್ಲಿ ಅರ್ಹ ಬೋಧಕವರ್ಗವನ್ನು ಹೊಂದಿದ್ದೀರಿ. ಸದ್ಯದಲ್ಲಿಯೇ ಇನ್ನೂ ಹೆಚ್ಚಿನ ಸೌಲಭ್ಯಗಳನ್ನು ಮತ್ತು ಶಿಕ್ಷಣಕ್ಕೆ, ಮನರಂಜನೆಗೆ ಉತ್ತಮ ಸವಲತ್ತುಗಳನ್ನು, ವಾತಾವರಣವನ್ನು ಹೊಂದಲಿದ್ದೀರಿ. ನಿಮಗೆ ಸಿಕ್ಕಿರುವ, ಸಿಗಲಿರುವ ಎಲ್ಲದರ ಉತ್ತಮ ಉಪಯೋಗವನ್ನು ಪಡೆದುಕೊಂಡು ದೇಶದ ಹೆಮ್ಮೆಯ ಮಕ್ಕಳಾಗಿ. ನೀವು ಎಲ್ಲೇ ಇರಿ, ಹೇಗೇ ಇರಿ, ದೇಶದ ಭವಿಷ್ಯವನ್ನು ಚಿಂತಿಸುತ್ತಿರಿ ಮತ್ತು ಅದರ ಗೌರವವನ್ನು ಎತ್ತಿಹಿಡಿಯಿರಿ. ನಿಮ್ಮ ಭವಿಷ್ಯದ ಬಗ್ಗೆ ಖಚಿತತೆ ದೊರೆತಿರುವುದರಿಂದ ಮತ್ತು ರಾಷ್ಟ್ರವನ್ನು ನಿರ್ಮಾಣಮಾಡುವ ಮಹತ್ಕಾರ್ಯವು ನಿಮ್ಮ ಮುಂದೆ ಇರುವುದರಿಂದ ನೀವು ಅದೃಷ್ಟವಂತರಾಗಿದ್ದೀರಿ. ರಾಷ್ಟ್ರದ, ಆರ್ಥಿಕಜೀವನದ ಹಾಗೂ ಜನಜೀವನದ ಪುನರ್ನಿರ್ಮಾಣಕ್ಕೆ ನೀವು ನಿಮ್ಮ ನೆರೆಹೊರೆಯವರು ಹೆಗಲುಕೊಡುವಂತೆ ಅವರಲ್ಲಿ ಉತ್ಸಾಹವನ್ನು ತುಂಬುವಂತಹ ಮತ್ತು ಎಲ್ಲರಲ್ಲೂ ಆತ್ಮವಿಶ್ವಾಸವನ್ನು, ಧೈರ್ಯವನ್ನು ತುಂಬುವಂತಹ ನಾಯಕರಾಗಲು, ನಿಮ್ಮ ಕ್ಷೇತ್ರದಲ್ಲಿ ನಿಮ್ಮನ್ನು ನೀವು ಸಜ್ಜುಗೊಳಿಸಿಕೊಳ್ಳಬೇಕು. ತಾನೇ ಕಾರ್ಯಪ್ರವೃತ್ತನಾಗದವನು ಮತ್ತು ಸಕ್ರಿಯನಾಗದವರು ಎಂದು ನಾಯಕನಾಗಲಾರ. ನೀವು ಉಳಿದೆಲ್ಲರ ಜೊತೆ ಸೇರಿ ಎಲ್ಲರ ಹಿತವನ್ನೂ ಕಾಯುವ ಉದ್ದೇಶವನ್ನು ನೆರವೇರಿಸಿ, ಸಂವಿಧಾನದ ಸದಾಶಯವನ್ನು ಕಾರ್ಯಗತಗೊಳಿಸಿ.

ನೀವು ಮಹಾನ್ ವ್ಯಕ್ತಿಗಳ ಪರಂಪರೆಯನ್ನು ಹೊಂದಿರುವ ಅದೃಷ್ಟವಂತ ಜನಾಂಗ. ನೀವು ನೆಹ್ರೂ ಅವರ ಯುಗದಲ್ಲಿ ಇದ್ದೀರಿ. ಗಾಂಧೀಜಿಯ ಯುಗದ

ಪ್ರಭಾವ ನಿಮ್ಮಲ್ಲಿ ಇನ್ನೂ ಹಸಿರಾಗಿದೆ. ದೇಶ ತನ್ನ ಸಂತೋಷವನ್ನು ನಿಮ್ಮಲ್ಲಿ ಅರಸುತ್ತಿದೆ. ಇಡೀ ದೇಶದ ಭರವಸೆ ನಿಮ್ಮ ಮೇಲೆ ಇದೆ. ಮಾನವ ಜನಾಂಗದಲ್ಲಿಯೇ ಅತ್ಯಂತ ಶ್ರೇಷ್ಠರಾದ ನೆಹ್ರೂ ಅವರ ಅರ್ಹ ಸಮಕಾಲೀನರಾಗಿರುವ ನಿಮ್ಮಹೆಗಲಿನ ಮೇಲೆ ಜವಾಬ್ದಾರಿಯ ನೊಗ ಬೀಳಲಿದೆ. ನೀವು ಈ ದೇಶದ ಗೌರವ ಮತ್ತು ಘನತೆಯನ್ನು ಹೆಚ್ಚು ಹೆಚ್ಚು ಎತ್ತರಕ್ಕೆ ಕೊಂಡೊಯ್ಯಬೇಕು. ಈ ಮಹತ್ಪ್ರಯತ್ನದಲ್ಲಿ ನಿಮಗೆ ಶುಭವನ್ನು ಹಾರೈಸುತ್ತೇನೆ.

## ♦ ಸಾಕುಪ್ರಾಣಿಗಳ ಅಭಿವೃದ್ಧಿಯಲ್ಲಿನ ಮುಖ್ಯ ನೆಲೆಗಳು

**ಗ್ರಾಮ ಕುಸುಮವಾದ ರಾಚಯ್ಯನವರಿಗೆ ಹಳ್ಳಿಗಳೆಂದರೆ ಅತೀವ ಪ್ರೀತಿ, ಮಮತೆ. ಗ್ರಾಮಗಳ-ರೈತರ-ಕೃಷಿಯ ಅಭಿವೃದ್ಧಿಯೇ ದೇಶದ ಅಭಿವೃದ್ಧಿ ಎಂದು ಭಾವಿಸಿದ್ದವರು. 1961ರ ಜನವರಿ 5ರಂದು ಟಿ. ನರಸೀಪುರದಲ್ಲಿ ಮುಖ್ಯ ಹಳ್ಳಿಯ ಯೋಜನೆಯ ಉದ್ಘಾಟನೆಯ ಸಂದರ್ಭದಲ್ಲಿ ಮಾಡಿದ ಉದ್ಘಾಟನಾ ಭಾಷಣ**

ಟಿ. ನರಸೀಪುರದಲ್ಲಿ 'ಮುಖ್ಯ ಹಳ್ಳಿ'ಯ ಯೋಜನೆಯಂತಹ ಮಹತ್ವದ ಕಾರ್ಯಕ್ರಮವನ್ನು ಉದ್ಘಾಟಿಸಲು ನನಗೆ ಸಂತೋಷವಾಗುತ್ತಿದೆ. ನಮ್ಮ ದೇಶದಲ್ಲಿ ಪಶುಸಂಪತ್ತನ್ನು ವೃದ್ಧಿಗೊಳಿಸುವಲ್ಲಿ 'ಮುಖ್ಯ ಹಳ್ಳಿ'ಗಳ ಉದ್ಘಾಟನೆ ಬಹಳ ಪ್ರಮುಖವಾದುದು. ಮೊದಲನೆಯ ಹಾಗೂ ಎರಡನೆಯ ಪಾಂಚವಾರ್ಷಿಕ ಯೋಜನೆಗಳ ಅನುಭವದಿಂದ ನಾನು ಈ ಯೋಜನೆಯು ಒಳ್ಳೆಯ ತಳಿಯ ಹೋರಿಗಳನ್ನು ಒದಗಿಸುವ ಮೂಲಕ ಜಾನುವಾರುಗಳ ಅಭಿವೃದ್ಧಿಯನ್ನು ಸಾಧಿಸಲು ಮತ್ತು ಅವುಗಳ ಗುಣಮಟ್ಟವನ್ನು ಹೆಚ್ಚಿಸಲು ತೆಗೆದುಕೊಂಡಿರುವ ಒಂದು ಕ್ರಾಂತಿಕಾರಿ ಹೆಜ್ಜೆಯೆಂದು ಹೇಳುತ್ತೇನೆ. ಮುಖ್ಯ ಹಳ್ಳಿಯ ವಿಭಾಗವು ಜಾನುವಾರುಗಳ ಅಭಿವೃದ್ಧಿಗಾಗಿ ಆಯ್ದುಕೊಂಡಿರುವ ಗ್ರಾಮೀಣ ಪ್ರದೇಶ.

ಯಾವುದೇ ದೇಶದ ಪ್ರಗತಿಯ ಹಾದಿಯಲ್ಲಿ ನಾವು ಎರಡು ವಿಷಯಗಳನ್ನು ಬಹುಮುಖ್ಯವೆಂದು ಅರಿತುಕೊಳ್ಳಬೇಕು. ಮೊದಲನೆಯದು ಅಧಿಕ ಕೃಷಿ ಉತ್ಪಾದನೆ ಮತ್ತು ಅಧಿಕ ಕೈಗಾರಿಕಾ ಉತ್ಪಾದನೆ. ಕೈಗಾರಿಕಾ ಉತ್ಪಾದನೆಗೆ ಕೃಷಿ ಉತ್ಪಾದನೆಯೇ ಅಡಿಗಲ್ಲು. ಸೂಕ್ತ ಪಶುಸಂಗೋಪನೆಯಿಲ್ಲದಿದ್ದರೆ, ಕೃಷಿ ಯಶಸ್ಸನ್ನು ಗಳಿಸಲಾರದು. ನಮ್ಮ ಜಾನುವಾರುಗಳ ಸಂಖ್ಯೆ ಅಧಿಕವಾಗಿದ್ದರೂ, ಗುಣಮಟ್ಟ ಬಹಳ ಕಡಿಮೆಯಿದೆ. ರಷ್ಯಾದಲ್ಲಿ ಒಂದು ಹಸುವು ದಿನಕ್ಕೆ 40ರಿಂದ 60 ಸೇರುಗಳಷ್ಟು ಹಾಲನ್ನು ಕರೆದರೆ, ನಮ್ಮಲ್ಲಿನ ಹಸುಗಳು ಬಹಳ ಕಡಿಮೆ ಹಾಲನ್ನು ನೀಡುತ್ತವೆ. ಹಾಲಿನ ಉತ್ಪಾದನೆಯನ್ನು ಹೆಚ್ಚಿಸಬೇಕೆಂದರೆ ನಾವು ನಮ್ಮ ಹಸುಗಳ ತಳಿಯ ಗುಣಮಟ್ಟವನ್ನು ಹೆಚ್ಚಿಸಬೇಕು. ಉತ್ತಮ ಹಾಲಿನ ಸರಬರಾಜು ಸಾಕಷ್ಟು ಇಲ್ಲದಿದ್ದರೆ, ನಮ್ಮ ಜನರಲ್ಲಿ ಶಕ್ತಿಯನ್ನು, ಆರೋಗ್ಯವನ್ನು, ದೇಹದಾರ್ಢ್ಯವನ್ನು ನಾವು ನಿರೀಕ್ಷಿಸಲು

ಸಾಧ್ಯವಾಗದು. ಮಕ್ಕಳಿಗೆ, ಅದರಲ್ಲೂ ಬೆಳೆಯುವ ವಯಸ್ಸಿನಲ್ಲಿ, ಹಾಲು ಸಮೃದ್ಧವಾಗಿ ದೊರೆಯಬೇಕು. ಇಲ್ಲದಿದ್ದರೆ, ಅವರ ಬ ವಣಿಗೆ ಕುಂಠಿತವಾಗುತ್ತದೆ, ರೋಗನಿರೋಧಕ ಸಾಮರ್ಥ್ಯ ಕುಂದುತ್ತದೆ ಮತ್ತು ನರು ರೋಗಗಳಿಗೆ ತುತ್ತಾಗುತ್ತಾರೆ. ನಾನು ಇಲ್ಲಿ ಒತ್ತಿಹೇಳಬೇಕಾದ ಮತ್ತೊಂದು ಅ ಶವಿದೆ. ಅದೇಂದರೆ, ಉತ್ತಮವಾದ, ಆರೋಗ್ಯವಂತವಾದ, ಸಾಮರ್ಥ್ಯವುಳ್ಳ ಎತ್ತುಗಳು ಇಲ್ಲದೆ ಹೋದರೆ ಕೃಷಿ ಚಟುವಟಿಕೆ ಫಲಪ್ರದವಾಗುವುದಾದರೂ ಹೇಗೆ? ಕೃಷಿಯನ್ನು ಯಾಂತ್ರೀಕರಿಸುವುದಕ್ಕೆ ನಮ್ಮ ದೇಶವು ಇನ್ನೂ ಸಿದ್ಧವಾಗಿಲ್ಲ. ಆದ್ದರಿಂದ ನಾವು ಈ ಚಟುವಟಿಕೆಗಳಿಗಾಗಿ ಎತ್ತುಗಳ ಮೇಲೆಯೇ ಅವಲಂಬಿಸಬೇಕಾಗಿದೆ. ನಾನು ಒತ್ತಿಹೇಳಲೇಬೇಕಾದ ಮತ್ತೊಂದು ಅಂಶವೆಂದರೆ, ಹಾಲನ್ನು ಸಂಸ್ಕರಿಸುವುದು, ಹಾಗೂ ಹಾಲು ಮತ್ತು ಹಾಲಿನ ಪದಾರ್ಥಗಳನ್ನು ಸಂರಕ್ಷಿಸುವುದು. ಇದು, ಹೆಚ್ಚು ಹಾಲನ್ನು ಕರೆಯುವ ಹಸುಗಳ ಮೇಲೆ ಆಧರಿಸಿರುತ್ತದೆ. ಹಾಲಿನ ಸಂಸ್ಕರಣೆ ಮತ್ತು ಸಂರಕ್ಷಣೆ ಜನತೆಗೆ ಹೆಚ್ಚಿನ ಉದ್ಯೋಗಾವಕಾಶಗಳನ್ನು ನೀಡಿ, ಆರ್ಥಿಕ ಸ್ಥಿತಿಯನ್ನು ಉತ್ತಮಗೊಳಿಸುತ್ತದೆ.

ಈ ಕಾರಣಗಳಿಂದ ನಮ್ಮ ಜಾನುವಾರುಗಳ ಅಭಿವೃದ್ಧಿಯು ತುರ್ತಾಗಿ ಆಗಬೇಕಿದೆ. ಇದಕ್ಕೆ ಸೂಕ್ತ ಪರಿಹಾರವೆಂದರೆ 'ಮುಖ್ಯ ಹಳ್ಳಿ'ಯ ಯೋಜನೆ. ಉತ್ತಮ ತಳಿ, ರೋಗಗಳನ್ನು ತಡೆಯುವುದು ಮತ್ತು ನಿವಾರಣೆ ಮಾಡುವುದು, ಉತ್ತಮ ನಿರ್ವಹಣೆ ಹಾಗೂ ಲಾಭಕರವಾದ ಮಾರುಕಟ್ಟೆ – ಇವುಗಳ ಮೂಲಕ ಈ ಯೋಜನೆಯು ದನಗಳ ಅಭಿವೃದ್ಧಿಯನ್ನು ಉಂಟುಮಾಡುವ ಗುರಿಯನ್ನು ಹಾಕಿಕೊಂಡಿದೆ. ಈ ಯೋಜನೆಯ ಅಡಿಯಲ್ಲಿ ಉತ್ತಮವಾಗಿಲ್ಲದ ಎತ್ತುಗಳಿಗೆ ಹಿಡ ಮಾಡಿ ಅವುಗಳನ್ನು 'ಮುಖ್ಯ ಹಳ್ಳಿ'ಯ ಪ್ರದೇಶದಿಂದ ಹೊರಕ್ಕೆ ಕಳುಹಿಸಲಾಗುವುದು. ಜನನದ್ರವ್ಯವನ್ನು ಶೀಘ್ರವಾಗಿ ಬಹುಗುಣಿತವಾಗಿಸಲು ಒಂದು ಸುಸಜ್ಜಿತ ಕೃತಕ ಗರ್ಭಧಾರಣಾ ಸೇವೆಯನ್ನು ಪ್ರಾರಂಭಿಸಿ ಅದನ್ನು ಎಲ್ಲೆಡೆ ಹಂಚುವ ಏರ್ಪಾಟನ್ನು ಮಾಡಲಾಗುವುದು. ಹಳ್ಳಿಯ ರೈತರು ದನಗಳ ಮೇವನ್ನು ಬೆಳೆದು ಸರಬರಾಜು ಮಾಡಲು, ಬದುಗಳನ್ನು ಹಾಕಿ ಹುಲ್ಲು ಬೆಳೆಯಲು, ಯೋಚನೆಮಾಡಿ ಹುಲ್ಲನ್ನು ಕತ್ತರಿಸಲು, ಹೆಚ್ಚುವರಿ ಮೇವನ್ನು ಹಗೇವಿನಲ್ಲಿಟ್ಟು ಸಂರಕ್ಷಿಸಲು, ಮೇವನ್ನು ಕತ್ತರಿಸುವ ಸಾಧನಗಳನ್ನು ಉಪಯೋಗಿಸಿ ಹಾಳಾಗುವುದನ್ನು ತಡಗಟ್ಟಲು ಅವರಿಗೆ ಎಲ್ಲಾ ಸಹಾಯವನ್ನೂ ಈ ಯೋಜನೆಯ ಅಡಿಯಲ್ಲಿ ನೀಡಲಾಗುವುದು.

ಈ ಯೋಜನೆಯಲ್ಲಿ, ಸರಕಾರವು ಪಶುಸಂಗೋಪನೆಗೆ ಅಗತ್ಯವಾದ ನೆರವನ್ನು ನೀಡುತ್ತದೆ ಮತ್ತು ರೋಗನಿರೋಧಕಗಳ ಮೂಲಕ ದನಗಳಿಗೆ ರೋಗಬರದಂತೆ ತಡೆಗಟ್ಟಿ ಅವುಗಳನ್ನು ರಕ್ಷಿಸುತ್ತದೆ.

'ಮುಖ್ಯ ಹಳ್ಳಿ' ಯೋಜನೆಯು ಹಳ್ಳಿಗರಿಗೆ ಉತ್ತಮ ದನಗಳನ್ನು, ಹಾಲು ಮತ್ತು ಹಾಲಿನ ಉತ್ಪನ್ನಗಳನ್ನು ಮಾರಲು ಸಹಾಯಮಾಡಿ, ಅವರು ಹೆಚ್ಚಿನ ಲಾಭವನ್ನು ಗಳಿಸುವಂತೆ ಮಾಡುತ್ತದೆ.

ಮೈಸೂರು ರಾಜ್ಯದಲ್ಲಿ ಈಗಾಗಲೇ ಇಂತಹ 18 ಯೋಜನೆಗಳು ರಾಜ್ಯದ ವಿವಿಧ ಭಾಗಗಳಲ್ಲಿ ಜಾರಿಯಲ್ಲಿವೆ. ಈ ವರ್ಷ ಸರಕಾರವು ಒಟ್ಟು ಇಂತಹ ಇನ್ನೂ ಆರು ಯೋಜನೆಗಳಿಗೆ ಮಂಜೂರಾತಿಯನ್ನು ನೀಡಿದೆ. ನಾನು ಇಂದು ಉದ್ಘಾಟಿಸುತ್ತಿರುವ ಯೋಜನೆಯೂ ಅದರಲ್ಲಿ ಒಂದು. ಎರಡನೆಯ ಪಾಂಚವಾರ್ಷಿಕ ಯೋಜನೆಯ ಅಂತ್ಯದ ವೇಳೆಗೆ ರಾಜ್ಯದಲ್ಲಿ 24 ಕಡೆ ಈ 'ಮುಖ್ಯ ಹಳ್ಳಿ'ಯ ಯೋಜನೆಗಳು ಜಾರಿಯಲ್ಲಿರುತ್ತವೆ. ಮೂರನೆಯ ಪಾಂಚವಾರ್ಷಿಕ ಯೋಜನೆಯಲ್ಲಿ, ಹಾಲಿ ಇರುವ ಯೋಜನೆಗಳ ಜೊತೆಗೆ ಇನ್ನೂ ಹೆಚ್ಚು ಯೋಜನೆಗಳನ್ನು ಕೈಗೆತ್ತಿಕೊಳ್ಳಲು ಆಲೋಚಿಸುತ್ತಿದ್ದೇವೆ.

ನಾನಾಗಲೇ ಹೇಳಿದಂತೆ ಈ ಯೋಜನೆಯನ್ನು ಟಿ. ನರಸೀಪುರದಲ್ಲಿ ಉದ್ಘಾಟಿಸಲು ನನಗೆ ಅತೀವ ಸಂತೋಷವಾಗುತ್ತಿದೆ. ಈ ಪ್ರದೇಶದ ಜನರು ಇದರ ಸಂಪೂರ್ಣ ಉಪಯೋಗವನ್ನು ಪಡೆದುಕೊಂಡು ತಮ್ಮ ಜಾನುವಾರುಗಳ ಅಭಿವೃದ್ಧಿಯನ್ನು ಮಾಡುತ್ತಾರೆಂಬ ನಂಬಿಕೆ ನನಗಿದೆ. ಪಶುಸಂಪತ್ತನ್ನು ಅಭಿವೃದ್ಧಿಗೊಳಿಸುವ ಮೂಲಕ ದೇಶದ ಸಂಪತ್ತನ್ನು ಹಾಗೂ ಸಂತೋಷವನ್ನು ಹೆಚ್ಚಿಸಲಿ.

## ♦ ಮೀನುಸಾಕಣೆಯನ್ನು ಮುಂದುವರಿಸುವ ದಿಕ್ಕಿನತ್ತ ಸರ್ಕಾರದ ಯೋಜನೆಗಳು

**ಕೃಷಿಯ ಒಂದು ಭಾಗವಾದ ಮೀನುಗಾರಿಕೆಯನ್ನು ರಾಚಯ್ಯನವರು ಪ್ರೋತ್ಸಾಹಿಸಲು ಅವಿರತ ದುಡಿದವರು. ಮೀನುಗಾರಿಕೆ ಬಗ್ಗೆ ಅವರ ಜ್ಞಾನ ವಿಸ್ತಾರವಾದುದು. 1960ರ ಅಕ್ಟೋಬರ್ 8ರಂದು ಮೈಸೂರಿನ ಕೇಂದ್ರೀಯ ಆಹಾರ ತಾಂತ್ರಿಕ ಸಂಶೋಧನಾ ಸಂಸ್ಥೆಯಲ್ಲಿ ನಡೆದ ಸಮುದಾಯ ಅಭಿವೃದ್ಧಿ ವಿಭಾಗಗಳಲ್ಲಿ ಕೆಲಸಮಾಡುತ್ತಿರುವ ಮೀನುಗಾರಿಕಾ ವಿಸ್ತರಣಾ ಸಿಬ್ಬಂದಿಗಳಿಗಾಗಿ ರಿಫ್ರೆಷರ್ ಕೋರ್ಸ್‌ನ ಉದ್ಘಾಟನಾ ಸಮಾರಂಭದಲ್ಲಿ ಮಾಡಿದ ಉದ್ಘಾಟನಾ ಭಾಷಣ**

ಈ ತರಬೇತಿ ಕಾರ್ಯಕ್ರದಲ್ಲಿ ಭಾಗವಹಿಸಲು ನನಗೆ ಅವಕಾಶ ಕೊಟ್ಟಿದ್ದಕ್ಕಾಗಿ ನಾನು ಮೊದಲು ತರಬೇತಿ ಶಿಬಿರದ ಸಂಘಟಕರಿಗೆ ನನ್ನ ಕೃತಜ್ಞತೆಗಳನ್ನು ಸಮರ್ಪಿಸುತ್ತೇನೆ. ಎಂಟು ಬೇರೆ ಬೇರೆ ರಾಜ್ಯಗಳಿಂದ ಬಂದು ತಮ್ಮ ತಮ್ಮ ರಾಜ್ಯಗಳಲ್ಲಿ ಮೀನುಸಾಕಣೆಯನ್ನು ಅಭಿವೃದ್ಧಿಪಡಿಸುವ ಸಾಮಾನ್ಯವಾದ ಒಂದೇ ಉದ್ದೇಶಕ್ಕಾಗಿ ಇಲ್ಲಿ ನೆರೆದಿರುವ ಯುವಕರನ್ನು ನೋಡಿದಾಗ ನನಗೆ ಸಂತೋಷವಾಗುತ್ತದೆ. ಭಾರತ ಸರಕಾರ ಮತ್ತು ಇತರ ರಾಜ್ಯ ಸರಕಾರಗಳಿಂದ ಈ ತರಬೇತಿ ಕಾರ್ಯಕ್ರಮವನ್ನು ಯಶಸ್ವಿಗೊಳಿಸಲು ಬಂದಿರುವ ಅಧಿಕಾರಿಗಳನ್ನು ಕೂಡ ನೋಡಿ ನನಗೆ ಸಂತೋಷವಾಗಿದೆ. ನಾನೂ ಡಾ. ಕಲ್ಯಾಣಿಯವರೊಂದಿಗೆ ಸೇರಿಕೊಂಡು ನಿಮಗೆಲ್ಲ ಸ್ವಾಗತವನ್ನು ಕೋರುತ್ತೇನೆ. ನೀವು ಇಲ್ಲಿ ಪಡೆಯುತ್ತಿರುವ ವ್ಯಾಪಕವಾದ ತರಬೇತಿಯು ದೇಶವು ಎದುರಿಸುತ್ತಿರುವ ಆಹಾರದ ಸಮಸ್ಯೆಯನ್ನು ಸ್ವಲ್ಪಮಟ್ಟಿಗಾದರೂ ಕಡಿಮೆಮಾಡಲು ನಿಮಗೆ ಸಹಾಯಕವಾಗುತ್ತದೆ ಎಂದು ನಾನು ನಂಬಿದ್ದೇನೆ.

ಮೀನುಗಾರಿಕೆ ಮತ್ತು ಮೀನುಸಾಕಣೆ ಎರಡೂ ಪ್ರಾಚೀನ ಕಾಲದಿಂದ ಬೆಳೆದುಬಂದಿರುವುವಾದರೂ, ಮೀನುಸಾಕಣೆಯನ್ನು ಆಧುನಿಕ ಪದ್ಧತಿಗೆ ಅನುಸಾರವಾಗಿ ಅಭಿವೃದ್ಧಿಪಡಿಸುತ್ತಿರುವುದು ನಮ್ಮ ದೇಶದಲ್ಲಿ ಇತ್ತೀಚಿನ

ಬೆಳವಣಿಗೆಯಾಗಿದೆ. ಪ್ರಪಂಚದಲ್ಲಿನ ಮುಂದುವರಿದ ರಾಷ್ಟ್ರಗಳಲ್ಲಿ ಉದ್ಯೋಗ ಹಾಗೂ ಆಹಾರ ಎರಡರ ದೃಷ್ಟಿಯಿಂದಲೂ ಮೀನುಸಾಕಣೆಯು ಹಲವಾರು ವರ್ಷಗಳಿಂದ ಮುಂಚೂಣಿಯಲ್ಲಿದೆ. ಈ ದೇಶಗಳು ಮೀನುಸಾಕಣೆಯ ಅಭಿವೃದ್ಧಿಗೆ ತೀವ್ರವಾದ ಗಮನವನ್ನು ನೀಡುತ್ತಿವೆ. ಇದರ ಪರಿಣಾಮವಾಗಿ ಮೀನಿನ ಉತ್ಪಾದನೆಯು ಇಡೀ ಪ್ರಪಂಚದಲ್ಲಿ 1938ರಲ್ಲಿ ಇದ್ದ 20 ದಶಲಕ್ಷ ಮೆಟ್ರಿಕ್ ಟನ್‌ಗಳಿಂದ 1958ರಲ್ಲಿ 33.72 ದಶಲಕ್ಷ ಮೆಟ್ರಿಕ್ ಟನ್ನುಗಳಿಗೆ ಏರಿತು. ಎರಡನೆಯ ಮಹಾಯುದ್ಧದ ನಂತರ ಈ ಉತ್ಪಾದನೆಯು ಎಲ್ಲೆಡೆ, ಅದರಲ್ಲಿಯೂ ಯುದ್ಧದ ಪರಿಣಾಮವಾಗಿ ಜಪಾನಿನಲ್ಲಿ, ತೀವ್ರವಾಗಿ ಕುಸಿಯಿತು. ಆದರೆ, ಜಪಾನ್ ಸರಕಾರವು ತೆಗೆದುಕೊಂಡ ಅಭೂತಪೂರ್ವಕ್ರಮದಿಂದಾಗಿ, ಅಲ್ಲಿ ಮೀನಿನ ಉತ್ಪಾದನೆಯು ಸುಧಾರಿಸಿ, ಯುದ್ಧಪೂರ್ವದಲ್ಲಿ ಇದ್ದುದಕ್ಕಿಂತ ಮೇಲಿನ ಮಟ್ಟವನ್ನು ಮುಟ್ಟಿತು. ಇಂದು ಜಪಾನ್ ತನ್ನ 5.5 ದಶಲಕ್ಷ ಮೆಟ್ರಿಕ್ ಟನ್‌ಗಳಷ್ಟು ಉತ್ಪಾದನೆಯಿಂದ ಪ್ರಪಂಚದ ಒಟ್ಟು ಉತ್ಪಾದನೆಗೆ ಶೇ. 17ರಷ್ಟು ಪಾಲನ್ನು ತನ್ನದಾಗಿಸಿಕೊಂಡಿದೆ. ಅದರೊಂದಿಗೆ ತೀವ್ರವಾಗಿ ಸ್ಪರ್ಧಿಸುತ್ತಿರುವ ದೇಶವೆಂದರ ಚೈನಾ. ಅಧಿಕ ಮೀನು ಉತ್ಪಾದನೆಯನ್ನು ಮಾಡುತ್ತಿರುವ ಜಗತ್ತಿನ ಇತರ ದೇಶಗಳೆಂದರೆ, ಅಮೆರಿಕ ಸಂಯುಕ್ತಸಂಸ್ಥಾನಗಳು, ರಷ್ಯಾ, ನಾರ್ವೆ, ಇಂಗ್ಲೆಂಡ್ ಮತ್ತು ಕೆನಡಾ. ಭಾರತವೂ ಇತ್ತೀಚೆಗೆ ಈ ದೇಶಗಳ ಪಟ್ಟಿಗೆ ಸೇರಿದೆ ಮತ್ತು ಒಂದು ದಶಲಕ್ಷ ಮೆಟ್ರಿಕ್ ಟನ್‌ಗಳಿಗೂ ಹೆಚ್ಚು ಉತ್ಪಾದನೆಯನ್ನು ಮಾಡುವ ಹತ್ತು ದೇಶಗಳಲ್ಲಿ ಸ್ಥಾನವನ್ನು ಪಡೆದಿರುವುದು ಈ ಉದ್ದಿಮೆಗಿರುವ ಉತ್ತಮ ಭವಿಷ್ಯವನ್ನು ಸೂಚಿಸುತ್ತದೆ.

ಭಾರತವು ಸಮುದ್ರ ಹಾಗೂ ಒಳನಾಡು ಮೀನುಗಾರಿಕೆಗೆ ಭಾರಿ ಅವಕಾಶಗಳನ್ನು ಹೊಂದಿದೆ. 2,900 ಮೈಲಿ ಉದ್ದದ ಕರಾವಳಿ, ಮತ್ತು ಹಿಂದೂ ಸಮುದ್ರ, ಅರೇಬಿಯನ್ ಸಮುದ್ರ ಮತ್ತು ಬಂಗಾಳಾಕೊಲ್ಲಿಗಳಲ್ಲಿ 1,00,000 ಚದರ ಮೈಲಿ ಆಳವಿಲ್ಲದ ಸಮುದ್ರ ಪ್ರದೇಶವನ್ನು ಹೊಂದಿರುವ ನಮ್ಮ ಸಂಪನ್ಮೂಲವು ಬಹಳ ವ್ಯಾಪಕವಾಗಿದೆ. ಇದರ ಜೊತೆಗೆ ಹಲವಾರು ಹಿನ್ನೀರಿನ ನೆಲೆಗಳು, ನದೀಮುಖಗಳು, ಮರಳುದಿಣ್ಣೆಗಳಿಂದ ಬೇರ್ಪಡಿಸಲ್ಪಟ್ಟ ಸಮುದ್ರದ ಭಾಗಗಳು, ಕರಾವಳಿಯ ಗುಂಟ ಹರಡಿಕೊಂಡಿರುವ ಜೌಗುಪ್ರದೇಶಗಳು, ಅಧಿಕ ಸಂಖ್ಯೆಯ ನದಿಗಳು, ಸರೋವರಗಳು, ಜಲಾಶಯಗಳು ಮತ್ತು ಅಸಂಖ್ಯಾತ

ಕೆರೆಗಳು ಮತ್ತು ಕೊಳಗಳು ಒಳನಾಡು ಮೀನುಗಾರಿಕೆಗೆ ಅಗಾಧವಾದ ಅವಕಾಶಗಳನ್ನು ಕಲ್ಪಿಸಿವೆ. ಇವುಗಳ ಒಟ್ಟು ಸಾಮರ್ಥ್ಯವನ್ನು ಇನ್ನೂ ಅಂದಾಜುಮಾಡಿಲ್ಲವಾದರೂ, ನಮ್ಮ ದೇಶದ ಈಗಿನ ಉತ್ಪಾದನೆಯನ್ನು ನಾಲ್ಕರಷ್ಟು ಹೆಚ್ಚಿಸಲು ಅವಕಾಶವಿದೆ ಎಂಬುದು ನಿಸ್ಸಂಶಯ. ಭಾರತದ ಜನತೆಗೆ ಶಿಫಾರಸು ಮಾಡಿರುವ ಸಮತೋಲನ ಆಹಾರದ ಪ್ರಕಾರ ಪ್ರತಿಯೊಬ್ಬರಿಗೂ ಮೂರು ಔನ್ಸ್ ಪ್ರೋಟಿನ್ ಬೇಕಿದ್ದು, ಅದರಲ್ಲಿ ಎರಡು ಔನ್ಸ್ ಮೀನಿನಿಂದ ಪಡೆಯಬಹುದು. ಬೆಲೆಯು ಕೈಗೆಟಕುವ ಹಾಗಿದ್ದು, ಸಾಕಷ್ಟು ಪ್ರಮಾಣದಲ್ಲಿ ದೊರೆತರೆ,1961ರಲ್ಲಿ ಇರಬಹುದಾದ ಒಟ್ಟು ಜನತೆಯಲ್ಲಿ ಅರ್ಧದಷ್ಟು ಜನರು ಮೀನಿನ ಸೇವನೆಯನ್ನು ಮಾಡುತ್ತಾರೆಂದು ಇಟ್ಟುಕೊಂಡರೂ, ನಮಗೆ ಬೇಕಾಗುವ ಮೀನಿನ ಪ್ರಮಾಣ ಸುಮಾರು 4.5 ಮೆಟ್ರಿಕ್ ಟನ್‌ಗಳಷ್ಟು ಇರುತ್ತದೆ. ಅಂದರೆ, ಮೀನುಸಾಕಣೆಯನ್ನು ಅಭಿವೃದ್ಧಿಗೊಳಿಸಬೇಕಾದ ತುರ್ತು ಆವಶ್ಯಕತೆ ನಮಗಿದೆ.

ಬಹುಶಃ ನಿಮಗೆ ತಿಳಿದಿರಬಹುದು, ಮೊದಲನೆಯ ಪಾಂಚವಾರ್ಷಿಕ ಯೋಜನೆಗೆ ಮೊದಲು ನಮ್ಮ ದೇಶದಲ್ಲಿ ಮೀನುಸಾಕಣೆಯ ಅಭಿವೃದ್ಧಿಗೆ ಸಿಗುತ್ತಿದ್ದ ಗಮನ ಅತ್ಯಲ್ಪವಾಗಿತ್ತು. ಮೊದಲ ಪಾಂಚವಾರ್ಷಿಕ ಯೋಜನೆಯು ಆಹಾರದ ಅಭಾವ ಮತ್ತು ಅತ್ಯಾವಶ್ಯಕ ಕಚ್ಚಾವಸ್ತುಗಳ ಅಭಾವವನ್ನು ಪರಿಹರಿಸಿಕೊಳ್ಳಲು ಹೆಚ್ಚಿನ ಒತ್ತನ್ನು ನೀಡಿತ್ತು. ಮೊದಲ ಯೋಜನೆಯು ಆಗ ದೊರಕುತ್ತಿದ್ದ ಸಂಪನ್ಮೂಲವನ್ನು ಆಧರಿಸಿ ಕೆಲವು ಯೋಜನೆಗಳನ್ನು ಸಿದ್ಧಪಡಿಸಿ ಯೋಜಿತ ಅಭಿವೃದ್ಧಿಗೆ ಅಡಿಪಾಯವನ್ನು ಹಾಕಿತು. ಈ ಯೋಜನೆಯ ಅವಧಿಯಲ್ಲಿ, ಮೀನುಸಾಕಣೆಗೆ ಮೊದಲು ನಿಗದಿಗೊಳಿಸಿದ್ದ ಮೊತ್ತವಾದ 4.65 ಕೋಟಿಗಳನ್ನು 3.89 ಕೋಟಿಗಳಿಗೆ ಇಳಿಸಲಾಯಿತು. ಎರಡನೆಯ ಯೋಜನೆಯ ಅವಧಿಯಲ್ಲಿ ಇದಕ್ಕಾಗಿ ನಿಗದಿಗೊಳಿಸಿದ ಮೊತ್ತ 12 ಕೋಟಿ ರೂ.ಗಳು ತಲಾ ಆಹಾರದ ಬಳಕೆಯನ್ನು ಹೆಚ್ಚಿಸಲು ಮತ್ತು ಅಸಮತೋಲನದಿಂದ ಕೂಡಿದ್ದ ಆಹಾರವನ್ನು ಸರಿಪಡಿಸಲು ದಿನನಿತ್ಯ ಆಹಾರದ ಜೊತೆಗೆ ಪೂರಕ ಆಹಾರವನ್ನು ಒದಗಿಸಲು ಎರಡನೆಯ ಯೋಜನೆಯಲ್ಲಿ ಪ್ರಾಧಾನ್ಯವನ್ನು ನೀಡಲಾಯಿತು. ಇದರ ಪರಿಣಾಮವಾಗಿ, ಎರಡನೆಯ ಯೋಜನೆಯ ಅಂತ್ಯದವೇಳೆಗೆ ಮೀನಿನ ಉತ್ಪಾದನೆಯು 1.4 ದಶಲಕ್ಷ ಮೆಟ್ರಿಕ್ ಟನ್‌ಗಳಿಗೆ ಏರುತ್ತದೆ. ಈ ಅವಧಿಯಲ್ಲಿ ಭಾರತದಲ್ಲಿ ಮಾತ್ರವಲ್ಲ ದಕ್ಷಿಣ ಮತ್ತು ಆಗ್ನೇಯ ಏಷ್ಯಾದ ಇತರ ದೇಶಗಳಲ್ಲಿಯೂ

ಮೀನುಸಾಕಣೆಯ ಅಭಿವೃದ್ಧಿಗಾಗಿ ಹೆಚ್ಚು ಗಮನವನ್ನು ನೀಡಲಾಗಿದೆ. ಅಂತರರಾಷ್ಟ್ರೀಯ ಸಂಸ್ಥೆಯ ಅಂಗವಾದ ಆಹಾರ ಮತ್ತು ಕೃಷಿ ಸಂಸ್ಥೆಯು ಈ ಪ್ರದೇಶಗಳಲ್ಲಿ ಹಲವಾರು ಯೋಜನೆಗಳನ್ನು ಕಾರ್ಯಗತಗೊಳಿಸಿತು ಮತ್ತು ಇದರ ಅಂಗವಾಗಿ ತಜ್ಞರ ಸಲಹೆ, ಸಲಕರಣೆಗಳ ಸರಬರಾಜು, ತರಬೇತಿಯ ಅವಕಾಶ ಮೊದಲಾದವುಗಳನ್ನು ಕಲ್ಪಿಸಿತು.

ಏರುತ್ತಿರುವ ಉತ್ಪಾದನಾ ವೆಚ್ಚಗಳನ್ನು ಹತೋಟಿಯಲ್ಲಿಡಲು ಯೂರೋಪ್ ಮತ್ತು ಉತ್ತರ ಅಮೆರಿಕಾಗಳಲ್ಲಿ ಸರಕಾರಗಳು ಮತ್ತು ಖಾಸಗಿ ಸಂಸ್ಥೆಗಳು ಹಲವಾರು ಕ್ರಮಗಳನ್ನು ತೆಗೆದುಕೊಂಡಿವೆ. ಉತ್ಪಾದಕರ ಸಂಘಗಳು, ಮೀನುಗಾರರ ಸಹಕಾರ ಸಂಸ್ಥೆಗಳು ಮೊದಲಾದವು ಇಂಧನ, ಮಂಜುಗೆಡ್ಡೆ, ಸಲಕರಣೆಗಳು ಮೊದಲಾದವುಗಳನ್ನು ಯಾವುದೇ ಲಾಭದ ಅಂಶಗಳನ್ನು ಬೆಲೆಗೆ ಸೇರಿಸದೆ ಉತ್ಪಾದನಾ ವೆಚ್ಚದಲ್ಲಿಯೇ ಸರಬರಾಜು ಮಾಡಿದವು. ಸರಕಾರಗಳು ತೆರಿಗೆಯ ವಿನಾಯತಿ, ಮೀನನ್ನು ಸಾಗಿಸುವುದಕ್ಕೆ ವಿಶೇಷ ರಿಯಾಯತಿಯ ದರದಲ್ಲಿ ಸಾಗಣೆ, ಮೊದಲಾದ ಸೌಲಭ್ಯಗಳನ್ನು ಮೀನು ಉದ್ಯಮಕ್ಕೆ ನೀಡಿದವು. ಸರಕಾರಗಳಈ ಮೀನುಗಾರಿಕಾ ಕಾರ್ಯಕ್ರಮಗಳು ತಮ್ಮ ದೇಶದಲ್ಲಿನ ಮಾರುಕಟ್ಟೆಯ ಸಮಸ್ಯೆಗಳನ್ನು ಪರಿಹರಿಸಿಕೊಳ್ಳಲು ಮಾರುಕಟ್ಟೆ ಅಭಿವೃದ್ಧಿ ಮತ್ತು ಬೆಲೆ ನಿಯಂತ್ರಣಗಳನ್ನು ಜಾರಿಗೆ ತಂದವು. ಸಾಲಗಳನ್ನು ನೀಡುವ, ಮೀನುಗಳ ವಿತರಣೆ ಮೊದಲಾದ ನಿರ್ದಿಷ್ಟ ಕರ್ತವ್ಯಗಳನ್ನು ವಹಿಸಿದ ಮಾರುಕಟ್ಟೆ ಮಂಡಳಿ, ಮಾರಾಟ ಸಂಘಗಳು, ಜರ್ಮನಿ, ನೆದರ್‌ಲ್ಯಾಂಡ್ಸ್, ನಾರ್ವೆ, ಸ್ವೀಡನ್, ಮತ್ತು ಬ್ರಿಟನ್‌ಗಳಲ್ಲಿ ಅಸ್ತಿತ್ವಕ್ಕೆ ಬಂದವು. ಜಪಾನಿನಲ್ಲಿ ಮೀನುಗಾರಿಕೆಯನ್ನು ಆಹಾರಕ್ಕಾಗಿ ಮತ್ತು ವಿದೇಶೀ ವಿನಿಮಯವನ್ನು ಗಳಿಸುವ ಸಲುವಾಗಿ ಅಭಿವೃದ್ಧಿಪಡಿಸಲಾಯಿತು.

ಮೀನುಗಾರಿಕೆಗಾಗಿ ದೋಣಿಗಳನ್ನು ನಿರ್ಮಿಸಲು, ಮೀನುಗಾರಿಕೆಗಾಗಿರುವ ಬಂದರುಗಳನ್ನು ಅಭಿವೃದ್ಧಿಪಡಿಸಲು, ಸಂರಕ್ಷಣೆ ಮತ್ತು ಸಂಸ್ಕರಣೆಯ ಸೌಲಭ್ಯಗಳು ಇವುಗಳಿಗಾಗಿ ಧನಸಹಾಯವನ್ನು ಸರಕಾರವು ಒದಗಿಸಿತು. ಈ ದಿಸೆಯಲ್ಲಿ ಜಪಾನ್ ಇತರ ದೇಶಗಳ ಸಹಕಾರದೊಂದಿಗೆ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಈಗ ಅಗಾಧವಾದ ರಫ್ತು ಮಾರುಕಟ್ಟೆಯನ್ನು ಗಳಿಸಿಕೊಂಡಿದೆ. ನಾರ್ವೆ ಮತ್ತು ಐಸ್‌ಲ್ಯಾಂಡ್‌ಗಳ ರಾಷ್ಟ್ರೀಯ ಆರ್ಥಿಕತೆಯಲ್ಲಿ ಮೀನುಗಾರಿಕೆ ಪ್ರಮುಖ ಪಾತ್ರವನ್ನು

ವಹಿಸಿದೆ. ಈ ದೇಶಗಳಲ್ಲಿ, ಸರಕಾರಗಳ ವಿಶೇಷ ಧನಸಹಾಯದಿಂದ ಮೀನುಗಾರಿಕೆಗಾಗಿ ಹಲವಾರು ನೌಕೆಗಳನ್ನು ತಯಾರಿಸಲಾಯಿತು. ನಾರ್ವೆಯಲ್ಲಿ ಅಭಿವೃದ್ಧಿ ಕಾರ್ಯಗಳಿಗೆ ರಾಷ್ಟ್ರೀಯ ಮೀನುಗಾರಿಕಾ ಬ್ಯಾಂಕ್ ಅಡಮಾನ ಸಾಲಗಳ ಮೂಲಕ ಸಹಾಯವನ್ನು ವಿಸ್ತರಿಸಿತು. ಇಂಗ್ಲೆಂಡ್‌ನಲ್ಲಿ ಮೀನುಹಿಡಿಯುವ ದೋಣಿ ಮತ್ತು ಸಲಕರಣೆಗಳಿಗೆ ಸಾಲ ಮತ್ತು ಸಹಾಯಧನಗಳ ಮೂಲಕ ನೆರವನ್ನು ನೀಡಲಾಯಿತು. ಸಂಸತ್ತು ರಚಿಸಿದ ಹೆರಿಂಗ್ ಕೈಗಾರಿಕಾ ಮಂಡಳಿ ಹಾಗೂ ವೈಟ್ ಫಿಷ್ ಪ್ರಾಧಿಕಾರದಮೂಲಕ ಕನಿಷ್ಠ ಬೆಲೆಯ ಖಾತ್ರಿಯನ್ನು ನೀಡಲಾಯಿತು. ಕೆನಡಾದಲ್ಲಿ, ಮೀನುಗಾರಿಕೆಯ ಹೊಸ ದೋಣಿಗಳನ್ನು ನಿರ್ಮಿಸಲು ಸಹಾಯಧನವನ್ನು ನೀಡುವುದರ ಜೊತೆಗೆ ಕಡಿಮೆ ಬಡ್ಡಿದರದಲ್ಲಿ ಸಾಲಗಳನ್ನು ಹಾಗೂ ಇತರ ಸೌಲಭ್ಯಗಳನ್ನು ಮೀನುಗಾರಿಕೆಯ ಅಭಿವೃದ್ಧಿಗಾಗಿ ಒದಗಿಸಲಾಯಿತು.

ಭಾರತದಲ್ಲಿ, ಮೀನುಗಾರಿಕೆಯ ಸರ್ವೋನ್ಮುಖ ಬೆಳವಣಿಗೆಗೆ ನಾವು ಅಡಿಪಾಯವನ್ನು ಹಾಕಿದ್ದೇವೆ. ಮುಂದುವರಿದ ದೇಶಗಳ ಮಟ್ಟವನ್ನು ಮುಟ್ಟಲು ನಾವು ಕ್ರಮಿಸಬೇಕಾಗಿರುವ ದಾರಿ ಇನ್ನೂ ಬಹಳವಿದೆ. ಭಾರತದಲ್ಲಿ ಮೀನುಗಾರಿಕೆಯ ದೋಣಿಗಳನ್ನು ನಿರ್ಮಿಸಲು, ಮೀನುಗಳನ್ನು ಸಂಸ್ಕರಿಸಲು, ವಿತರಿಸಲು ಮತ್ತು ಮಾರಲು ಸರಕಾರವು ಭಾರಿ ಪ್ರಮಾಣದಲ್ಲಿ ನೆರವನ್ನು ನೀಡಬೇಕಾದ ಆವಶ್ಯಕತೆಯಿದೆ. ಮೀನುಗಾರಿಕೆ ಯಾಂತ್ರೀಕರಣಕ್ಕೆ ನಾವು ಬಹಳ ಆದ್ಯತೆಯನ್ನು ನೀಡಬೇಕಾಗಿದೆ. ಇದರಿಂದ ಆಳವಾದ ಸಮುದ್ರದಲ್ಲಿ ಮೀನುಗಾರಿಕೆಯನ್ನು ತೀವ್ರಗೊಳಿಸಬಹುದು ಮತ್ತು ಇತರ ಮುಂದುವರಿದ ದೇಶಗಳ ಮಟ್ಟಕ್ಕೆ ನಾವೂ ಏರಬಹುದು. ಸಂಸ್ಕರಣೆ, ಶೇಖರಣೆ ಮತ್ತು ಮಾರುಕಟ್ಟೆಗಳ ಕ್ಷೇತ್ರದಲ್ಲಿಯೂ ಆಗಬೇಕಾದ ವಿಸ್ತರಣೆಯು ಬೇಕಾದಷ್ಟಿದೆ. ಒಳನಾಡುಗಳಿಗೆ ಮೀನನ್ನು ಸರಬರಾಜುಮಾಡಲು ದಕ್ಷ ವ್ಯವಸ್ಥೆಯು ರೂಪುಗೊಳ್ಳಬೇಕು. ಇದರಿಂದ ಒಳನಾಡಿನ ಬಡ ಜನತೆಗೆ ಪೌಷ್ಟಿಕ ಆಹಾರ ಸಿಗುತ್ತದೆ ಮತ್ತು ಮೀನುಗಾರರಿಗೆ ಅವರ ದುಡಿಮೆಗೆ ತಕ್ಕ ಪ್ರತಿಫಲ ದೊರೆಯುತ್ತದೆ. ಅಲ್ಲದೆ, ಮೀನಿನ ಉತ್ಪಾದನೆಯನ್ನು ಹೆಚ್ಚಿಸಲು ಒಳನಾಡಿನ ಜಲ ಸಂಪನ್ಮೂಲಗಳನ್ನು ಅಚ್ಚುಕಟ್ಟಾಗಿ ಬಳಸಿಕೊಳ್ಳಬೇಕು. ಯೋಜನೆಗಳನ್ನು ತಯಾರಿಸುವಾಗ ನಮ್ಮ ಯೋಜಕರು ಈ ಎಲ್ಲಾ ಅಂಶಗಳನ್ನೂ ಗಮನಿಸಿದ್ದಾರೆಂಬುದು ಸಂತಸದ ಸಂಗತಿ. ಮೂರನೆಯ ಪಂಚವಾರ್ಷಿಕ

ಯೋಜನೆಯಲ್ಲಿ ಮೀನುಗಾರಿಕೆಯ ಅಭಿವೃದ್ಧಿಗಾಗಿ 36 ಕೋಟಿ ರೂಗಳನ್ನು ತೆಗೆದಿರಿಸಲಾಗಿದೆ.

ಮೀನುಗಳ ಉತ್ಪತ್ತಿಯಲ್ಲಿನ ಹೆಚ್ಚಳವು ಜನತೆಗೆ ಹೆಚ್ಚಿನ ಆಹಾರವನ್ನು ಒದಗಿಸುವುದರೊಂದಿಗೆ ಪಶುಸಂಗೋಪನೆ ಮತ್ತು ಕೃಷಿಗೂ ಸಹಾಯವನ್ನು ಮಾಡುತ್ತದೆ. ಅದು ಮೀನಿನ ಪುಡಿಯ (ಫಿಷ್ ಮೀಲ್) ರೂಪದಲ್ಲಿ ಪ್ರಾಣಿ ಆಹಾರವನ್ನು ಒದಗಿಸುತ್ತದೆ, ದುರ್ಬಲಗೊಂಡ ವ್ಯವಸಾಯದ ಭೂಮಿಗೆ ಉತ್ತಮವಾದ ಮೀನಿನ ಗೊಬ್ಬರವನ್ನು ನೀಡುತ್ತದೆ. ಇದರಿಂದ ರಸಗೊಬ್ಬರಗಳಿಗಿರುವ ಬೇಡಿಕೆ ಸ್ವಲ್ಪಮಟ್ಟಿಗೆ ಕಡಿಮೆಯಾಗಬಹುದು. ಸಾಕಷ್ಟು ಪ್ರಮಾಣದಲ್ಲಿ ಮೀನು ಅಹಾರದ ಉದ್ದೇಶಕ್ಕೆ ದೊರೆತರೆ, ಧಾನ್ಯಗಳ ಮೇಲಿನ ಅವಲಂಬನೆ, ಅದರಲ್ಲಿಯೂ ಧಾನ್ಯಗಳ ಕೊರತೆಯ ಕಾಲದಲ್ಲಿ, ಕಡಿಮೆಯಾಗುತ್ತದೆ. ನಿಮಗೆ ತಿಳಿದಿರುವಂತೆ, ಅಭಿವೃದ್ಧಿ ಕಾರ್ಯಕ್ರಮಗಳಲ್ಲಿ ಹಲವನ್ನು ಸಮುದಾಯ ಅಭಿವೃದ್ಧಿ ಕಾರ್ಯಕ್ರಮದ ಜೊತೆಗೂಡಿಸಲಿದ್ದೇವೆ. ಆದ್ದರಿಂದ ಸಮುದಾಯ ಅಭಿವೃದ್ಧಿ ವಿಭಾಗಗಳಲ್ಲಿ ಕೆಲಸಮಾಡುತ್ತಿರುವವರಿಗೆ ಈ ರಿಫ್ರೆಷರ್ ಕೋರ್ಸ್ ತರಬೇತಿಯನ್ನು ನೀಡುತ್ತಿರುವುದು ಯೋಗ್ಯವಾಗಿಯೇ ಇದೆ. ಇದರಿಂದ ಅವರು ಕಾರ್ಯಕ್ರಮಗಳನ್ನು ಇನ್ನೂ ಉತ್ತಮವಾಗಿ ಕಾರ್ಯಗತಗೊಳಿಸಬಹುದು. ವಿವಿಧ ರಾಜ್ಯಗಳವರಿಗೆ ಉಪಯುಕ್ತವಾಗಲೆಂದು ಭಾರತ ಸರಕಾರವು ಯೋಜಿಸಿರುವ ಎರಡು ಕಾರ್ಯಕ್ರಮಗಳಲ್ಲಿ ಒಂದನ್ನು ಮೈಸೂರಿನಲ್ಲಿ ನಡೆಸಲು ಆಯ್ಕೆಮಾಡಿರುವುದು ನನಗೆ ಸಂತೋಷವನ್ನು ತಂದಿದೆ. ಇತರ ರಾಜ್ಯಗಳು ಸಾಧಿಸಿರುವಷ್ಟು ಪ್ರಗತಿಯನ್ನು ಮೀನುಗಾರಿಕೆಯಲ್ಲಿ ಮೈಸೂರು ರಾಜ್ಯವು ಸಾಧಿಸಿಲ್ಲದೆ ಇದ್ದರೂ, ನಮ್ಮಲ್ಲಿ ಇಚ್ಛಾಶಕ್ತಿಯ ಕೊರತೆಯಾಗಲೀ, ಸಂಪನ್ಮೂಲಗಳ ಕೊರತೆಯಾಗಲೀ ಇಲ್ಲ. ನಿಮಗೆ ಗೊತ್ತಿರುವಂತೆ, ರಾಜ್ಯಗಳ ಪುನರ್ವಿಂಗಡಣೆಯಾಗುವ ಮೊದಲು ಮೈಸೂರು ರಾಜ್ಯವು ಸುತ್ತಲೂ ಭೂಮಿಯಿಂದ ಆವೃತವಾಗಿದ್ದ ರಾಜ್ಯವಾಗಿತ್ತು. ಆದ್ದರಿಂದ ಮೀನುಗಾರಿಕೆಯ ಅಭಿವೃದ್ಧಿಗೆ ನೀಡಿದ್ದ ಅಲ್ಪ ಗಮನವೂ ಒಳನಾಡು ಮೀನುಗಾರಿಕೆಗೆ ಸೀಮಿತವಾಗಿತ್ತು. ಪುನರ್ವಿಂಗಡಣೆಯಾದ ಮೇಲೆ ಎರಡು ಕರಾವಳಿ ಜಿಲ್ಲೆಗಳನ್ನು ಹಾಗೂ ವಿಶಾಲವಾದ ಒಳನಾಡು ಪ್ರದೇಶವನ್ನು ನಮ್ಮ ರಾಜ್ಯಕ್ಕೆ ಸೇರಿಸಲಾಯಿತು. ಇದರಿಂದಾಗಿ ಮೀನುಗಾರಿಕೆಯ ಬೆಳವಣಿಗೆ ಸಾಮರ್ಥ್ಯವು ಹೆಚ್ಚಿನ ವ್ಯಾಪ್ತಿಯನ್ನು

ಪಡೆದುಕೊಂಡಿತು. ನಮ್ಮ ರಾಜ್ಯಕ್ಕೆ ಸೇರಿಸಿದ ವಿವಿಧ ಭಾಗಗಳ ಅಭಿವೃದ್ಧಿಗೆ ಯೋಜನೆಗಳಿಗೆ ಈ ಹಿಂದೆ ನಿಗದಿಗೊಳಿಸಿದ್ದ ಹಣವು ಅತೃಪ್ತಿಕರವಾಗಿತ್ತು ಮತ್ತು ಅವೆಲ್ಲವನ್ನೂ ಒಟ್ಟಾಗಿ ಒಂದು ಜಾಲಕ್ಕೆ ತರಲು ಸಾಧ್ಯವಿರಲಿಲ್ಲ. ಆದ್ದರಿಂದ ಪುನರ್ವಿಂಗಡಣೆಯಾದ ತಕ್ಷಣ ನಾವು ಮಾಡಿದ ಮೊದಲ ಕೆಲಸವೆಂದರೆ, ಮೀನುಗಾರಿಕೆಗಾಗಿ ಹೊಸ ಹಾಗೂ ಪರಿಷ್ಕೃತ ಯೋಜನೆಯನ್ನು ತಯಾರಿಸುವುದು. ಹೊಸ ಯೋಜನೆಯ ಪ್ರಕಾರ ಒಟ್ಟು ವೆಚ್ಚವು 46 ಕೋಟಿ ರೂಗಳಷ್ಟಿತ್ತು. ಆದರೆ ಅದನ್ನು ಪರಿಷ್ಕರಿಸಿ ಯೋಜನೆಯುನ್ನು ಇನ್ನೂ ದೊಡ್ಡದು ಮಾಡಿ ಯೋಜನಾವೆಚ್ಚವನ್ನು 68 ಕೋಟಿಯೆಂದು ನಿಗದಿಗೊಳಿಸಿದೆವು. ಮುಂದಿನ ನಮ್ಮ ಕೆಲಸವೆಂದರೆ, ಈ ಯೋಜನೆಯ ಅನುಷ್ಠಾನವನ್ನು ನೋಡಿಕೊಳ್ಳಲು ಪ್ರತ್ಯೇಕವಾದ ಮೀನುಗಾರಿಕೆ ಇಲಾಖೆಯನ್ನು ಪ್ರಾರಂಭಿಸಿದುದು. ಇದನ್ನು ನಾವು ಮಾಡಿದುದು 1957–548ನೆಯ ಸಾಲಿನಲ್ಲಿ. ತದನಂತರ, ತರಬೇತಿ ಪಡೆದ ಸಿಬ್ಬಂದಿಯ ಕೊರತೆ, ವಿದೇಶೀ ವಿನಿಮಯದ ಕೊರತೆ – ಇಂತಹ ಸಮಸ್ಯೆಗಳಿದ್ದರೂ, ನಾವು ಏಕಪ್ರಕಾರವಾಗಿ ಪ್ರಗತಿಯನ್ನು ಸಾಧಿಸುತ್ತಾ ಬಂದಿದ್ದೇವೆ. ನಮ್ಮ ರಾಜ್ಯವು ಮೀನುಗಾರಿಕೆಯ ಅಭಿವೃದ್ಧಿಯಲ್ಲಿ ಮಾಡಿರುವ ಸಾಧನೆಗಳನ್ನು ನಾನು ಇಲ್ಲಿ ಸಂಕ್ಷೇಪವಾಗಿ ನಿಮ್ಮ ಮುಂದಿಡುತ್ತೇನೆ.

ನಮ್ಮ ಯೋಜನೆಗಳು ಸಮುದ್ರದ ಹಾಗೂ ಒಳನಾಡಿನ ಮೀನುಗಾರಿಕೆಯನ್ನು ಒಳಗೊಂಡಿರುತ್ತದೆ. ಮೀನುಗಾರಿಕೆಯ ಯಾಂತ್ರೀಕರಣದ ಮೂಲಕ ಸಮುದ್ರದಲ್ಲಿ ಹಿಡಿಯುವ ಮೀನುಗಳ ಪ್ರಮಾಣವನ್ನು ಹೆಚ್ಚಿಸುವುದನ್ನು ಸಮುದ್ರದ ಮೀನುಗಾರಿಕೆಯು ಒಳಗೊಂಡಿದೆ. ದೋಣಿಗಳ ನಿರ್ಮಾಣದ ಕಕ್ಷೆಯನ್ನು ಸ್ಥಾಪಿಸುವುದು, ಯಾಂತ್ರೀಕೃತ ದೋಣಿಗಳ ನಿರ್ಮಾಣ ಮತ್ತು ವಿತರಣೆ, ಮೀನುಗಾರಿಕೆಗೆ ಅಗತ್ಯವಾದ ವಸ್ತುಗಳನ್ನು ರಿಯಾಯತಿ ದರದಲ್ಲಿ ಒದಗಿಸುವುದು, ಮಂಜುಗೆಡ್ಡೆಯ ಕಾರ್ಖಾನೆಗಳು ಮತ್ತು ಶೈತೀಕರಣ ಘಟಕಗಳು, ಸಂಸ್ಕರಣಾ ಘಟಕಗಳು, ಉತ್ತಮ ದರ್ಜೆಯ ಉಪ್ಪನ್ನು ಒದಗಿಸುವುದು, ಸಾಗಣೆಯ ಮತ್ತು ಮಾರುಕಟ್ಟೆಯ ಸೌಲಭ್ಯಗಳನ್ನು ಒದಗಿಸುವುದು, ಮೊದಲಾದವುಗಳನ್ನು ಯೋಜನೆಯು ಒಳಗೊಂಡಿದೆ. ಒಳನಾಡು ಮೀನುಗಾರಿಕೆಯ ಸಂದರ್ಭದಲ್ಲಿ, ನಮಗಿರುವ ಒಳನಾಡು ಜಲಸಂಪನ್ಮೂಲಗಳ ಸಮೀಕ್ಷೆಯನ್ನು ನಡೆಸುವುದು ಮತ್ತು ಒಳನಾಡಿನಲ್ಲಿ ಕ್ರಮಕ್ರಮವಾಗಿ ಮೀನಿನ ಉತ್ಪಾದನೆಯನ್ನು ಹೆಚ್ಚಿಸುವುದು,

ಒಣಮೀನನ್ನು ಸಂಗ್ರಹ ಮಾಡುವುದು ಮತ್ತು ಮೀನುಗಳ ಸಾಕಣೆ – ಇವುಗಳನ್ನು ನಮ್ಮ ಕಾರ್ಯಕ್ರಮವು ಒಳಗೊಂಡಿದೆ. ಇದಲ್ಲದೆ, ಉಪಯುಕ್ತವಾದ ಅಂಕಿಅಂಶಗಳನ್ನು ಸಂಗ್ರಹಿಸಲು, ಸಹಕಾರಿ ಸಂಘಗಳನ್ನು ಸ್ಥಾಪಿಸಿ, ಹೊಸ ಮಾದರಿಯ ಶಾಲೆಗಳನ್ನು ಸ್ಥಾಪಿಸಿ, ಧನಸಹಾಯವನ್ನು ಮಾಡಿ ಮೀನುಗಾರರ ಸಾಮಾಜಿಕ, ಆರ್ಥಿಕ ಸ್ಥಿತಿಗತಿಗಳನ್ನು ಉತ್ತಮಪಡಿಸಲು ಸರಕಾರವು ಹಲವಾರು ಯೋಜನೆಗಳನ್ನು ಹಾಕಿಕೊಂಡಿದೆ.

ಸಮುದ್ರತೀರವಿರುವ ಭಾರತದ ಇತರ ಎಲ್ಲಾ ರಾಜ್ಯಗಳೂ ಯಾಂತ್ರೀಕೃತ ಮೀನುಗಾರಿಕೆಯನ್ನು ಜಾರಿಗೆ ತಂದ ಮೇಲೆ ಮೈಸೂರು ರಾಜ್ಯ ಈ ಕಾರ್ಯಕ್ರಮವನ್ನು ಅನುಸರಿಸಿತು. ರಾಜ್ಯಗಳ ಪುನರ್ವಿಂಗಡಣೆಯಾದ ಮೇಲೆ ನಮಗೆ ಮದರಾಸು ರಾಜ್ಯದಿಂದ ಕೊಡಿಸಿದ ಎರಡು ಪ್ಯಾಬ್ಲೋ ದೋಣಿಗಳೊಂದಿಗೆ ನಾವು ಪ್ರಾರಂಭಿಸಿದೆವು. ಅಂದರೆ ನಾವು ಓನಾಮದಿಂದ ಪ್ರಾರಂಭಿಸಬೇಕಾಯಿತು. ಆದರೂ ನಾವು ಸಾಕಷ್ಟು ಪ್ರಗತಿಯನ್ನು ಸಾಧಿಸಿದ್ದೇವೆ ಎಂದು ಹೇಳಲು ನನಗೆ ಹರ್ಷವಾಗುತ್ತದೆ. ಹಾಲಿ ಇದ್ದ ದೋಣಿಗಳಿಗೆ ಇಂಜಿನ್ನುಗಳನ್ನು ಅಳವಡಿಸುವಷ್ಟು ಅವು ದೊಡ್ಡದಾಗಿಲ್ಲದಿದ್ದುದರಿಂದ, ಇಲಾಖೆಯು ಸೂಕ್ತ ದೋಣಿಗಳನ್ನು ಹೊಸದಾಗಿ ರೂಪಿಸಿ ಅವುಗಳ ಉತ್ಪಾದನೆಗೆ ವ್ಯವಸ್ಥೆಯನ್ನು ಮಾಡಬೇಕಾಯಿತು. ನಂತರ ಮಂಗಳೂರು ಮತ್ತು ಕಾರವಾರಗಳಲ್ಲಿ ಒಂದೊಂದು ದೋಣಿ ನಿರ್ಮಾಣ ಕಕ್ಷೆಯನ್ನು ನಿರ್ಮಿಸಿದೆವು. ಈಗ ಇವೆರಡೂ ದೋಣಿ ನಿರ್ಮಾಣದಲ್ಲಿ ಬಿಡುವಿಲ್ಲದೆ ತೊಡಗಿವೆ. ಕೇವಲ ಎರಡೇ ಯಾಂತ್ರಿಕ ದೋಣಿಗಳನ್ನು ಹೊಂದಿದ್ದ ನಾವು ಕಳೆದ ವರ್ಷದ ಅಂತ್ಯದ ವೇಳೆಗೆ 27 ಅಂತಹ ದೋಣಿಗಳನು ಪಡೆದಿದ್ದವು, ಮತ್ತು ಈ ವರ್ಷದ ಕೊನೆಯ ವೇಳೆಗೆ ಗುರಿಯಾಗಿರಿಸಿಕೊಂಡಿದ್ದ 50 ದೋಣಿಗಳಲ್ಲದಿದ್ದರೂ, ಕನಿಷ್ಠ 45 ದೋಣಿಗಳನ್ನಾದರೂ ನಾವು ಉತ್ಪಾದಿಸುತ್ತೇವೆ. ದೋಣಿಗಳ ಯಾಂತ್ರೀಕರಣದ ಯೋಜನೆಯು ಈ ದೋಣಿಗಳನ್ನು ಉಪಯೋಗಿಸಿ ಮೀನುಹಿಡಿಯುವವರಿಗೆ ತರಬೇತಿಯನ್ನು ನೀಡುವುದನ್ನೂ ಒಳಗೊಂಡಿದೆ. ಮೀನುಗಾರರ ತರಬೇತಿ ಕೇಂದ್ರವನ್ನು ಮಂಗಳೂರಿನಲ್ಲಿ ತೆರೆಯಲಾಗಿದೆ ಮತ್ತು ಇಲ್ಲಿಯವರೆಗೆ 80 ಮೀನುಗಾರರಿಗೆ ತರಬೇತಿಯನ್ನು ನೀಡಲಾಗಿದೆ. ಪ್ರಕೃತ, 20 ಜನರು ತರಬೇತಿಯನ್ನು ಪಡೆಯುತ್ತಿದ್ದಾರೆ. ಇಲ್ಲಿ ತರಬೇತಿ ಪಡೆದ ಮೀನುಗಾರರಿಗೆ ಯಾಂತ್ರೀಕೃತ ದೋಣಿ, ಮೀನು ಹಿಡಿಯುವುದನ್ನು

ಪ್ರಾರಂಭಿಸಲು ಬೇಕಾದ ಬಲೆ, ಮತ್ತಿತರ ಸಲಕರಣೆಗಳನ್ನು ಸಾಲ ಮತ್ತು ಸಹಾಯಧನಗಳ ಮೂಲಕ ಒದಗಿಸಲಾಗುತ್ತದೆ. ಈ ಮೀನುಗಾರರು ಯಾಂತ್ರೀಕೃತ ಮೀನುಗಾರಿಕೆಯನ್ನು ಸ್ವಾಗತಿಸುತ್ತಿದ್ದಾರೆ ಮತ್ತು ಅವರ ಮೀನು ಹಿಡಿಯುವ ಸಾಮರ್ಥ್ಯವು ಹೆಚ್ಚಾಗಿರುವುದು ಹೊರನೋಟಕ್ಕೇ ಕಂಡುಬರುತ್ತಿದೆ. ಕಳೆದ ಋತುವಿನಲ್ಲಿ ಯಾಂತ್ರೀಕೃತ ದೋಣಿಗಳು ದಿನಕ್ಕೆ 100ರಿಂದ 200 ರೂ ಮೌಲ್ಯದ ಮೀನುಗಳನ್ನು ಹಿಡಿದಿದ್ದವು. ಇದರ ಜೊತೆಗೆ ಮೀನುಗಾರಿಕೆಯ 2 ಲಕ್ಷ ರೂ ಮೌಲ್ಯದ ಹತ್ತಿಯ ಮತ್ತು ನೈಲಾನಿನ ದಾರವನ್ನು ಕೂಡ ಮೀನುಗಾರರಿಗೆ ನೀಡಲಾಗಿದೆ.

ಸಮುದ್ರದಲ್ಲಿ ಹಿಡಿದ ಮೀನಿನ ಬಳಕೆಯ ಪ್ರಮಾಣವನ್ನು ಹೆಚ್ಚಿಸುವ ದೃಷ್ಟಿಯಿಂದ ಮೀನನ್ನು ಸಂಸ್ಕರಿಸುವ ಮತ್ತು ಸಂರಕ್ಷಿಸುವ ಹಾಗೂ ಒಳನಾಡಿಗೆ ಸಾಗಿಸಿ ಅಲ್ಲಿ ವಿತರಣೆಮಾಡಲು ಬೇಕಾದ ಸೌಲಭ್ಯಗಳನ್ನು ಕೂಡ ಮೀನುಗಾರರಿಗೆ ಕೊಡುತ್ತಿದ್ದೇವೆ. ರಾಜ್ಯ ಪುನರ್ವಿಂಗಡನೆಗಿಂತ ಹಿಂದೆ ಒಟ್ಟು 16 ಟನ್ನುಗಳ ದೈನಿಕ ಉತ್ಪಾದನಾ ಸಾಮರ್ಥ್ಯವಿದ್ದ ನಾಲ್ಕು ಖಾಸಗಿ ಮತ್ತು ಒಂದು ಸರಕಾರಿ ಮಂಜುಗೆಡ್ಡೆಯ ಘಟಕಗಳು ಇದ್ದವು. ಈಗ ಕಾರವಾರ, ಭಟ್ಕಳ, ಕುಂದಾಪುರ ಮತ್ತು ಹಾಸನಗಳಲ್ಲಿ ಮಂಜುಗೆಡ್ಡೆಯ ಘಟಕ ಮತ್ತು ಶೈತ್ಯಾಗಾರಗಳನ್ನು ನಿರ್ಮಿಸುತ್ತಿದ್ದೇವೆ ಮತ್ತು ಕುಮಟಾದಲ್ಲಿರುವ ಮಂಜುಗೆಡ್ಡೆ ಘಟಕವನ್ನು ಶೀಘ್ರದಲ್ಲಿಯೇ ಪುನರಾರಂಭಿಸುತ್ತೇವೆ. ಮರವಂತೆಯಲ್ಲಿ ಕೂಡ ಒಂದು ಮಂಜುಗೆಡ್ಡೆಯ ಘಟಕ ಮತ್ತು ಒಂದು ಶೈತ್ಯಾಗಾರವನ್ನು ತೆರೆಯಲು ವ್ಯವಸ್ಥೆಯನ್ನು ಮಾಡಲಾಗುತ್ತಿದೆ. ಇವೆಲ್ಲದರ ಪರಿಣಾಮವಾಗಿ, ಕರಾವಳಿಯಲ್ಲಿ ಒಟ್ಟು ಮೂವತ್ತು ಟನ್ನುಗಳಷ್ಟು ಮಂಜುಗೆಡ್ಡೆಯನ್ನು ಪ್ರತಿದಿನ ತಯಾರಿಸುವ ಸಾಮರ್ಥ್ಯವುಳ್ಳ ಘಟಕಗಳ ಮತ್ತು ಶೈತ್ಯಾಗಾರಗಳ ಜಾಲವನ್ನು ಹೊಂದಲಿದ್ದೇವೆ. ಇದರಿಂದ ಒಳನಾಡಿನ ಮಾರುಕಟ್ಟೆಗೆ ದೊಡ್ಡ ಪ್ರಮಾಣದಲ್ಲಿ ತಾಜಾಸ್ಥಿತಿಯಲ್ಲಿರುವ ಮೀನುಗಳನ್ನು ಸರಬರಾಜು ಮಾಡಬಹುದು. ಇದರ ಜೊತೆಗೆ, ಮಂಗಳೂರಿನಲ್ಲಿರುವ ಮಂಜುಗೆಡ್ಡೆ–ಶೈತ್ಯೀಕರಣ ಘಟಕ ಮತ್ತು ಶೈತ್ಯೀಕರಣದ ಘಟಕಗಳು ಸೀಗಡಿ ಮತ್ತು ಇತರ ಮೀನುಗಳನ್ನು ವಿದೇಶಗಳಿಗೆ ರಫ್ತುಮಾಡಲು ಶೈತ್ಯೀಕರಿಸುವ ಸೌಲಭ್ಯವನ್ನು ಒದಗಿಸುತ್ತವೆ ಮತ್ತು ಇವುಗಳ ಮೂಲಕ ನಡೆಯುವ ರಫ್ತಿನಿಂದ ವರ್ಷಕ್ಕೆ ಹತ್ತರಿಂದ ಇಪ್ಪತ್ತು ಲಕ್ಷ ರೂ.ಗಳ ವಿದೇಶೀ ವಿನಿಮಯ ದೊರೆಯುತ್ತದೆ.

ರಾಜ್ಯಗಳ ಪುನರ್ವಿಂಗಡನೆಯ ಒಂದು ಒಳ್ಳೆಯ ಪರಿಣಾಮವೆಂದರೆ, ಕರಾವಳಿಯ ಮೀನು ಉತ್ಪಾದನಾ ಪ್ರದೇಶ ಹಾಗೂ ಅದನ್ನು ಬಳಸುವ ಒಳನಾಡುಗಳು ಈಗ ಒಂದೇ ಆಡಳಿತಕ್ಕೆ ಸೇರಿರುವುದು. ಮೀನು ಉತ್ಪಾದನಾ ಪ್ರದೇಶಗಳಿಂದ ಅದನ್ನು ಬಳಸುವ ಪ್ರದೇಶಗಳಿಗೆ ಸಾಗಿಸಲು ರೈಲಿನ ಸೌಲಭ್ಯವಿಲ್ಲದೆ ರಸ್ತೆಯ ಮುಖಾಂತರವೇ ಸಾಗಿಸಬೇಕಾಗಿದೆ. ಆದ್ದರಿಂದ ಮೀನುಗಳನ್ನು ಶೀಘ್ರವಾಗಿ ಕರಾವಳಿಯಿಂದ ಒಳನಾಡು ಮಾರುಕಟ್ಟೆಗೆ ಸಾಗಿಸಲುಡೀಸೆಲ್ ಲಾರಿಗಳನ್ನು ವ್ಯವಸ್ಥೆಮಾಡಲಾಗಿದೆ. ಮಂಗಳೂರು, ಮಲ್ಪೆ ಮತ್ತು ಕಾರವಾರಗಳಿಂದ ಮೀನನ್ನು ಸಾಗಿಸಲು ಮೂರು ಲಾರಿಗಳನ್ನು ಮೀನುಗಾರರ ಸಹಕಾರ ಸಂಘಗಳಿಗೆ ನೀಡಲಾಗಿದೆ. ಇನ್ನೂ ಮೂರು ಲಾರಿಗಳನ್ನು ಹಾಗೂ ಒಂದೆರಡು ಮೂರು-ಚಕ್ರದ ವಾಹನಗಳನ್ನೂ ನೀಡಲಾಗುವುದು. ಸಂರಕ್ಷಣೆ ಹಾಗೂ ಸಾಗಣೆ ಸೌಲಭ್ಯಗಳು ಹೆಚ್ಚಿದಂತೆಲ್ಲಾ, ಒಳನಾಡಿಗೆ ಸರಬರಾಜಾಗುತ್ತಿರುವ ಮೀನಿನ ಪ್ರಮಾಣವೂ ಹೆಚ್ಚುತ್ತಾ ಬಂದಿರುವುದು ಸಂತೋಷದ ಸಂಗತಿ. ಸರಬರಾಜು ಮಾಡಲಾಗದ ಮೀನುಗಳನ್ನು ಸಂರಕ್ಷಿಸಿ ಇಡಲು 30 ಮೀನು ಸಂರಕ್ಷಣಾ ಕೇಂದ್ರಗಳಿಗೆ ರಿಯಾಯತಿ ದರದಲ್ಲಿ ಉಪ್ಪನ್ನು ಕೊಡಲಾಗುತ್ತಿದೆ. ಹೀಗೆ ನೀಡುವ ಉಪ್ಪು ಭಾರತೀಯ ಗುಣಮಟ್ಟ ಸಂಸ್ಥೆಯು ನಿಗದಿಮಾಡಿರುವ ಗುಣಮಟ್ಟದ್ದಾಗಿದ್ದು, ಇದರಿಂದ ಸಂಸ್ಕರಿಸಿದ ಮೀನಿನ ಗುಣಮಟ್ಟವೂ ಉತ್ತಮವಾಗಿಯೇ ಇರುತ್ತದೆ.

ರಾಜ್ಯದಲ್ಲಿ 65 ಮೀನುಗಾರರ ಸಹಕಾರಿ ಸಂಘಗಳು ಇವೆ. ಅವುಗಳಿಗೆ ದೀರ್ಘಾವಧಿ ಸಾಲವಾಗಿ 6.5 ಲಕ್ಷ ರೂಗಳನ್ನೂ, ಬಂಡವಾಳಕ್ಕಾಗಿ 50,000 ರೂಗಳನ್ನೂ, ನಿರ್ವಹಣಾ ವೆಚ್ಚಕ್ಕೆಂದು 5,000 ರೂಗಳನ್ನೂ ಇಲ್ಲಿಯವರೆಗೆ ಒದಗಿಸಲಾಗಿದೆ.

ಮೀನುಗಾರಿಕೆ ಉದ್ದಿಮೆಗೆ ಅತ್ಯಗತ್ಯವಾದುದು ಮೀನುಗಾರಿಕೆಯ ಬಂದರುಗಳಿಂದ ಕರಾವಳಿಯ ಮುಖ್ಯ ರಸ್ತೆಗಳಿಗೆ ಸೇರುವ ಹಾಗೆ ಇರುವ ಹಲವಾರು ಪೂರಕ ರಸ್ತೆಗಳು. ಈ ಅಗತ್ಯವನ್ನು ಪೂರೈಸುವ ದಿಕ್ಕಿನಲ್ಲಿ ನಾವು ಈಗಾಗಲೇ ಸಾಕಷ್ಟು ಕೆಲಸವನ್ನು ಮಾಡಿದ್ದೇವೆ. ಇಲ್ಲಿಯವರೆಗೆ 14 ಅಂತಹ ರಸ್ತೆಗಳ ಕೆಲಸವನ್ನು 3 ಲಕ್ಷ ರೂ.ಗಳ ವೆಚ್ಚದಲ್ಲಿ ನಿರ್ಮಿಸಲಾಗುತ್ತಿದೆ. ಇವುಗಳಲ್ಲಿ ಕೆಲವು ಈಗ ನಿರ್ಮಾಣದ ಕೊನೆಯ ಹಂತದಲ್ಲಿದೆ. ಇದಲ್ಲದೆ, ಎಲ್ಲಾ

ಮೀನುಗಾರಿಕಾ ಹಳ್ಳಿಗಳಿಂದ ಮುಖ್ಯ ರಸ್ತೆಗೆ ಸಂಪರ್ಕವನ್ನು ಹಂತಹಂತವಾಗಿ ಕಲ್ಪಿಸಲು ರಸ್ತೆಗಳ ನಿರ್ಮಾಣವನ್ನು ಸರಕಾರವು ಒಟ್ಟು 32 ಲಕ್ಷ ರೂ.ಗಳ ವೆಚ್ಚದಲ್ಲಿ ಕೈಗೆತ್ತಿಕೊಂಡಿದೆ. ರಸ್ತೆಗಳ ಸೌಲಭ್ಯವು ಮೀನಿಗಾರಿಕೆಯ ಅಭಿವೃದ್ಧಿಯಲ್ಲಿ ಪ್ರಮುಖ ಪಾತ್ರವನ್ನು ವಹಿಸಲಿದೆ.

ಮೀನುಗಾರಿಕಾ ಉದ್ದಿಮೆಯ ಬೆನ್ನೆಲುಬೆಂದರೆ ಮೀನುಗಾರರೇ. ಇವರು ಬಹುತೇಕ ಅನಕ್ಷರಸ್ಥರು. ಇವರಿಗಾಗಿ ವಿಶೇಷ ರೀತಿಯ ಶಾಲೆಗಳನ್ನು ತೆರೆದು ಸಾಂಪ್ರದಾಯಿಕವಾದ ಓದುವುದು, ಬರೆಯುವುದು ಮತ್ತು ಗಣಿತ – ಇವುಗಳ ಜೊತೆಗೆ ಮೀನುಗಾರಿಕೆಯ ಬಗ್ಗೆಯೂ ಶಿಕ್ಷಣವನ್ನು ನೀಡಲಾಗುತ್ತಿದೆ. ರಾಜ್ಯ ಪುನರ್ವಿಂಗಡಣೆಯ ಸಮಯದಲ್ಲಿ, ದಕ್ಷಿಣ ಕನ್ನಡದಲ್ಲಿ 24 ಪ್ರಾಥಮಿಕ ಶಾಲೆಗಳೂ, ಒಂದು ಮಾಧ್ಯಮಿಕ ಶಾಲೆಯೂ ಮತ್ತು ಉತ್ತರ ಕನ್ನಡದಲ್ಲಿ ಮೂರು ವೃತ್ತಿತರಬೇತಿ ಶಾಲೆಯೂ ಇದ್ದವು. ನಾವು ಈಗ ಈ ಸಂಖ್ಯೆಗಳಿಗೆ ಐದು ಶಾಲೆಗಳನ್ನು – ದಕ್ಷಿಣ ಕನ್ನಡದಲ್ಲಿ ನಾಲ್ಕು ಮತ್ತು ಉತ್ತರ ಕನ್ನಡದಲ್ಲಿ ಒಂದು – ಸೇರಿಸಿದ್ದೇವೆ.

ಒಳನಾಡು ಮೀನುಗಾರಿಕೆಯ ವಿಷಯಕ್ಕೆ ಬಂದರೆ, ನಾನೀಗಾಗಲೇ ಹೇಳಿದಂತೆ, ನಮ್ಮ ರಾಜ್ಯದಲ್ಲಿ ಮೀನಿನ ಉತ್ಪಾದನೆಗೆ ಸಾಕಷ್ಟು ಅವಕಾಶಗಳಿವೆ. ನಮ್ಮಲ್ಲಿ ನೀರಾವರಿ ಮತ್ತು ವಿವಿದೋದ್ದೇಶ ಜಲಾಶಯಗಳು ಹೆಚ್ಚಿನ ಸಂಖ್ಯೆಯಲ್ಲಿ ಇವೆ. ಸಾವಿರಾರು ದೊಡ್ಡ ಹಾಗೂ ಸಣ್ಣ ಕೆರೆಗಳು ಇವೆ. ಎರಡನೆಯ ಯೋಜನೆಯ ಅವಧಿಯಲ್ಲಿ ನಮ್ಮ ರಾಜ್ಯದ ವಿವಿದ ಭಾಗಗಳಲ್ಲಿ ಮೀನುಗಳ ನರ್ಸರಿಯನ್ನು ಸ್ಥಾಪಿಸಲಾಗಿದೆ ಮತ್ತು ಒಳನಾಡು ಮೀನುಗಾರಿಕಾ ಅಭಿವೃದ್ಧಿ ಸೌಲಭ್ಯಗಳನ್ನು ಪ್ರತಿ ಜಿಲ್ಲೆಗಳಿಗೂ ವಿಸ್ತರಿಸಲಾಗಿದೆ. ಇತರ ರಾಜ್ಯಗಳಂತೆಯೇ ನಾವೂ ಸಿಹಿನೀರಿನ ಮೀನಿನ ಮೊಟ್ಟೆಗಳನ್ನು ತರಿಸಿ ಎಲ್ಲೆಡೆಗೂ ಹಂಚುತ್ತಿದ್ದೇವೆ. ಜೊತೆಜೊತೆಗೆ ಸ್ಥಳೀಯ ಮೀನುಗಳ ಮೊಟ್ಟೆಗಳ ಉತ್ಪಾದನೆಯನ್ನು ಮೀನುಗಳಿಗೆ ಹಾರ್ಮೋನುಗಳ ಚುಚ್ಚುಮದ್ದನ್ನು ನೀಡುವ ಮೂಲಕ ಹೆಚ್ಚಿಸುವ ಕ್ರಮಗಳನ್ನು ಕೈಗೆತ್ತಿಕೊಂಡಿದ್ದೇವೆ. ಇವುಗಳ ಜೊತೆಗೆ ನಮ್ಮ ರಾಜ್ಯದ ನೀರಿನಲ್ಲಿ ಸಮೃದ್ಧವಾಗಿ ಬೆಳೆಯುವ ಜಾತಿಯದಾದ ಹೊಳೆಯುವ ಶಲ್ಕಗಳನ್ನುಳ್ಳ ಕನ್ನಡಿ ಮೀನನ್ನು ಸರಬರಾಜು ಮಾಡುತ್ತಿದ್ದೇವೆ. ಕರಾವಳಿ ಪ್ರದೇಶಗಳಲ್ಲಿ ತಿಲಪಿಯ ಮತ್ತು ಚನೊಸ್ ಜಾತಿಯ ಮೀನುಗಳನ್ನು ಸಾಕಲು ಉತ್ತೇಜನವನ್ನು ನೀಡಲಾಗುತ್ತಿದೆ.

ನಾನು ಆಗಲೇ ತಿಳಿಸಿದಂತೆ ಮೀನುಗಾರಿಕೆಯನ್ನು ವ್ಯವಸ್ಥಿತ ರೂಪದಲ್ಲಿ ಅಭಿವೃದ್ಧಿಗೊಳಿಸಲು ಪ್ರಾರಂಭಿಸಿದ್ದು ಇತ್ತೀಚೆಗೆ. ಮೂರನೆಯ ಪಾಂಚವಾರ್ಷಿಕ ಯೋಜನೆಯ ಅವಧಿಯಲ್ಲಿ, ನಮ್ಮ ಮೀನಿನ ಉತ್ಪಾದನೆಯನ್ನು 60,000 ಟನ್ನುಗಳಷ್ಟು ಹೆಚ್ಚಿಸಿ ಒಟ್ಟು ಉತ್ಪಾದನೆಯನ್ನು 1.93 ಲಕ್ಷ ಟನ್ನುಗಳಿಗೆ ಏರಿಸುವ ಗುರಿಯನ್ನು ಹಾಕಿಕೊಂಡಿದ್ದೇವೆ. ಈ ಉದ್ದೇಶಕ್ಕಾಗಿ ಮೀನುಗಾರಿಕೆಯ ಇಲಾಖೆಯಿಂದ 132 ಲಕ್ಷ ರೂಗಳನ್ನೂ, ಲೋಕೋಪಯೋಗಿ ಇಲಾಖೆಯ ಮೂಲಕ 32 ಲಕ್ಷ ರೂಗಳನ್ನು ಖರ್ಚುಮಾಡಲಿದ್ದೇವೆ. ಸಣ್ಣ ಕೆರೆಗಳಲ್ಲಿ ಮೀನುಗಾರಿಕೆಯನ್ನು ಅಭಿವೃದ್ಧಿಗೊಳಿಸಲು ಸಮುದಾಯ ಅಭಿವೃದ್ಧಿ ಹಾಗೂ ಪಂಚಯತಿಗಳ ಬಜೆಟ್‌ನಿಂದಲೂ ಸಾಕಷ್ಟು ಹಣವನ್ನು ತೆಗೆದಿರಿಸಿದ್ದೇವೆ. ಯಾಂತ್ರೀಕೃತ ದೋಣಿಗಳ ಸಂಖ್ಯೆಯನ್ನು ಈಗಿರುವುದರ ಸಂಖ್ಯೆಯ ನಾಲ್ಕು ಮಡಿ ಏರಿಸಲು ಮತ್ತು ಸಂರಕ್ಷಣೆ ಹಾಗೂ ಸಾರಿಗೆ ಸೌಲಭ್ಯಗಳನ್ನು ಹೆಚ್ಚಿಸುವ ಪ್ರಸ್ತಾಪಗಳು ನಮ್ಮ ಮುಂದಿವೆ. ರಫ್ತನ್ನು ಹೆಚ್ಚಿಸುವ ಉದ್ದೇಶದಿಂದ ಆಳವಾದ ಸಮುದ್ರದಲ್ಲಿ ಮೀನುಗಾರಿಕೆಯನ್ನು ಅಭಿವೃದ್ಧಿಪಡಿಸುವ ಯೋಜನೆಯಿದ್ದು, ಇದಕ್ಕಾಗಿ ಜಪಾನ್ ಮತ್ತು ನಾರ್ವೆ ದೇಶಗಳ ಸಹಯೋಗಕ್ಕಾಗಿ ಮಾತುಕತೆಗಳು ನಡೆಯುತ್ತಿವೆ. ಅಗತ್ಯವಿರುವ ಯಂತ್ರೋಪಕರಣಗಳನ್ನು ಆಮದು ಮಾಡಿಕೊಳ್ಳಲು ವಿದೇಶೀ ವಿನಿಮಯದ ಆವಶ್ಯಕತೆ ಇರುವುದರಿಂದ, ಮುಖ್ಯವಾಗಿ ನಾವು ಈಗ ಹೆಚ್ಚಿನ ಉತ್ಪಾದನಾ ಸಾಧ್ಯತೆಯಿರುವ ಒಳನಾಡು ಮೀನುಗಾರಿಕೆಗೆ ಹೆಚ್ಚಿನ ಪ್ರಾಧಾನ್ಯವನ್ನು ನೀಡುತ್ತಿದ್ದೇವೆ. ನಮ್ಮ ರಾಜ್ಯದಲ್ಲಿ, ಅಷ್ಟೇಕೆ ಇಡೀ ದೇಶದಲ್ಲಿ, ಹೆಚ್ಚಿನ ಒಳನಾಡು ಪ್ರದೇಶಗಳು ಸಮುದ್ರತೀರದಿಂದ ಬಹಳ ದೂರ ಇವೆ. ಆದ್ದರಿಂದ, ಮೀನಿಗಾಗಿ ಒಳನಾಡು ಮೀನುಗಾರಿಕೆಯ ಮೇಲೆಯೇ ಈ ಪ್ರದೇಶಗಳು ಹೆಚ್ಚಾಗಿ ಅವಲಂಬಿಸಬೇಕಾಗಿದೆ. ಮೀನು ಸಾಕಣೆಯನ್ನು ಎಲ್ಲಾ ಕೆರೆ ಹಾಗೂ ಕೊಳಗಳಿಗೂ ವಿಸ್ತರಿಸಲು ನಾವು ಬಯಸುತ್ತೇವೆ.ಈಗ ನೀವು ಹಮ್ಮಿಕೊಂಡಿರುವಂತಹ ತರಬೇತಿ ಕಾರ್ಯಕ್ರಮದಿಂದ ಒಳ್ಳೆಯ ಫಲದೊರೆಯಬಹುದೆಂಬ ನಂಬಿಕೆ ನನಗಿದೆ ಮತ್ತು ಇನ್ನೂ ಹೆಚ್ಚಿನ ಜನರಿಗೆ ಈ ದಿಸೆಯಲ್ಲಿ ತರಬೇತಿ ಕೊಡಲು ಇಂತಹ ಹಲವು ತರಬೇತಿ ಶಿಬಿರಗಳನ್ನು ಹೆಚ್ಚಿನ ಸಂಖ್ಯೆಯಲ್ಲಿ ಹಾಕಿಕೊಳ್ಳಬೇಕಾಗಿದೆ. ಹಳ್ಳಿಗಳಲ್ಲಿ ಅಸಂಖ್ಯಾತ ಕೊಳಗಳು ಇದ್ದು, ಸರಕಾರಕ್ಕೆ ಅವನ್ನೆಲ್ಲಾ ತನ್ನ ಮೀನುಸಾಕಣೆಯ ಕಾರ್ಯಕ್ರಮದ ವ್ಯಾಪ್ತಿಗೆ

ತರಲು ಸರಕಾರಕ್ಕೆ ಸಾಧ್ಯವಾಗುವುದಿಲ್ಲ. ಆದ್ದರಿಂದ ನಾವು ಹಳ್ಳಿಯ ಜನರ ಮೇಲೆಯೇ ಅವಲಂಬಿಸಬೇಕಾಗಿದೆ. ಅವರ ಕಾರ್ಯಗಳನ್ನು ಕೇವಲ ಸಮುದಾಯ ಅಭಿವೃದ್ಧಿ ಹಾಗೂ ಪಂಚಾಯತಿಗಳ ಮೂಲಕ ನಾವು ಸಂಘಟಿಸಬಹುದು, ಅವರಿಗೆ ನಾವು ಮಾರ್ಗದರ್ಶನ ಮಾಡಬಹುದು. ವಿಭಾಗಗಳಲ್ಲಿ ಕೆಲಸಮಾಡುತ್ತಿರುವ ಯುವಕರ ಮೇಲೆ ಅಧಿಕ ಜವಾಬ್ದಾರಿಯಿದೆ. ಹಳ್ಳಿಯ ಹಲವಾರು ಯೋಜನೆಗಳನ್ನು ಅನುಷ್ಠಾನಕ್ಕೆ ತರುವ ಹೊಣೆ ನಿಮ್ಮ ಹೆಗಲ ಮೇಲೆ ಇದೆ. ಆದ್ದರಿಂದ, ನೀವು, ಅಂದರೆ ವಿಸ್ತರಣಾ ಅಧಿಕಾರಿಗಳು, ಈ ಅವಕಾಶದ ಸದುಪಯೋಗವನ್ನು ಪಡೆದುಕೊಂಡು ಮೀನುಸಾಕಣೆಯ ತಂತ್ರಗಳನ್ನು ಚೆನ್ನಾಗಿ ತಿಳಿದುಕೊಳ್ಳಿ. ಅದರಿಂದ ನೀವು ನಿಮ್ಮ ವಿಭಾಗಗಳಿಗೆ ಹಿಂದಿರುಗಿದಾಗ ಹಳ್ಳಿಯ ಜನರಿಗೆ ಈ ತಂತ್ರಗಳನ್ನು ತಿಳಿಯ ಹೇಳಿ ಅವರು ಅದನ್ನು ಅನುಸರಿಸುವಂತೆ ಮಾಡಿ ಆಹಾರೋತ್ಪಾದನೆಯನ್ನು ಹೆಚ್ಚಿಸಿ. ಸಮುದಾಯ ಅಭಿವೃದ್ಧಿ ಮತ್ತು ರಾಷ್ಟ್ರೀಯ ವಿಸ್ತರಣಾ ಯೋಜನೆಯ ಕಾರ್ಯಕ್ರಮಗಳನ್ನು ಕಾರ್ಯಗತಗೊಳಿಸುವ ನಿಟ್ಟಿನಲ್ಲಿ ನೀವು ಡಾ. ಡೌಗ್ಲಾಸ್ ಎನ್ಸ್‌ಮಿಂಗರ್ ಅವರು ತಮ್ಮ 'ಗೈಡ್ ಟು ಕಮ್ಯುನಿಟಿ ಡೆವಲಪ್‌ಮೆಂಟ್' ಪುಸ್ತಕದಲ್ಲಿ ಮಾಡಿರುವ ಸಲಹೆಗಳನ್ನು ಗಮನಿಸಬೇಕೆಂದು ಶಿಫಾರಸು ಮಾಡುತ್ತೇನೆ. ಅಲ್ಲದೆ, ಮೀನಿನ ಸೇವನೆಯತ್ತ ಹೆಚ್ಚು ಹೆಚ್ಚಿನ ಜನರನ್ನು ಸೆಳೆಯುವ ಕೆಲಸವನ್ನೂ ನೀವು ಮಾಡಬೇಕು.

ಸಮುದಾಯ ಅಭಿವೃದ್ಧಿ ಮತ್ತು ರಾಷ್ಟ್ರೀಯ ವಿಸ್ತರಣಾ ಕಾರ್ಯಕ್ರಮಗಳ ಮುಖ್ಯ ಉದ್ದೇಶ, ಗ್ರಾಮೀಣ ಜನರು ತಮ್ಮ ಸಮಸ್ಯೆಗಳನ್ನು ಅರಿತುಕೊಂಡು, ತಮ್ಮ ಸಾಮಾಜಿಕ ಹಾಗೂ ಆರ್ಥಿಕ ಪರಿಸ್ಥಿತಿಯನ್ನು ಸುಧಾರಿಸಿಕೊಳ್ಳಲು ಶ್ರಮದ ದುಡಿಮೆಯಿಂದ ಕೃಷಿ, ಪಶುಸಂಗೋಪನೆ, ತೋಟಗಾರಿಕೆ ಮತ್ತು ಮೀನುಗಾರಿಕೆಯನ್ನು ಅಭಿವೃದ್ಧಿಪಡಿಸಬೇಕು. ಇಲ್ಲಿ ತರಬೇತಿಯನ್ನು ಪಡೆಯುತ್ತಿರುವ ನಿಮ್ಮನ್ನು ನಿಮ್ಮ ರಾಜ್ಯದಲ್ಲಿನ ಸಮುದಾಯ ಅಭಿವೃದ್ಧಿ ಕಾರ್ಯಕ್ರಮದ ಅಡಿಯಲ್ಲಿ ಮೀನುಗಾರಿಕೆಯ ಕಾರ್ಯಕ್ರಮಗಳನ್ನು ಅನುಷ್ಠಾನಕ್ಕೆ ತರಲು ನೇಮಿಸಲಾಗುವುದು. ನಿಮ್ಮ ಕೆಲಸದ ಸಮಯದಲ್ಲಿ ನೀವು ನೇರವಾಗಿ ಹಲವು ಮೀನುಗಾರರ ಸಂಪರ್ಕಕ್ಕೆ ಬರುತ್ತೀರಿ. ಈ ಅವಕಾಶವನ್ನು ನೀವು ಅವರಿಗೆ ಮೀನುಗಾರಿಕೆಯಲ್ಲಿನ ತಂತ್ರಗಳನ್ನು ಕಲಿಸುವುದಷ್ಟಕ್ಕೇ ಅಲ್ಲದೆ, ಅವರ ವೈಯಕ್ತಿಕ ಪ್ರಗತಿಯ ವಿಷಯದಲ್ಲಿ ಆಸಕ್ತಿಯನ್ನು ವಹಿಸಬೇಕು ಹಾಗೂ ಈ ಹತ್ತು ಹಲವಾರು ಯೋಜನೆಗಳ ಲಾಭವನ್ನು

ಪಡೆದುಕೊಳ್ಳಲು ಅವರಲ್ಲಿ ಉತ್ಸಾಹವನ್ನು ತುಂಬಬೇಕು. ಹೀಗೆ ಮಾಡುವುದರಿಂದ ಅವರ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗಳು ಉತ್ತಮಗೊಳ್ಳುತ್ತವೆ.

ನಾನು ಇನ್ನೂ ಹೆಚ್ಚಿಗೆ ನಿಮ್ಮ ಸಮಯವನ್ನು ತೆಗೆದುಕೊಳ್ಳಲು ಬಯಸುವುದಿಲ್ಲ. ಈ ಸಮಾರಂಭದಲ್ಲಿ ಭಾಗವಹಿಸಲು ನನಗೆ ಅವಕಾಶವನ್ನು ಕೊಟ್ಟುದಕ್ಕಾಗಿ ನಾನು ಈ ರಿಫ್ರೆಷರ್ ಕೋರ್ಸ್‌ನ ಸಂಘಟಕರಿಗೆ ಆಭಾರಿಯಾಗಿದ್ದೇನೆ. ನೀವು ಈ ತರಬೇತಿಯನ್ನು ಪಡೆಯುವಲ್ಲಿ ಶ್ರದ್ಧೆಯಿಂದ ಭಾಗವಹಿಸಿ, ನಿಮ್ಮ ಊರುಗಳಿಗೆ ಹಿಂದಿರುಗಿದಾಗಇಲ್ಲಿ ಕಲಿತದ್ದನ್ನು ಕಾರ್ಯರೂಪಕ್ಕೆ ಪೂರ್ಣ ಉತ್ಸಾಹದಿಂದ ಇಳಿಸುತ್ತೀರೆಂದು ಮತ್ತು ಅದರ ಲಾಭವು ದೇಶಕ್ಕೆ ದೊರೆಯುವುದೆಂದು ನಾನು ಆಶಿಸುತ್ತೇನೆ.

ಈಗ ನಾನು ಮೀನುಗಾರಿಕಾ ವಿಸ್ತರಣಾ ಸಿಬ್ಬಂದಿಗಾಗಿ ಸಂಘಟಿಸಿರುವ ಮೀನುಗಾರಿಕೆಯ ಈ ರಿಫ್ರೆಷರ್ ಕೋರ್ಸ್‌ನ್ನು ಸಂತೋಷದಿಂದ ಉದ್ಘಾಟಿಸುತ್ತಿದ್ದೇನೆ ಮತ್ತು ಇಲ್ಲಿ ತರಬೇತಿ ಪಡೆಯಲು ಬಂದಿರುವಂತಹ ಅಭ್ಯರ್ಥಿಗಳಿಗೆ ಮತ್ತು ತರಬೇತಿ ನೀಡುವ ಸಿಬ್ಬಂದಿಗಳಿಗೆ ಒಳ್ಳೆಯದನ್ನು ಹಾರೈಸುತ್ತೇನೆ.

## ♦ ಶಾಂತಿ ಮತ್ತು ಸಮೃದ್ಧಿ ಸ್ಥಾಪನೆಗಾಗಿ ಪ್ರತಿಜ್ಞೆ

**ಈ ಭಾಷಣವು ಆಗಸ್ಟ್ 15ರ ಸ್ವಾತಂತ್ರ್ಯೋತ್ಸವದ ಆಚರಣೆಯ ಸಂದರ್ಭದಲ್ಲಿ ಹರಿಸಿದ ಚಿಂತನೆಗಳ ಹರಹು. ಸ್ವಾತಂತ್ರ್ಯಗಳಿಸಿ ಹನ್ನೆರಡು ವರ್ಷ ಕಳೆದ ಭಾರತದ ಮುಂದಿನ ಆಯ್ಕೆ ಮತ್ತು ಭವಿಷ್ಯದ ರೂಪುರೇಷೆಗಳನ್ನು ಚಿಂತಿಸುವ ರಾಚಯ್ಯನವರು ಎರಡು ಆಯ್ಕೆಗಳನ್ನಿಡುತ್ತಾರೆ. ಒಂದು ಪಂಚಶೀಲ – ಮತ್ತೊಂದು ಸಂಪೂರ್ಣನಾಶ. ಆಯ್ಕೆ ನಮ್ಮದು. 1959ರ ಆಗಸ್ಟ್ 15 ರಂದು ಪತ್ರಿಕೆಗಳಿಗೆ ನೀಡಿದ ಸಂದೇಶ.**

ಹನ್ನೆರಡು ವರ್ಷಗಳ ಹಿಂದೆ, ಈ ಸ್ಮರಣೀಯ ದಿನದಂದು, ನಾವು ಸ್ವತಂತ್ರ ರಾಷ್ಟ್ರವಾಗಿ ಹೊಮ್ಮಿದೆವು. ಅದು ರಾಜಕೀಯ ಮುಕ್ತಿಯಾಗಿತ್ತು. ಅದೇ ಸಂದರ್ಭದಲ್ಲಿ ಹಿರೋಷಿಮಾ ನಾಗಸಾಕಿಗಳ ಮೇಲೆ ಹಾಕಿದ ಅಣುಬಾಂಬ್ ಜಗತ್ತಿನ ಆತ್ಮಸಾಕ್ಷಿಯನ್ನು ಅಲುಗಾಡಿಸಿತ್ತು. ವಿಶ್ವದ ಮೇಲೆ ತಮ್ಮ ಆಧಿಪತ್ಯವನ್ನು ಸ್ಥಾಪಿಸಲು ಇಬ್ಬರು ಸ್ಪರ್ಧಿಗಳು ಹುಟ್ಟಿಕೊಂಡರು. ಇಬ್ಬರೂ ವಿನಾಶಕಾರಿ ಹಾಗೂ ಅತಿ ವಿನಾಶಕಾರಿಯಾದ ಸಮೂಹ ನಾಶದ ಸಾಧನಗಳನ್ನು ಉತ್ಪಾದಿಸತೊಡಗಿದರು, ಇದರಿಂದ ಸ್ಪುಟ್ನಿಕ್ ಯುಗವು ಪ್ರಾರಂಭವಾಯಿತು. ಈ ಅವಧಿಯಲ್ಲಿ ಮುಕ್ತವಾಗಿ ನಡೆಯುವ ಯುದ್ಧಗಳು, ಮುಸುಕಿನೊಳಗಿನ ಗುದ್ದಾಟ, ಇವೆಲ್ಲವೂ ನಡೆಯುತ್ತಲೇ ಇದ್ದು, ಪ್ರಪಂಚದಲ್ಲೆಡೆ ಆತಂಕ ಮಡುಗಟ್ಟಿ ನಿಂತಿತ್ತು. ಇಬ್ಬರು ಪ್ರತಿಸ್ಪರ್ಧಿಗಳೂ ಹಣಾಹಣಿಗೆ ಸಿದ್ಧರಾಗಿದ್ದರು, ಆದರೂ ಅದರಿಂದಾಗುವ ಸಂಪೂರ್ಣನಾಶದ ಭೀತಿಯಿಂದ ಹಿಂದೆ ಸರಿದಿದ್ದಾರೆ ಅಷ್ಟೆ. ಯುದ್ಧದ ಭಯವು ಎಲ್ಲೆಡೆ ಹರಡಿರುವುದರಿಂದ ಶಾಶ್ವತವಾದ ಶಾಂತಿಯು ಇನ್ನೂ ಜಗತ್ತಿನಿಂದ ದೂರದಲ್ಲಿಯೇ ಇದೆ. ಈ ಯುದ್ಧಗಳನ್ನು ತಡೆಗಟ್ಟಲು ನಮ್ಮ ಪ್ರೀತಿಯ ಪ್ರಧಾನ ಮಂತ್ರಿಗಳಾದ ಪಂಡಿತ್ ನೆಹ್ರೂ ಅವರು ಜಗತ್ತಿಗೆ ಪಂಚಶೀಲ ನೀತಿಯನ್ನು ನೀಡಿದ್ದಾರೆ. ಇದು ಎಲ್ಲಾ ದೇಶಗಳು ಅನುಸರಿಸಬೇಕಾದ ನೀತಿಯನ್ನು ಘೋಷಿಸುತ್ತದೆ. ಇದು ಇಂದಿನ ಹಾಗೂ ಭವಿಷ್ಯದ ಜೀವನದ ಮೌಲ್ಯಗಳನ್ನು ಪ್ರತಿನಿಧಿಸುತ್ತದೆ. ಈ ಯುದ್ಧದ ಸಮಸ್ಯೆಗಳಿಗೆ ರಾಮಬಾಣವಾದ

ಇದನ್ನು ಇಡೀ ನಾಗರಿಕ ಪ್ರಪಂಚ ಉತ್ಸಾಹದಿಂದ ಬಾಚಿಕೊಂಡಿತು. ಈ ನೀತಿಯಿಂದಾಗಿ, ಇಂದು ರಷ್ಯಾದ ಕ್ರುಶ್ಚೆವ್ ಅಮೆರಿಕಕ್ಕೆ ಭೇಟಿ ನೀಡುತ್ತಾರೆ ಮತ್ತು ಐಸೆನ್‌ಹೊವರ್ ರಷ್ಯಾಕ್ಕೆ ಭೇಟಿ ನೀಡುತ್ತಾರೆ. ಪ್ರಪಂಚದಾದ್ಯಂತ ಮಾನವ ಜನಾಂಗದ ಮುಂದೆ ಇರುವುದು ಎರಡೇ ಆಯ್ಕೆಗಳು – ಒಂದು, ಪಂಚಶೀಲ; ಎರಡನೆಯದು, ಸಂಪೂರ್ಣ ನಾಶ.

ಇಲ್ಲಿ, ನಮ್ಮ ದೇಶದಲ್ಲಿ ಸ್ವಾತಂತ್ರ್ಯವು ಬಂದ ತಕ್ಷಣವೇ, ದೇಶವಿಭಜನೆಯ ದುರಂತ ಮತ್ತು ಅದರ ಪರಿಣಾಮವಾದ ನಿರಾಶ್ರಿತರ ಸಮಸ್ಯೆಯನ್ನು ನಾವು ಎದುರಿಸಬೇಕಾಯಿತು. ಇದರ ಜೊತೆಗೆ ನಮ್ಮ ಮುಂದೆ ಅನಕ್ಷರತೆ, ಅಜ್ಞಾನ, ಶೋಷಣೆ, ಸಾಮಾಜಿಕ ಅನ್ಯಾಯ, ಕಡುಬಡತನ ಮತ್ತು ಎಲ್ಲೆಲ್ಲೂ ಹರಡಿರುವ ಇತರ ಸಂಕಷ್ಟಗಳು – ಇಂತಹ ಅಗಾಧವಾದ ಸಮಸ್ಯೆಗಳು ಪರಿಹಾರಕ್ಕಾಗಿ ಕಾಯುತ್ತ ನಿಂತಿದ್ದವು. ಸಂಸದೀಯ ಪ್ರಜಾಪ್ರಭುತ್ವವನ್ನು ನಾವು ಒಪ್ಪಿಕೊಂಡಿದ್ದೇವೆ. ಪಂಚಶೀಲ ನೀತಿಯನ್ನು ನಮ್ಮ ರಾಷ್ಟ್ರೀಯ ಹಾಗೂ ಅಂತರರಾಷ್ಟ್ರೀಯ ನೀತಿಯ ಅಡಿಪಾಯವಾಗಿ ಮಾಡಿಕೊಂಡಿದ್ದೇವೆ. ನಮ್ಮ ಪುಣ್ಯಸ್ಮರಣೆಯಲ್ಲಿರುವ ಬಾಪೂಜಿಯವರು ಬೋಧಿಸಿದ ಅಹಿಂಸೆಯನ್ನು ಅನುಸರಿಸಿ, ಹಿಂಸಾಮಾರ್ಗವನ್ನು ತ್ಯಜಿಸಿ, ಮೌನ ಹಾಗೂ ಶಾಂತಿಯುತವಾದ ಕ್ರಾಂತಿಯಲ್ಲಿ ನಾವು ತೊಡಗಿದ್ದೇವೆ. ಶ್ರದ್ಧೆ ಮತ್ತು ಶ್ರಮದಿಂದ ನಾವು ರಾಷ್ಟ್ರದ ಪುನರ್ನಿರ್ಮಾಣದ ನೀತಿಯನ್ನು ರೂಪಿಸಿದ್ದೇವೆ. ಮೊದಲನೆಯ ಪಾಂಚವಾರ್ಷಿಕ ಯೋಜನೆಯು ಮುಗಿದು, ಈಗ ಎರಡನೆಯದು ಚಾಲ್ತಿಯಲ್ಲಿದೆ. ಮೂರನೆಯ ಪಾಂಚವಾರ್ಷಿಕ ಯೋಜನೆಯು ಪರಿಶೀಲನೆಯಲ್ಲಿದೆ. ಇಲ್ಲಿಯವರೆಗಿನ ನಮ್ಮ ಸಾಧನೆಯು ಉತ್ತಮವಾಗಿದ್ದರೂ, ಸಾಧಿಸಬೇಕಾದುದು ಬಹಳಷ್ಟಿದೆ. ಸ್ವಾತಂತ್ರ್ಯಪೂರ್ವದಲ್ಲಿದ್ದ ಜೀವನದ ಗುಣಮಟ್ಟಕ್ಕಿಂತ ಈಗಿನ ಜೀವನ ಮಟ್ಟ ಹೆಚ್ಚಿದೆಯೆಂದು ನಾವು ಕೈಕಟ್ಟಿ ಕೂರುವಂತಿಲ್ಲ. ನಮ್ಮ ಪ್ರೀತಿಯ ರಾಷ್ಟ್ರಪತಿ ಬಾಬು ರಾಜೇಂದ್ರ ಪ್ರಸಾದ್ ಮತ್ತು ಪ್ರಧಾನಮಂತ್ರಿ ಪಂಡಿತ್ ನೆಹ್ರೂ ಅವರು ಸಮಾಜವಾದಿ ತತ್ತ್ವಗಳನ್ನು ಆಧರಿಸಿದ ಸಮಾಜವನ್ನು ಸ್ಥಾಪಿಸುವುದಕ್ಕೆ, ನಾವು ನಮ್ಮ ಗಮನವನ್ನು ರಾಷ್ಟ್ರದ ಪುನರ್ನಿರ್ಮಾಣದ ಮೇಲೆ ಕೇಂದ್ರೀಕರಿಸಬೇಕೆಂದು ಕರೆಕೊಟ್ಟಿದ್ದಾರೆ. ತಕ್ಷಣದಲ್ಲಿ ನಾವು ನಮ್ಮ ಗಮನವನ್ನು ಕೇಂದ್ರೀಕರಿಸಬೇಕಾದ ಒಂದೆರಡು ಅಂಶಗಳನ್ನು ಇಲ್ಲಿ ಸೂಚಿಸಬಯಸುತ್ತೇನೆ. ಅವೆಂದರೆ – ಸಹಕಾರ ಕೃಷಿ, ಆಹಾರ ಹಾಗೂ

ಬಳಕೆದಾರರ ವಸ್ತುಗಳನ್ನು ಅಧಿಕಪ್ರಮಾಣದಲ್ಲಿ ಉತ್ಪಾದಿಸುವುದು. ಇವುಗಳ ಅಧಿಕ ಉತ್ಪಾದನೆಯಿಂದ ದೇಶವು ಸ್ವಾವಲಂಬನೆಯನ್ನು ಹೊಂದಬಹುದು ಮತ್ತು ಅತ್ಯಾವಶ್ಯಕವಾಗಿರುವ ವಿದೇಶೀ ವಿನಿಮಯವನ್ನು ಉಳಿಸಬಹುದು. ಸ್ವಯಂಪ್ರೇರಿತರಾಗಿ ನಡೆಸುವ ಸಹಕಾರ ಕೃಷಿಯು ಸಂಘದ ಎಲ್ಲಾ ಸದಸ್ಯರ ಹಿತಾಸಕ್ತಿಯನ್ನು, ಹಾಗೆಯೇ ದೇಶದ ಹಿತಾಸಕ್ತಿಯನ್ನು ಕಾಪಾಡುತ್ತದೆ. ಈ ಕೃಷಿ ವಿಧಾನವು ಈಗ ನಮ್ಮ ಕೃಷಿಗೆ ಮಾರಕವಾಗಿರುವ ಆರ್ಥಿಕ, ಸಾಮಾಜಿಕ ಮತ್ತು ಕೃಷಿಸಂಬಂಧಿತ ಎಲ್ಲಾ ಸಮಸ್ಯೆಗಳಿಗೂ ಪರಿಹಾರವಾಗಿದೆ. ಅದನ್ನು ಯಶಸ್ವಿಯಾಗುವಂತೆ ಮಾಡುವುದು ನಮೆಲ್ಲರ ಹೊಣೆ. ಎಲ್ಲರೂ ತಮ್ಮ ಆಸೆಯನ್ನು, ವಿಶ್ವಾಸವನ್ನು ಇಟ್ಟಿರುವುದು ಈಗ ರಾಷ್ಟ್ರವು ಕೈಗೆತ್ತಿಕೊಂಡಿರುವ ಪಾನನಿಷೇಧದ ನೀತಿಯ ಮೇಲೆ. ಪಾನನಿಷೇಧವು ಒಂದು ರಾಷ್ಟ್ರೀಯ ಸದ್ಗುಣವಾಗಿದೆ ಮತ್ತು ಅದು ಹಲವಾರು ಸಂಪೂರ್ಣ ವಿನಾಶದಿಂದ ಸಂಸಾರಗಳನ್ನು ಪಾರುಮಾಡುತ್ತದೆ. ಸಂವಿಧಾನದ ಅಡಿಯಲ್ಲಿ ನಮ್ಮಲ್ಲಿ ಪ್ರತಿಯೊಬ್ಬರೂ ಸಮಾನವಾದ ಹಕ್ಕು ಮತ್ತು ಸಮಾನವಾದ ಬಾಧ್ಯತೆಗಳನ್ನುಹೊಂದ್ದಿದ್ದೇವೆ. ಆದ್ದರಿಂದ ನಾವೆಲ್ಲರೂ ಈಗ ಅನಕ್ಷರತೆ, ಅಜ್ಞಾನ, ದುರಾಸೆ, ಸಾಮಾಜಿಕ ಅನ್ಯಾಯ, ಪಟ್ಟಭದ್ರ ಹಿತಾಸಕ್ತಿಗಳು ಮತ್ತು ಶ್ರಮಜೀವಿಗಳ ಎಲ್ಲಾ ವಿಧದ ಶೋಷಣೆ ಈ ಅನಿಷ್ಟಗಳ ವಿರುದ್ಧ ಹೋರಾಡಿ ಅವುಗಳನ್ನು ನಾಶಮಾಡಲು ಸಿದ್ಧರಾಗಬೇಕಾಗಿದೆ.

ಇಂತಹ ಪವಿತ್ರ ಸಂದರ್ಭದಲ್ಲಿ ಸಮಾಜದ ಯೋಗ್ಯ ಸದಸ್ಯರಾಗಿರುವ ನಾವು ನಮ್ಮ ದೇಶದ ಸೇವೆಗಾಗಿ, ಶಾಂತಿ ಮತ್ತು ಸಮೃದ್ಧಿಯ ಆಧಿಪತ್ಯವನ್ನು ನಿಲ್ಲಿಸಿ ಕಲ್ಯಾಣರಾಜ್ಯವನ್ನು ಸ್ಥಾಪಿಸುವುದಕ್ಕಾಗಿ ಹೊಸದಾಗಿ ಪ್ರತಿಜ್ಞೆಮಾಡೋಣ.

## ♦ ತೊಟ್ಟಿಲನ್ನು ತೂಗುವ ಕೈ ಲೇಖನಿ ಹಿಡಿಯುವಂತಾಗಲಿ

**ರಾಚಯ್ಯನವರು ತಮ್ಮ ಪತ್ನಿ ಲಕ್ಷ್ಮಮ್ಮ ರಾಚಯ್ಯನವರೊಂದಿಗೆ ಭಾಗವಹಿಸಿದ ವಿಶೇಷ ಕಾರ್ಯಕ್ರಮ. ರಾಜಾಜಿಯವರು "ನನಗೆ ಪುನರ್ಜನ್ಮವಿದ್ದರೆ ನಾನು ಹೆಂಗಸಾಗಿ ಹುಟ್ಟಲು ಬಯಸುತ್ತೇನೆ" ಎಂಬ ಕೋಟ್ ರಾಚಯ್ಯನವರ ವ್ಯಕ್ತಿತ್ವದ ಪ್ರತಿಬಿಂಬ. 1960 ಮಾರ್ಚ್ 24ರಂದು ಮಹಾರಾಣಿ ಕಾಲೇಜಿನಲ್ಲಿ ವಿದ್ಯಾರ್ಥಿಗಳಿಗಾಗಿ ಮಾಡಿದ ಸಮಾರೋಪ ಮಾತುಗಳು.**

ತಮ್ಮ ಜೀವನದಲ್ಲಿ ಮೊಟ್ಟಮೊದಲ ಬಾರಿಗೆ ಶ್ರೀಮತಿ ರಾಚಯ್ಯ ಇಂತಹ ಒಂದು ಸಾರ್ವಜನಿಕ ಸಮಾರಂಭದಲ್ಲಿ ಭಾಗವಹಿಸುತ್ತಿದ್ದಾರೆ. ಅವರ ಪರವಾಗಿಯೂ ಮತ್ತು ನನ್ನ ಪರವಾಗಿಯೂ ನಿಮ್ಮ ಪ್ರಿನ್ಸಿಪಾಲ್ ಶ್ರೀಮತಿ ನೊರೋನ್ಹ ಅವರನ್ನು ನಮಗೆ ಈ ಅವಕಾಶವನ್ನು ನೀಡಿದ್ದಕ್ಕಾಗಿ ಕೃತಜ್ಞತೆಯನ್ನು ಸಲ್ಲಿಸುತ್ತೇನೆ. ಯುವಕ, ಯುವತಿಯರು ವ್ಯವಸ್ಥೆಮಾಡಿದ ಸಮಾರಂಭಗಳಲ್ಲಿ ಭಾಗವಹಿಸುವುದು ನನಗೆ ಅತ್ಯಂತ ಸಂತೋಷದ ವಿಷಯ. ಅವರು ವಯಸ್ಸಿನಲ್ಲಿ ಚಿಕ್ಕವರಾದರೂ ವಿವೇಕವಂತರು. ಅವರು ಪಡೆದ ಬಹುಮಾನಗಳ ಮೇಲೆ ಮತ್ತು ಅದನ್ನು ವಿತರಿಸಿದ ಬಗೆಯ ಮೇಲೆ ಆಧರಿಸಿ ನಾನು ಈ ಮಾತನ್ನಾಡುತ್ತಿದ್ದೇನೆ. ದಿನನಿತ್ಯದ ಜೀವನದಲ್ಲಿ ಉಪಯೋಗಕ್ಕೆ ಬರದ ಪದಕಗಳನ್ನಾಗಲೀ, ಪಾರಿತೋಷಕವನ್ನಾಗಲೀ ನೀಡುವ ಬದಲು ನೀವು ಕೆಳದರ್ಜೆಯ ನೌಕರರಿಗೆ ವಸ್ತ್ರಗಳನ್ನು, ಸೀರೆಗಳನ್ನು ನೀಡಿದ್ದೀರಿ. ಇವು ಅವರಿಗೆ ಉಪಯೋಗಕ್ಕೆ ಬರುತ್ತವೆ ಮತ್ತು ಬಡವರು ಇವುಗಳನ್ನು ಕೊಂಡುಕೊಳ್ಳುವುದು ಬಹಳ ಕಷ್ಟ. ನೀವು ಅವುಗಳನ್ನು ನೀಡುತ್ತಿರುವ ಸಮಯವೂ ಅತ್ಯಂತ ಯೋಗ್ಯವಾಗಿದೆ, ಕಾರಣ, ಯುಗಾದಿ ಇನ್ನೇನು ಬರಲಿದೆ.

ನಿಮ್ಮ ಕಾಲೇಜು 300 ಜನ ವಿದ್ಯಾರ್ಥಿಗಳಿಗಾಗಿರುವುದಾದರೂ, ನೀವು ಹೇಳಿದ ಹಾಗೆ, ಇಲ್ಲಿ 2000 ಜನ ವಿದ್ಯಾರ್ಥಿಗಳು ವಿದ್ಯಾಭ್ಯಾಸಮಾಡುತ್ತಿದ್ದಾರೆ. ನಿಮಗೆ ಜಾಗ ಸಾಲದಿರುವ ವಿಷಯ ನನ್ನ ಅರಿವಿಗೆ ಬಂದಿದೆ. ಇಲ್ಲಿರುವ ಮಹಿಳೆಯರ ಕ್ಲಬ್ಬನ್ನು ನಿಮಗೆ ನೀಡುವಂತೆ ನೀವು ಬೇಡಿಕೆಯನ್ನು ನನ್ನಮುಂದೆ ಇರಿಸಿದ್ದೀರಿ. ನಾನು ಸರಕಾರದ ಮೇಲೆ ಒತ್ತಡವನ್ನು ತಂದು, ಈ ಇಡೀ

ಾಗವನ್ನು ನಿಮಗೆ ಕೊಡುವಂತೆ ಪ್ರಯತ್ನಿಸುತ್ತೇನೆ. ಇವನ್ನೆಲ್ಲಾ ಖಾಲಿ ಯೋರನೆಯ ಯೋಜನೆಯಲ್ಲಿ ಶ್ರೀಮತಿ ದುರ್ಗಾಬಾಯಿಯವರು 20,00,000 ಮಹಿಳೆಯರಿಗೆ ಸಮಾಜ ಸೇವೆಯಲ್ಲಿ ಉದ್ಯೋಗಾವಕಾಶಗಳನ್ನು ಒದಗಿಸುವ ಪ್ರಯತ್ನವನ್ನು ಮಾಡುತ್ತಿದ್ದಾರೆ. ಇದಲ್ಲದೆ, ವೈದ್ಯಕೀಯ, ಶಿಕ್ಷಣ ಮೊದಲಾದ ಕ್ಷೇತ್ರಗಳಲ್ಲಿ ಮಹಿಳೆಯರಿಗೆ ಇರುವ ಅವಕಾಶಗಳೂ ಇವೆ. ಅಂದರೆ ನಿಮ್ಮ ಮುಂದೆ ಬೇಕಾದಷ್ಟು ಅವಕಾಶಗಳಿವೆ. ಆದ್ದರಿಂದ ನೀವು ಕಷ್ಟಪಟ್ಟು ವಿದ್ಯಾಭ್ಯಾಸಮಾಡಿ ಆದಷ್ಟೂ ಪದವಿಗಳನ್ನು ಪಡೆಯಿರಿ. ವಿದ್ಯಾಭ್ಯಾಸದಲ್ಲಿ ಹುಡುಗರಿಗಿಂತ ಹುಡುಗಿಯರದೇ ಮೇಲುಗೈ ಎಂಬ ವಿಷಯ ನನಗೆ ತಿಳಿದಿದೆ. ಮೊದಲ ದರ್ಜೆಯನ್ನು ಪಡೆದಿರುವ ವಿದ್ಯಾರ್ಥಿ ಮತ್ತು ವಿದ್ಯಾರ್ಥಿನಿಯರ ಸಂಖ್ಯೆಗಳನ್ನೇ ನೋಡಿ, ಅದರಲ್ಲಿ ನಿಮಗೆ ಹುಡುಗಿಯರ ಸಂಖ್ಯೆಯೇ ದೊಡ್ಡದು ಎಂಬುದು ಗೊತ್ತಾಗುತ್ತದೆ. ವಿದ್ಯಾರ್ಥಿನಿಯರು ಶಾಂತವಾಗಿ ಅಧ್ಯಯನ ಮಾಡುತ್ತಾರೆ, ಅರ್ಥವನ್ನು ಅರಗಿಸಿಕೊಳ್ಳುತ್ತಾರೆ, ಮತ್ತು ಕಷ್ಟಪಟ್ಟು ಕೆಲಸಮಾಡುತ್ತಾರೆ ಎಂಬುದು ತಿಳಿದ ವಿಷಯವೇ. ಅವರ ಸ್ವಭಾವದಲ್ಲಿಯೇ ಕಲೆಯು ಒಡಮೂಡಿರುತ್ತದೆ. ಪಾಶ್ಚಿಮಾತ್ಯ ದೇಶಗಳಲ್ಲಿ ಸಾಮಾನ್ಯವಾದ ವ್ಯವಹಾರಗಳು ಮತ್ತು ವೃತ್ತಿಗಳನ್ನು ಹುಡುಗಿಯರೇ ನಿಭಾಯಿಸುತ್ತಾರೆ. ವಿಶೇಷವಾಗಿ ಸ್ವಿಟ್ಜರ್‌ಲ್ಯಾಂಡ್‌ನಲ್ಲಿ ಅಂಗಡಿಗಳಲ್ಲಿರುವವರೆಲ್ಲರೂ ಹುಡುಗಿಯರೇ ಮತ್ತು ಅವುಗಳನ್ನು ನಡೆಸುವವರೂ ಹೆಂಗಸರೇ. ಆ ದೇಶಗಳಲ್ಲಿ ದೊಡ್ಡ ದೊಡ್ಡ ಕಾರ್ಖಾನೆಗಳಲ್ಲಿ ಶ್ರಮಪೂರ್ಣ ಕೆಲಸಗಳನ್ನು ಮಾತ್ರ ಗಂಡಸರಿಗೆ ಕೊಡುತ್ತಾರೆ. ನಮ್ಮಲ್ಲಿ, ಮಹಿಳೆಯರು ಇನ್ನೂ ಆ ಮಟ್ಟದವರೆಗೆ ಬೆಳೆದಿಲ್ಲ. ಅದರೆ ನಮ್ಮಲ್ಲಿಯೂ ಪ್ರತಿಭಾವಂತ ಮಹಿಳಾ ಮುತ್ಸದ್ದಿಗಳಿದ್ದಾರೆ. ಶ್ರೀಮತಿ ಇಂದಿರಾಗಾಂಧಿಯವರನ್ನೇ ನೋಡಿ. ಅವರು ಅವರ ತಂದೆಯವರ ಸ್ಥಾನವಾದ ಪ್ರಧಾನ ಮಂತ್ರಿಯ ಹುದ್ದೆಗಿಂತ ಮೇಲಿನ ಹುದ್ದೆಯಾದ ಭಾರತ ರಾಷ್ಟ್ರೀಯ ಕಾಂಗ್ರೆಸ್‌ನ ಅಧ್ಯಕ್ಷ ಸ್ಥಾನವನ್ನು ಅಲಂಕರಿಸಿದ್ದಾರೆ. ಒಂದು ಕುಟುಂಬದಲ್ಲಿ ಮಹಿಳೆಯಬ್ಬಳು ವಿದ್ಯೆಯನ್ನು ಕಲಿತರೆ, ಆ ಮನೆಯ ಮಕ್ಕಳೆಲ್ಲರೂ ವಿದ್ಯೆಯನ್ನು ತಾವಾಗಿಯೇ ಕಲಿಯುತ್ತಾರೆ. ರಾಜಾಜಿಯವರು ಒಮ್ಮೆ ಹೇಳಿದ್ದನ್ನು ಜ್ಞಾಪಿಸಿಕೊಳ್ಳಿರಿ. ಅವರು ಹೇಳಿದ್ದರು – 'ನನಗೆ ಪುನರ್ಜನ್ಮವಿದ್ದರೆ, ನಾನು ಹೆಂಗಸಾಗಿ ಹುಟ್ಟಲು

ಬಯಸುತ್ತೇನೆ. ಏಕೆಂದರೆ ನಾನು ಕನಿಷ್ಠ ಆರು ಮಕ್ಕಳ ಪಾಲನೆ ಮತ್ತು ಅವ ಶಿಕ್ಷಣವನ್ನು ನೋಡಿಕೊಳ್ಳಬಹುದು.'

ಸ್ವಾತಂತ್ರ್ಯ ಹೋರಾಟದಲ್ಲಿ ಗಂಡಸರಿಗಿಂತ ಹೆಂಗಸರೇ ಹೆಚ್ಚಿನ ಶೌರ್ಯದಿಂ ಕೆಲಸವಮಾಡಿದರು. ಅವರು ನಮ್ಮ ದೇಶದಲ್ಲಿಯೇ ಅಲ್ಲ, ಎಲ ದೇಶಗಳಲ್ಲಿಯೂಅವರು ತಮ್ಮ ಕಾರ್ಯಗಳಿಂದ ಕೀರ್ತಿಯನ್ನು ಗಳಿಸಿದ್ದಾ ಅವರ ಸಾಮರ್ಥ್ಯ, ಬುದ್ಧಿಶಕ್ತಿ, ತಾಳ್ಮೆ ಮತ್ತು ಶ್ರದ್ಧೆ – ಇವುಗಳು ಇಲ್ಲದ ಇವುಗಳಿಗೆ ಮೆಚ್ಚುಗೆಯನ್ನು ಸೂಚಿಸದ ಕ್ಷೇತ್ರವೇ ಇಲ್ಲ ಎನ್ನಬಹುದು. ಸಾಧನೆ ಬೇಕಾದ ಗುಣ ಅವರಲ್ಲಿ ಹುಟ್ಟಿನಿಂದಲೇ ಬಂದಿರುತ್ತದೆ. ಪ್ರತಿಯೊಬ್ಬರಲ್ಲಿಯು ಮಾನಸಿಕವಾಗಿ ಪ್ರತಿಭಾವಂತರೇ ಆಗಿದ್ದರೂ, ಆ ಪ್ರತಿಭೆಯನ್ನು ಹೆಂಗಸರ ಒಂದು ನಿರ್ದಿಷ್ಟ ದಿಕ್ಕಿನಲ್ಲಿ ಬೆಳೆಯಿಸಿಕೊಂಡವರು ಅದರಲ್ಲಿ ತಜ್ಞತೆಯನು ಗಳಿಸುತ್ತಾರೆ. ನಾವು ಅಭಿವೃದ್ಧಿಗೊಳ್ಳುವ ಬಗೆ ಮತ್ತು ನಮ್ಮ ಅಭಿವೃದ್ಧಿಯ ಬಗೆಗಳು ಮುಖ್ಯವಾಗುತ್ತವೆ. ಆದ್ದರಿಂದ ನಿಮ್ಮ ಮನಸ್ಸನ್ನು ವಿಶಾಲಗೊಳಿಸಿ ನಿಮ್ಮ ನಾಯಕತ್ವದ ದೊಡ್ಡ ಗುಣಗಳನ್ನು, ಸರ್ಜನಶೀಲತೆಯನ್ನು, ಕಲೆಯನು ಗರಿಷ್ಠಪ್ರಮಾಣಕ್ಕೆ ಬೆಳೆಸಿಕೊಳ್ಳಿ ಮತ್ತು ನಿಮ್ಮ ಜೀವನವನ್ನಷ್ಟೇ ಅಲ್ಲದೆ, ದೇಶಕ್ಕೂ ಉಪಯುಕ್ತರಾಗಿರಿ.

ಕೃಷಿ, ಪಶುಸಂಗೋಪನೆ, ಮೀನುಗಾರಿಕೆ ಮುಂತಾದ ಇಲಾಖೆಗಳ ಸಚಿವನಾಗಿರುವುದರಿಂದ ನಾನು ನಿಮ್ಮಲ್ಲಿ ಮಾಡಿಕೊಳ್ಳಬೇಕಾಗಿರುವ ವಿನಂತಿಯೊಂದಿದೆ. ನಮ್ಮ ದೇಶವು ಆಹಾರೋತ್ಪಾದನೆಯಲ್ಲಿ ಸ್ವಾವಲಂಬಿಯಾಗಿಲ್ಲ. ಇದಕ್ಕೆ ಕಾರಣವೆಂದರೆ, ನಮ್ಮ ಆಹಾರದಲ್ಲಿರುವ ವೈವಿಧ್ಯದ ಕೊರತೆ. ನಾವು ಅಕ್ಕಿ, ಗೋಧಿಮತ್ತು ಇತರ ಧಾನ್ಯಗಳಿಗೆ ನಮ್ಮ ಆಹಾರ ಪದ್ಧತಿಯನ್ನು ಸೀಮಿತಗೊಳಿಸಿಕೊಂಡಿದ್ದೇವೆ. ನಾವು ಪ್ರಾಣಿಜನ್ಯ ಪದಾರ್ಥಗಳನ್ನು ಸೇವಿಸುವುದು ಕಡಿಮೆ. ಬೇರೆ ದೇಶಗಳಲ್ಲಿ ಅವರ ಆಹಾರವು ಮುಖ್ಯವಾಗಿ ಮಾಂಸ, ಮೊಟ್ಟೆಗಳು, ಹಾಲನ್ನು ಒಳಗೊಂಡಿರುತ್ತವೆ ಮತ್ತು ಅಲ್ಲಿ ಅಕ್ಕಿ ಮೊದಲಾದ ಧಾನ್ಯಗಳನ್ನು ಪೂರಕ ಆಹಾರವನ್ನಾಗಿ ಉಪಯೋಗಿಸುತ್ತಾರೆ. ನಾವು ಕೂಡ ನಮ್ಮ ಆಹಾರ ಪದ್ಧತಿಯಲ್ಲಿ ಬದಲಾವಣೆಯನ್ನು ತರಬೇಕು. ನೀವು ಉತ್ತಮ ಹಾಗೂ ಸವಿಯಾದ ಆಹಾರದ ತಯಾರಿಕೆಯಲ್ಲಿ ಸಹಜವಾಗಿಯೇ ನಿಷ್ಣಾತರಾಗಿರುವುದರಿಂದ, ಈ ವಿಷಯದಲ್ಲಿ ಮುಂದಾಳತ್ವವನ್ನು ವಹಿಸಬೇಕು.

ಣ್ಣುಗಳನ್ನು, ಹೂವುಗಳನ್ನು ಅಧಿಕವಾಗಿ ಬೆಳೆಯಬೇಕು. ಜೀವನದಲ್ಲಿ ತ್ತಿಚಾಕರಿಯೇ ಮುಖ್ಯವಾಗಿರಬಾರದು, ಅದರಲ್ಲಿ ಪ್ರೀತಿ, ಆನಂದ ಮತ್ತು ಪಯುಕ್ತತೆಗಳು ಇರಬೇಕು. ಇದು ಕೂಡ, ಬಹಳ ಮಟ್ಟಿಗೆ ನಿಮ್ಮ ಕೈಯಲ್ಲಿಯೇ ದೆ. ನೀವು ನಿಮ್ಮ ಪ್ರತಿಭೆಯ ಸದುಪಯೋಗವನ್ನು ಮಾಡಿಕೊಂಡು, ನಿಮ್ಮ ಮುದಾಯಕ್ಕೆ, ಹಾಗೂ ದೇಶಕ್ಕೆ ಉಪಯುಕ್ತವಾಗುವ ಬದುಕನ್ನು ನಡೆಸಿರಿ.

ಪಾಶ್ಚಿಮಾತ್ಯ ದೇಶದಲ್ಲಿ ಹಾಗೂ ಜಪಾನಿನಲ್ಲಿ ಪಶುಸಂಗೋಪನೆಯಲ್ಲಿ ಹಿಳೆಯರು ಪ್ರಮುಖಪಾತ್ರವನ್ನು ವಹಿಸುತ್ತಾರೆ. ಆದ್ದರಿಂದಲೇ ಇದಕ್ಕೆ 'animal ısbandry' ಎನ್ನುವುದಕ್ಕೆ ಬದಲಾಗಿ 'animal wifery' ಎನ್ನುತ್ತಾರೆ.

ನಿಮ್ಮ ಕಾಲೇಜಿನ ವಿದ್ಯಾರ್ಥಿಗಳ ಸಂಖ್ಯೆ ಇಂದು 20,000ವನ್ನು ತಲುಪಿತು ಂದು ಕೇಳಿದ ದಿನ ನನಗೆ ನಿಜವಾಗಿಯೂ ಸಂತೋಷದ ದಿನವಾಗಿರುತ್ತದೆ. ಯಾವುದೇ ದೇಶದ ಪ್ರಗತಿಯು ಆ ದೇಶದ ಯುವ ಜನಾಂಗಕ್ಕೆ, ಅದರಲ್ಲಿಯೂ ಯುವತಿಯರಿಗೆ, ನೀಡುವ ಶಿಕ್ಷಣದ ಮೇಲೆ ಅವಲಂಬಿಸಿರುತ್ತದೆ. ನಾವು ಈಗ ಂಸದೀಯ ಪ್ರಜಾಸತ್ತೆಯಲ್ಲಿ ಇದ್ದೇವೆ. ಆದ್ದರಿಂದ ದೊರೆಯುವ ಅವಕಾಶವು ಂಗಸರು, ಗಂಡಸರು ಎಂಬ ಭೇದವಿಲ್ಲದೆ ಎಲ್ಲರಿಗೂ ಸಮಾನವಾಗಿದೆ. ರ್ಹತೆಯಿರುವವರಷ್ಟೇ ಯಶಸ್ಸನ್ನು ಗಳಿಸುತ್ತಾರೆ. ಅದಕ್ಕಾಗಿಯೇ ಅರ್ಹತೆಯನ್ನು, ಾಮರ್ಥ್ಯವನ್ನು ಗಳಿಸಿಕೊಳ್ಳಿ ಮತ್ತು ಈ ಮಹಾನ್ ಪ್ರಜಾತಂತ್ರದ ಯೋಗ್ಯ ಣ್ಣುಮಕ್ಕಳಾಗಿ. ನಿಮಗೆ ಒಳ್ಳೆಯದಾಗಲಿ, ದೇವರು ನಿಮಗೆ ಯಶಸ್ಸನ್ನು ನೀಡಲಿ.

## ♦ ಮನೆಗಳಲ್ಲಿ ಸಂತಸದ ವಾತಾವರಣಕ್ಕಾಗಿ ಮದ್ಯಪಾನ ತ್ಯಜಿಸಿ

**ಮದ್ಯಪಾನ ವಿರುದ್ಧ ದನಿ ಎತ್ತಿದ ರಾಚಯ್ಯನವರು ತಮ್ಮ ಅಧಿಕಾರ ಕಳೆದುಹೋಗುವ ಸಂದರ್ಭದಲ್ಲೂ ರಾಜಿಯಾಗದ ದಿಟ್ಟತನದವರು. ಅವರ ಚಿಂತನೆಗಳಲ್ಲಿ ಗಾಂಧಿ ಪ್ರಭಾವ, ದಲಿತ ಉದ್ಧಾರಕ್ಕೆ ಮದ್ಯಪಾನ ತ್ಯಜಿಸುವುದೇ ಸೂಕ್ತವೆಂದು ಪ್ರತಿಪಾದಿಸಿದವರು. 1960 ರ ನವೆಂಬರ್‌ನಲ್ಲಿ ನಡೆದ ಪಾನನಿರೋಧ ಸಪ್ತಾಹದ ಸಮಾರಂಭದ ಸಂದರ್ಭದಲ್ಲಿ ಪತ್ರಿಕೆಗೆ ನೀಡಿದ ಸಂದೇಶ.**

ಗಾಂಧೀಜಿ ಒಮ್ಮೆ ಹೇಳಿದ್ದರು: 'ನನಗೇನಾದರೂ ಒಂದು ಗಂಟೆಯಮಟ್ಟಿ ಸರ್ವಾಧಿಕಾರವು ದೊರೆತರೆ, ದೇಶದೆಲ್ಲೆಡೆ ಮತ್ತುಬರಿಸುವ ಮದ್ಯವನು ನಿಷೇಧಿಸುವುದೇ ನನ್ನ ಮೊದಲ ಕಾರ್ಯವಾಗುತ್ತದೆ.' ಅದೊಂದ ವ್ಯಾವಹಾರಿಕವಾಗಿ ಸಾಧುವಾದ ಹೇಳಿಕೆಯಾಗಿತ್ತು. ಈ ಸಾಮಾಜಿಕ ಅನಿಷ್ಟವನು ತೊಲಗಿಸಬೇಕಾದ ತುರ್ತು ಅಗತ್ಯವನ್ನು ಅದು ತೋರಿಸುತ್ತಿತ್ತು. ಮತ್ತುಬರಿಸು ಮದ್ಯವನ್ನು ಸೇವಿಸುವುದು ಭಾರತದಲ್ಲಿ ಪ್ರಾಚೀನ ಕಾಲದಿಂದ ರೂಢಿಯಲ್ಲಿದ ಆದರೂ ಅದನ್ನು ಹಿಂದೂ ಶಾಸ್ತ್ರಗ್ರಂಥಗಳು ಹಾಗೂ ಸಮಾಜವು ತಿರಸ್ಕಾರ ದೃಷ್ಟಿಯಿಂದ ನೋಡುತ್ತಲೇ ಬಂದಿವೆ. ಮೇಲ್ವರ್ಗದವರೆಂದು ಕರೆದುಕೊಳ್ಳುವವ ಮೇಲೆ ಮದ್ಯಪಾನಮಾಡುವುದಕ್ಕೆ ಕಟ್ಟುನಿಟ್ಟಿನ ನಿಷೇಧವನ್ನು ಹೇರಲಾಗಿತ್ತು ಇದರ ಪರಿಣಾಮವಾಗಿ, ಕುಡಿತದ ಚಟವು, ಶಿಕ್ಷಣವು ಅಷ್ಟಾಗಿ ಇಲ್ಲದಿದ್ದ ದಲಿತವರ್ಗದ ಜನರಲ್ಲಿ ಕೇಂದ್ರೀಕೃತವಾಯಿತು. ಬೌದ್ಧಮತವು ಮದ್ಯಪಾನವನು ಬಹಿಷ್ಕರಿಸಿತ್ತು ಮತ್ತು ಅದನ್ನು ಮೀರಿದವರನ್ನು ಬೌದ್ಧ ಮತದಿಂದ ಹೊರಹಾಕಲಾಗುತ್ತಿತ್ತು. ಹಿಂದೂ ಮತ್ತು ಮುಸ್ಲಿಂ ಆಳ್ವಿಕೆಯ ಕಾಲದಲ್ಲಿ ಸಾಮಾನ್ಯವಾಗಿ ಜನರು ಕುಡಿತದ ಚಟದಿಂದ ದೂರವಿದ್ದರು. ಆದರೆ, ಬ್ರಿಟಿಷ ಆಳ್ವಿಕೆಯು ಪ್ರಾರಂಭವಾದ ಮೇಲೆ ಮದ್ಯದ ಮಾರಾಟವು ಹೊಸ ದಾರಿಯಲ್ಲಿ ಬೆಳೆಯುತ್ತಾ ಹೋಯಿತು. ನಿಯಂತ್ರಿತ ಏಕಸ್ವಾಮ್ಯದ ವ್ಯವಸ್ಥೆಯು ಕ್ರಮಕ್ರಮವಾಗಿ ಜಾರಿಗೆ ಬಂದಿತು. ವಿದೇಶೀ ಆಡಳಿತಗಾರರ ಅಬಕಾರಿ ನೀತಿಯಿಂದಾಗಿ ಇದು ತನ್ನ ಬೆಳವಣಿಗೆಗೆ ಹೊಸ ಪ್ರಚೋದನೆಯನ್ನು ಕಂಡುಕೊಂಡಿತು

ಪಾನಸಂಯಮವನ್ನು ಜಾರಿಗೆ ತರಲು ಹಲವಾರು ಪ್ರಯತ್ನಗಳು ನಡೆದದ್ದು ನಿಜವಾದರೂ, ಆದರೆ ಆದಾಯದ ಮೇಲೆ ದೃಷ್ಟಿಯಿರಿಸಿಕೊಂಡಿದ್ದ ಸರಕಾರಗಳು ಇಂತಹ ಪ್ರಯತ್ನಗಳನ್ನು ಮುಂದೆ ಸಾಗದಂತೆ ತುಳಿದು ಹಾಕಿದವು. ಇಷ್ಟಾದರೂ, ರಾಷ್ಟ್ರೀಯತೆಯು ದೇಶದಲ್ಲಿ ಮೊಳಕೆಯೊಡೆದ ಮೇಲೆ, ಸ್ವಾತಂತ್ರ್ಯಪೂರ್ವದಲ್ಲಿಯೇ, ಮಹಾತ್ಮಗಾಂಧಿಯವರ ಸ್ಫೂರ್ತಿದಾಯಕ ನೇತೃತ್ವದಲ್ಲಿ, ಸ್ಥಳೀಯವಾಗಿ ಸ್ವಾಯತ್ತ ಸರಕಾರಗಳು ಅಸ್ತಿತ್ವಕ್ಕೆ ಬಂದಿದ್ದ ರಾಜ್ಯಗಳಲ್ಲಿ ಪಾನನಿಷೇದ ಕಾರ್ಯಕ್ರಮವು ಜಾರಿಗೆ ಬಂದಿತು. ಅದರ ಯಶಸ್ಸು ಬೇರೆಬೇರೆ ಕಡೆಗಳಲ್ಲಿ ಬೇರೆಬೇರೆಯ ಮಟ್ಟದ್ದಾಗಿತ್ತು. ರಾಜಾಜಿಯವರ ನೇತೃತ್ವದಲ್ಲಿ ಮದರಾಸಿನಲ್ಲಿ ಇದು ಯಶಸ್ಸನ್ನು ಸಾಧಿಸಿತು ಮತ್ತು ಸ್ವಾತಂತ್ರ್ಯಾನಂತರ ಕೇಂದ್ರ ಮತ್ತು ಎಲ್ಲಾ ರಾಜ್ಯ ಕಾಂಗ್ರೆಸ್ ಸರಕಾರಗಳಿಗೂ ಇದೊಂದು ಅನುಲ್ಲಂಘನೀಯ ನೀತಿಯಾಯಿತು. ಪಾನನಿಷೇಧ ನೀತಿಯು ಸಂವಿಧಾನದಲ್ಲಿ ಅದರ ನಿರ್ದೇಶಕ ತತ್ತ್ವಗಳಲ್ಲಿ ಒಂದಾಯಿತು ಮತ್ತು ಈ ನೀತಿಯ ಬಗ್ಗೆ ಇರುವ 43ನೆಯ ವಿಧಿಯು ಹೀಗೆ ಹೇಳುತ್ತದೆ:

'ಪೌಷ್ಟಿಕತೆಯ ಪ್ರಮಾಣವನ್ನು ಹೆಚ್ಚಿಸುವುದನ್ನು ಮತ್ತು ತನ್ನ ನಾಗರಿಕರ ಜೀವನದ ಮಟ್ಟವನ್ನು ಏರಿಸುವುದನ್ನು, ಸಾರ್ವಜನಿಕ ಆರೋಗ್ಯಕ್ಕೆ ಹೆಚ್ಚಿನ ಗಮನವನ್ನು ನೀಡುವುದನ್ನು ಸರಕಾರವು ತನ್ನ ಪ್ರಾಥಮಿಕ ಕರ್ತವ್ಯಗಳಲ್ಲಿ ಒಂದೆಂದು ಭಾವಿಸಬೇಕು. ಅದರಲ್ಲಿಯೂ ವಿಶೇಷವಾಗಿ, ಔಷಧೀಯ ಉದ್ದೇಶವನ್ನು ಬಿಟ್ಟು ಉಳಿದಂತೆ ಆರೋಗ್ಯಕ್ಕೆ ಮಾರಕವಾಗಿರುವ ಮತ್ತು ಬರಿಸುವ ಪೇಯಗಳ ಮತ್ತು ಔಷಧಗಳ ಸೇವನೆಯನ್ನು ನಿಷೇಧಿಸಬೇಕು'.

ಆದ್ದರಿಂದ, ಸ್ವಾತಂತ್ರ್ಯವು ಬಂದ ಮೇಲೆ, ರಾಷ್ಟ್ರದ ಪುನರ್ನಿರ್ಮಾಣದ ಅವಧಿಯಲ್ಲಿ ಪಾನನಿಷೇಧವನ್ನು ಎರಡನೆಯ ಪಾಂಚವಾರ್ಷಿಕ ಯೋಜನೆಯ ಅವಿಭಾಜ್ಯ ಅಂಗವನ್ನಾಗಿ ಮಾಡಲಾಯಿತು. ಇದನ್ನು ಜಾರಿಗೆ ಹಂತಹಂತವಾಗಿ ಜಾರಿಗೆ ತರಲು ರಾಜ್ಯ ಸರಕಾರಗಳು ಶಾಸನಗಳನ್ನು ರೂಪಿಸಿದವು. ವರ್ಷಗಳು ಕಳೆದಂತೆ ಹೆಚ್ಚು ಹೆಚ್ಚು ಪ್ರದೇಶಗಳನ್ನು ಪಾನನಿಷೇಧದ ವ್ಯಾಪ್ತಿಯೊಳಕ್ಕೆ ತರಲಾಯಿತು. ಇದರಲ್ಲಿ ಸಾಧಿಸಿದ ಯಶಸ್ಸು ಅದ್ವಿತೀಯವಾಗಿತ್ತು. ಅಮೆರಿಕಾ ದೇಶವು ಸೋತ ಕ್ಷೇತ್ರದಲ್ಲಿ ಭಾರತವು ಹೇಗೆ ಯಶಸ್ಸನ್ನು ಪಡೆಯಿತು ಎಂದು ಯಾರಾದರೂ ಆಶ್ಚರ್ಯಪಡಬಹುದು. ಇದರ ಕಾರಣ ಎಲ್ಲರಿಗೂ ಸ್ಪಷ್ಟವಾಗಿರುವಂಹುದೇ. ಅಮೆರಿಕದಲ್ಲಿ ಶೇ 90ರಷ್ಟು ಜನರು ಒಂದಲ್ಲ ಒಂದು

ರೀತಿಯಲ್ಲಿ ಮತ್ತು ಬರಿಸುವ ಪೇಯಗಳನ್ನು ಮತ್ತು ಔಷಧಗಳನ್ನು ಸೇವಿಸಿದರೆ, ಕೇವಲ ಶೇ. 10ರಷ್ಟು ಜನರು ಮಾತ್ರ ಮದ್ಯಪಾನದಿಂದ ದೂರವಿರುವವರು. ಅಲ್ಲದೆ, ಈ ಪೇಯಗಳನ್ನು ಸೇವಿಸುವುದನ್ನು ಅಲ್ಲಿ ಸಾಮಾಜಿಕ ಕೆಡುಕೆಂದು ಭಾವಿಸದೆ, ನಾಗರಿಕತೆ ಬೆಳವಣಿಗೆಯಲ್ಲಿನ ಆನುಷಂಗಿಕ ಅಭ್ಯಾಸವೆಂದು ತಿಳಿದುಕೊಂಡು ಒಂದು ವಿಧದಲ್ಲಿ ಅದನ್ನು ಪ್ರೋತ್ಸಾಹಿಸುತ್ತಾರೆ. ಆದರೆ ಭಾರತದಲ್ಲಿ, ಕಡುಬಡತನದಲ್ಲಿರುವ ಜನರು (ಒಟ್ಟು ಜನಸಂಖ್ಯೆಯಲ್ಲಿ ಶೇ 10ರಷ್ಟು) ಈ ಕೆಟ್ಟ ಚಟಕ್ಕೆ ದಾಸರಾಗಿದ್ದಾರೆ ಮತ್ತು ಉಳಿದ ಶೇ 90ರಷ್ಟು ಜನರು ಸಾಮಾಜಿಕ ಅಥವಾ ಧಾರ್ಮಿಕ ಕಾರಣಗಳಿಂದಾಗಿ ಅದರಿಂದ ದೂರವಾಗಿದ್ದಾರೆ. ಭಾರತೀಯ ಸಂಸ್ಕೃತಿಯು ಮೊದಲಿನಿಂದಲೂ ಮದ್ಯಪಾನದ ವಿರುದ್ಧವಾಗಿದೆ ಮತ್ತು ಇಲ್ಲಿಯ ಜನರ ಪ್ರಕಾರ, ಮದ್ಯವು ವ್ಯಕ್ತಿಯ ಶೀಲವನ್ನು ಹಾಳುಮಾಡುತ್ತದೆ, ದೈಹಿಕವಾಗಿ, ಮಾನಸಿಕವಾಗಿ ಹಾಗೂ ಆಧ್ಯಾತ್ಮಿಕವಾಗಿ ದುರ್ಬಲಗೊಳಿಸುತ್ತದೆ. ಕುಡಿತಕ್ಕೆ ದಾಸನಾಗಿರುವವನಿಗೆ ಸಮಾಜದಲ್ಲಿ ತಲೆಯೆತ್ತಿ ನಡೆಯಲು ಸಾಧ್ಯವಾಗುವುದಿಲ್ಲ. ಏಕೆಂದರೆ, ಮೊದಲನೆಯದಾಗಿ ಮಾನಸಿಕವಾಗಿ ಅವನಿಗೆ ಕೀಳರಿಮೆಯಿರುತ್ತದೆ. ಎರಡನೆಯದಾಗಿ, ಈ ಚಟವು ಅವನನ್ನು ನೈತಿಕವಾಗಿ ಮತ್ತು ಆರ್ಥಿಕವಾಗಿ ಹಾಳುಮಾಡಿರುವುದರಿಂದ ಅವನ ಘನತೆಯು ಮಣ್ಣುಗೂಡಿರುತ್ತದೆ. ಆದರೆ ಕಡುಬಡವರ ವಿಷಯದಲ್ಲಿ, ಅವರು ಸಾಮಾನ್ಯವಾಗಿ ಸಮಾಜದ ಬಗ್ಗೆ ತಲೆಕೆಡಿಸಿಕೊಳ್ಳದೆ, ತಮ್ಮ ಚಟವನ್ನು ಮುಂದುವರಿಸಿಕೊಂಡು ಹೋಗುತ್ತಾ ಮತ್ತೆ ಬಡತನದ ಕೂಪದಲ್ಲಿ ಆಳಕ್ಕೆ ಇಳಿಯುತ್ತಾ ಹೋಗುತ್ತಾರೆ. ಅದೇ ಸಮಯದಲ್ಲಿ ಅವರನ್ನು ಶೋಷಿಸುವವರು ತಮ್ಮ ಸಿರಿತನವನ್ನು ಬೆಳೆಸಿಕೊಳ್ಳುತ್ತಾ ಹೋಗುತ್ತಿರುತ್ತಾರೆ. ಚಟಕ್ಕೆ ಬಲಿಪಶುವಾಗಿರುವ ಈ ನತದೃಷ್ಟ ಜನರನ್ನು ಮೇಲೆತ್ತುವುದಕ್ಕಾಗಿಯೇ ನಮ್ಮ ರಾಜ್ಯ ಸರಕಾರವು 1948ರಷ್ಟು ಹಿಂದೆಯೇ ಪಾನನಿಷೇಧವನ್ನು ಜಾರಿಗೆ ತಂದಿತು. ಈ ನೀತಿಯನ್ನು ನಂತರ ಬಂದ ಸರಕಾರಗಳು ಶ್ರದ್ಧೆಯಿಂದ ಮುಂದುವರಿಸಿಕೊಂಡು ಬಂದವು. ಇದರ ಪರಿಣಾಮವಾಗಿ, ಇಂದು ನಾವು ಸಂತಸದ ಮನೆಗಳನ್ನು, ವೈಯಕ್ತಿಕವಾಗಿ ಆಸ್ತಿಯನ್ನು ಮಾಡಿಕೊಂಡಿರುವ, ಒಳ್ಳೆಯ ಬಟ್ಟೆಬರೆ, ಉತ್ತಮ ಪೌಷ್ಟಿಕ ಆಹಾರಗಳನ್ನು ಹೊಂದಿರುವ ಬಡವರನ್ನು ನೋಡುತ್ತಿದ್ದೇವೆ. ಪಾನನಿಷೇಧದಿಂದ ರಾಜ್ಯಕ್ಕೆ ಅಬಕಾರಿ ಆದಾಯದಲ್ಲಿ ನಷ್ಟವಾದರೂ, ಈ ನೀತಿಯನ್ನು ಸರಕಾರವು

ಕೈಬಿಡಲಿಲ್ಲ. ವಾಸ್ತವವಾಗಿ, ಪಾನನಿಷೇಧವನ್ನು ಹಂತಹಂತವಾಗಿ ಜಾರಿಗೆ ತರಲು ಅಬಕಾರಿ ಆದಾಯದಲ್ಲಿ ಆಗುವ ನಷ್ಟವನ್ನು ಸರಕಾರವು ಮನಸ್ಸಿನಲ್ಲಿಟ್ಟುಕೊಂಡಿದ್ದುದೇ ಕಾರಣವಾಗಿತ್ತು, ಇಲ್ಲದಿದ್ದರೆ, ಇಡೀ ರಾಜ್ಯವನ್ನು ಮದ್ಯಪಾನರಹಿತ ರಾಜ್ಯವೆಂದು ಒಮ್ಮೆಲೇ ಘೋಷಿಸಬಹುದಿತ್ತು. ಪಾನನಿಷೇಧದಿಂದ ಜನಗಳಿಗೆ ಉಂಟಾದ ಆರ್ಥಿಕಲಾಭದ ಬಗ್ಗೆ ನಾನು ಹೆಚ್ಚು ಮಾತನಾಡುವುದಿಲ್ಲ, ಅದು ಎಲ್ಲರಿಗೂ ತಿಳಿದ ವಿಷಯವೇ ಆಗಿದೆ. ಮುಖ್ಯವಾದ ವಿಷಯವೆಂದರೆ, ಅದರಿಂದ ತಕ್ಷಣಕ್ಕೆ ಬರುವ ಆರ್ಥಿಕ ಲಾಭವಾಗಲೀ, ನೈತಿಕ ಗಳಿಕೆಯಾಗಲೀ ಅಲ್ಲ, ಬದಲಿಗೆ, ಅದು ಜನತೆಯಲ್ಲಿ ಮನಸ್ಸಿನಲ್ಲಿ ಮೂಡಿಸುವ ಸಾಮಾಜಿಕ ಬದಲಾವಣೆ. ಇದು ಈಗ ಸಾಧಿತವಾಗುವುದರಲ್ಲಿದೆ. ನಿಮಗೆ ಗೊತ್ತಿರುವಂತೆ, ಸರಪಣಿಯ ಬಲವು ಅದರ ದುರ್ಬಲವಾದ ಕೊಂಡಿಯಲ್ಲಿರುತ್ತದೆ. ಹಾಗೆಯೇ, ಯಾವುದೇ ಸಮಾಜದ ಶಕ್ತಿಯು ಕೂಡ ಅದರ ದುರ್ಬಲ ಹಾಗೂ ಬಡವರ್ಗದವರ ಶಕ್ತಿಯಲ್ಲಿಯೇ ಇರುತ್ತದೆ. ಕುಡಿತದ ಚಟವು ಸಾಮಾನ್ಯವಾಗಿ ಸಮಾಜದ ಬಡವರ್ಗದವರಲ್ಲಿಯೇ ಇದೆ. ಇದೇ ಅವರ ಸಾಮಾಜಿಕ ಮತ್ತು ಆರ್ಥಿಕ ದುರ್ಗತಿಗೆ ಕಾರಣ ಮತ್ತು ಅವರನ್ನು ಇತರರು ನೈತಿಕವಾಗಿ ಪತಿತರು ಎಂದು ಕಾಣುವಂತೆ ಮಾಡುತ್ತದೆ. ಆದ್ದರಿಂದಲೇ ರಾಜ್ಯ ಸರಕಾರವು ಅವರನ್ನು ಈ ಚಟದಿಂದ ಮುಕ್ತರನ್ನಾಗಿಸಿ ಅವರಿಗೆ ಪುನರ್ವಸತಿಯನ್ನು ಕಲ್ಪಿಸಲು ಆದ್ಯತೆಯನ್ನು ನೀಡುತ್ತದೆ. ನಮ್ಮ ದೇಶದಲ್ಲಿ ಅತ್ಯಂತ ಶ್ರಮವನ್ನು ಪಡುವವನೇ ಅತ್ಯಂತ ಬಡವನಾಗಿರುತ್ತಾನೆಂಬುದು ವಿಚಿತ್ರವಾದ ಸಂಗತಿ. ಬಡವರು ನಮ್ಮ ದೇಶದ ಸಂಪತ್ತಿನ ಉತ್ಪಾದನೆಗೆ ಕಾರಣರಾಗುತ್ತಾರೆ, ಆದರೆ ಪರದೇಶಗಳಲ್ಲಿರುವಂತೆ ಅವರಿಗೆ ಆರ್ಥಿಕ ನ್ಯಾಯವು ದೊರಕುತ್ತಿಲ್ಲ. ಅವರ ಆರ್ಥಿಕ ಪರಿಸ್ಥಿತಿಯು ಅಭಿವೃದ್ಧಿಯನ್ನು ಹೊಂದಿದರೆ, ಸಮಾಜದಲ್ಲಿ ಅವರು ಸ್ಥಿರವಾದ ಒಂದು ಅಂಗವಾಗುತ್ತಾರೆ. ಈ ಸಾಮಾಜಿಕ ಸ್ಥಿರತೆಯು ರಾಜಕೀಯ ಸ್ಥಿರತೆಗೆ ದಾರಿಮಾಡಿಕೊಡುತ್ತದೆ. ರಾಜಕೀಯ ಸ್ಥಿರತೆಯು ರಾಷ್ಟ್ರದ ಪುನರ್ನಿರ್ಮಾಣ ಮತ್ತು ರಾಷ್ಟ್ರದ ಭದ್ರತೆಯತ್ತ ನಮ್ಮನ್ನು ಕೊಂಡೊಯ್ಯುತ್ತದೆ. ಹೀಗೆ ಪಾನನಿಷೇಧವು ದೇಶದ ಉತ್ತಮ ಭವಿಷ್ಯಕ್ಕೆ ನಾಂದಿಯಾಗುತ್ತದೆ. ಈ ಕಾರಣದಿಂದಲೇ ನಮ್ಮ ಸರಕಾರವು ಸಂಪೂರ್ಣ ಪಾನನಿಷೇಧವನ್ನು ಹಂತಹಂತವಾಗಿ ಮತ್ತು ಕ್ರಮಕ್ರಮವಾಗಿ ಜಾರಿಗೆ ತರಲು ಬದ್ಧವಾಗಿದೆ.

## ♦ ರೈತನ ಅಭಿವೃದ್ಧಿಗಾಗಿ ಸಮಾಜವಾದ

**ಎನ್. ರಾಚಯ್ಯ ಯಾವಾಗಲೂ ರೈತರಪರವಾದ ಭೂಮಿಪುತ್ರ. ಭೂಮಾಲೀಕರಿಗೆ ಸಿಂಹಸ್ವಪ್ನ, ರೈತರಿಗೆ ಸಿಹಿಸ್ವಪ್ನವಾಗಿದ್ದವರು. ಕಾರ್ಲ್‌ಮಾರ್ಕ್ಸ್, ಏಂಗೆಲ್ಸ್, ಲೆನಿನ್ ಪ್ರಭಾವಕ್ಕೆ ಒಳಗಾಗಿದ್ದು ಶ್ರಮಕ್ಕೆ ತಕ್ಕ ಪ್ರತಿಫಲವನ್ನು ಪ್ರತಿಪಾದಿಸಿದ ಸಮಾನತೆ ಹರಿಕಾರ. ಎನ್. ರಾಚಯ್ಯನವರು ಕೃಷಿ ಸಚಿವರಾಗಿ, ಕರ್ನಾಟಕ ರಾಜ್ಯದ ವ್ಯವಸಾಯ ಕ್ಷೇತ್ರವನ್ನು ಮುನ್ನಡೆಸಿದ ಧೀಮಂತರು. ಅವರು ಹಲವು ಕೃಷಿ ವೇದಿಕೆಯಲ್ಲಿ ಹಂಚಿಕೊಂಡ ಚಿಂತನೆಗಳು ಅವರಿಗಿದ್ದ ತಳಸಮುದಾಯಗಳ ಬಗೆಗಿನ ಕಾಳಜಿ ಹಾಗೂ ಅರಿವಿಜ ಪ್ರಜ್ಞೆಯ ಪ್ರತೀಕಗಳು. ಕೃಷಿ ಪಶುಸಂಗೋಪನೆ, ಮೀನುಗಾರಿಕೆ, ತೋಟಗಾರಿಕೆ ಸಾಕುಪ್ರಾಣಿ ಹೀಗೆ ವ್ಯವಸಾಯ ಕ್ಷೇತ್ರದ ಅಭಿವೃದ್ಧಿಗಾಗಿ ತಾವು 'ಸಂದರ್ಶಿಸಿದ ವಿದೇಶಗಳ ಆಧುನಿಕ ಪದ್ಧತಿ'ಗಳನ್ನು ಅಳವಡಿಸುವ ಮೂಲಕ ಆಹಾರೋತ್ಪಾದನೆಯನ್ನು ಅಭಿವೃದ್ಧಿಯತ್ತ ಮುನ್ನಡೆಸಿದವರು. 1959ರ ಆಗಸ್ಟ್ 5 ರಂದು ಬೆಂಗಳೂರಿನ ಕೃಷಿ ಕನಿಷ್ಠ ವೇತನದ ಸಮಿತಿಯ ಜೊತೆ ನಡೆದ ಅನೌಪಚಾರಿಕ ಸಭೆಯಲ್ಲಿ ಮಾಡಿದ ಭಾಷಣ.**

ನಿಮ್ಮ ಮುಂದಿರುವ ಸಮಸ್ಯೆಯು ಬಹಳ ಕ್ಲಿಷ್ಟವಾದದ್ದು. ಒಂದು ಕಡೆಯಲ್ಲಿ ಜೀವನಕ್ಕೆ ಸಾಕಾಗುವಷ್ಟು ವೇತನವನ್ನು, ಅದು ಸಾಕಷ್ಟು ಎಂದು ಕರೆಯಲ್ಪಡದಿದ್ದರೂ, ಕೃಷಿ ಕಾರ್ಮಿಕರಿಗೆ ಸಿಗುವಂತೆ ಮಾಡಬೇಕು, ಮತ್ತೊಂದು ಕಡೆ, ಭೂಮಾಲಿಕರು ಅಷ್ಟು ಹಣವನ್ನು ನೀಡಲು ಸಮರ್ಥರಾಗಿರಬೇಕು. ಅದೇ ಸಮಯದಲ್ಲಿ, ಉತ್ಪಾದನೆಗೆ ಇದರಿಂದ ತೊಂದರೆಯಾಗಬಾರದು ಎಂಬುದನ್ನೂ ನೀವು ನೋಡಬೇಕು. ಆದ್ದರಿಂದ ನಿಮ್ಮ ದೃಷ್ಟಿಕೋನವು ಸರಿಯಾಗಿರಬೇಕು ಮತ್ತು ನೀವು ಕಾರ್ಯಸಾಧುವಾದ ನಿಲುವನ್ನು ತೆಗೆದುಕೊಳ್ಳಬೇಕು. ನಿಮಗೆ ತಿಳಿದಿರುವಂತೆ, ಸರಕಾರವು ಭೂಸುಧಾರಣೆಯ ವಿಷಯದಲ್ಲಿ ಸಂಪೂರ್ಣವಾಗಿ ತೊಡಗಿಕೊಂಡಿದೆ ಮತ್ತು ಸದ್ಯದಲ್ಲಿಯೇ

ಶಾಸನವು ಹೊರಬೀಳಲಿದೆ. ಮುಂಬರುವ ದಿನಗಳಲ್ಲಿನ ಚಿತ್ರವು ಹೇಗಿರಬಹುದೆಂಬುದನ್ನು ಈಗ ಹೇಳಲು ಸಾಧ್ಯವಿಲ್ಲವಾದರೂ, ದೇಶದಲ್ಲಿ ಇಷ್ಟೊಂದು ಜನ ಕೃಷಿ ಕಾರ್ಮಿಕರು ನಿರುದ್ಯೋಗಿಗಳಾಗಿರುವಾಗ, ಭೂಮಿಯು ಉಪಯೋಗಿಸಲ್ಪಡದೆ ಪಾಳುಬಿಡಲು ಇನ್ನು ಮುಂದೆ ಅವಕಾಶವಿರುವುದಿಲ್ಲವೆಂಬುದನ್ನು ನಿಸ್ಸಂಶಯವಾಗಿ ಹೇಳಬಹುದು. ನಮ್ಮ ದೇಶದಲ್ಲಿ ಹಿಡುವಳಿಗಳು ಅತಿ ವಿಶಾಲವಾಗಿರುತ್ತವೆ ಅಥವಾ ಅತಿ ಸಣ್ಣವಾಗಿರುತ್ತವೆ. ವಿಶಾಲವಾದ ಹಿಡುವಳಿಗಳ ಮಾಲಿಕರು ತಾವೇ ಸ್ವತಃ ವ್ಯವಸಾಯವನ್ನು ಮಾಡುವುದಿಲ್ಲ. ಹಾಗೆ ಮಾಡಿದರೂ ಅವರಿಗೆ ಹೊಟೆಲನ್ನು ನಡೆಸುವುದು, ಬಸ್‌ಗಳನ್ನು ಹೊಂದಿರುವುದು, ಅಥವಾ ಇತರ ಉದ್ಯೋಗಗಳು ಇರುತ್ತವೆ. ಅವರು ಪೂರ್ಣಕಾಲದ ವ್ಯವಸಾಯಗಾರರಾಗಿರುವುದು ಅಪರೂಪ. ತಮ್ಮ ಜಮೀನನ್ನು ಬೇಸಾಯಮಾಡುವ ಕೃಷಿಕರು ನೀಡುವಷ್ಟಕ್ಕೇ ಅವರು ತೃಪ್ತರಾಗಿರುತ್ತಾರೆ. ಆದರೆ, ಅಲ್ಲಿ ಸಾಂದ್ರ ಬೇಸಾಯವನ್ನು ಅನುಸರಿಸಿದರೆ, ಭೂಮಾಲಿಕರಿಗೆ ಲಾಭವಾಗುತ್ತದೆ. ಅವರು ಹಾಗಾಗಲು ಬಿಡುವುದಿಲ್ಲ, ತಾವೂ ಸ್ವತಃ ಸಾಂದ್ರ ಬೇಸಾಯವನ್ನು ಮಾಡುವುದಿಲ್ಲ, ಅಥವಾ ಉತ್ಸಾಹದಿಂದ ಮಾಡುವವರಿಗೂ ಭೂಮಿಯನ್ನು ನೀಡುವುದಿಲ್ಲ. ದೊಡ್ಡ ಭೂಮಾಲಿಕ ರೈತರ ಸಾಗುವಳಿ ಪದ್ಧತಿಯ ಬದಲಾಗಿ ಅದನ್ನು ಕೈಗಾರಿಕೆಯನ್ನಾಗಿ ಮಾಡಿದರೆ, ತನ್ನ ಕ್ಷೇತ್ರದಲ್ಲಿ ಅವನು ಹಲವರಿಗೆ ಉದ್ಯೋಗವನ್ನು ವರ್ಷಪೂರ್ತಿ ನೀಡಬಹುದು. ಇಂಗ್ಲೆಂಡ್‌ನಲ್ಲಿ, ಭೂಮಾಲಿಕನು ತನ್ನ ಭೂಮಿಯನ್ನು ಪರ್ಯಾಯಬೆಳೆಗಳನ್ನು ಬೆಳೆಯಲು ಮಾತ್ರವಲ್ಲ, ಬೇರೆಬೇರೆಯ ತರಹದ ಬೆಳೆಗಳನ್ನು ಬೆಳೆಯಲು ಮತ್ತು, ಅದೇ ಸಮಯದಲ್ಲಿ ತನ್ನ ದನಗಳಿಗೆ ಬೇಕಾದ ಮೇವನ್ನು ಬೆಳೆಯಲು ಕೂಡ ಉಪಯೋಗಿಸಿಕೊಳ್ಳುತ್ತಾನೆ. ತನ್ನ ಕೃಷಿ ಕೆಲಸಗಳಿಗೆ ಸಂಬಂಧಿಸಿದ ಹಾಗೆಯೇ, ಹಂದಿಸಾಕಣೆ, ಕೋಳಿಸಾಕಣೆ, ಮೀನುಗಾರಿಕೆ, ಕುರಿಸಾಕಣೆ, ತಳಿಗಳನ್ನು ಅಭಿವೃದ್ಧಿಗೊಳಿಸುವುದು, ಮೊದಲಾದವನ್ನು ಕೂಡ ನಡೆಸಿಕೊಂಡು ಹೋಗುತ್ತಿರುತ್ತಾನೆ. ಅಷ್ಟೇ ಅಲ್ಲದೆ, ಅವನು ವೈಜ್ಞಾನಿಕ ಕ್ಷೇತ್ರದಲ್ಲಿ ಆಗಿರುವ ಇತ್ತೀಚಿನ ಬೆಳವಣಿಗೆಗಳ ಲಾಭವನ್ನು ಬಳಸಿಕೊಂಡು, ಕೃಷಿಯಲ್ಲಿ ಮಾತ್ರವಲ್ಲ, ತನ್ನ ಇತರ ಚಟುವಟಿಕೆಗಳಲ್ಲಿ ಕೂಡ ಉತ್ಪಾದಕತೆಯನ್ನು ಹೆಚ್ಚಿಸಿಕೊಳ್ಳುತ್ತಾನೆ. ಇದರಿಂದ ಅವನ ಆದಾಯವೂ ಹೆಚ್ಚಿ, ಅವನು ತನ್ನ ಕೃಷಿ ಕಾರ್ಮಿಕರಿಗೆ, ಹೊರಗಡೆ ಕೈಗಾರಿಕಾ ಕಾರ್ಮಿಕರು ಪಡೆಯುವಷ್ಟೇ ವೇತನವನ್ನು ನೀಡಲು ಶಕ್ತನಾಗಿರುತ್ತಾನೆ. ಅಲ್ಲಿನ ಜೀವನದ ಮಟ್ಟ

ಬಹಳ ಜಾಸ್ತಿ. ಒಂದು ಸಣ್ಣ ಸಂಸಾರವನ್ನು ನಡೆಸಲು ಅಲ್ಲಿ ಸುಮಾರು 900 ರೂಗಳು ಬೇಕಾಗುತ್ತವೆ. ಅವನು ಇಷ್ಟು ಹಣವನ್ನು ವರ್ಷಪೂರ್ತಿ ತನ್ನೆಲ್ಲಾ ಕಾರ್ಮಿಕರಿಗೂ ನೀಡುತ್ತಿರಬೇಕು.

ಜೊತೆಗೆ ಕೈಗಾರಿಕಾ ಕಾರ್ಮಿಕರಿಗೆ ಇರುವ ಎಲ್ಲಾ ಸೌಲಭ್ಯಗಳನ್ನೂ ಅವನು ಕೃಷಿಕಾರ್ಮಿಕರಿಗೂ ಕೊಡಬೇಕು. ಅಲ್ಲಿ ಎಲ್ಲಾ ಬಗೆಯ ಕಾರ್ಮಿಕರಿಗೂ ಒಂದೇ ಬಗೆಯ ವೇತನ, ಸೌಲಭ್ಯಗಳು ದೊರಕುತ್ತವೆ. ಆರೋಗ್ಯಪೂರ್ಣ ಆರ್ಥಿಕತೆಯ ಆಧಾರದ ಮೇಲೆ ಅಲ್ಲಿ ನಿವಾದ ಸಮಾಜವಾದಿ ತತ್ತ್ವವನ್ನವಲಂಬಿಸಿದ ಸಮಾಜವಿದೆ. ನಮ್ಮ ದೇಶದಲ್ಲಿ ಕೂಡ ಇದೇ ತರಹದ ಸಮಾಜವಿರಬೇಕೆಂಬುದು ನಮ್ಮ ಆಶಯ ಮತ್ತು ತೀರ್ಮಾನ. ಇದಕ್ಕೆ ನಮ್ಮ ಸಂವಿಧಾನವು ಅವಕಾಶಮಾಡಿಕೊಟ್ಟಿದೆ. ಸಂವಿಧಾನದ 46ನೆಯ ವಿಧಿಯು ದುರ್ಬಲವರ್ಗದವರ, ಅದರಲ್ಲಿಯೂ ವಿಶೇಷವಾಗಿ ಪರಿಶಿಷ್ಟ ಜಾತಿಗಳವರ ಮತ್ತು ಪರಿಶಿಷ್ಟ ಪಂಗಡಗಳವರ, ಶೈಕ್ಷಣಿಕ ಮತ್ತು ಆರ್ಥಿಕ ಹಿತಾಸಕ್ತಿಗಳ ಮೈಲ್ಮೆಯನ್ನು ಸರಕಾರವು ವಿಶೇಷ ಆಸಕ್ತಿಯಿಂದ ಸಾಧಿಸಲು ನೆರವಾಗಬೇಕು ಮತ್ತು ಅವರು ಸಾಮಾಜಿಕ ಅನ್ಯಾಯ ಮತ್ತು ಎಲ್ಲಾ ವಿಧವಾದ ಶೋಷಣೆಗಳಿಂದ ಮುಕ್ತರಾಗಿರುವಂತೆ ನೋಡಿಕೊಳ್ಳಬೇಕು ಎಂದು ವಿಧಿಸುತ್ತದೆ. ಕಾರ್ಮಿಕರನ್ನು ಹೇಗೆ ಶೋಷಿಸಲಾಗುತ್ತಿದೆ ಎಂಬುದನ್ನು ನೀವೆಲ್ಲರೂ ಬಲ್ಲಿರಿ. ನಿಮ್ಮ ಮಾನ್ಯ ಅಧ್ಯಕ್ಷರು ಹೇಳಿದಂತೆ ಅಲ್ಪ ಹಣಕ್ಕಾಗಿ ಕಾರ್ಮಿಕರು ಒತ್ತೆಯಾಳುಗಳಾಗಿದ್ದಾರೆ. ಈ ಕಾರ್ಮಿಕರು ದಿನ 24 ಗಂಟೆಯೂ ಕೆಲಸಮಾಡಬೇಕು ಮತ್ತು ಭೂಮಿಯನ್ನು ಮಾರುವಾಗ ಅದರ ಜೊತೆಯಲ್ಲಿ ಅವರನ್ನೂ ಮಾರಲಾಗುವುದು. ಅಂದರೆ ಈ ಒತ್ತೆಯಾಳುತನವು ತಲೆಮಾರಿನಿಂದ ತಲೆಮಾರಿಗೆ ಇಳಿದು ಬರುತ್ತಲೇ ಇರುತ್ತದೆ. ಇದೂ ಒಂದು ತರಹದ ಗುಲಾಮರ ಮಾರಾಟದಂತೆಯೇ ಅಲ್ಲವೇ? ಗುಲಾಮಗಿರಿಯನ್ನು ಸಂವಿಧಾನವು ಬಹಿಷ್ಕರಿಸಿಲ್ಲವೇ? ಅಪಾಯಕಾರಿ ಕೆಲಸಗಳಲ್ಲಿ ಮಕ್ಕಳನ್ನು ಬಳಸಿಕೊಳ್ಳಬಾರದೆಂದು ಕಾನೂನು ಹೇಳಿಲ್ಲವೇ? ಹಕ್ಕುಗಳು ಇವೆ, ಸವಲತ್ತುಗಳು ಇವೆ. ಆದರೆ ಬೇಯಿಸುತ್ತಿರುವ ಬಡತನ, ಅಜ್ಞಾನ ಮತ್ತು ಮೂಢನಂಬಿಕೆಗಳಿಂದ ಬಂಧಿತನಾದ ಕಾರ್ಮಿಕನು, ದುರಾಸೆಯ ಮತ್ತು ಶೋಷಣೆಯನ್ನೇ ವೃತ್ತಿಯನ್ನಾಗಿ ಮಾಡಿಕೊಂಡಿರುವ ಭೂಮಾಲೀಕರ ಬಳಿ ತನ್ನ ಹಕ್ಕನ್ನು ಸಮರ್ಥಿಸಿಕೊಳ್ಳುವುದಾದರೂ ಹೇಗೆ? ಪ್ರತಿಯೊಂದು ದೇಶದಲ್ಲಿಯೂ ಕ್ರಾಂತಿಯು

ಪ್ರಾರಂಭವಾಗುವುದು ರೈತನಿಂದ. ಕಾರಣ ಸಂಕಷ್ಟಗಳನ್ನು ಎದುರಿಸುವುದಕ್ಕೆ ಒಂದು ಮಿತಿಯಿರುತ್ತದೆ. ಆ ಮಿತಿಯ ನಂತರ ಹತಾಶೆ, ಹತಾಶೆಯ ಆವರಿಸಿದ ಮೇಲೆ ಅದಕ್ಕೆ ಮಿತಿಯಿರುವುದಿಲ್ಲ. ಸಾಮಾಜಿಕ ಸ್ಥಿರತೆ ಮತ್ತು ಆರ್ಥಿಕ ಸ್ಥಿರತೆಗಳು ಮುಖ್ಯವಾದವು. ಇವುಗಳ ಮೇಲೆ ರಾಜಕೀಯ ಸ್ಥಿರತೆ ನಿಂತಿರುತ್ತದೆ. ಆದ್ದರಿಂದಲೇ ನಾನು ಹೇಳುವುದು, ನಿಮ್ಮ ಮುಂದಿರುವ ಕಾರ್ಯವು ದೂರಗಾಮಿಯಾದುದು. ಒಟ್ಟು ಜನಸಂಖ್ಯೆಯಲ್ಲಿ 80ರಷ್ಟು ಭಾಗ ರೈತರೇ ಇರುವ ನಮ್ಮ ದೇಶದಲ್ಲಿ ಅವರ ಪ್ರಗತಿಗಾಗಿ ನಾವು ಏನನ್ನಾದರೂ ಮಾಡಬೇಕು. ನಿಮ್ಮ ಆಹಾರವನ್ನು ಉತ್ಪಾದಿಸುವವನಿಗೆ ಅವನ ಪಾಲಿನದನ್ನು ನೀಡಬೇಕು, ಕನಿಷ್ಠವೆಂದರೆ ಅವನ ಮೂಲಭೂತ ಆವಶ್ಯಕತೆಗಳನ್ನಾದರೂ ನೀವು ತೀರಿಸುವಂತಿರಬೇಕು. ನಾವು ನಾಲ್ಕನೆಯ ದರ್ಜೆಯ ನೌಕರನಿಗೆ ಅಥವ ಕಸಗುಡಿಸುವವನಿಗೆ ಕನಿಷ್ಠವೇತನವಾಗಿ ತಿಂಗಳಿಗೆ 55 ರೂಗಳನ್ನು ನೀಡುತ್ತಿರುವಾಗ, ಅವರಿಗಿಂತ ಹೆಚ್ಚು ಕಷ್ಟಪಡುವ ರೈತನ ಸ್ಥಿತಿಯನ್ನು ಮೇಲೆತ್ತಬಾರದೆ? ವೇತನವನ್ನು ಮನಸೋಯಿಚ್ಛೆಯಾಗಿ ನಿಗದಿಗೊಳಿಸಬೇಕೆಂದು ನಾನು ಹೇಳುವುದಿಲ್ಲ. ಕೈಗಾರಿಕೆಯಲ್ಲಿ ಮಾಡುವ ಹಾಗೆ, ಇಲ್ಲಿ ಕೂಡ ಅಷ್ಟು ಹಣವನ್ನು ನೀಡುವುದಕ್ಕೆ ಭೂಮಾಲಿಕನಿಗೆ ಸಾಧ್ಯವೇ ಎಂಬುದನ್ನು ನೋಡಬೇಕು. ಅಲ್ಲದೆ ಆತ ತನ್ನ ಭೂಮಿಯಿಂದ ಗರಿಷ್ಠ ಪ್ರಮಾಣದ ಇಳುವರಿಯನ್ನು ಪಡೆಯಲು ಪ್ರಯತ್ನಿಸುತ್ತಿದ್ದಾನೆಯೇ ಇಲ್ಲವೇ ಎಂಬುದನ್ನೂ ನಾವು ನೋಡಬೇಕು. ಇಲ್ಲದಿದ್ದರೆ ಸಂಪತ್ತಿನ ಒಂದು ರೂಪವಾದ ಭೂಮಿಯು ಕೆಲವರ ಕೈಯಲ್ಲಿಯೇ ಕೇಂದ್ರೀಕೃತವಾಗುತ್ತದೆ, ಇದು ಸಂವಿಧಾನಕ್ಕೆ ವಿರೋಧವಾಗಿದೆ. ಭೂಮಾಲಿಕನು ತನ್ನ ಭೂಮಿಯಿಂದ ಗರಿಷ್ಠ ಪ್ರಮಾಣದ ಇಳುವರಿಯನ್ನು ಪಡೆಯಲು ಅಸಮರ್ಥನಾಗಿದ್ದರೆ, ಅವನು ಅದನ್ನು ಭೂಮಿಯ ಸಾಗುವಳಿಯ ಮೇಲೆಯೇ ಅವಲಂಬಿಸಿ, ಅದನ್ನು ಅಭಿವೃದ್ಧಿಪಡಿಸಲು ತಮ್ಮ ತನುಮನಗಳನ್ನು ಎರೆಯುವಂತಹರಿಗೆ ಹಂಚಲು ಸರಕಾರಕ್ಕೆ ಒಪ್ಪಿಸಬೇಕು. 30 ವರ್ಷಗಳ ಹಿಂದೆ ಬರುತ್ತಿದ್ದ ಲಾಭಕ್ಕಿಂತ ಇಂದು ಕೃಷಿ ಭೂಮಿಯಿಂದ ಬರುತ್ತಿರುವ ಲಾಭವು ಅಧಿಕವಾಗಿದೆ. ಆದರೆ, ದುರದೃಷ್ಟದಿಂದ, ಈ ಮೂವತ್ತು ವರ್ಷಗಳಲ್ಲಿ ಹೆಚ್ಚಿರುವ ಕಾರ್ಮಿಕರ ವೇತನವು ಆ ಲಾಭದ ಪ್ರಮಾಣಕ್ಕೆ ಅನುಗುಣವಾಗಿಲ್ಲ. ಅಂದರೆ ಲಾಭವು ಭೂಮಾಲಿಕರ ಜೇಬಿಗೇ ಹೋಗುತ್ತಿರುವುದು ಸ್ಪಷ್ಟ.

ನೀವು ಕನಿಷ್ಠ ವೇತನವನ್ನು ನಿಗದಿಗೊಳಿಸುವಾಗ, ಅದನ್ನು ಜಾರಿಗೆ ತರುವ ವ್ಯವಸ್ಥೆಯ ಬಗೆಗೂ ಚಿಂತಿಸಬೇಕು. ಹಳ್ಳಿಯ ಎಲ್ಲಾ ಕೆಲಸಕಾರ್ಯಗಳಿಗೂ ಕೇಂದ್ರಬಿಂದುವಾಗಲಿರುವ ಗ್ರಾಮಪಂಚಾಯತಿಗಳಿಗೆ ಇದರ ಮೇಲುಸ್ತುವಾರಿಯನ್ನು ವಹಿಸಬೇಕು. ಪಂಚಾಯತಿಯವರು ಕೃಷಿಕಾರ್ಮಿಕರು ಬಿಡುವಾಗಿದ್ದಾಗ ಅವರಿಗೆ ಕೃಷಿಯೇತರ ಕೆಲಸಗಳನ್ನು ನೀಡಬಹುದು. ಈ ಕಾರ್ಯವು ಅತ್ಯಂತ ಅಗಾಧವಾಗಿದ್ದು, ಅದಕ್ಕೆ ಸ್ಪಷ್ಟವಾದ ದೃಷ್ಟಿಕೋನ, ಹೆಚ್ಚಿನ ಅನುಕಂಪ, ಅರ್ಥಮಾಡಿಕೊಳ್ಳುವ ಹೃದಯ ಮತ್ತು ರಾಷ್ಟ್ರೀಯ ದೃಷ್ಟಿ – ಇವೆಲ್ಲವೂ ಅಗತ್ಯವಾಗುತ್ತದೆ. ಎರಡು ವಿರುದ್ಧ ಹಿತಾಸಕ್ತಿಗಳಾದ ಭೂಮಾಲಿಕ ಮತ್ತು ಕಾರ್ಮಿಕ ಇವರಿಬ್ಬರಿಗೂ ತೃಪ್ತಿಯಾಗುವಂತಹ ಮಧ್ಯಮಮಾರ್ಗವನ್ನು ಅನುಸರಿಸಬೇಕು. ನಾವೆಲ್ಲಾ ಬಯಸುತ್ತಿರುವ ಸಮಾಜವಾದದ ಭವಿಷ್ಯಕ್ಕೆ ಅದು ತಾಯ್ಮಳಲಾಗಬೇಕು.

ನಾನು ನಿಮಗೆ ಕೆಲವು ಸಲಹೆಗಳನ್ನು ಕೊಟ್ಟಿದ್ದೇನೆ. ಅವೆಲ್ಲಾ ನನ್ನ ವೈಯಕ್ತಿಕ ಅನಿಸಿಕೆಗಳು. ಅವುಗಳನ್ನು ಚರ್ಚಿಸಿ, ನಿಮಗೆ ಸರಿಯೆಂದು ತೋರಿದಂತೆ ರೈತರಿಗೆ, ಭೂಮಾಲಿಕರಿಗೆ ಮತ್ತು ಸಾಮಾನ್ಯವಾದ ರೀತಿಯಲ್ಲಿ ದೇಶಕ್ಕೆ ಲಾಭಕರವಾಗಿರುವಂತಹ ಕ್ರಮಗಳನ್ನು ತೆಗೆದುಕೊಳ್ಳಿ.

## ♦ ರಷ್ಯಾ ಪ್ರವಾಸ

**ಕೇಂದ್ರ ಕೃಷಿಸಚಿವ ಡಾ. ಪಿ. ಪಂಜುಬ್‌ರಾವ್ ಅವರ ನೇತೃತ್ವದಲ್ಲಿ ರಷ್ಯಾಕ್ಕೆ ಹೋಗಿದ್ದ ನಿಯೋಗದಲ್ಲಿ ಮೈಸೂರು ರಾಜ್ಯದ ಕೃಷಿಮಂತ್ರಿಗಳಾದ ಶ್ರೀ ಎನ್ ರಾಚಯ್ಯನವರೂ ಒಬ್ಬ ಸದಸ್ಯರಾಗಿದ್ದರು. ಈ ನಿಯೋಗವು 1960ರ ಜುಲೈ 11ರಿಂದ ಆಗಸ್ಟ್ 8ರ ವರೆಗೆ ರಷ್ಯಾದಲ್ಲಿ ಪ್ರವಾಸಮಾಡಿತು. ಈ ಲೇಖನದಲ್ಲಿ ರಷ್ಯಾದ ಕೃಷಿಯ ಹಾಗೂ ಅಲ್ಲಿನ ಸಮಾಜದ ವಿವಿಧ ವಿಷಯಗಳ ಬಗ್ಗೆ ಶ್ರೀ ರಾಚಯ್ಯನವರ ಅನುಭವವನ್ನು ಬಿಂಬಿಸುತ್ತದೆ. ಭಾರತದಲ್ಲಿ ಕೃಷಿಯನ್ನು ಮುನ್ನೆಡೆಸಲು ಇದು ಸದುಪಯೋಗವಾಯಿತು.**

ಉಕ್ಕಿನ ಪರದೆಯ ದೇಶವೆಂದು ಹೆಸರಾದ ರಷ್ಯಾ ದೇಶದ ಪ್ರವಾಸವನ್ನು ಮಾಡಲು ನನಗೆ ಅವಕಾಶವನ್ನು ಮಾಡಿಕೊಟ್ಟ ಮೈಸೂರು ಸರಕಾರಕ್ಕೂ ಮತ್ತು ಕೇಂದ್ರ ಸರಕಾರಕ್ಕೂ ನಾನು ಕೃತಜ್ಞನಾಗಿದ್ದೇನೆ. ಭಾರತದ ನಿಯೋಗದ ಸದಸ್ಯನಾಗಿ ನನ್ನನ್ನು ಆಹ್ವಾನಿಸಿದುದಕ್ಕಾಗಿ ರಷ್ಯಾ ಸರಕಾರಕ್ಕೂ ನನ್ನ ಕೃತಜ್ಞತೆಗಳು.

ಕೇಂದ್ರ ಸರಕಾರದ ಕೃಷಿಮಂತ್ರಿಗಳಾದ ಡಾ. ಪಿ.ಎಸ್. ದೇಶ್[illegible]ಖ್ ಅವರ ನೇತೃತ್ವದಲ್ಲಿ ರಾಜ್ಯಗಳ ಕೃಷಿ ಸಚಿವರ ನಿಯೋಗವು 1960ರ ಜುಲೈ 11ರಿಂದ ಆಗಸ್ಟ್ 8ರವರೆಗೆ ರಷ್ಯಾ ಪ್ರವಾಸಮಾಡುವ ಸುಯೋಗವನ್ನು ಹೊ[illegible] ನಿಯೋಗವು ಉಝ್‌ಬೆಕಿಸ್ತಾನ್ ಗಣರಾಜ್ಯ, ತಾಷ್ಕೆಂಟ್ ಪ್ರದೇಶ, ಕಝಗಿ[illegible]ನ್, ಆಲ್ಮ ಅಟ ಪ್ರದೇಶ, ಮಾಸ್ಕೋ ಪ್ರದೇಶ ಮತ್ತು ಲೆನಿನ್‌ಗ್ರಾಡ್ ಪ್ರದೇ[illegible]ಲ್ಲಿ ಪ್ರವಾಸ ಮಾಡಿತು. ನಮ್ಮ ಮು[illegible] ಉದ್ದೇಶ ಅಲ್ಲಿನ ಕೃಷಿಪದ್ಧತಿಯನ[illegible]ಧ್ಯಯನ ಮಾಡುವುದು. ರಷ್ಯಾದಲ್ಲಿ ಕೃಷಿಯನ್ನು ಪಶುಸಂಗೋಪನೆ, ತೋಟ[illegible] ಮತ್ತು ಮೀನುಸಾಕಣೆಗಳೊಂದಿಗೆ ಸಮಾವೇಶಗೊಳಿಸಲಾಗಿದೆ. ನಾವು ಕ[illegible]ಸ್ತಾನ್‌ನಲ್ಲಿ ಸರಕಾರಿ ಕೃಷಿ ಪ್ರದೇಶಗಳನ್ನೂ, ಸಹಕಾರಿ ಕೃಷಿಕ್ಷೇತ್ರಗಳನ್ನೂ, [illegible]ೀಬು, ದ್ರಾಕ್ಷಿ ಮತ್ತು ಇತರ ಹಣ್ಣುಗಳ ತೋಟಗಳನ್ನೂ ನೋಡಿದೆವು. ಉಕ್ರೇನ್‌ನಲ್ಲಿರುವ ಗೋಧಿ ಕ್ಷೇತ್ರಗಳಿಗೂ, ಕೆಲವು ಹತ್ತಿಬೆಳೆಯುವ ಕ್ಷೇತ್ರಗಳಿಗೂ ಭೇಟಿಯನ್ನು ನೀಡಿದೆವು. ಸರಕಾರದ ಎಲ್ಲಾ ಕೃಷಿಕ್ಷೇತ್ರಗಳಲ್ಲಿಯೂ ನಾವು ದನಗಳ ತಳಿ

ಅಭಿವೃದ್ಧಿ ಕೇಂದ್ರಗಳನ್ನೂ, ಕೋಳಿಸಾಕುವ ಕೇಂದ್ರಗಳನ್ನೂ, ಹಾಲು ಉತ್ಪಾದನಾ ಕೇಂದ್ರಗಳನ್ನೂ, ಹಂದಿಸಾಕಣೆ ಕೇಂದ್ರಗಳನ್ನೂ ಹಾಗೂ ಕುದುರೆಗಳನ್ನು ಸಾಕುವ ಕೇಂದ್ರಗಳನ್ನೂ ನೋಡಿದೆವು.

ಈ ಹಲವು ಕ್ಷೇತ್ರಗಳ ಬಗ್ಗೆ ವಿಚಾರ ಮಾಡುವ ಮೊದಲು ನಾವು ಇಂತಹ ಅದ್ಭುತ ಪ್ರಗತಿಯನ್ನು ಸಾಧಿಸಿದ ರಷ್ಯಾ ದೇಶದ ರಾಜಕೀಯ ಮತ್ತು ಸಾಮಾಜಿಕ ಹಿನ್ನೆಲೆಗಳನ್ನು ಅರಿತುಕೊಳ್ಳುವುದು ಆವಶ್ಯಕವೆಂದು ನಾನು ಭಾವಿಸುತ್ತೇನೆ. ರಷ್ಯಾ ದೇಶದ ಪ್ರಗತಿಗೆ ಮೂಲದ್ರವ್ಯವನ್ನು ಒದಗಿಸಿದವರು ಕಾರ್ಲ್ ಮಾರ್ಕ್ಸ್ ಮತ್ತು ಏಂಗೆಲ್ಸ್. ಲೆನಿನ್ ಅದನ್ನು ಕಾರ್ಯಸಾಧ್ಯವಾದ ಯೋಜನೆಯನ್ನಾಗಿಸಿ ಆಗ ಇದ್ದ ಜ಼ಾರ್ ಆಡಳಿತದಿಂದ ಪ್ರಕೃತ ಇರುವ ಆಡಳಿತ ಪದ್ಧತಿಗೆ ಬದಲಾಯಿಸಿದ. ಲೆನಿನ್ ಒಬ್ಬ ಮಹಾಪುರುಷ,ಅವನ ಕಲ್ಯಾಣರಾಜ್ಯದ ಕಲ್ಪನೆಗಳು ಗಾಂಧೀಜಿಯ ಬಹಳಷ್ಟು ಕಲ್ಪನೆಗಳ ಜೊತೆ ಹೊಂದುತ್ತಿದ್ದವು. 1917ರ ರಷ್ಯಾ ಕ್ರಾಂತಿಯ ನಂತರ ಪ್ರಧಾನಿಯಾದ ಲೆನಿನ್ ತನ್ನ ಕಲ್ಪನೆಗಳನ್ನು ಕಾರ್ಯರೂಪಕ್ಕೆ ತರುವ ಅವಕಾಶವನ್ನು ಹೊಂದಿದ್ದ. ಅವನು ಭದ್ರವಾದ ಬುನಾದಿಯನ್ನು ಹಾಕಿ, ದೇಶದ ಮುಂದಿನ ಅಭಿವೃದ್ಧಿಗೆ ಮಾರ್ಗವನ್ನು ಸಿದ್ಧಪಡಿಸಿದ. ಅವನು ವೈಯಕ್ತಿಕ ಜೀವನದಲ್ಲಿ ಸರಳವಾಗಿರುವುದನ್ನು ಒಂದು ಪರಂಪರೆಯನ್ನಾಗಿ ಮಾಡಿದ. ಜೀತಪದ್ಧತಿಯಿಂದ ತಮ್ಮನ್ನು ಮುಕ್ತಿಗೊಳಿಸಿದವನೆಂದು ಇಡೀ ದೇಶ ಅವನನ್ನು ಗೌರವದಿಂದ ನೋಡುತ್ತದೆ. ನಾವು ದೇವರಿಗೆ ತೋರಿಸುವ ಭಕ್ತಿಯಂತಹ ಭಕ್ತಿಯನ್ನು ಅಲ್ಲಿಯ ಜನ ಅವನ ಬಗ್ಗೆ ಹೊಂದಿದ್ದಾರೆ. ಜ಼ಾರ್ ದೊರೆಗಳ ಅರಮನೆಗಳಲ್ಲಿ, ದೇಶದಲ್ಲಿನ ಹಲವು ಚರ್ಚ್‌ಗಳಲ್ಲಿ ಅವನ ದೇಹದ ಅವಶೇಷಗಳನ್ನು ಜೋಪಾನಮಾಡಿದ್ದಾರೆ. ಅವನ ಜೀವನದ ವಿವಿಧ ಮುಖಗಳನ್ನು ಬಿಂಬಿಸುವ ಅವನ ಭಾವಚಿತ್ರಗಳನ್ನು ಮತ್ತು ಪ್ರತಿಮೆಗಳನ್ನು ದೇಶದ ಎಲ್ಲೆಡೆ ಕಾಣಬಹುದು. ಅವನು ಸ್ಥಾಪಿಸದ ತತ್ತ್ವಗಳನ್ನು ಅವನ ಉತ್ತರಾಧಿಕಾರಿಗಳಾಗಿ ಬಂದ ಸ್ಟಾಲಿನ್. ಮೆಲೆಂಕೊವ್ ಮತ್ತು ಕ್ರುಶ್ಚೆವ್ ಇವರು ಚತು ತಪ್ಪದೆ ಅನುಸರಿಸಿಕೊಂಡು ಬಂದಿದ್ದಾರೆ. ಅವರ ಕಲ್ಪನೆಗಳು ಕಾರ್ಯಗತವಾಗಿ ಈ ನಲವತ್ತು ವರ್ಷಗಳಲ್ಲಿ ಆಗಿರುವ ಅದರ ಸತ್ಫಲವನ್ನು ನಾವು ನೋಡಬಹುದು.

ರಷ್ಯನ್ ಸಂವಿಧಾನವು ತನ್ನ ಪ್ರಜೆಗಳಿಗೆ ರಾಜಕೀಯ ಸ್ವಾತಂತ್ರ್ಯವೊಂದನ್ನುಳಿದು ಎಲ್ಲವನ್ನೂ ನೀಡಿದೆ. ಕ್ರಾಂತಿಯ ನಂತರ

ಇಲ್ಲಿಯವರೆಗೂ ರಷ್ಯಾವನ್ನು ಒಂದೇ ಪಕ್ಷವು, ಕಮ್ಯುನಿಸ್ಟ್ ಪಕ್ಷ, ತನ್ನ ಆಳ್ವಿಕೆಯನ್ನು ನಡೆಸಿದೆ. ಮತದಾರರಿಗೆ ವಿವಿಧ ಪಕ್ಷಗಳ ನಡುವೆ ಆಯ್ಕೆಯಿಲ್ಲ, ಆದರೆ ಇರುವ ಒಂದೇ ಪಕ್ಷದಲ್ಲಿರುವ ವ್ಯಕ್ತಿಗಳ ನಡುವೆ ಆಯ್ಕೆಮಾಡುವ ಸ್ವಾತಂತ್ರ್ಯವಿದೆ. ಆದ್ದರಿಂದ ಕೇಂದ್ರೀಕೃತ ಏಕಮೇವ ಸಂಸ್ಥೆಯಾದ ಈ ಪಕ್ಷವು ದೇಶದ ಮೇಲೆ ಅದ್ವಿತೀಯವಾದ ಹಿಡಿತವನ್ನು ಹೊಂದಿದೆ. ಈ ಪಕ್ಷದ ಪ್ರತಿನಿಧಿಗಳು ಎಲ್ಲಾ ಮಟ್ಟದಲ್ಲಿಯೂ ದೇಶವನ್ನು ಸರ್ವಾಧಿಕಾರದಿಂದ ಆಳುತ್ತಾರೆ.

ಸರ್ವಶಕ್ತವಾದ ಈ ಪಕ್ಷವು ಅಷ್ಟೇ ಅನನ್ಯವಾದ ಸಂವಿಧಾನದ ಅಡಿಯಲ್ಲಿ ಕಾರ್ಯನಿರ್ವಹಿಸುತ್ತದೆ. ಈ ಸಂವಿಧಾನದ ಪ್ರಕಾರ ಎಲ್ಲಾ ಆಸ್ತಿಗಳೂ ಸರಕಾರಕ್ಕೆ ಸೇರಿರುತ್ತವೆ ಮತ್ತು ವ್ಯಕ್ತಿಗಳು ಅಥವಾ ಸಂಸ್ಥೆಗಳು ಯಾವುದೇ ಸ್ಥಿರ ಅಥವಾ ಚರ ಆಸ್ತಿಯನ್ನು ಹೊಂದುವಂತಿಲ್ಲ, ಚರ ಆಸ್ತಿಗಳಿಗೆ ಸ್ವಲ್ಪ ವಿನಾಯತಿ ಇದೆ. ಉತ್ಪಾದನೆಯ ಮೂಲ ಸಾಧನಗಳನ್ನು ರಾಷ್ಟ್ರೀಕರಣ ಮಾಡಿರುವುದರಿಂದ ಹಾಗೂ ದುಡಿಯುವ ವರ್ಗದ ನೇತೃತ್ವದಲ್ಲಿ ದೇಶದ ಜನತೆಯು ಅಧಿಕಾರವನ್ನು ತನ್ನ ಕೈಗೆ ತೆಗೆದುಕೊಂಡಿರುವುದರಿಂದ, ಅಲ್ಲಿ ಶೋಷಿತ ಮತ್ತು ಶೋಷಕರ ನಡುವೆ ಇದ್ದ ಮೂಲಭೂತ ಹೊಡೆದಾಟಗಳು ಸಂಪೂರ್ಣವಾಗಿ ಇಲ್ಲವಾಗಿವೆ. ಏಕೆಂದರೆ ಈಗ ಆ ಸಮಾಜದಲ್ಲಿ ಶೋಷಿತರೂ ಇಲ್ಲ, ಶೋಷಕರೂ ಇಲ್ಲ. ಸಮಾಜವಾದವನ್ನು ಕಟ್ಟಲು ಮೂಲಭೂತ ಆಧಾರ ತರ್ಕದ ಮೇಲೆ ಬಲವಾದ ಅಡಿಪಾಯವನ್ನು ಹಾಕಲಾಗಿದೆ. ಈ ವ್ಯವಸ್ಥೆಯಲ್ಲಿ ಬದಲಾವಣೆಯೆಂದರೆ ಹಿಂಸೆ ಅಥವಾ ಹೋರಾಟದಿಂದ ಎಂದು ಅರ್ಥೈಸಲಾಗುವುದಿಲ್ಲ. ಹಾಗಿರುವ ಕಾರಣದಿಂದ ಚರಿತ್ರೆಯಲ್ಲಿಯೇ ಅನನ್ಯವಾದ ಸುಗಮವಾದ ಮತ್ತು ಹಂತಹಂತವಾದ ಪ್ರಗತಿಯು ಅಲ್ಲಿ ಸಾಧ್ಯವಾಗಿದೆ.

ಉತ್ಪಾದನಾ ಸಾಧಗಳೆಲ್ಲವೂ ಸರಕಾರಕ್ಕೆ ಸೇರಿದುವಾದುದರಿಂದ, ಸರಕಾರವೇ ಉತ್ಪಾದಕ ಮತ್ತು ಕಾರ್ಮಿಕರೇ ಬಳಕೆದಾರರು ಮಧ್ಯವರ್ತಿಗಳು ಇಲ್ಲವೇ ಇಲ್ಲ. ಸರಕಾರದ ಏಜೆನ್ಸಿಗಳಿಂದ ವಿತರಣೆಯ ಕಾರ್ಯವು ಸಾಗುತ್ತದೆ. ಪ್ರತಿಯೊಬ್ಬನೂ ಉತ್ಪಾದಕ ಹಾಗೂ ಬಳಕೆದಾರನಾಗಿರುತ್ತಾನೆ. ಆದ್ದರಿಂದ ಬೆಲೆಗಳಲ್ಲಿ ಏರುಪೇರುಗಳು ಇರುವುದಿಲ್ಲ. ಕನಿಷ್ಠವೇತನದ ಖಾತ್ರಿ ಇರುತ್ತದೆ. ಸಮಾನ ಕೆಲಸಕ್ಕೆ ಸಮಾನ ವೇತನ ದೊರೆಯುತ್ತದೆ. ಉದ್ಯೋಗ ಅಥವಾ ವೇತನಗಳ

ವಿಷಯದಲ್ಲಿ ಗಂಡಸರು ಮತ್ತು ಹೆಂಗಸರ ನಡುವೆ ಅಸಮಾನತೆ ಇಲ್ಲ. ವೇತನವು ಮಾಡುವ ಕೆಲಸದ ಮೇಲೆ ಅವಲಂಬಿಸಿರುತ್ತದೆ. ಸಾಮರ್ಥ್ಯ ಮತ್ತು ಉತ್ಪಾದನೆಗೆ ಅನುಸಾರವಾಗಿ ಈ ವ್ಯವಸ್ಥೆಯು ನಡೆಯುತ್ತದೆ. ಗರಿಷ್ಠವೇತನವು ಕನಿಷ್ಠವೇತನದ, ಹೆಚ್ಚೆಂದರೆ ಮೂರು ಪಟ್ಟಿನಷ್ಟು ಮಾತ್ರ ಇರುತ್ತದೆ. ಕೆಲಸಮಾಡುವುದು ಕಡ್ಡಾಯ ಮತ್ತು ನಿರುದ್ಯೋಗದ ಪ್ರಶ್ನೆಯೇ ಉದ್ಭವವಾಗುವುದಿಲ್ಲ. ಕೆಲಸವಿಲ್ಲದ ಪರಿಸ್ಥಿತಿಯು ಇರುವುದಿಲ್ಲ. ಪ್ರತಿಯೊಬ್ಬನೂ ಆಡಳಿತ ವ್ಯವಸ್ಥೆಯಲ್ಲಿ ತನ್ನ ಪಾತ್ರವನ್ನು ಅರಿತಿರುವುದರಿಂದ, ತನ್ನಿಂದ ಸಾಧ್ಯವಾದಷ್ಟೂ ಕೆಲಸವನ್ನು ಮಾಡುತ್ತಾನೆ ವ್ಯಕ್ತಿಯ ಸಾಮರ್ಥ್ಯ ಮತ್ತು ಆಯ್ಕೆಯ ಮೇಲೆ ಕೆಲಸವು ಹಂಚಲ್ಪಡುತ್ತದೆ. ಹೆಚ್ಚು ಕೆಲಸಮಾಡಿದಷ್ಟೂ, ಹೆಚ್ಚು ಉತ್ಪಾದನೆಯನ್ನು ಮಾಡಿದಷ್ಟೂ ತನಗೆ ಹೆಚ್ಚು ಸೌಲಭ್ಯಗಳು ಸಿಗುತ್ತವೆ ಎಂದು ಪ್ರತಿಯೊಬ್ಬ ಕಾರ್ಮಿಕನೂ ತಿಳಿದಿರುತ್ತಾನೆ. ಕ್ಷಮತೆಗಾಗಿ ಎಲ್ಲಾ ಮಟ್ಟಗಳಲ್ಲಿಯೂ ಬಹುಮಾನಗಳನ್ನು ನೀಡಲಾಗುತ್ತದೆ. ಕಾರ್ಮಿಕರಿಗೆ, ಅವರು ಸಾಮಾನ್ಯ ಮಟ್ಟಕ್ಕಿಂತ ಹೆಚ್ಚು ಉತ್ಪಾದನೆಯನ್ನು ಮಾಡಿದರೆ, 'ಸೋವಿಯತ್ ಕಾರ್ಮಿಕ ನಾಯಕ' ಎನ್ನುವ ಬಿರುದನ್ನು ಕೊಡುತ್ತಾರೆ. ಅವರ ಭಾವಚಿತ್ರಗಳನ್ನು ಪತ್ರಿಕೆಗಳಲ್ಲಿ ಪ್ರಕಟಿಸುತ್ತಾರೆ. ಅವರ ಭಾವಚಿತ್ರಗಳನ್ನು, ಪ್ರತಿಮೆಗಳನ್ನು ಎಲ್ಲಾ ಕಾರ್ಖಾನೆಗಳಲ್ಲಿ ಮತ್ತು ಕೃಷಿಕ್ಷೇತ್ರಗಳಲ್ಲಿ ಪ್ರದರ್ಶಿಸುತ್ತಾರೆ. ಅಲ್ಲಿ ಹೆಚ್ಚು ಹೆಚ್ಚು ಉತ್ಪಾದನೆಗೆ ಅಗಾಧವಾದ ಪ್ರೋತ್ಸಾಹವನ್ನು ನೀಡುತ್ತಾರೆ. ಸೋವಿಯತ್ ಸರಕಾರವು ಕಾರ್ಮಿಕರ ವಿಶ್ರಾಂತಿಯ ಅಗತ್ಯವನ್ನು ಮನಗಂಡಿದೆ ಮತ್ತು ಅಲ್ಲಿ ವರ್ಷಕ್ಕೆ ಒಂದು ತಿಂಗಳ ಕಡ್ಡಾಯ ರಜೆಯನ್ನು ಕಾರ್ಮಿಕರು ತೆಗೆದುಕೊಳ್ಳಬೇಕು. ಅದರಿಂದ ಕೆಲಸದ ವಾತಾವರಣವು ಪ್ರೋತ್ಸಾಹದಾಯಕವಾಗಿ, ಚೇತೋಹಾರಿಯಾಗಿ ಮತ್ತು ಸ್ನೇಹಪರವಾಗಿ ಇರುತ್ತದೆ. ಕಾರ್ಮಿಕರಿಗೆ ಎಲ್ಲ ತರಹದ ಗೌರವವೂ ಮತ್ತು ಗುರಿಯನ್ನು ಮೀರಿದವರಿಗೆ ಅತ್ಯುನ್ನತವಾದ ಗೌರವವು ದೊರೆಯುತ್ತವೆ.

ಅಂದರೆ, ಸರಕಾರವು ಉತ್ಪಾದನೆ, ವಿತರಣೆ ಮತ್ತು ಆರ್ಥಿಕತೆಯ ಮೇಲೆ ಸಂಪೂರ್ಣ ಹಿಡಿತವನ್ನು ಹೊಂದಿರುತ್ತದೆ. ಇಲ್ಲಿ ಯಾವುದೇ ಸಂದರ್ಭದಲ್ಲಾದರೂ ಸಮಾಜವಿರೋಧಿ ಚಟುವಟಿಕೆಗಳಿಗಾಗಲೀ, ಶೋಷಣೆಗಾಗಲೀ ಎಳ್ಳಷ್ಟೂ ಅವಕಾಶವಿಲ್ಲ. ಉತ್ಪಾದನಾ ವೆಚ್ಚವನ್ನು ಆಧರಿಸಿ ಬೆಲೆಗಳನ್ನು ನಿಗದಿಗೊಳಿಸಲಾಗುತ್ತದೆ. ಅಗತ್ಯವಾದ ಬಳಕೆ ವಸ್ತುಗಳ ಬೆಲೆಯನ್ನು ಕಡಿಮೆ

ಇಟ್ಟಿರುತ್ತಾರೆ, ಇದರಿಂದ ಎಲ್ಲರೂ ಅವನ್ನು ಕೊಳ್ಳಲು ಶಕ್ತರಾಗುತ್ತಾರೆ. ಆದರೆ ವಿಲಾಸೀ ವಸ್ತುಗಳ ಬೆಲೆ ಹೆಚ್ಚಾಗಿರುತ್ತದೆ. ಬಳಕೆದಾರರ ದೃಷ್ಟಿಯಿಂದ ಪದಾರ್ಥಗಳ ಬೆಲೆಯು ಅವುಗಳ ನೈಜ ಮೌಲ್ಯವನ್ನು ಬಿಂಬಿಸುತ್ತವೆ ಮತ್ತು ಅಗತ್ಯಗಳ ಮೇಲೆ ನಿಗದಿಗೊಳಿಸಲ್ಪಟ್ಟಿರುತ್ತವೆ ಮತ್ತು ವಾಸ್ತವಿಕತೆಗೆ ಹತ್ತಿರವಾಗಿರುತ್ತವೆ. ಬೆಲೆಯು ದೇಶದ ಎಲ್ಲೆಡೆ ಒಂದೇ ಮಟ್ಟದಲ್ಲಿ ಇರುತ್ತವೆ. ದೇಶದ ಒಂದೆಡೆ ಖರೀದಿಸಿದ ಪದಾರ್ಥವನ್ನು ಇನ್ನೊಂದೆಡೆ ಬೇರೆ ಪದಾರ್ಥಕ್ಕೆ ಬದಲಾಯಿಸಿಕೊಳ್ಳಬಹುದು. ಕೇವಲ ವ್ಯತ್ಯಾಸದ ಹಣವನ್ನು ನೀಡಬೇಕಾಗುತ್ತದೆ. ನಾನು ಕೀವ್‌ನಲ್ಲಿ ಕೊಂಡುಕೊಂಡ ಒಂದು ಎಲೆಕ್ಟ್ರಿಕ್ ಶೇವರ್‌ನ್ನು ಮಾಸ್ಕೋದಲ್ಲಿ ಅಂಗಡಿಗೆ ವಾಪಸ್ ಮಾಡಿ ಅದಕ್ಕಿಂತ ಹೆಚ್ಚಿನ ಬೆಲೆಯ ಶೇವರ್‌ನ್ನು ಕೊಂಡುಕೊಂಡೆ. ವ್ಯತ್ಯಾಸದ ಹಣವನ್ನು ಮಾತ್ರ ನಾನು ನೀಡಬೇಕಾಯಿತು. ಪ್ರತಿಯೊಬ್ಬನೂ ಕೆಲಸದ ಹಿಂದೆ, ಹೆಚ್ಚು ಕೆಲಸದ ಹಿಂದೆ, ಹೆಚ್ಚು ಹೆಚ್ಚು ಕೆಲಸದ ಹಿಂದೆ ಓಡುತ್ತಿರುತ್ತಾನೆ. ಎಲ್ಲರ ಗಮನದಲ್ಲಿರುವ ಅಂಶವೆಂದರೆ ಪ್ರಾಮಾಣಿಕ ಮತ್ತು ಶ್ರಮಪೂರ್ಣ ದುಡಿಮೆ. ಉದ್ಯೋಗದ ಖಾತ್ರಿಯಲ್ಲಿ ಯಾವುದೇ ತೊಂದರೆಯಿರುವುದಿಲ್ಲ ಮತ್ತು ವೃದ್ಧಾಪ್ಯ ವೇತನವು ಅವರ ಸಂಬಳದ ಮೂರನೆಯ ಎರಡರಷ್ಟು ಇರುತ್ತದೆ. 60 ವರ್ಷ ದಾಟಿದ ಗಂಡಸರಿಗೆ ಮತ್ತು 55 ವರ್ಷ ದಾಟಿದ ಹೆಂಗಸರಿಗೆ ವೃದ್ಧಾಪ್ಯ ವೇತನವು ಲಭ್ಯವಿರುತ್ತದೆ.

ಪ್ರತಿಯೊಂದು ಆಹಾರದ ಮತ್ತು ಬಳಕೆದಾರರ ವಸ್ತುಗಳನ್ನು ಪೂರ್ವಭಾವಿಯಾಗಿ ಯೋಚಿಸಿ ಉತ್ಪಾದಿಸುತ್ತಾರೆ. ಉತ್ಪಾದನೆಯಲ್ಲಿ ಕೊರತೆಯಾಗಲೀ, ಹೆಚ್ಚುವರಿಯಾಗಲೀ ಇರುವುದೇ ಇಲ್ಲ. ಬೆಲೆಗಳು ವರ್ಷಪೂರ್ತಿ ಒಂದೇ ಮಟ್ಟದಲ್ಲಿ ಇರುತ್ತವೆ ಮತ್ತು ದೇಶದ ಎಲ್ಲೆಡೆ ಬೆಲೆಯು ಒಂದೇ ಸಮನಾಗಿರುತ್ತದೆ.

ರಷ್ಯನ್ ಸಮಾಜವು ಸಮಾನತೆಯ ಸಮಾಜ. ಅಲ್ಲಿನ ಜನರು ವಿಶಾಲಮನೋಭಾವದವರಾಗಿರುತ್ತಾರೆ. ಸಂಗ್ರಹ ಪ್ರವೃತ್ತಿಯು ಇರದಿರುವುದರಿಂದ ಮತ್ತು ಕನಿಷ್ಠ ವೇತನವು ಖಾತ್ರಿಯಾಗಿರುವುದರಿಂದ ಅಲ್ಲಿ ಜನರು ತಮ್ಮ ಬಿಡುವಿನ ವೇಳೆಯನ್ನು ಸಾಮಾಜಿಕ ಕಾರ್ಯಗಳಲ್ಲಿ ಕಳೆಯುತ್ತಾರೆ. ಒಂದು ಸಾಮಾನ್ಯವಾದ ಫುಟ್‌ಬಾಲ್ ಪಂದ್ಯವನ್ನು ನೋಡಲು ಒಂದು ಲಕ್ಷ ಜನಸೇರಿದ್ದುದನ್ನು ನಾನೇ ನೋಡಿದ್ದೇನೆ. ಅವರು ಅಷ್ಟೊಂದು ಉತ್ಸಾಹಿಗಳಾಗಿರುತ್ತಾರೆ. ನಾವು ಎಲ್ಲೆಡೆ

ಆಹಾರದ, ಹಣ್ಣುಗಳ, ತರಕಾರಿಯ, ಹೂವುಗಳ ಸಮೃದ್ಧಿಯನ್ನು ನೋಡಿದೆವು. ಪ್ರತಿಯೊಬ್ಬನೂ ಉಲ್ಲಾಸಶೀಲನಾಗಿ, ಸಂತಸದಿಂದ ಕೂಡಿ, ತೃಪ್ತನಾಗಿ ಇರುವುದನ್ನು ನಾವು ಕಂಡೆವು. ಹೆಂಗಸರು ತುಟಿಗಳಿಗೆ ರಂಗುಗಳನ್ನು ಉಪಯೋಗಿಸುವುದಿಲ್ಲ ಮತ್ತು ಗಂಡಸರು ಧೂಮಪಾನ ಮಾಡುವುದಿಲ್ಲ. ಆರೋಗ್ಯಕ್ಕೆ ಮಾರಕವಾದವುಗಳ ಬೆಲೆಯನ್ನು ಅತಿಯಾಗಿ ಹೆಚ್ಚಿಸಿರುತ್ತಾರೆ, ಕೆಲವು ವೇಳೆ ಅವುಗಳನ್ನು ದೇಶದಿಂದ ಸಂಪೂರ್ಣವಾಗಿ ಬಹಿಷ್ಕರಿಸಿರುತ್ತಾರೆ.

ನಾವು ನೋಡಿದೆಡೆಯಲ್ಲೆಲ್ಲಾ ನಾಯಕರ ಕಂಚಿನ ಪ್ರತಿಮೆಗಳನ್ನು ಕಾಣುತ್ತಿದ್ದೆವು. ಅವುಗಳಲ್ಲಿ ಹೆಚ್ಚಿನವು ಲೆನಿನ್‌ನ ಸಹಜಗಾತ್ರದ ಪ್ರತಿಮೆಗಳು. ಅವು ಅವನ ಜೀವನದ ಮತ್ತು ಕಾರ್ಯದ ವಿವಿಧ ಮುಖಗಳನ್ನು ಬಿಂಬಿಸುತ್ತಿದ್ದವು. ಅಲ್ಲಿ ಉಪಯೋಗಿಸುತ್ತಿದ್ದ ಫಲಕಗಳಲ್ಲಿ ಬರವಣಿಗೆ ಇರುತ್ತಿರಲಿಲ್ಲ, ಬದಲಿಗೆ ಅಲ್ಲಿ ದೊರೆಯುತ್ತಿದ್ದ ವಸ್ತು ಅಥವಾ ಸೇವೆಗಳ ಚಿತ್ರಗಳನ್ನು ಒಳಗೊಂಡಿರುತ್ತಿದ್ದವು, ಉದಾ. ಕಲ್ಲಂಗಡಿಯನ್ನು ಮಾರುವ ಅಂಗಡಿಯ ಫಲಕದಲ್ಲಿ ಕಲ್ಲಂಗಡಿ ಹಣ್ಣಿನ ಚಿತ್ರ, ಶಾಲೆಯ ಬಳಿ ಮಕ್ಕಳ ಚಿತ್ರ, ವೈದ್ಯಕೀಯ ನೆರವು ದೊರೆಯುವ ಎಡೆಗಳಲ್ಲಿ ನರ್ಸ್ ಒಬ್ಬಳು ಚುಚ್ಚುಮದ್ದಿನ ಸೂಜಿಯನ್ನು ಹಿಡಿದುಕೊಂಡಿರುವ ಚಿತ್ರ ಇತ್ಯಾದಿ. ಒಂದು ಜಾಗದಲ್ಲಿನಡೆಯುವ ಚಟುವಟಿಕೆಗಳನ್ನು ಕೂಡ ಅದೇ ರೀತಿ ಫಲಕದಲ್ಲಿ ಸೂಚಿಸುತ್ತಿದ್ದರು. ಉದಾ. ಕೋಳಿಯ, ಹಸುವಿನ ಅಥವಾ ಹಂದಿಯ ಪ್ರತಿಮೆ ಅಥವಾ ಚಿತ್ರವಿದ್ದರೆ ಅದು ಕ್ರಮವಾಗಿ ಕೋಳಿಸಾಕಣೆಯ, ಪಶುಸಂಗೋಪನೆಯ ಅಥವಾ ಹಂದಿ ಸಾಕಣೆಯ ಕೇಂದ್ರದ ಸೂಚನೆಯಾಗಿರುತ್ತಿತ್ತು.

ನಾಟಕಗಳು ಮತ್ತು ಸಿನೆಮಾಗಳು ಬಹಳ ಅರ್ಥಗರ್ಭಿತವಾಗಿರುತ್ತಿದ್ದವು. ಅವುಗಳು ಭಾವನಾತ್ಮಕ ಹಾಗೂ ಬೋಧನಾತ್ಮಕವಾಗಿರುತ್ತಿದ್ದವು. ಅವುಗಳು ತಪ್ಪದೆ ಕ್ರಾಂತಿಪೂರ್ವ ಹಾಗೂ ಕ್ರಾಂತಿಯ ನಂತರದ ಸ್ಥಿತಿಗಳನ್ನು ಬಿಂಬಿಸಿ ಜನರಲ್ಲಿ ಅವೆರಡರ ನಡುವಿನ ವ್ಯತ್ಯಾಸವು ಜನರ ಮನಸ್ಸಿನಲ್ಲಿ ಅಚ್ಚೊತ್ತುವಂತೆ ಮಾಡುತ್ತಿದ್ದವು. ಅವುಗಳು ಗುರಿ ಮತ್ತು ಸಾಧನೆಯಲ್ಲಿನ ಚಟುವಟಿಕೆಗಳನ್ನೂ ಪ್ರದರ್ಶಿಸುತ್ತಿದ್ದವು.

ಅವರ ಮುಖ್ಯ ಆಹಾರ ಬ್ರೆಡ್, ಬೆಣ್ಣೆ ಮತ್ತು ಹಾಲು. ಹಣ್ಣುಗಳನ್ನು ಮತ್ತು ತರಕಾರಿಗಳನ್ನು ಸಮೃದ್ಧವಾಗಿ ಉಪಯೋಗಿಸುತ್ತಾರೆ. ಅವರು ಬಳಸುವ

ಹಣ್ಣುಗಳ ಮತ್ತು ತರಕಾರಿಗಳ ಪ್ರಮಾಣವನ್ನು ನೋಡಿದರೆ, ಅವರು ತೋಟಗಾರಿಕೆಗೆ ನೀಡುವ ಪ್ರಾಧಾನ್ಯವನ್ನು ಅರಿಯಬಹುದು. ಅವರಲ್ಲಿ ಪೌಷ್ಟಿಕತೆಯ ಕೊರತೆಯು ಇಲ್ಲವೇ ಇಲ್ಲ ಮತ್ತು ಸಾಮಾನ್ಯವಾಗಿ ಅವರ ಆರೋಗ್ಯಸ್ಥಿತಿಯು ಉತ್ತಮವಾಗಿರುತ್ತದೆ. ಇದನ್ನು ಅವರು ತಮ್ಮ ಚಟುವಟಿಕೆಗಳ ಮೂಲಕ, ಸದುದ್ದೇಶದ ಕಾರ್ಯಗಳ ಮೂಲಕ, ಹಾಗೂ ಅಂಗಸಾಧನೆ ಮತ್ತು ವಿಶ್ರಾಂತಿಗಳ ಮೂಲಕ ಕಾಯ್ದುಕೊಂಡು ಹೋಗುತ್ತಾರೆ. ರೋಗನಿರೋಧಕ ವೈದ್ಯಕೀಯ ಚಟುವಟಿಕೆಗಳಿಗೆ ಅಲ್ಲಿ ಪ್ರಾಶಸ್ತ್ಯ. ಅವರಿಗೆ ರೋಗನಿರೋಧವು ರೋಗ ನಿವಾರಣೆಗಿಂತ ಮುಖ್ಯವೆಂಬುದರಲ್ಲಿ ಅವರಿಗೆ ನಂಬಿಕೆ.

ಅವರ ಆಹಾರಪದ್ಧತಿಯಲ್ಲಿನ ಸಂದರ್ಭಕ್ಕೆ ತಕ್ಕಂತೆ ಬದಲಾಯಿಸಿಕೊಳ್ಳುವ ಗುಣವು ಯಾವುದೇ ಧಾನ್ಯದ, ಹಣ್ಣಿನ, ತರಕಾರಿಯ ಮೇಲೆ ಅನಗತ್ಯ ಬೇಡಿಕೆಯನ್ನು ಹುಟ್ಟುಹಾಕುವುದಿಲ್ಲ. ಇದರಿಂದ ಅವುಗಳಲ್ಲಿ ಯಾವುದರ ಅಭಾವವೂ ಅಲ್ಲಿ ಕಾಣಸಿಗುವುದಿಲ್ಲ. ಹೆಚ್ಚು ಇಳುವರಿ ಕೊಡುವ, ವರ್ಷದ ಎಲ್ಲಾ ಕಾಲಗಳಲ್ಲಿಯೂ ಬೆಳೆಯಬಹುದಾದ ಬೆಳೆಗಳನ್ನು ಅವರು ವೈಜ್ಞಾನಿಕವಾಗಿ ಆವಿಷ್ಕರಿಸಿ ಸಹಕಾರಿ ಮತ್ತು ಸರಕಾರಿ ಕ್ಷೇತ್ರಗಳಲ್ಲಿ ಬೆಳೆದು ಧಾರಾಳವಾಗಿ ಸರಬರಾಜು ಮಾಡುತ್ತಾರೆ. ಕೊರತೆಯೆಂಬುದು ಅಲ್ಲಿನವರಿಗೆ ಗೊತ್ತೇ ಇಲ್ಲ.

ಪ್ರತಿಯೊಬ್ಬರೂ – ಯುವಕರಿರಲಿ, ವೃದ್ಧರಿರಲಿ – ಬಹಳ ಶಿಸ್ತುಗಾರರೂ, ಅಚ್ಚುಕಟ್ಟುತನವುಳ್ಳವರೂ, ಪ್ರಾಮಾಣಿಕರೂ ಮತ್ತು ಕಷ್ಟಪಟ್ಟು ದುಡಿಯುವವರೂ ಆಗಿರುತ್ತಾರೆ. ಪ್ರತಿಯೊಬ್ಬರೂ ಸರ್ಜನಾತ್ಮಕ ಕಾರ್ಮಿಕರಾಗಿರುತ್ತಾರೆ. ಗ್ರಾಮೀಣ ಜನತೆ ಬಹಳ ಆನಂದದ ಜೀವನವನ್ನು ನಡೆಸುತ್ತಾರೆ. ಅವರ ಮುಖದಿಂದ ಆನಂದ ಮತ್ತು ತೃಪ್ತಿ ಚಿಮ್ಮುತ್ತಿರುವುದನ್ನು ನಾವು ಕಾಣಬಹುದು. ಜನರಲ್ಲಿ ಭಯವಾಗಲೀ, ತಮಗೆ ಬೇಕು ಎಂಬ ಆಸೆಯಾಗಲೀ, ಸಂಕಷ್ಟವಾಗಲೀ ಇರುವುದಿಲ್ಲ. ಅವರಲ್ಲಿ ಸುರಕ್ಷತೆಯ ಭಾವವಿದೆ. ಸ್ವಭಾವತಃ ಅವರು ಶಾಂತಿಪ್ರಿಯರು. ತಾವು ಶಾಂತಿಯಿಂದ, ಸೌಖ್ಯದಿಂದ, ಸಮೃದ್ಧಿಯಲ್ಲಿ ಜೀವಿಸಬೇಕೆಂಬುದು ಅವರ ಇಚ್ಛೆ. ಅದಕ್ಕಾಗಿ ದುಡಿಯುವುದು ಅವರ ಸಂಕಲ್ಪ.

ರಷ್ಯಾದ ಕ್ರಾಂತಿಯು ಹಿಂಸಾಚಾರದಿಂದ ಕೂಡಿದ್ದರೂ, ಅದರ ಗುರುತು ಎಲ್ಲಿಯೂ, ಝಾರ್ ದೊರೆಗಳ ಕ್ರೆಮ್ಲಿನ್ ಅರಮನೆಯಲ್ಲಿ ಕೂಡ, ಕಾಣಸಿಗುವುದಿಲ್ಲ.

ಅದರ ಒಂದೇ ಒಂದು ಕಿಟಕಿಯ ಗಾಜೂ ಒಡೆದಿಲ್ಲ. ಎಲ್ಲವನ್ನೂ ಅವು ಮೊದಲಿದ್ದ ಹಾಗೆಯೇ ಇಟ್ಟುಕೊಂಡಿದ್ದಾರೆ. ಅದಕ್ಕೆ ಹೋಲಿಸಿದಾಗ ನಮ್ಮ ವಿದ್ಯಾರ್ಥಿಗಳ ಇತ್ತೀಚಿನ ಮುಷ್ಕರವು ಹೇಗೆ ಕಾಣುತ್ತದೆ? ಅಹಿಂಸಾತ್ಮಕವಾಗಿರಬೇಕಾಗಿದ್ದ ಇವರ ಮುಷ್ಕರದಲ್ಲಿ, ನೂರಾರು ಬೀದಿ ದೀಪಗಳನ್ನು ಚೂರುಚೂರು ಮಾಡಿದರು, ಹಲವಾರು ಸಾರ್ವಜನಿಕ ಆಸ್ತಿಗಳಿಗೆ ಧಕ್ಕೆಮಾಡಿದರು, ನಾಶಮಾಡಿದರು.

ಅಲ್ಲಿನ ಜನರ ಪೌರಪ್ರಜ್ಞೆ ಬಹಳ ಸೂಕ್ಷ್ಮವಾದದ್ದು. ಒಂದು ಚೂರು ಕಸವನ್ನೂ ಅವರು – ಚಿಕ್ಕವರಿರಲಿ, ದೊಡ್ಡವರಿರಲಿ – ರಸ್ತೆಯಲ್ಲಿ ಎಸೆಯುವುದಿಲ್ಲ,ಬದಲಿಗೆ ತೆಗೆದುಕೊಂಡು ಹೋಗಿ ಕಸದ ತೊಟ್ಟಿಯಲ್ಲಿ ಹಾಕುತ್ತಾರೆ.

ಸರಕಾರವು ಯಾವ ಧರ್ಮದ ಪರವಾಗಿಯೂ ಇರುವುದಿಲ್ಲ ಆದರೆ ಜನರು ಅವರ ಧರ್ಮದ ಆಯ್ಕೆಯಲ್ಲಿ ಸ್ವತಂತ್ರರು. ತಾಷ್ಕೆಂಟ್‌ನಲ್ಲಿದ್ದ ಮಸೀದಿಯೊಂದರಲ್ಲಿ ಹಿಂದಿನ ತಲೆಮಾರಿನವರು ಪ್ರಾರ್ಥನೆ ಮಾಡುತ್ತಿದ್ದುದನ್ನು ನಾನು ನೋಡಿದೆ. ಯುವ ಜನತೆಗೆ ದೇವರ ವಿಷಯದಲ್ಲಿ ನಂಬಿಕೆಯಿಲ್ಲ. ಒಂದು ಹುಡುಗಿಯನ್ನು ನಾನು ಈ ಬಗ್ಗೆ ಪ್ರಶ್ನಿಸಿದಾಗ, ಅವಳುಹೇಳಿದಳು: 'ನಾನು ದೇವರನ್ನೇಕೆ ಪ್ರಾರ್ಥಿಸಬೇಕು? ಅವನು ನನಗೆ ಹಣವನ್ನಾಗಲೀ, ಇತರ ಸೌಖ್ಯವನ್ನಾಗಲೀ ನೀಡುವುದಿಲ್ಲ. ನನ್ನ ತಾತ ಮುತ್ತಾತಂದಿರು ದೇವರನ್ನು ದಿನವೂ ಪ್ರಾರ್ಥಿಸುತ್ತಿದ್ದರು, ಆದರೆ ಜೀವಮಾನ ಪೂರ್ತಿ ಅವರು ಬಡತನದಲ್ಲಿ ಸಂಕಷ್ಟಗಳಿಂದ ನರಳುತ್ತಲೇ ಇದ್ದರು. ನನಗೆ ಹಣವನ್ನು ನನ್ನ ಕೆಲಸ ಕೊಡುತ್ತದೆ. ಆದ್ದರಿಂದ ನಾನು ನನ್ನ ಕೆಲಸವನ್ನು ದೇವರೆಂದು ಪೂಜಿಸುತ್ತೇನೆ. ನಾನು ಲೆನಿನ್‌ನ್ನು ಪೂಜಿಸುತ್ತೇನೆ, ಏಕೆಂದರೆ ಆತ ನನಗೆ ಈ ಕೆಲಸ, ಆನಂದ ಮತ್ತು ಸಮೃದ್ಧಿಯನ್ನು ತಂದುಕೊಟ್ಟ. ನಮ್ಮ ಪ್ರಾರ್ಥನೆಗೆ ಓಗೊಡದ ದೇವರ ಬಗ್ಗೆ ನಾವೇಕೆ ಯೋಚಿಸಬೇಕು. ನಮ್ಮ ಅಗತ್ಯಗಳಿಗೆ ಸ್ಪಂದಿಸುವವನು, ಅವನು ಮನುಷ್ಯನೇ ಆಗಿದ್ದರೂ, ಅವನೇ ನಮ್ಮ ದೇವರು.' ಇದರಿಂದ ನಮಗೆ ಯುವ ಜನತೆಯ ದೃಷ್ಟಿ, ಧೋರಣೆ ಗೊತ್ತಾಗುತ್ತದೆ. ವಾಸ್ತವವಾಗಿ, ಜನತೆಯ ಸ್ವಯಂಪ್ರೇರಿತ ಒಪ್ಪಿಗೆಯಿಂದ ಅಲ್ಲಿನ ಚರ್ಚ್‌ಗಳನ್ನು, ಮಸೀದಿಗಳನ್ನು ರಾಷ್ಟ್ರದ ವಸ್ತುಸಂಗ್ರಹಾಲಯಗಳನ್ನಾಗಿ ಪರಿವರ್ತಿಸಿದ್ದಾರೆ.

ನೈತಿಕ ಹಾಗೂ ಐಹಿಕ ಜೀವನದಲ್ಲಿ ಅವರ ಗುಣಮಟ್ಟವು ಬಹಳ ಎತ್ತರವಾದದ್ದಾಗಿದೆ. ಸಂಗ್ರಾಹಕ ಪ್ರವೃತ್ತಿಯು ಇಲ್ಲದಿರುವುದರಿಂದ ಅಲ್ಲಿ ಕಳವು, ದರೋಡೆ ಪ್ರಕರಣಗಳು ಬಹಳ ಕಡಿಮೆ. ಅಪರಾಧಕ್ಕೆ ನೀಡುವ ಶಿಕ್ಷೆಯು ಕೂಡ ಆದರ್ಶಪ್ರಾಯವಾಗಿರುತ್ತದೆ. ಅಪರಾಧಿಗೆ ಪೊಲಿಸ್ ಉಸ್ತುವಾರಿಯಲ್ಲಿ ನೆಲವನ್ನು, ರಸ್ತೆಯನ್ನು ಗುಡಿಸುವ ಶಿಕ್ಷೆಯನ್ನು ನೀಡುತ್ತಾರೆ. ಅವನ ಭಾವಚಿತ್ರವನ್ನು ಅವನು ಮಾಡಿದ ಅಪರಾಧದ ವಿವರಣೆಯೊಂದಿಗೆ ಕೆಲಸಮಾಡುವ ಜಾಗಗಳಲ್ಲಿ ಪ್ರದರ್ಶಿಸುತ್ತಾರೆ. ಇದರಿಂದ ಅಪರಾಧಿಗೆ ಅವಮಾನದ ಭಾವ ಮೂಡುತ್ತದೆ. ವಿಚಾರಣೆಯನ್ನುಕಾನೂನು ಇಲಾಖೆಯ ಒಬ್ಬ ಅಧಿಕಾರಿಯ ಅಧ್ಯಕ್ಷತೆಯಲ್ಲಿ ನ್ಯಾಯದರ್ಶಿಮಂಡಲಿಯು ನಡೆಸುತ್ತದೆ.

ಪ್ರತಿಯೊಂದು ವೃತ್ತಿ ಅಥವಾ ವ್ಯವಹಾರದಲ್ಲಿ ಪ್ರತಿಯೊಬ್ಬರಿಗೂ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸುವ ಮತ್ತು ಅಭಿವೃದ್ಧಿಪಡಿಸಲು ಸೂಚನೆಗಳನ್ನು ನೀಡುವ ಎಲ್ಲಾ ಅವಕಾಶಗಳನ್ನೂ ಕೊಟ್ಟಿರುತ್ತಾರೆ. ಅಲ್ಲಿ ಪುಸ್ತಕದ ಓದಿಗಿಂತ ಆನ್ವಯಿಕ ಜ್ಞಾನಕ್ಕೆ ಹೆಚ್ಚಿನ ಬೆಲೆಯನ್ನು ಕೊಡುತ್ತಾರೆ. ಕಡಿಮೆ ಅಂಕಗಳನ್ನು ತೆಗೆದಿದ್ದರೂ ರೈತನೊಬ್ಬನ ಮಗ ಹೆಚ್ಚಿನ ಅಂಕವನ್ನು ತೆಗೆದಿದ್ದ ಕಾರ್ಮಿಕನ ಮಗನಿಗಿಂತ ಆದ್ಯತೆಯ ಮೇಲೆ ಕೃಷಿ ಕಾಲೇಜಿನಲ್ಲಿ ಸ್ಥಾನವನ್ನು ಗಿಟ್ಟಿಸಬಲ್ಲ. ಹೀಗೆ ಅವರವರ ಯೋಗ್ಯತೆಗೆ ತಕ್ಕ ಕೆಲಸಗಳನ್ನು ಅವರು ಪಡೆಯುತ್ತಾರೆ. ಸಮಾಜದಲ್ಲಿ ವ್ಯಕ್ತಿಯ ಸಕ್ಷಮತೆ ಮತ್ತು ಉಪಯುಕ್ತತೆಗಳು ಮುಖ್ಯವಾಗುತ್ತವೆ ಮತ್ತು ಪ್ರತಿಯೊಬ್ಬನೂ ಅವನ ಸಾಮರ್ಥ್ಯಕ್ಕೆ ಅನುಗುಣವಾದ ಸ್ಥಾನವನ್ನು ಪಡೆಯುತ್ತಾನೆ.

ರಷ್ಯಾದಲ್ಲಿ ಖಾಸಗಿ ಕೃಷಿಕ್ಷೇತ್ರಗಳು ಇರವುದೇ ಇಲ್ಲ. ಎಲ್ಲಾ ಕೃಷಿ ಕ್ಷೇತ್ರಗಳೂ ಸರಕಾರದ ಅಥವಾ ಸಾಮೂಹಿಕ ಒಡೆತನದಲ್ಲಿ ಇರುತ್ತವೆ. ಸಾಮೂಹಿಕ ಕ್ಷೇತ್ರಗಳಿಗೆ ಸರಕಾರವು ಶೇ 40ರಷ್ಟು ಬಂಡವಾಳವನ್ನು ನೀಡುತ್ತದೆ ಉಳಿದುದನ್ನು ಅದನ್ನು ನಿರ್ವಹಿಸಲು ಮುಂದೆಬರುವ ರೈತರು ತಾವೇ ಕೂಡಿಸಿಕೊಳ್ಳಬೇಕು. ಪ್ರತಿ ಕೃಷಿಕ್ಷೇತ್ರದ ವಿಸ್ತೀರ್ಣ 40,000 ಎಕರೆಗಳಿಂದ 2,00,000 ಎಕರೆಗಳ ವರೆಗೆ ಇರುತ್ತವೆ. ಕೇಂದ್ರ ಮತ್ತು ಗಣರಾಜ್ಯಗಳು ಕೃಷಿ, ಪಶುಸಂಗೋಪನೆ, ತೋಟಗಾರಿಕೆ ಮೊದಲಾದವುಗಳಿಗೆ ಮೊದಲ ಆದ್ಯತೆಗಳನ್ನು ನೀಡುತ್ತವೆ. ಈ ಎಲ್ಲಾ ಕ್ಷೇತ್ರಗಳಲ್ಲಿ 'ಅದ್ಭುತವಾದ ಸಾಧನೆಗಳಾಗಿದ್ದು ಇವು ಎಲ್ಲರ ಮೆಚ್ಚಿಗೆಗೆ ಪಾತ್ರವಾಗಿದೆ.

ಮೂರರಿಂದ ನಾಲ್ಕು ದಶಕಗಳಲ್ಲಿ ಇಷ್ಟು ಸಾಧನೆಯನ್ನು ಅವರು ಸಾಧಿಸಿದ್ದಾರೆ. ಕೇಂದ್ರ ಹಾಗೂ ಗಣರಾಜ್ಯಗಳ ಕೃಷಿ ಸಚಿವಾಲಯಗಳು ಆಹಾರೋತ್ಪಾದನೆಗೆ ಜವಾಬ್ದಾರವಾಗಿರುತ್ತದೆ. ಇತರ ಇಲಾಖೆಗಳಾದ ಪಶುಸಂಗೋಪನೆ, ತೋಟಗಾರಿಕೆ, ಕೃಷಿ ಇಂಜನಿಯರಿಂಗ್, ಕೃಷಿ ನಿರ್ಮಾಣ ಇಂಜನಿಯರಿಂಗ್ ಇಲಾಖೆಗಳು, ಟ್ರಾಕ್ಟರ್ ಇಲಾಖೆ, ರೈತರಿಗೆ ಸೌಲಭ್ಯಗಳನ್ನು ಒದಗಿಸುವ ಇಲಾಖೆ, ಹಾಲು ಉತ್ಪಾದನಾ ಇಲಾಖೆ ಮತ್ತು ಇತರ ಪೂರಕ ಇಲಾಖೆಗಳು ಕೃಷಿ ಇಲಾಖೆಗೆ ಸಹಾಯಕವಾಗಿ ಕೆಲಸವನ್ನು ಮಾಡುತ್ತಿರುತ್ತವೆ. ಪ್ರತಿ ಇಲಾಖೆಗೂ ಆ ಕ್ಷೇತ್ರದಲ್ಲಿ ತಜ್ಞನಾದವನೊಬ್ಬನು ನಿರ್ದೇಶಕನಾಗಿರುತ್ತಾನೆ. ಕೇಂದ್ರ ಹಾಗೂ ಗಣರಾಜ್ಯದ ಮಟ್ಟದಲ್ಲಿ ಕೃಷಿ ಅಕಾಡೆಮಿಗಳು ಇರುತ್ತವೆ. ಪ್ರತಿ ಗಣರಾಜ್ಯದಲ್ಲಿಯೂ ಸುಮಾರು 100 ಅಂತಹ ಅಕಾಡೆಮಿಗಳು ಇರುತ್ತವೆ. ಪಶುಸಂಗೋಪನಾ ಅಕಾಡೆಮಿಗಳೂ ಇವೆ. ಮಾಸ್ಕೋನ ಕೃಷಿ ಅಕಾಡೆಮಿಯಲ್ಲಿ ಸುಮಾರು 6,500 ವಿದ್ಯಾರ್ಥಿಗಳು ಇದ್ದಾರೆ. ಅಲ್ಲಿ 115 ಪ್ರೊಫೆಸರ್‌ಗಳೂ ಮತ್ತು 600 ಉಪನ್ಯಾಸಕರೂ ಇದ್ದಾರೆ. 500 ಹೆಕ್ಟೇರ್‌ಗಳಷ್ಟು (1 ಹೆಕ್ಟೇರ್ =2.47 ಎಕರೆ) ಜಮೀನನ್ನು ಪ್ರಾಯೋಗಿಕ ಉದ್ದೇಶಗಳಿಗಾಗಿ ಅಕಾಡೆಮಿಗೆ ಈ ನೀಡಲಾಗಿದೆ. ಅಲ್ಲಿ, ಕೃಷಿ, ತೋಟಗಾರಿಕೆ, ಪಶುಸಂಗೋಪನೆ, ನೀರಾವರಿ ಇಂಜನಿಯರಿಂಗ್, ಎಲೆಕ್ಟ್ರಿಕಲ್ ಇಂಜನಿಯರಿಂಗ್, ಹೈಡ್ರೋ ಎಲೆಕ್ಟ್ರಿಕಲ್ ಇಂಜನಿಯರಿಂಗ್ ಮೊದಲಾದವುಗಳನ್ನು ಬೋಧಿಸಲಾಗುತ್ತದೆ. ಡಿಪ್ಲೊಮಾ ನಂತರದ ವ್ಯಾಸಂಗದ ಕೋರ್ಸ್‌ಗಳು ಇವೆ. ಅಕಾಡೆಮಿಯು ತನ್ನದೇ ಆದ ಪತ್ರಿಕೆಗಳನ್ನು, ಜರ್ನಲ್‌ಗಳನ್ನು, ಪುಸ್ತಕಗಳನ್ನು, ಭೂಪಟಗಳನ್ನು ಪ್ರಕಟಿಸುತ್ತದೆ. ಸ್ಥೂಲವಾಗಿ, ಅಲ್ಲಿನ ಕೋರ್ಸ್‌ಗಳು ಶೇ. 70 ಭಾಗ ಪಠ್ಯಗಳನ್ನೂ, ಶೇ. 30 ಭಾಗ ಪ್ರಾಯೋಗಿಕ ಕೆಲಸಗಳನ್ನೂ ಒಳಗೊಂಡಿರುತ್ತದೆ.ಈ ಅಕಾಡೆಮಿಯಲ್ಲಿ 98 ಬೇರೆಬೇರೆ ಸಂಸ್ಥೆಗಳು ಇವೆ. ಈ ಅಕಾಡೆಮಿಯು ವಾರ್ಷಿಕ 92 ದಶಲಕ್ಷ ರೂಬೆಲ್‌ನ್ನು ಖರ್ಚುಮಾಡುತ್ತದೆ ಮತ್ತು ಅದರ ಆದಾಯವು 60 ಲಕ್ಷ ರೂಬೆಲ್‌ಗಳು. ನಮ್ಮ ಒಂದು ನೂರು ರೂಪಾಯಿಗಳು ಅವರ 210 ರೂಬೆಲ್‌ಗಳಿಗೆ ಸಮನಾಗಿರುತ್ತದೆ. ಗೋರ್ಕಿಯಲ್ಲಿರುವ ಸರಕಾರೀ ಕ್ಷೇತ್ರದಲ್ಲಿ 2,72,000 ಕೋಳಿಗಳು ಇವೆ. ಇಲ್ಲಿನ ಕೋಳಿಗಳು ವರ್ಷದಲ್ಲಿ 330 ದಿನ ಮೊಟ್ಟೆಯನ್ನು ಇಡುತ್ತವೆ.

ಉಕ್ರೈನ್ ರಷ್ಯಾದ ಖಣಜವಾಗಿದೆ. ಇಲ್ಲಿ 11,000 ಸಾಮೂಹಿಕ ಹಾಗೂ 900 ಸರಕಾರದ ಕೃಷಿಕ್ಷೇತ್ರಗಳು ಇವೆ.

ಈ ಎಲ್ಲಾ ಕೃಷಿಕ್ಷೇತ್ರಗಳಲ್ಲಿ ತೀವ್ರ ಹಾಗೂ ವ್ಯಾಪಕ ಸಂಶೋಧನಾ ಕೆಲಸವು ಸತತವಾಗಿ ನಡೆಯುತ್ತಿರುತ್ತದೆ. ಹೊಸ ತಂತ್ರವನ್ನು ಆವಿಷ್ಕರಿಸಿದ ಮೇಲೆ, ಹೊಸ ಜ್ಞಾನವನ್ನು ಕಂಡುಕೊಂಡ ಮೇಲೆ, ಅದನ್ನು ಎಲ್ಲಾ ಸಾಮೂಹಿಕ ಮತ್ತು ಸರಕಾರಿ ಕೃಷಿಕ್ಷೇತ್ರಕ್ಕೆ ತಿಳಿಸಲಾಗವುದು, ಅಲ್ಲದೆ, ವಿದೇಶಗಳೊಡನೆಯೂ ಅದನ್ನು ಹಂಚಿಕೊಳ್ಳಲಾಗುವುದು. ಈ ಅನ್ವೇಷಣೆಯನ್ನು ಎಲ್ಲಾ ಕಡೆಗಳಲ್ಲಿಯೂ ತಕ್ಷಣದಿಂದಲೇ ಜಾರಿಗೆ ದುತರಲಾಗುವುದು.

ಪ್ರತಿಯೊಂದು ಕ್ಷೇತ್ರವೂ ಸ್ವಾವಲಂಬಿಗಳಾಗಿರುತ್ತವೆ. ನಗರ ಪ್ರದೇಶದ ಕಾರ್ಮಿಕರಿಗಿಂತ, ಉದಾ. ಕೈಗಾರಿಕಾ ಕಾರ್ಮಿಕರಿಗಿಂತ, ಗ್ರಾಮೀಣ ಕಾರ್ಮಿಕರು ಹೆಚ್ಚು ಸಂತೋಷವಾಗಿರುತ್ತಾರೆ. ಅವರಿಗೆ ಎಲ್ಲಾ ಸೌಲಭ್ಯಗಳು ಇರುತ್ತವೆ. ಪ್ರತಿಯೊಬ್ಬ ರೈತನೂ ವಿದ್ಯಾವಂತನಾಗಿರುತ್ತಾನೆ ಮತ್ತು ಪ್ರತಿಯೊಂದು ಮಗುವಿಗೂ ಎಲ್ಲಾ ಹಂತಗಳಲ್ಲಿಯೂ ವಿದ್ಯಾಭ್ಯಾಸವು ಉಚಿತವಾಗಿರುತ್ತದೆ. ಶಿಶುವಿಹಾರದ ಮಟ್ಟದಲ್ಲಿಯೇ ಪ್ರತಿ ಮಗುವಿನ ಮೇಲೆ ಸರಕಾರವು ದಿನಕ್ಕೆ 4 ರೂಗಳನ್ನು ಖರ್ಚುಮಾಡುತ್ತದೆ.

ಸಾಮೂಹಿಕ ಕೃಷಿಕ್ಷೇತ್ರಗಳ ನಿರ್ವಹಣೆ ಸಂಪೂರ್ಣವಾಗಿ ಸ್ಥಳೀಯ ನಾಯಕತ್ವದ ಕೈಯಲ್ಲಿ ಇರುತ್ತದೆ. ಹೆಂಗಸರು ಅವುಗಳ ನಿರ್ವಹಣೆಯಲ್ಲಿ ಮಹತ್ವದ ಪಾತ್ರವನ್ನು ವಹಿಸುತ್ತಾರೆ. ಅಧ್ಯಕ್ಷರನ್ನು ಹಾಗೂ ನಿರ್ದೇಶಕರನ್ನು ಚುನಾಯಿಸಲಾಗುತ್ತದೆ. ಕೃಷಿಯಲ್ಲಿ ಅಸಾಮಾನ್ಯ ಪ್ರಗತಿಯನ್ನು ತೋರಿಸುವವರು ಸೋವಿಯತ್ ಕಾರ್ಮಿಕ ನಾಯಕರು ಎಂದು ಗೌರವಿಸಲ್ಪಡುತ್ತಾರೆ. ಕೃಷಿಗೆ ಬಹಳ ಆದ್ಯತೆಯನ್ನು ನೀಡುತ್ತಾರೆ ಮತ್ತು ಕೃಷಿಯು ಬಹುಮಟ್ಟಿಗೆ ಯಾಂತ್ರೀಕೃತವಾಗಿದೆ. ಅಲ್ಲಿ ಹೆಂಗಸರು ತಂಡಗಳ ನಾಯಕಿಯರಾಗಿ ಮತ್ತು ಕೃಷಿಕ್ಷೇತ್ರದ ನಿರ್ವಾಹಕಿಯರಾಗಿ ಕೆಲಸವನ್ನು ಮಾಡುತ್ತಾರೆ. ಅವರಲ್ಲಿ ಒಂದು ಗಾದೆಯಿದೆ, ಮರವನ್ನು ಅದರ ಹಣ್ಣಿನಿಂದ ತಿಳಿಯಬಹುದು ಮತ್ತು ಮನುಷ್ಯನನ್ನು ಅವನ ಕಾರ್ಯದಿಂದ ತಿಳಿಯಬಹುದು. ತಮ್ಮ ಸಾಮರ್ಥ್ಯವನ್ನು ತೋರಿಸಿದ ವ್ಯಕ್ತಿಗಳು ಮಾತ್ರ ವಿವಿಧ ಹುದ್ದೆಗಳಿಗೆ ಆಯ್ಕೆಯಾಗುತ್ತಾರೆ. ಕೃಷಿ ಕ್ಷೇತ್ರಗಳಲ್ಲಿ 500 ರಿಂದ 2000 ಕುಟುಂಬಗಳು ವಾಸಿಸುತ್ತಾ ಅಲ್ಲಿನ ಕೆಲಸಗಳನ್ನು ನಿರ್ವಹಿಸುತ್ತಾರೆ. ಅವರಿಗೆಲ್ಲ ಕನಿಷ್ಠವೇತನವನ್ನು ನಿಗದಿಗೊಳಿಸಲಾಗಿರುತ್ತದೆ. ವೇತನವನ್ನು ಅವರು ಹಣದ ರೂಪದಲ್ಲಿಯೂ, ಪದಾರ್ಥ ಯಾ ಸೇವೆಗಳ ರೂಪದಲ್ಲಿಯೂ ಪಡೆಯುತ್ತಾರೆ. ಅವರ ಉದ್ಯೋಗವು ಸುಭದ್ರವಾಗಿರುತ್ತದೆ ಮತ್ತು

ಸೇವೆಯಲ್ಲಿನ ಸಾತತ್ಯವನ್ನು ಅವರು ಪಡೆದಿರುತ್ತಾರೆ. ಅಗತ್ಯವಾದ ಶಿಕ್ಷಣಸೌಲಭ್ಯ, ವೈದ್ಯಕೀಯ ಸೌಲಭ್ಯ, ವಸತಿ ಸೌಲಭ್ಯ ಮೊದಲಾದವು ಅವರಿಗೆ ನೀಡಲಾಗಿರುತ್ತದೆ. ಪ್ರತಿ ಕಾರ್ಮಿಕನೂ ತನ್ನ ಸಂಬಳದ ಶೇ. 60ನ್ನು, ಗಂಡಸಾದರೆ 60 ವರ್ಷದ ನಂತರ, ಹಾಗೂ ಹೆಂಗಸಾದರೆ 55 ವರ್ಷಗಳ ನಂತರ, ವೃದ್ಧಾಪ್ಯವೇತನದ ರೂಪದಲ್ಲಿ ಪಡೆಯುತ್ತಾರೆ. ಸರಕಾರವು ಮಕ್ಕಳ ಯೋಗಕ್ಷೇಮವನ್ನು ವಿಶೇಷ ಕಾಳಜಿಯಿಂದ ನೋಡಿಕೊಳ್ಳುತ್ತಾರೆ. ಅವರಿಗೆ ಕೆಲಸಕ್ಕಾಗಿ ಮೊದಲಿನಿಂದಲೂ ತರಬೇತಿ ನೀಡಿರುತ್ತಾರೆ. ಕೃಷಿಯನ್ನು ಯಾಂತ್ರಿಕಗೊಳಿಸಿರುವುದರಿಂದ, ವೈಜ್ಞಾನಿಕ ಪದ್ಧತಿಗಳನ್ನು ಅನುಸರಿಸುವುದರಿಂದ, ನೀರಿನ ಹಾಗೂ ಗೊಬ್ಬರಗಳ ಉತ್ತಮ ಸರಬರಾಜಿನಿಂದ ಇಳುವರಿಯು ಬಹಳ ಉತ್ತಮವಾಗಿರುತ್ತದೆ. ಇಷ್ಟಾದರೂ ಅಲ್ಲಿ, ಸುಗ್ಗಿಯ ಸಮಯದಲ್ಲಿ ಕೃಷಿಕಾರ್ಮಿಕರ ಕೊರತೆ ಕಂಡುಬರುತ್ತದೆ. ರಷ್ಯಾದ ಜನಸಂಖ್ಯೆ ಕೇವಲ 21 ಕೋಟಿ. ಅವರು ಪ್ರಾಕೃತಿಕ ಸಂಪತ್ತನ್ನು ಸಂಪೂರ್ಣವಾಗಿ ಬಳಸಿಕೊಳ್ಳುತ್ತಾರೆ. ಅಲ್ಲಿ ಕಾರ್ಮಿಕರ ಕೊರತೆ ಇದೆ.

ಕೃಷಿಕ್ಷೇತ್ರದಲ್ಲಿ ಮಾತ್ರ ಕೆಲಸಮಾಡುವವನನ್ನು ರೈತನೆಂದು ಕರೆಯುತ್ತಾರೆ. ರೈತರಿಗೆ ಭೂಮಿಯ ಒಡೆತನದಲ್ಲಿ ಆಸಕ್ತಿಯಿಲ್ಲ, ಅವರ ಆಸಕ್ತಿಯೆಲ್ಲ ಉತ್ಪಾದನೆಯಲ್ಲಿ ಮಾತ್ರ. ಇಲ್ಲಿರುವಂತೆ ಕೃಷಿಯು ಕೃಷಿಮಾತ್ರವಾಗಿ ರಷ್ಯಾದಲ್ಲಿ ಉಳಿದಿಲ್ಲ. ಅಲ್ಲಿ ಕೃಷಿಯು ಒಂದು ಉದ್ದಿಮೆ. ಆದ್ದರಿಂದಲೇ ಅದು ವರ್ಷಪೂರ್ತಿ ಉದ್ಯೋಗವನ್ನು ನೀಡುತ್ತದೆ. ನಮ್ಮ ದೇಶದಲ್ಲಿ ಭೂಮಾಲಿಕನು ಉಳುಮೆಗಾರನಲ್ಲ ಮತ್ತು ಉಳುಮೆಗಾರನು ಭೂಮಾಲಿಕನಲ್ಲ. ಅಲ್ಲಿ ಮಾಲಿಕನೆಂದರೆ ಸರಕಾರ ಮತ್ತು ಉಳುವವನು ಉತ್ಪಾದಕ ಮತ್ತು ಪಾಲುದಾರ. ಕೃಷಿಯು ಅಲ್ಲಿ ಪೂರ್ಣಕಾಲದ ಉದ್ಯೋಗ ಮತ್ತು ಪ್ರತಿಕಾರ್ಮಿಕನೂ ಭೂಮಿಯಿಂದ ಅತ್ಯುತ್ತಮ ಬೆಳೆಯನ್ನು ಪಡೆಯಲು ತನ್ನೆಲ್ಲಾ ಪ್ರಯತ್ನವನ್ನೂ ಹಾಕುತ್ತಾನೆ. ರಷ್ಯಾದ ಕೃಷಿಕ್ಷೇತ್ರದಲ್ಲಿನ ಸಾಧನೆಗಳು ಅಪ್ರತಿಮವಾಗಿವೆ. ಈ ಕಾರಣಕ್ಕಾಗಿಯೇ, ಅಲ್ಲಿನ ರೈತರು ಬಹಳ ಪ್ರಮುಖವಾದ ಸ್ಥಾನವನ್ನು ಪಡೆದುಕೊಂಡಿರುತ್ತಾರೆ. ಅವನ ಹೃದಯದಲ್ಲಿ ಅವನ ಮತ್ತು ದೇಶದ ಹಿತವು ಮಿಡಿಯುತ್ತಿರುತ್ತದೆ. ಅವರ ತತ್ತ್ವವೆಂದರೆ, ದೇಶವು ಎಲ್ಲರಿಗಾಗಿ ಮತ್ತು ಎಲ್ಲರೂ ದೇಶಕ್ಕಾಗಿ.

ಸರಕಾರಿ ಹಾಗೂ ಸಾಮೂಹಿಕ ಕೃಷಿಯು ರಷ್ಯಾಕ್ಕೇ ವಿಶೇಷವಾದುದು ಮತ್ತು ಅದರ ಯಶಸ್ಸು ಅಲ್ಲಿ ಖಾಸಗಿ ಕ್ಷೇತ್ರಗಳಲ್ಲಿದುದರಿಂದ ಸಾಧ್ಯವಾಗಿದೆ. ಅಮೆರಿಕಾದ ಕೃಷಿಕ್ಷೇತ್ರಗಳ ವ್ಯವಸ್ಥೆ ಇದಕ್ಕೆ ತದ್ವಿರುದ್ಧವಾದದ್ದು. ಈ ಎರಡೂ

ತಮ್ಮವೇ ಆದ ರೀತಿಗಳಲ್ಲಿ ಯಶಸ್ಸನ್ನು ಸಾಧಿಸಿವೆ, ಕಾರಣ ಅವುಗಳಿಗೆ ಅನುಕೂಲವಾಗಿರುವ ರಾಜಕೀಯ ವಾತಾವರಣ, ಸಾಮಾಜಿಕ ಮತ್ತು ಆರ್ಥಿಕ ಪರಿಸರ. ಆದರೆ ನಮ್ಮ ವ್ಯವಸ್ಥೆ ಇವೆರಡೂ ವ್ಯವಸ್ಥೆಗಳಿಗಿಂತ ಭಿನ್ನವಾದದ್ದು. ರಷ್ಯಾದಲ್ಲಿ ಕೃಷಿಯ ಉದ್ಯಮವು ಸರಕಾರದ ಅಧೀನದಲ್ಲಿದ್ದರೆ ಮತ್ತು ಅಮೆರಿಕದಲ್ಲಿ ಖಾಸಗಿ ಕ್ಷೇತ್ರದವರಕೈಲ್ಲಿದ್ದರೆ, ನಮ್ಮಲ್ಲಿ ಈಗ ಸಹಕಾರಿ ಕ್ಷೇತ್ರದ ಉದಯವಾಗುತ್ತಿದೆ. ಇಲ್ಲಿ ಒತ್ತಾಯದ ಪ್ರಶ್ನೆ ಇರುವುದಿಲ್ಲ. ನಮ್ಮಲ್ಲಿ ಸ್ವತಂತ್ರ ಹಾಗೂ ಸ್ವಯಂಪ್ರೇರಣೆಯಿಂದ ವ್ಯಕ್ತಿಗಳು ಸಹಕಾರಿ ಕ್ಷೇತ್ರದಲ್ಲಿ ತೊಡಗಿಕೊಳ್ಳಬಹುದು ಮತ್ತು ಆಹಾರೋತ್ಪಾದನೆಯು ರಾಷ್ಟ್ರೀಯ ಅಗತ್ಯವನ್ನು ಅವಲಂಬಿಸಿರುತ್ತದೆ. ನಮ್ಮ ದೇಶಕ್ಕೆ ರಷ್ಯಾದ ಮಾದರಿಯಾಗಲೀ, ಅಮೆರಿಕದ ಮಾದರಿಯಾಗಲಿ ಸರಿಹೊಂದುವುದಿಲ್ಲ. ಹೆಚ್ಚುಕಡಿಮೆ ಎಲ್ಲಾ ಕೃಷ್ಯ ಭೂಮಿಯು ವ್ಯಕ್ತಿಗಳ ಒಡೆತನ್ನಲ್ಲಿ ಇದೆ. ವೈಯಕ್ತಿಕ ಒಡೆತನವನ್ನು ನಮ್ಮ ಸಂವಿಧಾನವು ಒಪ್ಪಿಕೊಂಡಿದೆ. ಹಲವು ಸಂದರ್ಭಗಳಲ್ಲಿ, ವ್ಯಕ್ತಿಗಳ ಒಡೆತನದಲ್ಲಿ ಇರುವ ಸಾಗುವಳಿ ಭೂಮಿಯು ವಿಶಾಲವಾದ ವ್ಯಾಪ್ತಿಯನ್ನು ಹೊಂದಿರುತ್ತದೆ, ಆದರೆ ಬಹುತೇಕ ಹಿಡುವಳಿಗಳು ಬಹಳ ಚಿಕ್ಕವು.

ವಿಶಾಲವಾದ ಹಿಡುವಳಿಯೂ, ಕುಟುಂಬದ ಸದಸ್ಯರ ನಡುವೆ ಆಸ್ತಿಯು ಭಾಗವಾಗುತ್ತಾ ಹೋದಂತೆ, ಚಿಕ್ಕದಾಗುತ್ತಾ ಹೋಗುತ್ತದೆ. ಒಮ್ಮೆ ಎಲ್ಲಾ ಸದಸ್ಯರ ಹಿತವನ್ನು ಕಾಪಾಡುತ್ತಿದ್ದ ಕೂಡುಕುಟುಂಬಗಳು ಇಂದು ಮಾಯವಾಗುತ್ತಿವೆ. ಕೂಡುಕುಟುಂಬಗಳು ಒಡೆದು ಹೋಗುತ್ತಿದ್ದಂತೆ ಅವುಗಳ ಒಡೆತನದಲ್ಲಿ ಇದ್ದ ಹಿಡುವಳಿಯೂ ಒಡೆದು ಹೋಗುತ್ತದೆ. ಪರಿಸ್ಥಿತಿ ಹೀಗಿರುವಾಗ, ಕೆಲವು ದಶಕಗಳ ನಂತರ ಹಿಡುವಳಿಗಳ ಗತಿ ಏನಾಗಬಹುದೆಂಬುದನ್ನು ಕಲ್ಪಿಸಿಕೊಳ್ಳಬಹುದು. ಈಗಾಗಲೇ ಒಡೆದ ಹಿಡುವಳಿಗಳ ವಿಸ್ತಾರ ಕೆಲವು ಗುಂಟೆಗಳಿಗೆ ಬಂದಿದೆ ಎಂದರೆ, ಮುಂದೆ ಅವು ಕೆಲವು ಚದರ ಗಜಗಳಿಗೆ ಇಳಿಯಬಹುದು. ಇನ್ನೊಂದು ವಿಷಯವನ್ನು ಇಲ್ಲಿ ಗಮನಿಸಬಹುದು. ಅದೆಂದರೆ, ಬೇರೆಬೇರೆ ಆದಾಯದ ಮೂಲಗಳನ್ನು ಹೊಂದಿರುವ ಭೂಮಾಲಿಕರು ತಮಗೆ ಅಗತ್ಯವಾದಷ್ಟು ಆಹಾರಧಾನ್ಯಗಳಿಗಾಗಿ ಕೃಷಿಯನ್ನು ಅವಲಂಬಿಸಿರುತ್ತಾರೆ, ಉಳಿದಂತೆ ಭೂಮಿಯನ್ನು ಪಾಳು ಬಿಡುತ್ತಾರೆ ಅಥವಾ ಹುಲ್ಲನ್ನು ಬೆಳೆಯಲು ಗುತ್ತಿಗೆ ಕೊಡುತ್ತಾರೆ, ಅಥವಾ ಕಾಡನ್ನು ಬೆಳೆಸಲು ಭೂಮಿಯನ್ನು ನೀಡುತ್ತಾರೆ. ಇದು ರಾಷ್ಟ್ರೀಯ ಸ್ವತ್ತನ್ನು ದಂಡಮಾಡುವ ರೀತಿ. ಒಂದು ಕಡೆ ಕೃಷಿ ಕಾರ್ಮಿಕರು

ಉದ್ಯೋಗಕ್ಕಾಗಿ ಪರದಾಡುತ್ತಿದ್ದರೆ, ಮತ್ತೊಂದು ಕಡೆ ಭೂಮಾಲಿಕನ ಔದಾಸೀನ್ಯದಿಂದ ಭೂಮಿಯು ಪಾಳಾಗುತ್ತಿದೆ. ಕೆಲಸ ಸಿಗದ ಕಾರ್ಮಿಕರ ನಡುವೆ ಕೆಲಸಕ್ಕಾಗಿ ಪೈಪೋಟಿ ನಡೆದು ಕಡಿಮೆ ವೇತನಕ್ಕೆ ಕೆಲಸಮಾಡುವಂತಹ ಪರಿಸ್ಥಿತಿ ಬರುತ್ತದೆ ಮತ್ತು ಇದರ ಪರಿಣಾಮವಾಗಿ ಬಡವರು ಇನ್ನೂ ಬಡವರಾಗುತ್ತಾ ಹೋಗುತ್ತಾರೆ.

ನಮ್ಮ ದೇಶದಲ್ಲಿ ಕೃಷಿಯು ಅವರವರ ಜೀವನ ನಿರ್ವಹಣೆಗಾಗಿ ಮಾತ್ರ ನಡೆಸುತ್ತಿರುವ ವೃತ್ತಿಯಾಗಿದೆ. ವಾಣಿಜ್ಯ ದೃಷ್ಟಿಯಿಂದ ಕೃಷಿಯನ್ನು ನೋಡುತ್ತಿಲ್ಲ. ಇಲ್ಲಿ ಪ್ರತಿಯೊಬ್ಬನ ವೈಯಕ್ತಿಕ ಸ್ವಾತಂತ್ರ್ಯದಿಂದಾಗಿ, ಹಿಂದಿನ ವರ್ಷ ಹೆಚ್ಚು ಹಣವನ್ನು ತಂದುಕೊಟ್ಟ ಬೆಳೆಯನ್ನೇ ಎಲ್ಲರೂ ಬೆಳೆಯಲು ಪ್ರಯತ್ನಿಸುತ್ತಾರೆ. ಎಲ್ಲರೂ ಒಟ್ಟಿಗೆ ಹೀಗೆ ಮಾಡುವುದರಿಂದ ಬೇಡಿಕೆಯಲ್ಲಿ ಹಠಾತ್ತಾಗಿ ಕುಸಿತ ಕಂಡುಬರುತ್ತದೆ. ಇದು ಬೆಲೆಗಳ ಕುಸಿತಕ್ಕೂ ಕಾರಣವಾಗುತ್ತದೆ. ರೈತನಿಗೆ ಆಗ ತನ್ನ ಬೆಳೆಯನ್ನು ಕಡಿಮೆ ಬೆಲೆಯಲ್ಲಿಯೇ ಮಾರುವುದೋ ಅಥವಾ ಸ್ವಲ್ಪ ಕೊಳೆತರೂ ಕೊಳೆಯಲಿ, ಅದನ್ನೂ ಹಾಗೆಯೇ ಇಟ್ಟುಕೊಳ್ಳಬೇಕೋ ಎಂಬ ಸಂದಿಗ್ಧ ಎದುರಾಗುತ್ತದೆ. ಆದರೆ ಸುರಕ್ಷಿತವಾಗಿ ಶೇಖರಿಸಿ ಇಡಲು ಸರಿಯಾದ ವ್ಯವಸ್ಥೆ ಇಲ್ಲದಿರುವುದರಿಂದ ತನ್ನ ಬೆಳೆಯನ್ನು ಆದಷ್ಟು ಶೀಘ್ರವಾಗಿ ವಿಲೇವಾರಿ ಮಾಡಲು ಆತ ಬಯಸುತ್ತಾನೆ. ರೈತನ ಬಳಿ ಉಗ್ರಾಣಗಳ ವ್ಯವಸ್ಥೆ ಇಲ್ಲದಿರುವಂತಹ ಕ್ಲಿಷ್ಟಕರ ಪರಿಸ್ಥಿತಿಯಲ್ಲಿ ಮಧ್ಯವರ್ತಿಗಳು ತಮ್ಮ ಪ್ರಭಾವವನ್ನು ಬೀರಿ ಸಂದರ್ಭದ ಅನುಕೂಲವನ್ನು ಪಡೆದುಕೊಳ್ಳುತ್ತಾರೆ. ಅವರ ನಿಯಮಗಳು ಬೆಳೆಗಾರನಿಗೆ ಮಾರಕವಾಗಿರುತ್ತವೆ. ತನ್ನ ಕುಟುಂಬದ ನಿರ್ವಹಣೆಗಾಗಿ ಮತ್ತು ಮುಂದಿನ ಬೆಳೆಗಳನ್ನು ಬೆಳೆಯುವುದಕ್ಕಾಗಿ ರೈತನಿಗೆ ಹಣದ ಆವಶ್ಯಕತೆ ಇರುವುದರಿಂದ ಮಧ್ಯವರ್ತಿಯು ಹೇಳಿದ ಬೆಲೆಗೆ ತನ್ನ ಧಾನ್ಯಗಳನ್ನು ಮಾರುತ್ತಾನೆ. ಮುಂದಿನ ಬೆಳೆಗೆ ಅವನು ಬೀಜಗಳನ್ನು ಕೊಳ್ಳಬೇಕು, ಗೊಬ್ಬರವನ್ನು ಖರೀದಿಸಬೇಕು, ಸಲಕರಣೆಗಳನ್ನು ತರಬೇಕು ಮತ್ತು ಭೂಮಿಯನ್ನು ಉತ್ತು, ಹದಮಾಡಬೇಕು. ಇವೆಲ್ಲಕ್ಕೂ ಹಣಬೇಕು ಎನ್ನುವ ಸ್ಥಿತಿಯಲ್ಲಿ ರೈತ ತನ್ನ ಧಾನ್ಯವನ್ನು ಮಾರಲು ನಿರ್ಧರಿಸುತ್ತಾನೆ. ಸಣ್ಣ ಹಿಡುವಳಿದಾರರಿಗೆ ಹೋಲಿಸಿದರೆ, ಭೂಮಾಲಿಕರ ಸ್ಥಿತಿ ಸ್ವಲ್ಪ ಉತ್ತಮವೆಂದು ಹೇಳಬಹುದು. ಸಣ್ಣ ಹಿಡುವಳಿದಾರನು, ಬೆಳೆಯು ಬರುವ ಮೊದಲೇ ಅಧಿಕ ಬಡ್ಡಿದರದಲ್ಲಿ ಸಾಲವನ್ನು ತೆಗೆದುಕೊಂಡಿರುತ್ತಾನೆ ಅಥವಾ ಅತಿ ಕಡಿಮೆ ಬೆಲೆಗೆ ಮುಂದೆ ಬರುವ ಬೆಳೆಯನ್ನು ಇಂದೇ ಮಾರಿರುತ್ತಾನೆ.

ಇಂತಹ ಸಂದರ್ಭದಲ್ಲಿ, ಮತ್ತು ನಾವು ಸತತವಾಗಿ ಅನುಸರಿಸಿಕೊಂಡು ಬಂದಿರುವ ರಾಜಕೀಯ ನೀತಿಗೆ ಅನುಗುಣವಾಗಿ, ನಾವು ಸಹಕಾರ ತತ್ತ್ವದ ಆಧಾರದ ಮೇಲೆ ಮಾಡುವ ಕೃಷಿಪದ್ಧತಿಯನ್ನು ರೂಪಿಸುತ್ತಿದ್ದೇವೆ. ಇದಕ್ಕೆ ಸಂಬಂಧಿಸಿದ ಅಂಶಗಳನ್ನು ಸಂಕ್ಷೇಪವಾಗಿ ಇಲ್ಲಿ ಹೇಳುತ್ತೇನೆ:

ದೇಶದ ಒಟ್ಟು ಜನಸಂಖ್ಯೆಯಲ್ಲಿ ಶೇ 82.66ರಷ್ಟು ಜನರು 5,50,000 ಹಳ್ಳಿಗಳಲ್ಲಿ ವಾಸವಾಗಿದ್ದಾರೆ ಮತ್ತು ಅವರಲ್ಲಿ ಎಲ್ಲರು ಹೆಚ್ಚುಕಡಿಮೆ ಕೃಷಿಯನ್ನೇ ಅವಲಂಬಿಸಿದ್ದಾರೆ. ಒಂದು ಅಂದಾಜಿನ ಪ್ರಕಾರ ಒಟ್ಟು ಶೇ 70ರಷ್ಟು ಮಂದಿ ಮಾಲಿಕರಾಗಿಯೂ ತಾವೇ ಬೇಸಾಯಮಾಡುವವರಾಗಿ, ಗುತ್ತಿಗೆಗೆ ಭೂಮಿಯನ್ನು ಪಡೆದು ಬೇಸಾಯಮಾಡುವವರಾಗಿ, ಕೃಷಿಕಾರ್ಮಿಕರಾಗಿ ಕೃಷಿಯನ್ನು ಅವಲಂಬಿಸಿದ್ದಾರೆ. ಕೃಷಿ, ಪಶುಸಂಗೋಪನೆ ಮತ್ತು ಇತರ ಕೃಷಿಸಂಬಂಧಿತ ಚಟುವಟಿಕೆಗಳು ವಿದೇಶಗಳ ಬೇಡಿಕೆಯ ಅರ್ಧದಷ್ಟನ್ನು ಪೂರೈಸಬಲ್ಲವಾಗಿದ್ದು, ಅವುಗಳು ರಾಷ್ಟ್ರದ ಒಟ್ಟು ಉತ್ಪಾದನೆಯಲ್ಲಿ ಬಹು ಮುಖ್ಯವಾದುವಾಗಿವೆ. ಕೃಷಿಯು ಜನತೆಗೆ ಆಹಾರವನ್ನೂ, ಕೈಗಾರಿಕೆಗಳಿಗೆ ಕಚ್ಚಾವಸ್ತುಗಳನ್ನೂ ಒದಗಿಸುತ್ತದೆ ಹಾಗೂ ವಿದೇಶೀ ವಿನಿಮಯವನ್ನು ಗಳಿಸುವ ಬೆಳೆಗಳನ್ನೂ ಬೆಳೆಯುತ್ತದೆ.

**ಉತ್ಪಾದನೆಯಲ್ಲಿನ ಕಡಿಮೆ ದರ:**

ಭಾರತವು ಇಡೀ ವಿಶ್ವದ ಜನಸಂಖ್ಯೆಯಲ್ಲಿ ಶೇ 14.2ರಷ್ಟು ಜನಸಂಖ್ಯೆಯನ್ನು ಹೊಂದಿದ್ದರೂ, ಅದರ ಆಹಾರೋತ್ಪಾದನೆ ವಿಶ್ವದ ಉತ್ಪಾದನೆಯ ಶೇ.9 ರಷ್ಟು ಮಾತ್ರ. ಆಂತರಿಕ ಬಳಕೆಗೆ ನಾವು ಆಹಾರವನ್ನು ಹೊರದೇಶಗಳಿಂದ ಆಮದುಮಾಡಿಕೊಳ್ಳಬೇಕಾಗಿದೆ. ಜನಸಂಖ್ಯೆಯ ವೃದ್ಧಿಯ ಪ್ರಮಾಣ ಶೇ 2ರಷ್ಟು ಇದ್ದು, 1966 ವೇಳೆಗೆ ನಮ್ಮ ಒಟ್ಟು ಜನಸಂಖ್ಯೆ 480 ದಶಲಕ್ಷವನ್ನು ಮುಟ್ಟುವ ಅಂದಾಜು ಇದೆ. ನಗರಪ್ರದೇಶಗಳಲ್ಲಿನ ಜನಸಂಖ್ಯೆ ಹೆಚ್ಚಾಗುತ್ತಾ ಹೋಗುತ್ತಿದೆ. ದೇಶವು ಬಹಳ ಕಷ್ಟಕರವಾದ ಸನ್ನಿವೇಶವನ್ನು ಎದುರಿಸುತ್ತಿದೆ.

**ಆಹಾರದ ಕೊರತೆ:**

ಆಹಾರದ ಕೊರತೆಯನ್ನು ನಿವಾರಿಸಲು, ಸ್ವಾತಂತ್ರ್ಯ ಬಂದಾಗಿನಿಂದ ಇಲ್ಲಿಯವರೆಗಿನ ಹನ್ನೆರಡು ವರ್ಷಗಳಲ್ಲಿ 1,500 ಕೋಟಿ ರೂ ಮೌಲ್ಯದ

ಆಹಾರಧಾನ್ಯಗಳನ್ನು ಆಮದು ಮಾಡಿಕೊಂಡಿದ್ದೇವೆ. ಆಮದಿನ ಮೇಲಿನ ಅವಲಂಬನೆಯನ್ನು ಮುಂದುವರಿಸಿಕೊಂಡು ಹೋಗುವುದು ತೀರ ಅನಪೇಕ್ಷಣೀಯ. ಕೃಷಿಯ ಉತ್ಪಾದನೆಯು, ಅದರಲ್ಲಿಯೂ ಆಹಾರಧಾನ್ಯಗಳ ಉತ್ಪಾದನೆಯನ್ನು ಅಧಿಕಗೊಳಿಸದೆ ಹೋದರೆ, ದೊಡ್ಡಪ್ರಮಾಣದ ಅಭಿವೃದ್ಧಿಯನ್ನು ಸಾಗಿಸುವುದು ಸಾಧ್ಯವಿಲ್ಲ. ಕೃಷಿಯ ಒಟ್ಟು ಉತ್ಪಾದನೆಯನ್ನು ಹೆಚ್ಚು ಮಾಡಬಾಕಾದರೆ, ನಾವು ಪ್ರತಿ ಎಕರೆಯ ಉತ್ಪಾದನೆಯ ಪ್ರಮಾಣವನ್ನು ಈಗಿನದಕ್ಕಿಂತ ಹಲವು ಪಟ್ಟು ಹೆಚ್ಚಿಸಬೇಕು. ಉತ್ಪಾದನೆಯಲ್ಲಿನ ಕಡಿಮೆ ಪ್ರಮಾಣದ ಕಾರಣವನ್ನು ಹಿಡುವಳಿಯ ಮೇಲೆ ಹೆಚ್ಚುತ್ತಿರುವ ಜನಗಳ ಒತ್ತಡದಿಂದ ಆದುದು ಎಂದು ಹೇಳಬಹುದು. ಇದರ ಪರಿಣಾಮವಾಗಿ ಹಿಡುವಳಿಗಳು ಚದುರಿ ಹೋಗಿ, ಆರ್ಥಿಕವಾಗಿ ನಷ್ಟವನ್ನು ತರುವಂತೆ ಆಗಿವೆ. ತನ್ನ ಅಲ್ಪ ಆದಾಯದಿಂದ ಸಾಮಾನ್ಯ ರೈತನು ಆಧುನಿಕ ಕೃಷಿ ಪದ್ಧತಿಯನ್ನು ಅನುಸರಿಸಲು, ರಸಗೊಬ್ಬರ, ಸುಧಾರಿತ ಬೀಜಗಳು, ಕೀಟನಾಶಕಗಳನ್ನು ಕೊಳ್ಳಲು ಸಾಲವನ್ನು ಸಕಾಲದಲ್ಲಿ ಮತ್ತು ಸಾಕಷ್ಟು ಪ್ರಮಾಣದಲ್ಲಿ ಪಡೆಯಲು ವಿಫಲನಾಗುತ್ತಾನೆ. ಈ ಎಲ್ಲಾ ತೊಂದರೆಗಳಿಗೂ ಮೂಲ ಸಣ್ಣ ಹಿಡುವಳಿಗಳು ಮತ್ತು ಚೂರುಚೂರಾದ ಕ್ಷೇತ್ರಗಳು. ಸಣ್ಣ ಹಿಡುವಳಿಗಳೇ ನಾವು ಕೃಷಿಯಲ್ಲಿ ಹಿಂದುಳಿದಿರುವುದಕ್ಕೆ ಕಾರಣವೆಂಬುದು ಸಾಮಾನ್ಯವಾದ ಅಭಿಪ್ರಾಯ. ಕೃಷಿಯ ಆರ್ಥಿಕತೆ ಮತ್ತು ಸಕ್ಷಮತೆಯು ಹೆಚ್ಚಾಗಬೇಕಾದರೆ, ಚಿಕ್ಕ-ಚಿಕ್ಕದಾಗಿ ಒಡೆದಿರುವ ಹಿಡುವಳಿಗಳು ಒಟ್ಟುಗೂಡಬೇಕು. ಕೃಷಿ ವ್ಯವಸ್ಥೆಯಲ್ಲಿನ ಕುಂದುಕೊರತೆಗಳೂ ಈಗಿನ ಪರಿಸ್ಥಿತಿಗೆ ತಮ್ಮ ಪಾಲನ್ನು ನೀಡಿವೆ.

**ಭೂಮಿಯ ಮೇಲಿನ ಒತ್ತಡ:**

ಭಾರತದಲ್ಲಿ ಕೃಷಿಭೂಮಿಯು ತಲಾ ಒಂದು ಎಕರೆಗಿಂತ ಕಡಿಮೆಯಿದೆ. ಇದರ ಪ್ರಮಾಣವು ಅಮೆರಿಕದಲ್ಲಿ 7.5 ಎಕರೆ, ರಷ್ಯಾದಲ್ಲಿ 4.5 ಎಕರೆ ಮತ್ತು ರಷ್ಯಾದ ಭಾಗಗಳನ್ನು ಹೊರತುಪಡಿಸಿದಂತೆ ಯೂರೋಪಿನಲ್ಲಿ 1.5 ಎಕರೆ ಇದೆ.

ಭೂಮಿಯ ಮೇಲೆ ಅವಲಂಬಿತವಾಗಿರುವವರಿಗೆ ಇಡೀ ದೇಶದಲ್ಲಿ ತಲಾ 1.6 ಎಕರೆ ಜಮೀನು ಇದ್ದು, ಇದರ ಪ್ರಮಾಣವು ಬೇರೆಬೇರೆ ಪ್ರದೇಶಗಳಲ್ಲಿ ಬೇರೆಬೇರೆಯಾಗಿರುವುದನ್ನು ಕೆಳಗೆ ನೀಡಿರುವ ಕೋಷ್ಟಕದಲ್ಲಿ ಕಾಣಬಹುದು:

| | | ಎಕರೆಗಳಲ್ಲಿ |
|---|---|---|
| ಉತ್ತರ ವಿಭಾಗ | .... | 1.01 |
| ಪೂರ್ವವಿಭಾಗ | .... | 1.25 |
| ದಕ್ಷಿಣ ವಿಭಾಗ | .... | 1.17 |
| ಪಶ್ಚಿಮ ವಿಭಾಗ | .... | 2.29 |
| ಮಧ್ಯ ವಿಭಾಗ | .... | 2.57 |
| ವಾಯವ್ಯ ವಿಭಾಗ | .... | 2.59 |

ಕೃಷಿ ಭೂಮಿಯ ಮೇಲಿನ ಒತ್ತಡವು ಹಿಡುವಳಿಯ ವಿತರಣೆಯಲ್ಲಿರುವ ವ್ಯತ್ಯಾಸದಿಂದ ಮತ್ತೂ ಗಂಭೀರವಾಗುತ್ತದೆ. ಈ ಕೆಳಗಿನ ಕೋಷ್ಟಕವು ಅದನ್ನು ವಿವರಿಸುತ್ತದೆ.

ಕುಟುಂಬಗಳು ಒಡೆತನವನ್ನು ಹೊಂದಿರುವ ಭೂಮಿಯ ವಿಸ್ತೀರ್ಣ (1953-54)

| ಕುಟುಂಬಗಳ ಸಂಖ್ಯೆ (ಶೇಕಡಾವಾರು) | ಕುಟುಂಬಗಳು ಹೊಂದಿರುವ ಭೂಮಿಯ ವಿಸ್ತಾರ | |
|---|---|---|
| | ಕೆಳ ಮಿತಿ | ಮೇಲು ಮಿತಿ |
| ಶೇ 5ರ ವರೆಗೆ | 0.[illegible] | 34.2 |
| 10 | 0.4 | 48.8 |
| 15 | 0.9 | 58.6 |
| 20 | 1.5 | 6[illegible].5 |
| 25 | 2.3 | 72.5 |
| 30 | 3.1 | 7[illegible].5 |
| 35 | 4.6 | 81.0 |
| 40 | 6.2 | 84.6 |
| 45 | 8.1 | 87.5 |
| 50 | 10.5 | 89.5 |

ಕೆಳ ಶೇ. 5ರಷ್ಟು ಕುಟುಂಬಗಳು ಬಹಳ ಕಡಿಮೆ, ಅಂದರೆ ಶೇ 0.2 ಅಥವಾ ಅದಕ್ಕಿಂತ ಕಡಿಮೆ ಭೂಮಿಯನ್ನು ಹೊಂದಿದ್ದರೆ ಮೇಲಿನ ಶೇ 5ರಷ್ಟು ಕುಟುಂಬಗಳು ಶೇ 34 ರಷ್ಟು ಭೂಮಿಯನ್ನು ಹೊಂದಿದ್ದಾರೆ. ಹಾಗೆಯೇ, ಕೆಳಗಿನ ಅರ್ಧಭಾಗ ಕುಟುಂಬಗಳು ಹೊಂದಿರುವ ಭೂಮಿ ಶೇ 10ರಷ್ಟಾದರೆ, ಮೇಲಿನ ಅರ್ಧದಷ್ಟು ಕುಟುಂಬಗಳು ಶೇ 90ರಷ್ಟು ಭೂಮಿಯನ್ನು ಹೊಂದಿವೆ. ಮೇಲುಮೇಲಕ್ಕೆ ಹೋದಂತೆಲ್ಲಾ ವ್ಯತ್ಯಾಸದ ಪ್ರಮಾಣವು ಹೆಚ್ಚುತ್ತಾ ಹೋಗುತ್ತದೆ. ಉದಾ. ಮೇಲಿನ ಶೇ. 1ರಷ್ಟು ಕುಟುಂಬಗಳು ಶೇ. 13ರಷ್ಟು ಭೂಮಿಯನ್ನು ಹೊಂದಿವೆ. ಶೇ 50ರಷ್ಟು ಕುಟುಂಬಗಳು ಸರಾಸರಿ 3.3 ಎಕರೆಗಿಂತಲೂ ಕಡಿಮೆ ಜಮೀನನ್ನು ಹೊಂದಿವೆ ಎಂಬ ಅಂದಾಜಿದೆ.

1950–51ರಲ್ಲಿ ನಡೆಸಿದ ಕೃಷಿ ಕಾರ್ಮಿಕರ ಪರಿಶೀಲನೆಯಲ್ಲಿ ಸುಮಾರು ಶೇ. 30ರಷ್ಟು ಗ್ರಾಮೀಣ ಕುಟುಂಬಗಳನ್ನು ಕೃಷಿ ಕಾರ್ಮಿಕರು ಎಂದು ಪರಿಗಣಿಸಲಾಗಿದೆ. ಇವರಲ್ಲಿ ಅರ್ಧದಷ್ಟು ಮಂದಿಗೆ ಸ್ವಲ್ಪವೂ ಭೂಮಿಯಿರಲಿಲ್ಲ, ಉಳಿದವರಿಗೆ ಅಲ್ಪಸ್ವಲ್ಪ ಜಮೀನು ಇತ್ತು. ಈ ಶೇ. 30ರಷ್ಟು ಜನರನ್ನು ಬಿಟ್ಟು, ಉಳಿದವರಲ್ಲಿ ಹಲವು ಕುಟುಂಬಗಳು ಕೃಷಿಕರೆಂದು ಪರಿಗಣಿಸಲ್ಪಟ್ಟಿದ್ದರೂ, ಕೃಷಿಕಾರ್ಮಿಕರಂತೆ ಅವರೂ ಉದ್ಯೋಗವನ್ನು ಬೇರೆಬೇರೆ ಋತುಗಳಲ್ಲಿ ಬಯಸುತ್ತಾರೆಂಬುದು ವ್ಯಕ್ತಪಟ್ಟಿತ್ತು. ಜನಸಂಖ್ಯೆಯು ಹೆಚ್ಚಿದಂತೆಲ್ಲಾ, ಹಿಡುವಳಿಗಳು ಒಡೆದು ಹೋಗುತ್ತಾ, ಕೃಷಿ ಕಾರ್ಮಿಕರ ಸಂಖ್ಯೆ ಹೆಚ್ಚುತ್ತಾ ಹೋಗುತ್ತದೆ. ಇದರ ಪರಿಣಾಮವಾಗಿ, ಹಳ್ಳಿಗಳಲ್ಲಿನ ಸಮಾಜವು ಹಿಂದೆ ತನ್ನಲ್ಲಿ ಇದ್ದ ಪರಸ್ಪರ ಸುಸಂಬದ್ಧತೆಯನ್ನು ಈಗ ಕಳೆದುಕೊಂಡಿದೆ. ಈಗ ಪರಸ್ಪರರು ಕೇವಲ ನೆರೆಹೊರೆಯವರಂತೆ ಇದ್ದು ತಮ್ಮ ತಮ್ಮ ಹಿತಾಸಕ್ತಿಗಳಿಗೆ ಅನುಸಾರವಾಗಿ ಕೃಷಿಯನ್ನು ಮುಂದುವರಿಸಿಕೊಂಡು ಹೋಗುತ್ತಿದ್ದಾರೆ. ಹಿಂದೆ ದುಡಿಮೆಯ ವಿಂಗಡಣೆ ಮತ್ತು ಸುಭದ್ರತೆಯನ್ನು ಒದಗಿಸುತ್ತಿದ್ದ ಕೂಡುಕುಟುಂಬಗಳು ಒಡೆದು ಚಿಕ್ಕ ಚಿಕ್ಕವಾಗುತ್ತಿವೆ. ಹಿಂದೆ ದುಡಿಮೆಯ ವಿಂಗಡಣೆಗೆ ಸಹಾಯ ಮಾಡುತ್ತಿದ್ದ ಜಾತಿ ಪದ್ಧತಿಯು ಈಗ ಒಂದು ವೃತ್ತಿಯನ್ನು ಬಿಟ್ಟು ಮತ್ತೊಂದನ್ನು ಅನುಸರಿಸುವ ಪ್ರಯತ್ನಕ್ಕೆ ತಡೆಯನ್ನು ಒಡ್ಡುತ್ತಿವೆ. ಹಳ್ಳಿಗಳಲ್ಲಿದ್ದ ಕಲೆ ಮತ್ತು ಕುಶಲಕಲೆಗಳು ಬತ್ತಿಹೋಗಿರುವುದರಿಂದ, ವೈಯಕ್ತಿಕ ಅಭಿವ್ಯಕ್ತಿಗೆ ಸಂಕೋಲೆಯನ್ನು ತೊಡಿಸಿದ ಹಾಗಾಗಿರುವುದಷ್ಟೇ ಅಲ್ಲದೆ, ಅವರ ಆದಾಯವೂ ಇಂಗಿಹೋಗಿದೆ. ಸಣ್ಣ

ಹಿಡುವಳಿಗಳ ಆಂತರ್ಯದಲ್ಲಿ ಹುದುಗಿರುವ ಅನನುಕೂಲತೆ, ಸಾಲ ಸೌಲಭ್ಯವು ಮತ್ತು ಉತ್ಪಾದನೆಯ ಸಲಕರಣೆಗಳು ದೊರಕದಿರುವುದು, ನ್ಯಾಯವಾದ ಬೆಲೆಗಳಲ್ಲಿ ಇತರ ಸೌಲಭ್ಯಗಳು ಸಿಗದಿರುವುದು, ಆಧುನಿಕ ಕೃಷಿ ಪದ್ಧತಿಗಳ ಬಗ್ಗೆ ಮಾಹಿತಿಯಿಲ್ಲದಿರುವುದು – ಇವು ಸಣ್ಣ ರೈತರಿಗೆ ಅವರು ತಮ್ಮ ಜಮೀನಿನಿಂದ ಹೆಚ್ಚು ಉತ್ಪಾದನೆಯನ್ನು ಮಾಡಲು ಸಾಧ್ಯವಾಗದ ಹಾಗೆ ಮಾಡುತ್ತವೆ.

ಈ ಸಂದರ್ಭದಲ್ಲಿ ಈ ಹಿಂದೆ ಇದ್ದ ಕೃಷಿಯ ಪರಿಸ್ಥಿತಿ ಹಾಗೂ ಈಗ ಇರುವ ಪರಿಸ್ಥಿತಿಗಳ ಬಗ್ಗೆ ನಾನು ನಿಮ್ಮ ಗಮನವನ್ನು ಸೆಳೆಯುತ್ತೇನೆ. ನಿಮಗೆಲ್ಲ ತಿಳಿದಿರುವ ಹಾಗೆ ಕೃಷಿಯನ್ನು ಪರಸ್ಪರರ ಸಹಾಯದಿಂದ ನಡೆಸಬೇಕು. ಎತ್ತುಗಳನ್ನು ಹೊಂದಿರುವವರು ಭೂಮಿಯನ್ನು ಹೊಂದಿರುವವರಿಗೆ ಸಹಾಯವನ್ನು ಮಾಡಬೇಕು. ಕುಟುಂಬದಲ್ಲಿ ಹೆಚ್ಚು ಸದಸ್ಯರಿರುವವರು, ಕೃಷಿ ಕಾರ್ಮಿಕರಾಗಿ ಹೊರಗೆ ದುಡಿಯಬೇಕು ಮತ್ತು ಎತ್ತುಗಳನ್ನು ಹೊಂದಿರುವವರ ಸಹಾಯವನ್ನು ಪಡೆಯಬೇಕು. ಈ ರೀತಿಯ ಪರಸ್ಪರ ಸಹಾಯವು ನಮ್ಮ ಕೃಷಿಯ ಆರ್ಥಿಕತೆಯಲ್ಲಿ ಹಾಸುಹೊಕ್ಕಾಗಿದೆ. ಹೀಗಿರುವುದರಿಂದ ಸಮೂಹಕೃಷಿಯು ಭಾರತಕ್ಕೆ ಹೊಸದೇನೂ ಅಲ್ಲ.

ಸಾಮೂಹಿಕ ವ್ಯವಸಾಯದ ಮುಖ್ಯ ಉದ್ದೇಶವೆಂದರೆ, ಅಂತಹ ಸಾಮೂಜಿಕ ವ್ಯವಸಾಯದ ಸಂಘಟನೆಯನ್ನು ಒಂದು ಸಂಸ್ಥೆಯನ್ನಾಗಿ ಮಾಡಿ, ಅದರ ಮೂಲಕ ಕೃಷಿಯ ಅಭಿವೃದ್ಧಿಗೆ ಅಗತ್ಯವಾದ ಸಾಲ ಸೌಲಭ್ಯಗಳನ್ನು ಪಡೆಯುವುದು ಮತ್ತು ವೈಜ್ಞಾನಿಕ ಹಾಗೂ ತಾಂತ್ರಿಕ ಕ್ಷೇತ್ರಗಳಲ್ಲಿ ಆಗಿರುವ ಪ್ರಗತಿಯ ಲಾಭವನ್ನು ವ್ಯವಸಾಯದಲ್ಲಿ ವಿನಿಯೋಗಿಸಿಕೊಂಡು ಉತ್ತಮ ಉತ್ಪಾದನೆಯನ್ನು ಮಾಡುವುದು. ವೈಯಕ್ತಿಕವಾಗಿ ಕೃಷಿಯನ್ನು ಮಾಡುವವರಿಗೆ ಮುಖ್ಯವಾಗಿ ಇರುವ ತೊಂದರೆಯೆಂದರೆ ಅವರು ತಮ್ಮ ಉತ್ಪಾದನೆಯನ್ನು ಹೆಚ್ಚಿಸಿಕೊಳ್ಳಲು ತೆಗೆದುಕೊಳ್ಳಬೇಕಾದ ಕ್ರಮಗಳಿಗೆ ಅಗತ್ಯವಾದ ಸಾಲಗಳನ್ನು ಪಡೆಯುವ ಸ್ಥಿತಿಯಲ್ಲಿರುವುದಿಲ್ಲ. ಅವರ ಹಿಡುವಳಿಯ ವಿಸ್ತೀರ್ಣ ಚಿಕ್ಕದಾಗಿರುವುದರಿಂದ ಅವರು ಆಧುನಿಕ ಪದ್ಧತಿಗಳನ್ನು ಅನುಸರಿಸುವುದೂ ಸಾಧ್ಯವಾಗುವುದಿಲ್ಲ. ಹೀಗಾಗಿ, ಅವರು ತಮ್ಮ ಜಮೀನುಗಳನ್ನು ಒಟ್ಟುಗೂಡಿಸಿ ಸಾಮೂಹಿಕ ಕೃಷಿಯನ್ನು ಮಾಡದೆ ಹೋದರೆ, ಅವರಿಗೆ ಉತ್ತಮ ಉತ್ಪಾದನೆಗೆ ಬೇಕಾದ ಇತರ ಸೌಲಭ್ಯಗಳನ್ನು

ಪಡೆಯುವುದು ಕನಸಿನ ಮಾತೇ ಸರಿ. ಈ ಸಮಸ್ಯೆಗಳನ್ನೆಲ್ಲಾ ಯೋಚಿಸಿ ಕಂಡುಕೊಂಡ ಒಂದೇ ಪರಿಹಾರವೆಂದರೆ ಸಹಕಾರಿ ಕೃಷಿ ಅಥವಾ ಸಾಮೂಹಿಕ ಕೃಷಿ. ಈ ವಿಧಾನವನ್ನು ಟೀಕಿಸುತ್ತಿರುವವರು ಬೇರೆ ಯಾವ ಪರ್ಯಾಯ ವಿಧಾನಗಳನ್ನೂ ನಮಗೆ ನೀಡಿಲ್ಲ. ಈ ಪದ್ಧತಿಯಲ್ಲಿ ಭಾಗವಹಿಸುವುದನ್ನು ಕಡ್ಡಾಯವೆಂದು ಎಲ್ಲಿಯೂ ಹೇಳಿಲ್ಲ. ವಾಸ್ತವವಾಗಿ, ಕಡ್ಡಾಯಮಾಡುವುದು ಸಹಕಾರದ ತತ್ತ್ವಕ್ಕೆ ವಿರುದ್ಧವಾದದ್ದು. ಸಹಕಾರದ ಚಳವಳಿಯು ಒತ್ತಾಯದಿಂದ ಎಂದೂ ಯಶಸ್ವಿಯಾಗುವುದಿಲ್ಲ. ಜಂಟಿ ಕೃಷಿಯ ಸಂಸ್ಥೆಗಳಲ್ಲಿ ಒತ್ತಾಯದ ಪ್ರಶ್ನೆಯು ಇರುವುದಿಲ್ಲವೆಂಬುದನ್ನು ಈ ಚಳವಳಿಯ ಪ್ರವರ್ತಕರು ಸಾಕಷ್ಟು ಸಲ ಸ್ಪಷ್ಟಗೊಳಿಸಿದ್ದಾರೆ. ಈ ಸಹಕಾರಿ ಸಂಸ್ಥೆಗಳ ಗುರಿಯನ್ನು ಸಾಧಿಸುವುದಕ್ಕೋಸ್ಕರ ಯಾರನ್ನೂ ಕಡ್ಡಾಯಗೊಳಿಸಿ ಸದಸ್ಯರನ್ನಾಗಿಸಿಕೊಳ್ಳಬಾರದೆಂದು ಈ ತೊಡಕಿನ ಸಮಸ್ಯೆಯನ್ನು ಅಧ್ಯಯನ ಮಾಡಿದ ನಿಜಲಿಂಗಪ್ಪ ಸಮಿತಿಯು ಇತ್ತೀಚಿನ ತನ್ನ ಸಭೆಯಲ್ಲಿ ಹೇಳಿದೆ.

**ಸಹಕಾರ ಕೃಷಿಯ ಲಾಭಗಳು :**

ನಾನು ನನಗೆ ತಿಳಿದ ಮಟ್ಟಿಗೆ, ಭಾರದತಲ್ಲಿನ ಕೃಷಿಯ ಪರಿಸ್ಥಿತಿ ಹಾಗೂ ಸಾಮೂಹಿಕ ಕೃಷಿಯ ಸಂಘಟನೆಯ ಆವಶ್ಯಕತೆಯ ಬಗ್ಗೆ ತಿಳಿಸಿದ್ದೇನೆ. ಈಗ ಸಾಮೂಹಿಕ ಕೃಷಿ ಪದ್ಧತಿಯು ಆರ್ಥಿಕವಾಗಿ ಹೇಗೆ ಅನುಕೂಲಕರವಾಗಿದೆಯೆಂಬುದನ್ನು ನೋಡೋಣ. ಅದರ ಲಾಭದಾಯಕ ಅಂಶಗಳು ಹೀಗಿವೆ:

1. ಸಹಕಾರಿ ಪ್ರಯತ್ನದಿಂದ ನಮ್ಮ ಬಳಿ ಇರುವ ಪ್ರಾಣಿ ಹಾಗೂ ಮಾನವ ಸಂಪನ್ಮೂಲವನ್ನು ವೈಜ್ಞಾನಿಕವಾಗಿ ಬಳಸಿಕೊಳ್ಳಬಹುದು.
2. ದೊರೆಯುವ ಎಲ್ಲಾ ಸಂಪನ್ಮೂಲವನ್ನು ಕ್ರೋಢೀಕರಿಸಿ ಬಂಡವಾಳವನ್ನಾಗಿ ಪರಿವರ್ತಿಸಿ ಕೃಷಿಯಲ್ಲಿ ಪ್ರಗತಿಯನ್ನು ಸಾಧಿಸಲು – ವಿಶೇಷವಾಗಿ ನೀರಾವರಿ ಹಾಗೂ ಸುಧಾರಿತ ವ್ಯವಸಾಯೋಪಕರಣಗಳ ಉಪಯೋಗವನ್ನು – ಉಪಯೋಗಿಸಿಕೊಳ್ಳಬಹುದು.
3. ವೈಜ್ಞಾನಿಕ ವಿಧಾನಗಳನ್ನು – ಉದಾ. ಜಪಾನಿ ಪದ್ಧತಿಯಲ್ಲಿ ಬತ್ತವನ್ನು ಬೆಳೆಯುವುದು, ಗೊಬ್ಬರಗಳನ್ನು ಉಪಯೋಗಿಸುವುದು, ಬೀಜದ ಉತ್ತಮ

ತಳಿಗಳನ್ನು ಉಪಯೋಗಿಸುವುದು, ಹಸಿರು ಮತ್ತು ಕಾಂಪೋಸ್ಟ್ ಗೊಬ್ಬರಗಳನ್ನು ಹಾಗೂ ಕೀಟನಾಶಕಗಳನ್ನು ಬಳಸುವುದು,ಇತ್ಯಾದಿ – ಜಾರಿಗೆ ತರಬಹುದು.

4. ಸಹಕಾರಿ ಮಾರುಕಟ್ಟೆಯ ಪದ್ಧತಿಯನ್ನು ಅಳವಡಿಸಿಕೊಂಡು ಮಧ್ಯವರ್ತಿಗಳ ಪ್ರವೇಶವನ್ನು ತಡೆಗಟ್ಟುವುದು.
5. ಸಹಕಾರಿ ಯೋಜನೆಯ ಪದ್ಧತಿಯಿಂದಾಗಿ ಸ್ಥಳೀಯರಲ್ಲಿ ನಾಯಕರು ಹುಟ್ಟಿಬರಲು ಅವಕಾಶವಾಗುತ್ತದೆ.
6. ಈ ಮೇಲ್ಕಟ್ಟದ ಆರ್ಥಿಕ ಸಂಸ್ಥೆಯು ಹಳ್ಳಿಯಲ್ಲಿರುವ ವಿದ್ಯಾವಂತ ಯುವಕರನ್ನು ನೇಮಿಸಿಕೊಂಡರೆ ಅವರು ನಗರಗಳಿಗೆ ಉದ್ಯೋಗವನ್ನು ಹುಡುಕಿಕೊಂಡು ಹೋಗುವುದನ್ನು ತಪ್ಪಿಸಬಹುದು.
7. ಇಲ್ಲಿಯವರೆಗೆ ಸಾಲಸೌಲಭ್ಯಕ್ಕೆ ಅರ್ಹರಲ್ಲವೆಂದು ಪರಿಗಣಿಸಲ್ಪಟ್ಟಿದ್ದ ಸಣ್ಣ ಮತ್ತು ಬಡ ರೈತರು ಈಗ ಸಂಸ್ಥೆಯ ಮೂಲಕ ಅದನ್ನು ಹಾಗೂ ಇತರ ಸೌಲಭ್ಯಗಳನ್ನು ಪಡೆಯಬಹುದು.
8. ಸಾಮೂಹಿಕ ಕೃಷಿಯ ವ್ಯವಸ್ಥೆಯಿಂದಾಗಿ, ದೊರೆಯುವ ಸಂಪನ್ಮೂಲಗಳ ಸಹಾಯದಿಂದಲೇ, ಇತರ ವಿವಿಧ ಚಟುವಟಿಕೆಗಳನ್ನು, ಉದಾ. ಗ್ರಾಮ ಕೈಗಾರಿಕೆಗಳನ್ನು, ಸಂಸ್ಕರಣಾ ಘಟಕಗಳನ್ನು, ಕೃಷಿಗೆ ಪೂರಕವಾಗಿ ಪ್ರಾರಂಭಿಸಬಹುದು.
9. ವೈಯುಕ್ತಿಕವಾಗಿ ಕೃಷಿ ಮಾಡುವ ಹೆಚ್ಚಿನ ಸಂಖ್ಯೆಯ ರೈತರಿಗೆ ನೀಡಬಹುದಾದುದಕ್ಕಿಂತ ಹೆಚ್ಚಿನ ಸಹಾಯವನ್ನು ಸರಕಾರವು ಶಿಸ್ತುಬದ್ಧ ರೀತಿಯಲ್ಲಿ ಹಾಗೂ ಪರಿಣಾಮಕಾರಿ ವಿಧಾನದಲ್ಲಿ ಸಹಕಾರಿ ಸಂಸ್ಥೆಗಳಿಗೆ ನೀಡಬಹುದು.
10. ಕೃಷಿಯ ವಿಷಯವಾಗಿ ಸಂಗ್ರಹ ಮಾಡುವ ಅಂಕಿಅಂಶಗಳು ವಿಶ್ವಸನೀಯವಾಗಿರುತ್ತವೆ ಮತ್ತು ವೈಜ್ಞಾನಿಕವಾಗಿರುತ್ತವೆ.
11. ಸಹಕಾರ ಸಂಘಗಳ ಮೂಲಕ ಕೃಷಿಯ ಚಟುವಟಿಕೆಗಳನ್ನು ನಡೆಸಿದರೆ, ಹಳ್ಳಿಯ ಜನಗಳಿಗೆ ಸಾಕಷ್ಟು ಸಮಯವು ಉಳಿತಾಯವಾಗಿ, ಅವರು ಸಾಮಾಜಿಕ ಮತ್ತು ಸಾಂಸ್ಕೃತಿಕ ಚಟುವಟಿಕೆಗಳಲ್ಲಿಯೂ ತಮ್ಮನ್ನು ತಾವು ತೊಡಗಿಸಿಕೊಳ್ಳಬಹುದು.

ಆದ್ದರಿಂದ ಸಾಮೂಹಿಕ ಕೃಷಿಯ ತತ್ತ್ವಗಳನ್ನು ಮತ್ತು ಈ ಪದ್ಧತಿಯಿಂದ ಆಗುವ ಲಾಭಗಳನ್ನುಎಲ್ಲಾ ಕಡೆಗಳಲ್ಲಿಯೂ ಪ್ರಚಾರಮಾಡಿ, ರೈತರ ಮನಸ್ಸಿನಮೇಲೆ ಅಚ್ಚೊತ್ತುವಂತೆ ವಿವರಿಸಿ ಅವರ ಮನಸ್ಸಿನಲ್ಲಿ ಇರಬಹುದಾದ ಪೂರ್ವಗ್ರಹಗಳನ್ನು ನಿವಾರಿಸುವುದು ನಿಮ್ಮೆಲ್ಲರ ಕರ್ತವ್ಯದ ಭಾಗವಾಗಿರುತ್ತದೆ ಎಂಬುದನ್ನು ಮನಸ್ಸಿನಲ್ಲಿ ಇಟ್ಟುಕೊಳ್ಳಿ.

ಎನ್. ರಾಚಯ್ಯನವರು ಯಾವುದೇ ಅಕ್ಷರದ ಸೋಂಕಿಲ್ಲದ ಮನೆತನದಿಂದ ಬಂದರೂ ಕೂಡ ಅವರಿಗಿರುವ ವೈಚಾರಿಕ ಜ್ಞಾನ ಅಸದಳವಾದುದು. ವಿಧಾನಸಭೆಗಳಿಗಷ್ಟೇ ಸೀಮಿತವಾದ ರಾಜಕಾರಣಿಯಾಗದೆ, ಜನರ ಮನಗಳಿಗೆ ತಲುಪುವ ನಿಟ್ಟಿನಲ್ಲಿ ಮಾಡಿದ ಸಾರ್ವಜನಿಕ ಸಮಾರಂಭದ ಭಾಷಣಗಳು ಸತ್ವಭರಿತವಾದವು. ಆಗತಾನೆ ಸ್ವಾತಂತ್ರ್ಯ ಪಡೆದು ನಾಡನ್ನು ಕಟ್ಟಿಕೊಳ್ಳಲು ಪ್ರಯತ್ನಿಸುತ್ತಿದ್ದ ದೇಶದಲ್ಲಿ ಕೃಷಿಯನ್ನು ಮೂಲವೃತ್ತಿಯಾಗಿರುವವರ ಬಗೆಗೆ ಕಾಳಜಿ ಹೊಂದಿ ಅನುಕೂಲ ಕಲ್ಪಿಸಿದರು. ಅಸಮಾನತೆಯ ಗೂಡಾಗಿದ್ದ ಸಮಾಜವನ್ನು ತಿದ್ದಲು ಶ್ರಮಿಸಿದರು. ವಿದ್ಯಾರ್ಥಿಗಳು, ಜನಸಾಮಾನ್ಯರು, ಎಲ್ಲರನ್ನೂ ತಲುಪಲು ಸಾಧ್ಯವಾದುದು ಅವರಿಗಿದ್ದ ವಿಶಾಲ ಮನಸ್ಥಿತಿಯ ದ್ಯೋತಕವೇ ಆಗಿದೆ. ಇಲ್ಲಿನ ಭಾಷಣಗಳು ಅವರ ಚಿಂತನೆಯ ದಾರಿದೀಪಗಳು.

## ವಿಭಾಗ - ನಾಲ್ಕು

## ಎನ್. ರಾಚಯ್ಯನವರ ಭವಿಷ್ಯತ್ತಿನ ಚಿಂತನೆಗಳು

- ಸಮುದಾಯ ಕೇಂದ್ರಿತ ಪ್ರಜ್ಞ
- ಶಿಕ್ಷಣ ಕೇಂದ್ರಿತ ಪ್ರಜ್ಞೆ
- ಮಹಿಳೆ ಮತ್ತು ಮಕ್ಕಳ ಕೇಂದ್ರಿತ ಪ್ರಜ್ಞೆ
- ಹರಿಜನ ಮತ್ತು ಗಿರಿಜನ ಕೇಂದ್ರಿತ ಪ್ರಜ್ಞೆ
- ಕೃಷಿ ಮತ್ತು ಕೈಗಾರಿಕಾ ಕೇಂದ್ರಿತ ಪ್ರಜ್ಞೆ

# ಎನ್. ರಾಚಯ್ಯನವರ ಭವಿಷ್ಯತ್ತಿನ ಚಿಂತನೆಗಳು

ಒಬ್ಬ ವ್ಯಕ್ತಿ ಶಾಶ್ವತ ಎನಿಸುವುದು, ಜೀವಂತ ಎನಿಸುವುದು, ಸಾವಿನ ನಂತರವೂ ಜನಮಾನಸದಲ್ಲಿ ಧನಾತ್ಮಕವಾಗಿ ನೆಲೆ ನಿಂತಾಗ. ಹಾಗಾಗಿಯ ಹೇಳುವುದು "ಶರಣರ ಬಾಳನ್ನು ಮರಣದಲ್ಲಿ ಕಾಣು" ಎಂದು. ಅಂತಹ ವ್ಯಕ್ತಿಗಳು ಬದುಕಿದ್ದಾಗ ಕಂಡ ಸಮಷ್ಟಿಹಿತದ ಕನಸುಗಳು ಭವಿಷ್ಯತ್ತಿನಲ್ಲಿ ನಿಜವಾಗುತ್ತವೆ. ಎನ್. ರಾಚಯ್ಯನವರ ವರ್ತಮಾನವು ದಲಿತರ, ಬಡವರ, ಮಹಿಳೆಯರ ಬಗ್ಗೆ ಮಿಡಿದ ಹೃದಯದ ಕಂಬನಿಯನ್ನು ಒರೆಸುವ ಕೈಗಾಗಿ ಇಂದಿನ ವರ್ತಮಾನವು ಕಾಯುತ್ತಲೇ ಇರುವುದು 67 ವರ್ಷಗಳ ಸ್ವಾತಂತ್ರ್ಯ ಅನುಭವಿಸಿದ ಭಾರತದ ವಸ್ತುಸ್ಥಿತಿ. ಭವಿಷ್ಯತ್ತಿನ ಬಗ್ಗೆ ಅದಮ್ಯ ಭರವಸೆ, ಆಕಾಂಕ್ಷೆ ಹೊಂದಿದ್ದ ರಾಚಯ್ಯನವರ ಮುನ್ನೋಟಗಳು ಇಂದಿನ ದಾರಿದೀಪಗಳು. ಆ ದೀಪಗಳ ಬೆಳಕಿನಲ್ಲಿ ನಾಳಿನ ರೂಪಗಳ ಕಟ್ಟಲು ಅವರ ಚಿಂತನೆಗಳನ್ನು ಅರಿಯೋಣ.

**ಎನ್.ರಾಚಯ್ಯನವರ ದೂರದೃಷ್ಟಿಕೋನ:**

ಕರ್ನಾಟಕದ ಸಾಮಾಜಿಕ ಮತ್ತು ರಾಜಕೀಯ ಚರಿತ್ರೆಯ ಮಹಾನ್ ಮಾನವತಾವಾದಿಗಳಲ್ಲಿ ಎನ್.ರಾಚಯ್ಯ ಅವರ ವ್ಯಕ್ತಿತ್ವ ಹಿರಿದಾದುದು. ಅಂಬೇಡ್ಕರ್, ಮಾರ್ಕ್ಸ್, ಲೋಹಿಯಾ ಅವರ ತತ್ವಾದರ್ಶಗಳ ತಳಹದಿಯ ಮೇಲೆಯೇ ಸಮಾಜವನ್ನು ನೋಡುವ ದೃಷ್ಟಿಕೋನವನ್ನು ಹೊಂದಿದ್ದಂತಹ ಎನ್.ರಾಚಯ್ಯನವರು ನಮ್ಮ ನಡುವಿನ ಸಾಂಸ್ಕೃತಿಕ ಬದುಕು ಕೂಡ ಹೌದು. ಅಸಾಮಾನ್ಯ ಸಾಮಾಜಿಕ ಸಮಸ್ಯೆಗಳ ನಡುವೆಯೂ ಸಮಾಜವನ್ನು ಕಟ್ಟುವ ಮತ್ತು ಸಮುದಾಯಗಳನ್ನು ಹಸನುಗೊಳಿಸುವ ದಿಟ್ಟ ಕಾನೂನಾತ್ಮಕ ಹೋರಾಟ ಮಾಡಿದವರು. ಶ್ರೀಸಾಮಾನ್ಯರ ಏಳಿಗೆಗಾಗಿ ತಮ್ಮ ರಾಜಕೀಯ ಬದುಕನ್ನೇ ಮುಡಿಪಾಗಿಟ್ಟಂತಹವರು. ಹಲವಾರು ಯೋಜನೆಗಳನ್ನು ಅನುಷ್ಠಾನಗೊಳಿಸುವುದರ ಮೂಲಕ ನಾಡಿನ ಚರಿತ್ರೆಗೆ ಅಭಿವೃದ್ಧಿಯ ಪುಟಗಳನ್ನು ಸೇರಿಸಿದವರು ಎನ್.ರಾಚಯ್ಯ ಅವರು. ಒಬ್ಬ ಅಸ್ಪೃಶ್ಯ ಬಡ ಸಮುದಾಯದಿಂದ ಬಂದವರಾದರೂ

ಇಡೀ ಅಸ್ಪೃಶ್ಯ ಜನಾಂಗಕ್ಕೆ ರಾಜಕೀಯ ಮುಖಂಡರಾದವರು. ಅವರ ಹಲವು ಸಾಮುದಾಯಿಕ ಯೋಜನೆಗಳು, ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಹಾಗೂ ಹಿಂದುಳಿದ ಜನಾಂಗದವರ ಬದುಕಿನ ಆಶಾಕಿರಣಗಳಾದವು. 'ದಲಿತರ' ಅಭಿವೃದ್ಧಿಗಾಗಿ ಪಣತೊಟ್ಟು ಶೈಕ್ಷಣಿಕವಾಗಿ, ಸಾಮಾಜಿಕವಾಗಿ, ಆರ್ಥಿಕವಾಗಿ ಅವರನ್ನು ಸಬಲರನ್ನಾಗಿ ಮಾಡಲು ಸಾಮಾಜಿಕ ಆಂದೋಲನವನ್ನೇ ಮಾಡಿದವರು. 'ದಲಿತರ ಏಳ್ಗೆಯಿಂದಲೇ ಸಮಾಜದ, ರಾಷ್ಟ್ರದ ಉದ್ಧಾರ ಸಾಧ್ಯ' ಎಂಬುದನ್ನು ಸಾರಿ ಹೇಳಿದವರು. ಸಾಮಾಜಿಕವಾಗಿ ಮೂಲಭೂತ ಅವಶ್ಯಕತೆಗಳಾದ ವಸತಿ, ಶಿಕ್ಷಣ, ಸಮಾನತೆಗಳನ್ನು ದಲಿತ ಜನಾಂಗದವರ ಮಡಿಲಿಗೆ ತಂದು ಕೊಟ್ಟವರು. ಸಾಂವಿಧಾನಿಕ ಆಶಯಗಳಲ್ಲಿಯೂ ಸರ್ಕಾರ ಮತ್ತು ಜನಸಮುದಾಯಗಳ ಆಶೋತ್ತರಗಳನ್ನು ಪ್ರತಿಪಾದಿಸುತ್ತಿದ್ದ ರಾಚಯ್ಯನವರಿಗೆ ಶಿಕ್ಷಣ ಮತ್ತು ಶುಚಿತ್ವ ಎರಡು ಕಣ್ಣುಗಳಾಗಿದ್ದವು. ಸಮಾನತೆಯ ಹೋರಾಟ ಅವರ ಹೃದಯದ ಮಿಡಿತವಾಗಿತ್ತು. ದಲಿತರ ಏಳ್ಗೆಯೇ ಅವರ ರಾಜಕೀಯ ನಡಾವಳಿಗಳಾಗಿದ್ದವು. ಆಧುನಿಕ ಕೃಷಿಯ ಕನಸನ್ನು ಹೊತ್ತ ರೈತ ರಾಜಕಾರಣಿ ಎನ್.ರಾಚಯ್ಯ.

ಕೃಷಿ, ಕೈಗಾರಿಕೆಗಳನ್ನು ಅಭಿವೃದ್ಧಿಪಡಿಸುವ ನಿಟ್ಟಿನಲ್ಲಿ ದಲಿತರಿಗೆ ಆಧುನಿಕ ಕೃಷಿಯ ಮಾದರಿಗಳನ್ನು ಕೊಡುವ ಮೂಲಕ ಜಾಗೃತಗೊಳಿಸುವ ಆಸೆಯಿಂದಲೇ ಯೋಜನೆಗಳನ್ನು ಹಾಕಿದ್ದರು. ಸರ್ಕಾರದ ನೀತಿಗಳು, ಸಂಘಸಂಸ್ಥೆಗಳು, ಅಸ್ಪೃಶ್ಯರ ಪರವಾಗಿ ಕ್ರಿಯಾಶೀಲರಾಗಬೇಕೆಂಬ ಧೋರಣೆ ಹೊಂದಿದ್ದವರು. ಸ್ವಯಂ ಉದ್ಯೋಗಸ್ಥರಾಗಿ 'ಸ್ವಾಭಿಮಾನಿಗಳಾಗಿ ಬದುಕಲು' ಕರೆ ನೀಡಿದವರು. 'ಸಮಾನತೆಯನ್ನು ಕಾಗದದ ಮೇಲೆ ಬರೆಯುವುದಲ್ಲ, ಅನುಷ್ಠಾನಗೊಳಿಸೋದು' ಎನ್ನುವುದನ್ನು ತೀಕ್ಷ್ಣವಾಗಿ ಸಮಾಜಮುಖಿಯಾಗಿ ಪ್ರಯೋಗಿಸಿದವರು. ಇದುವರೆವಿಗೂ ತಿಳಿವಳಿಕೆಯೇ ಇಲ್ಲದೇ ಪ್ರಭುತ್ವಶಾಹಿಗಳ ಕಪಿಮುಷ್ಠಿಯಲ್ಲಿ ನರಳುತ್ತಿರುವ ಅಸ್ಪೃಶ್ಯರಿಗೆ ಕಾನೂನಾತ್ಮ ಬೆಂಬಲವಾಗಿ ನಿಂತವರು. 'ಬಲವಂತ ದುಡಿಮೆ, ಕಾನೂನು ಬಾಹಿರವಾದದ್ದು' ಎನ್ನುವ ಮೂಲಕ ಕೂಲಿ-ಕಾರ್ಮಿಕರನ್ನು ಎಚ್ಚರಿಸಿದವರು ಎನ್.ರಾಚಯ್ಯ.

ಕೃಷಿ, ಕೈಗಾರಿಕೆ, ಮಹಿಳೆ, ಶಿಕ್ಷಣ ಇವುಗಳ ಸರ್ವತೋಮುಖ ಬೆಳವಣಿಗೆಗೆ ತಮ್ಮನ್ನೇ ಅರ್ಪಿಸಿಕೊಂಡವರು. ಅಂಗವಿಕಲರ ಸ್ವಾಸ್ಥ್ಯ ಸಮಾಜದ ಅಭಿವೃದ್ಧಿಗಾಗಿ

ಹೋರಾಡಿದರು. ಶಿಶುವಿಹಾರಗಳನ್ನು ಸಾಂಸ್ಥಿಕಗೊಳಿಸುವುದರ ಮೂಲಕ 'ಅಂಗನವಾಡಿ'ಗಳನ್ನು ಕಾನೂನಾತ್ಮಕವಾಗಿ ಪ್ರತಿಷ್ಠಾಪಿಸಿದ ಕೀರ್ತಿ ಎನ್.ರಾಚಯ್ಯನವರದು.

"ಮೀಸಲಾತಿ ಎನ್ನುವುದು ಭಿಕ್ಷೆಯಲ್ಲ ಅದು ಸಮಾನತೆಯ ಸಾಧನ" ಎಂಬುದನ್ನು ಮನವರಿಕೆ ಮಾಡಿಕೊಟ್ಟವರು. ಹೀಗೆ ನೂರಾರು ಅಭಿವೃದ್ಧಿಪರ ಆಲೋಚನೆಗಳನ್ನು ಹೊಂದಿದ್ದಂತಹ ಎನ್.ರಾಚಯ್ಯನವರು ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡದವರ ಪಾಲಿಗೆ ಪ್ರಜಾಪ್ರಭುತ್ವದ 'ಕಲ್ಪವೃಕ್ಷ'ವಾಗಿದ್ದರು.

ದಲಿತರ ಸರ್ವಾಂಗೀಣ ಅಭಿವೃದ್ಧಿಯ ಕನಸನ್ನು ಕಂಡ ಎನ್.ರಾಚಯ್ಯನವರು ಸಾಮುದಾಯಿಕ ಏಳ್ಗೆಗಾಗಿ ಹಲವಾರು ಕನಸುಗಳನ್ನು, ದೂರದೃಷ್ಟಿಕೋನಗಳನ್ನು ಹೊಂದಿದ್ದರು. ಸಾಮಾಜಿಕ, ಶೈಕ್ಷಣಿಕ, ಔದ್ಯೋಗಿಕ ಮತ್ತು ಕೃಷಿ, ಕೈಗಾರಿಕೆ ಇತ್ಯಾದಿಗಳಲ್ಲಿ ದಲಿತರು ತಮ್ಮನ್ನು ತಾವು ಅರ್ಪಿಸಿಕೊಳ್ಳುವುದರ ಮೂಲಕ ಸಮಾಜದಲ್ಲಿ ಸಮಾನರಾಗಿ ಬಾಳಬಹುದು ಎಂಬುದನ್ನು ಅವರ ಬದುಕು ಮತ್ತು ಧೋರಣೆಗಳಿಂದ ತಿಳಿದುಕೊಳ್ಳಬಹುದು. ಎನ್.ರಾಚಯ್ಯನವರು ಕೇವಲ ಸಾಮಾನ್ಯ ವ್ಯಕ್ತಿಯಾಗಿರಲಿಲ್ಲ, ಅವರೊಬ್ಬ ಸಮುದಾಯದ ಮಾಧ್ಯಮವಾಗಿ, ಕಾನೂನಾಗಿ ಸದಾ ಎಚ್ಚರಿಸುವ ದನಿಯಾಗಿ ನಮ್ಮೊಡನಿರುತ್ತಾರೆ ಎಂಬುದನ್ನು ಅವರ ಚಿಂತನೆಗಳೇ ಸಾಬೀತು ಮಾಡುತ್ತವೆ.

**ಎನ್.ರಾಚಯ್ಯನವರ ಭವಿಷ್ಯತ್ತಿನ ಮುನ್ನೋಟಗಳು:**

♦ **ಸಮುದಾಯ ಕೇಂದ್ರಿತ ಪ್ರಜ್ಞೆ :**

- ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಹಾಗೂ ಹಿಂದುಳಿದ ವರ್ಗಗಳಿಗಾಗಿ ಒಂದು ಸಚಿವ ಖಾತೆಯನ್ನು ಕೇಂದ್ರ ಸರ್ಕಾರ ಹೊಂದುವುದು.
- ಸಕಾರವು ಸಮಾಜ ಕಲ್ಯಾಣ ಮಂಡಳಿ ಹೊಂದುವುದರ ಮೂಲಕ ಅಭಿವೃದ್ಧಿಗಾಗಿ ಮುಂದಾಗುವುದು.
- ಸಂವಿಧಾನವು ಬಲತ್ಕಾರದಿಂದ ದುಡಿಸಿಕೊಳ್ಳುವುದನ್ನು ನಿಷೇಧಿಸಿದೆ ಹಾಗಾಗಿ ದುಡಿಮೆಯ ಗೌರವಕ್ಕೆ ಬೆಲೆ ಕೊಡುವುದು.

- ಹರಿಜನರನ್ನೂ ಈ ರಾಷ್ಟ್ರದ ಪ್ರಜೆಗಳೆಂದು ಪರಿಗಣಿಸಿದರೆ, ಹರಿಜನ ಸಮಾಜಕ್ಕೆಂದೇ ಪ್ರತ್ಯೇಕವಾದ ಅವಕಾಶಗಳನ್ನು ಕಾನೂನಿನಲ್ಲಿ ಕಲ್ಪಿಸಬೇಕಾದ ಅಗತ್ಯವಾದರೂ ಎಲ್ಲಿರುತ್ತದೆ. ಈ ವರ್ಗದ ಜನರಿಗೆ ಶೇ.18ರ ಮೀಸಲಾತಿಯನ್ನು ಎಲ್ಲಾ ಅಭಿವೃದ್ಧಿ ಕಾರ್ಯಕ್ರಮಗಳಲ್ಲಿಯೂ ಗೃಹ ನಿರ್ಮಾಣಕ್ಕಾಗಿ, ಸಣ್ಣ ಪ್ರಮಾಣದ ಉದ್ದಿಮೆಗಳಿಗಾಗಿ ಅಥವಾ ಇನ್ನಾವುದೇ ಪ್ರಯೋಜನಗಳನ್ನು ಪಡೆಯುವುದಲ್ಲಾಗಲೀ– ನಿಗದಿಗೊಳಿಸಿದಂತಹ ಕೇಂದ್ರ ಸರ್ಕಾರದ ಕಾನೂನುಗಳಾಗಲೀ ಅಥವಾ ಕಾರ್ಯಾಂಗದ ಆಜ್ಞೆಯಾಗಲೀ ಜಾರಿಗೆ ಬರಬೇಕಾದ ಅಗತ್ಯವಿದೆ.
- ಕಾಗದದ ಮೇಲೆ ಜಾತಿಪದ್ಧತಿಯನ್ನು ನಿರ್ಮೂಲನೆ ಮಾಡುವುದಲ್ಲ. 17ನೆಯ ವಿಧಿಯ ಮೂಲಕ ಅಸ್ಪೃಶ್ಯತೆಯನ್ನು ರದ್ದು ಮಾಡಿರುವ ಹಾಗೆಯೇ ಜಾತಿಪದ್ಧತಿಯನ್ನೂ ಸಂವಿಧಾನಕ್ಕೆ ತಿದ್ದುಪಡಿ ಮಾಡುವ ಮೂಲಕ ತೆಗೆದು ಹಾಕಬೇಕು. ಇದನ್ನು ಮಾಡದೆ ಇರುವವರೆಗೆ ಜಾತಿಗಳ ನಿರ್ಮೂಲನೆ ಸಾಧ್ಯವಿಲ್ಲ.
- ಪ್ರತಿಯೊಂದು ಹಳ್ಳಿ, ಪಟ್ಟಣ ಅಥವಾ ನಗರದಲ್ಲಿ ಕನಿಷ್ಟ ಶೇಕಡ 10 ರಷ್ಟಾದರೂ ನಿವೇಶನಗಳನ್ನು ಪರಿಶಿಷ್ಟ ಜಾತಿ ಹಾಗೂ ಪಂಗಡದವರಿಗಾಗಿ ಮೀಸಲಿಡುವುದು. ಇದರಿಂದ ಪರಿಶಿಷ್ಟ ಜಾತಿಯ ಜನರು ಇತರ ಜಾತಿಗಳವರ ನಡುವೆ ವಾಸಿಸಲು, ಅವರೊಡನೆ ಬೆರೆಯಲು ಸಹಾಯವಾಗುವುದು.
- ಇದೇ ರೀತಿಯಲ್ಲಿ ಈ ವರ್ಗದ ಜನರಿಗೆ ಹರಿಜನೇತರ ಅಥವಾ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡದವರಲ್ಲದ ವಿದ್ಯಾರ್ಥಿನಿಲಯಗಳಲ್ಲಿ ಶೇ.10 ರಿಂದ 15 ರವರೆಗಿನ ಮೀಸಲಾತಿಯನ್ನು ನೀಡುವುದು.

## ♦ ಶಿಕ್ಷಣ ಕೇಂದ್ರಿತ ಪ್ರಜ್ಞೆ :

- ಕೃಷಿ ಕಾಲೇಜಿಗಳಿಗೆ ಅನುದಾನ ಕೊಡುವುದರ ಮೂಲಕ ಕೃಷಿಯ ಆಧುನಿಕ ತಂತ್ರಜ್ಞಾನದ ಅಭಿವೃದ್ಧಿಗೆ ಪ್ರೋತ್ಸಾಹಿಸುವುದು.

- ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡದ ಜನಾಂಗಗಳಲ್ಲಿ ಶೇ.99ರಷ್ಟು ಮಂದಿ ಕೃಷಿ ಕಾರ್ಮಿಕರಿದ್ದಾರೆ. ಅವರೆಲ್ಲರೂ ಅನಕ್ಷರಸ್ಥರು. ನಮಗೆ 6 ಮಕ್ಕಳಿದ್ದರೆ ಅವರಿಗೆ 10 ರಿಂದ 12ಜನ ಮಕ್ಕಳಿರುತ್ತಾರೆ. ಹಾಗಾಗಿ ಜೀವನೋಪಾಯಕ್ಕಾಗಿ ಒಂದು ಜೊತೆ ಎತ್ತುಗಳನ್ನೂ, ಸಾಧ್ಯವಾದರೆ ಭಾವಿಗಳನ್ನು ಕೊಡಿ ಇದರಿಂದ ಈ ವರ್ಗಗಳಲ್ಲಿನ ಜನರಲ್ಲಿರುವ ನಿರದ್ಯೋಗ, ಬಡತನ ಮತ್ತು ಹಿಂದುಳಿದಿರುವಿಕೆಯನ್ನು ತೊಡೆದು ಹಾಕಬಹುದು.

- ಕೃಷಿ ಮತ್ತು ಶಿಕ್ಷಣ ಸರ್ವೋತ್ತಮ ಸಾಧನಗಳಾಗಬೇಕು ಹಾಗೂ ಸ್ತ್ರೀಯರೂ ಸೇರಿದಂತೆ ಎಲ್ಲರೂ ತೊಡಗಿಸಿಕೊಳ್ಳಬಹುದಾದ ಸಣ್ಣ ಪ್ರಮಾಣದ ಕೈಗಾರಿಕೆಗಳು, ಕುಟೀರ ಉದ್ಯಮಗಳು ಮತ್ತು ಗ್ರಾಮೀಣ ಉದ್ದಿಮೆಗಳು ಅದರಲ್ಲೂ ಕೋಳಿಸಾಕಾಣೆ ಪಶುಸಂಗೋಪನೆ ಮತ್ತು ಅಭಿವೃದ್ಧಿ ಹಾಗೂ ಕೃಷಿ ಅಭಿವೃದ್ಧಿಗೆ ಸಾಂವಿಧಾನಿಕ ರಕ್ಷಣಾ ಸೂತ್ರಗಳನ್ನು ಜಾರಿಗೆ ತರುವುದು.

- ಪರಿಶಿಷ್ಟ ಜಾತಿಗಳ, ಪರಿಶಿಷ್ಟ ಪಂಗಡಗಳ ಮತ್ತು ಇತರ ಹಿಂದುಳಿದ ವರ್ಗಗಳ ಇಲಾಖೆಯು ಮುಖ್ಯ ಕಾರ್ಯದರ್ಶಿಯ ಅಧೀನದಲ್ಲಿರಬೇಕು. ಕೇಂದ್ರ ಸರ್ಕಾರದ ನಿರ್ದೇಶನಗಳನ್ನು ಮತ್ತು ರಾಜ್ಯ ಸರ್ಕಾರದ ಆಜ್ಞೆಗಳನ್ನು ಜಾರಿಗೆ ತರದೆ ಹೋದರೆ ಆತನನ್ನು ತಕ್ಷಣ ವಜಾಮಾಡಬೇಕು.

- ರಾಜ್ಯ ಸರ್ಕಾರಗಳು ಮತ್ತು ಕೇಂದ್ರ ಸರ್ಕಾರವು ಭರ್ತಿ ಮಾಡುವ ಎಲ್ಲಾ ಸರಕಾರಿ ಹುದ್ದೆಗಳನ್ನೂ public service commission ನೊಡನೆ ಚರ್ಚಿಸಿ ಮಾಡಬೇಕು.

- ಆರ್ಥಿಕ, ಸಾಮಾಜಿಕ, ಶೈಕ್ಷಣಿಕ ಕ್ಷೇತ್ರಗಳಲ್ಲಿ ಹಾಗೂ ಹುದ್ದೆಗಳಲ್ಲಿ ನೇಮಕಾತಿಯನ್ನು ಮಾಡಿಕೊಳ್ಳುವಾಗ ಸಾಂವಿಧಾನಿಕ ರಕ್ಷಣಾ ಸೂತ್ರಗಳು ಎಷ್ಟಮಟ್ಟಿಗೆ ಅನುಷ್ಠಾನಗೊಂಡಿವೆ ಎಂಬುದನ್ನು ಅಧ್ಯಯನ ಮಾಡಲು ಕೇಂದ್ರ ಸರಕಾರದ ಮಟ್ಟದಲ್ಲಿ ಒಂದು ಸಮಿತಿಯನ್ನು ನೇಮಕ ಮಾಡಬೇಕು.

- ಹಿಂದುಳಿದ ವರ್ಗಗಳ ರಕ್ಷಣೆಗೆ ಬೇರೆ ವಿಧವಾದ ಧನಸಹಾಯ, ಗೃಹಸೌಲಭ್ಯ ಇತ್ಯಾದಿಗಳನ್ನು ನೀಡುವುದಕ್ಕಿಂತ ಮುಖ್ಯವಾಗಿ ಅವರನ್ನು ಶೋಷಣೆಯಿಂದ ಮುಕ್ತಗೊಳಿಸಬೇಕಾದುದು ಕೇಂದ್ರ ಹಾಗೂ ರಾಜ್ಯ ಸರಕಾರಗಳ ರಕ್ಷಣಾಕಾರ್ಯವಾಗಬೇಕು.

- ಬಲವಂತದ ದುಡಿಮೆ ಹಾಗೂ ಉಚಿತವಾದ ದುಡಿಮೆ ನಮ್ಮ ಗ್ರಾಮೀಣ ಪ್ರದೇಶಗಳಲ್ಲಿ ಶೇ.99 ಭಾಗ ಬಲವಂತದ ದುಡಿಮೆಗೆ ತುತ್ತಾಗಿದ್ದಾರೆ. ಮತ್ತೊಂದು ಅಂಶವೆಂದರೆ ದುರ್ಬಲವರ್ಗದವರನ್ನು ಹಿಂಡಿ ಹಿಪ್ಪೆ ಮಾಡುತ್ತಿರುವ ಗ್ರಾಮೀಣ ಸಾಲಗಳು, ಲೇವಾದೇವಿಗಾರರ, ಭೂಮಾಲಿಕರ ಹಾಗೂ ಬಂಡವಾಳಗಾರರ ಕಪಿಮುಷ್ಟಿಯಿಂದ ಈ ವರ್ಗದವರನ್ನು ಹೆಚ್ಚಿನ ವಿಳಂಬವಿಲ್ಲದೆ ಬಿಡುಗಡೆ ಮಾಡಬೇಕಾದ ಅನಿವಾರ್ಯತೆ ಇದೆ.

- ದೇಶದ ಅಭಿವೃದ್ಧಿಯೆಂದರೆ, ದೇಶದ ಬಹುಸಂಖ್ಯಾತ ಜನರ ಅಭಿವೃದ್ಧಿಯೇ ಆಗುತ್ತದೆ.

- ಭಾರತದ ಸಂವಿಧಾನ ಜನಕಲ್ಯಾಣದ ಪೋಷಕ ಎನ್ನುವ ನೈತಿಕತೆ ಸಾರ್ವತ್ರಿಕಗೊಳ್ಳಬೇಕು.

- ದಲಿತ ವರ್ಗಗಳ ಪ್ರಪ್ರಥಮ ಅಗತ್ಯವೆಂದರೆ ಆಹಾರ ಮತ್ತು ಶಿಕ್ಷಣ. ಅವರ ಸಭ್ಯ ಜೀವನವೊಂದನ್ನು ನಡೆಸಬೇಕಾದರೆ ಈ ಎರಡು ತುರ್ತು ಅಗತ್ಯತೆಗಳನ್ನು ನಾವು ಪೂರೈಸಬೇಕು. ಎಲ್ಲರಿಗೂ ವ್ಯಕ್ತಿಗತ ಶಿಕ್ಷಣವನ್ನು ನೀಡಲು ಭೂಮಿಕೆಯನ್ನು ಸಿದ್ಧಪಡಿಸಲು ಆರೋಗ್ಯಪೂರ್ಣವಾದ ಸಾಮಾಜಿಕ ಪರಿಸರವನ್ನು ನಿರ್ಮಿಸಬೇಕು.

- ಪರಿಶಿಷ್ಟ ಜಾತಿ ಮತ್ತು ಪಂಗಡಗಳವರ ಎಲ್ಲಾ ಸಮಸ್ಯೆಗಳನ್ನು ಮೂರುವರ್ಷದಿಂದ ಹದಿನೆಂಟು ವರ್ಷಗಳವರೆಗೆ ಅವರ ಎಲ್ಲಾ ಮಕ್ಕಳಿಗೂ ಶಿಕ್ಷಣವನ್ನು ನೀಡುವುದರ ಮೂಲಕ ಬಗೆಹರಿಸಬಹುದು. ಹಾಗಾದಾಗ ಮಾತ್ರ ನಾವು ಈ ಜನರ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಯನ್ನು ಉತ್ತಮಗೊಳಿಸಬಹುದು.

## ♦ ಮಹಿಳೆ ಮತ್ತು ಮಕ್ಕಳ ಕೇಂದ್ರಿತ ಪ್ರಜ್ಞೆ :

- ಮಕ್ಕಳಿಗೆ ವಿದ್ಯಾಭ್ಯಾಸವನ್ನು ಕೊಡಿ ಮತ್ತು ದುರ್ಬಲವರ್ಗದವರ ಮಕ್ಕಳನ್ನೂ ವಿದ್ಯಾವಂತರನ್ನಾಗಿ ಮಾಡಿ, ಇದಕ್ಕಾಗಿ ಎಂತಹ ತ್ಯಾಗಮಾಡಬೇಕಾದರೂ ನೀವು ಅದನ್ನು ಮಾಡಲೇಬೇಕು. ಮಕ್ಕಳು ದೇಶದ ನಿಜವಾದ ಆಸ್ತಿ ಅವರು ನಮ್ಮ ಸಮಾಜದ ತಳಪಾಯ, ನಮ್ಮ ಜೀವನದ ಊರುಗೋಲು, ವಾಸ್ತವವಾಗಿ ಅವರು ನಮಗೆ ಎಲ್ಲವೂ ಆಗಿರುತ್ತಾರೆ. ಆದ್ದರಿಂದ ಅವರನ್ನು ಚೆನ್ನಾಗಿ ನೋಡಿಕೊಳ್ಳಿ, ಅವರನ್ನು ಭೂಮಿಯ ಮೇಲಿರುವ ದೇವರು ಎಂಬ ಭಾವನೆಯಿಂದ ನೋಡಿಕೊಳ್ಳುವುದಕ್ಕೆ ಹಿಂದೆ ಮುಂದೆ ನೋಡಬೇಡಿ.
- ಸಮಾನ ಕೆಲಸಕ್ಕೆ ಸಮಾನ ವೇತನದ ಆಶಯ ಹೊಂದಿದವರು.
- ಪ್ರಾಮಾಣಿಕ ಮತ್ತು ಶ್ರಮ ಪೂರ್ಣ ದುಡಿಮೆಯಿಂದ ಸಂತೋಷವಾಗಿ, ತೃಪ್ತಿಯಿಂದ ಬದುಕುವುದು ನಿಮ್ಮ ಆಜನ್ಮ ಹಕ್ಕು.
- ಪರಿಸ್ಥಿತಿಗಳನ್ನು ಉತ್ತಮಗೊಳಿಸಿಕೊಳ್ಳಲು ಕೃಷಿ, ಪಶುಸಂಗೋಪನೆ, ತೋಟಗಾರಿಕೆ ಮತ್ತು ಒಳನಾಡಿನ ಮೀನುಗಾರಿಕೆ ಇವುಗಳಲ್ಲಿನ ನವೀನ ಪದ್ಧತಿಗಳನ್ನು ಸ್ವಾಗತಿಸಿ ಅವನ್ನು ಉಪಯೋಗಿಸಿಕೊಳ್ಳುವ ಮನೋಭಾವನೆಯನ್ನು ಹೊಂದಿರಬೇಕು.
- ರಷ್ಯಾದಲ್ಲಿ ಒಂದು ಹಸುವು ದಿನಕ್ಕೆ 40 ರಿಂದ 50 ಸೇರು ಹಾಲನ್ನು ಕರೆಯುವುದನ್ನು ನಾನು ನೋಡಿದ್ದೇನೆ. ನಾವು ನಮ್ಮ ತಳಿಯನ್ನು ಅಭಿವೃದ್ಧಿಪಡಿಸಲು ಸಾಧ್ಯವಿರುವ ಎಲ್ಲಾ ಪ್ರಯತ್ನವನ್ನು ಮಾಡಬೇಕು. ಹೀಗೆ ಮಾಡಿದರೆ ಮಾತ್ರ ಮಕ್ಕಳೂ ಸೇರಿದಂತೆ ನಮ್ಮೆಲ್ಲಾ ಜನತೆಯು ಸಮತೂಕದ ಆಹಾರಕ್ಕಾಗಿ ಸಾಕಷ್ಟು ಹಾಲನ್ನು ಪಡೆಯುಬಹುದು. ಇದರಿಂದ ಅಪೌಷ್ಟಿಕತೆ ತಾಂಡವವನ್ನು ಹೊಡೆದೋಡಿಸಬಹುದು.
- ಕೃಷಿ ಕೆಲಸಗಳಿಂದ ದೊರಕುವ ಗಳಿಕೆಗೆ ಪೂರಕವಾದ ಇನ್ನಷ್ಟು ಹಣವನ್ನು ಗಳಿಸಲು ಸರಕಾರವು ವೈಯಕ್ತಿಕ ಅಥವಾ ಸಹಕಾರೀ

ಸಂಘಗಳ ಮಟ್ಟದಲ್ಲಿ ಪ್ರಾರಂಭಿಸಿರುವ ಕುಟೀರ ಕೈಗಾರಿಕೆಗಳ ಪ್ರಯೋಜನವನ್ನು ಪಡೆಯುವುದು.

- ನೀವು ನಿಮ್ಮಲ್ಲಿರುವ ಸಾಮಾಜಿಕ ಕೆಡಕುಗಳನ್ನು ಗುರುತಿಸಿ ನಾಶಮಾಡಿದರೆ, ನಿಮ್ಮ ವಿದ್ಯಾಭ್ಯಾಸದ ಹಾಗೂ ನಿಮ್ಮ ಆರ್ಥಿಕ ಪರಿಸ್ಥಿತಿಯ ಮಟ್ಟಗಳನ್ನು ಅನುಸರಿಸಿ ನಿಮ್ಮ ಸಾಮಾಜಿಕ ಸ್ಥಿತಿಗಳು ಉತ್ತಮಗೊಳ್ಳುತ್ತಾ ಹೋಗುತ್ತವೆ.
- ಶುಚಿತ್ವ ಮನಸ್ಸಿನ ನೈರ್ಮಲ್ಯವನ್ನು ಬಿಂಬಿಸುವುದರಿಂದ ನೈತಿಕ ಚಾರಿತ್ರ್ಯದ ಮೇಲೂ ತನ್ನ ಪ್ರಭಾವವನ್ನು ಬೀರುತ್ತದೆ.
- ಸಾಮಾಜಿಕ ಕೆಡಕುಗಳಾದ ಮಧ್ಯಪಾನವನ್ನು ಸಮಾಜದಿಂದ ಹೊಡೆದೂಡಿಸಿ ಆರೋಗ್ಯಕರ ಬದುಕನ್ನು ಕಟ್ಟುವುದು ಪ್ರಜಾಪ್ರಭುತ್ವದ ಹೊಣೆಗಾರಿಕೆ.
- ಸರ್ಕಾರಿ ಉದ್ಯೋಗದಲ್ಲಿ ನೇಮಕಾತಿಯ ವಿಷಯದಲ್ಲಿ ಅಥವಾ ಯಾವುದೇ ಸರಕಾರಿ ಹುದ್ದೆಯನ್ನು ಭರ್ತಿ ಮಾಡುವಾಗ ಎಲ್ಲಾ ನಾಗರಿಕರಿಗೂ ಸಮಾನವಾದ ಮೀಸಲಾತಿಯನ್ನು ಕಾಯ್ದಿರಿಸಿಕೊಳ್ಳುವುದು.
- ರಾಜ್ಯದಲ್ಲಿರುವ ಮಹಿಳಾ ಕಲ್ಯಾಣ ಕೇಂದ್ರಗಳು ಮತ್ತು ಶಿಶುವಿಹಾರಗಳ ಕನಸು ಹೊತ್ತು ಅನುಷ್ಠಾನಗೊಳಿಸುವ ಬೃಹತ್ ಯೋಜನೆಗಳಲ್ಲಿ ಸಾಫಲ್ಯ ಹೊಂದಿದವರು.
- ಸರಕಾರಿ ಸಂಸ್ಥೆಗಳು, ಸ್ಥಳೀಯ ಸಂಸ್ಥೆಗಳು ಮತ್ತು ಸ್ವಯಂ ಸೇವಾ ಸಂಸ್ಥೆಗಳು ತಮ್ಮ ಮುಂದೆ ಜನತೆಯ ಸಂಕಷ್ಟಗಳನ್ನು ನಿವಾರಿಸುವ ಒಂದು ಸಾಮಾನ್ಯ ಗುರಿಯನ್ನು ಹೊಂದಿರಬೇಕು. ಸಾಮಾಜಿಕ ಕರ್ತವ್ಯಗಳಲ್ಲಿ ತೊಡಗಿಕೊಂಡಿರುವವರೆಲ್ಲ ವ್ಯಕ್ತಿಗಳ ಹಾಗೂ ಸಂಸ್ಥೆಗಳ ನಡುವೆ ಸಹಕಾರ, ಸಹಯೋಗ ಹೊಂದಬೇಕು.
- ಅಂಗವಿಕಲ ಮಕ್ಕಳ ವಿದ್ಯಾಭ್ಯಾಸಕ್ಕೆ ಅಗತ್ಯವಾದ ಶಕ್ತಿಯನ್ನು ತುಂಬುವ ಸರ್ಕಾರಗಳು ನಮ್ಮ ಪ್ರಜಾಪ್ರಭುತ್ವದಲ್ಲಿರಬೇಕು.

- ಶಿಕ್ಷಣವನ್ನು ಪಡೆಯುವುದರಿಂದ ಮಾತ್ರ ಹರಿಜನರು ತಮಗೆ ಸಂವಿಧಾನವು ನೀಡಿರುವ ಸವಲತ್ತುಗಳನ್ನು ಬಳಸಿಕೊಳ್ಳುವ ನೈತಿಕ ಧೈರ್ಯವನ್ನು ಪಡೆಯಲು ಸಾಧ್ಯ. ಹರಿಜನರ ಮನಸ್ಸಿನಲ್ಲಿ ಹೋದ ಜೀವನದ ಬಗ್ಗೆ ಜ್ಞಾನವನ್ನು ಮೊಳೆಯುವ ಹಾಗೆ ಮಾಡುವತನಕ, ಅವರಲ್ಲಿ ಭವಿಷ್ಯದ ಬಗ್ಗೆ ಧೈರ್ಯ ಮತ್ತು ಆತ್ಮವಿಶ್ವಾಸಗಳು ಮೂಡುವಂತೆ ಮಾಡುವ ತನಕ, ಅವರಲ್ಲಿ ಉತ್ಸಾಹವು ಚಿಮ್ಮುವಂತೆ ಮಾಡುವತನಕ, ಅವರನ್ನು ಬಲವಾಗಿ ಹಿಡಿದುಕೊಂಡಿರುವ ಬಡತನ, ಅಜ್ಞಾನ ಮತ್ತು ಸಾಮಾಜಿಕ ನ್ಯೂನತೆಗಳಿಂದ ಅವರನ್ನು ಮೇಲೆತ್ತಲು ಸಾಧ್ಯವಿಲ್ಲ.

- ಶತಮಾನಗಳಿಂದ ಕ್ರಿಸ್ತ, ಮೊಹಮ್ಮದ್, ಬುದ್ಧ, ಮಾಧವ, ರಾಮಾನುಜ, ಬಸವಣ್ಣ, ಇತ್ತೀಚೆಗೆ ಗಾಂಧಿ – ಇವರಂತಹ ಸಮಾಜ ಸುಧಾರಕರು ಸಮಾನತೆ ಮತ್ತು ಸಾಮಾಜಿಕ ನ್ಯಾಯದ ಪರವಾಗಿ ಬೋಧನೆಯನ್ನು ಮಾಡುತ್ತಿದ್ದಾರೆ. ಆದರೂ ಅದರ ಫಲವಾಗಿ ಸಮಾನತೆ ಮತ್ತು ಸಾಮಾಜಿಕ ನ್ಯಾಯವು ನಮಗೆ ದೊರೆತಿದೆಯೇ? ಇಲ್ಲ. ಕಾರಣ ದೇಶದ ಬಹುಪಾಲು ಜನತೆ ಇನ್ನೂ ಅನಕ್ಷರಸ್ಥರಾಗಿ ಮತ್ತು ಅಜ್ಞಾನಿಗಳಾಗಿಯೇ ಇದ್ದಾರೆ. ದೇವರು, ಧರ್ಮ ಮತ್ತು ಮೂಢನಂಬಿಕೆಗಳ ಮೂಲಕ ಭಯವನ್ನು ಸೃಷ್ಟಿಸಿ ಬಹುಪಾಲು ಜನರನ್ನು ಶೋಷಣೆ ಮಾಡುವ ವರ್ಗವೇ ಇದೆ. ಶೋಷಣೆಯನ್ನು ಮಾಡುವ ತಂತ್ರದ ಸೂಕ್ಷ್ಮಗಳು ಬಡ, ಅನಕ್ಷರಸ್ಥ ಜನರ ಅರಿವಿಗೆ ಬರುವುದಿಲ್ಲ. ಅವರ ದಿನನಿತ್ಯದ ವ್ಯವಹಾರಗಳು ನಿಮಿತ್ತ ಹೇಳುವವರಿಂದ, ಜ್ಯೋತಿಷಿಗಳಿಂದ, ಕೋಳಿಯ ಕೂಗಿನಿಂದ ಬಲಭುಜ ಅಥವಾ ದೇಹದ ಇನ್ನಾವುದೇ ಅಂಗದ ಮೇಲೆ ಹಲ್ಲಿ ಬೀಳುವುದರಿಂದ. ದಾರಿಯಲ್ಲಿ ಬೆಕ್ಕೊಂದು ಅವರ ಎಡದಿಂದ ಬಲಕ್ಕೆ ಹಾಯ್ದು ಹೋಗುವುದರಿಂದ ನಿರ್ಧರಿಸಲ್ಪಡುತ್ತವೆ. ತಾವು ಎಲ್ಲ ವಿಧದ ಜ್ಞಾನದ ಕೀಲಿಕೈಯನ್ನು ಹೊಂದಿರುವವರೆಂದೂ, ತಾವು ಶಾಸ್ತ್ರಗಳೆಂದು ಹೇಳಿಕೊಳ್ಳುವುಗಳನ್ನು ಬೇರೆ ಯಾರೂ ಓದಬಾರದೆಂದೂ, ಕೇಳಬಾರದೆಂದೂ ಹೇಳುತ್ತಾರೆ. ಇದನ್ನು ಬೇರು ಸಮೇತ ಕಿತ್ತೆಸೆಯಬೇಕು.

- ದಮನಿತ ವರ್ಗಗಳನ್ನು ಮೇಲೆತ್ತುವುದಕ್ಕಾಗಿ ಎಲ್ಲರೂ ಪ್ರಾಮಾಣಿಕವಾಗಿ ತಮ್ಮ ನೆರವಿನ ಹಸ್ತವನ್ನು ಚಾಚಬೇಕು. ಅನ್ಯಾಯಯುತ ಹಾಗೂ ಸಮಾಜಕ್ಕೆ ವಿರುದ್ಧವಾದ ವ್ಯವಸ್ಥೆಯನ್ನು ಯಾರೂ ಮುಂದುವರೆಸಿಕೊಂಡು ಹೋಗಬಾರದು. ಹಾಗೆ ಮಾಡಿದರೆ ಅಂತಹವನು ನಿಜವಾದ ಅರ್ಥದಲ್ಲಿ ಸಮಾಜಕ್ಕೆ ವಿಶ್ವಾಸಘಾತವನ್ನು ಮಾಡಿದವನಾಗುತ್ತಾನೆ.

- ಹೆಂಗಸರು ಮತ್ತು ಗಂಡಸರು ಎಂಬ ಭೇದವಿಲ್ಲದೆ ಎಲ್ಲರೂ ನಿಮ್ಮ ವ್ಯಕ್ತಿತ್ವವನ್ನು ಗರಿಷ್ಟ ಮಟ್ಟಕ್ಕೆ ಬೆಳೆಸಿಕೊಳ್ಳಬೇಕು.

- ಧರ್ಮದಲ್ಲಿ, ದೇವರಲ್ಲಿ ನಂಬಿಕೆಯಿಡಿ, ಆದರೆ ಎಂದೂ ಈ ನಂಬಿಕೆ ಸಂವಿಧಾನವು ಚಿತ್ರಿಸಿರುವ ಆರ್ಥಿಕ ಮತ್ತು ಸಾಮಾಜಿಕ ವಿಷಯಗಳನ್ನು ಹಾಳುಗೆಡಹುವ ಹಾಗೆ. ಶಾಸ್ತ್ರಾಂಧತೆಯಾಗದಿರಲಿ, ಧರ್ಮಾಂಧತೆಯಾಗದಿರಲಿ.

## ◆ ಹರಿಜನ ಮತ್ತು ಗಿರಿಜನರ ಕೇಂದ್ರಿತ ಪ್ರಶ್ನೆ :

- ಗಿರಿಜನರು ಸಾಮಾಜಿಕ ಮತ್ತು ಆರ್ಥಿಕ ಕ್ಷೇತ್ರಗಳಲ್ಲಿ ಮುನ್ನಡೆಯುವ ಸಂಕಲ್ಪವನ್ನು ಮಾಡಬೇಕು. ನಿಮ್ಮ ಮಕ್ಕಳಿಗೆ ಶಿಕ್ಷಣವನ್ನು ಕೊಡಿಸಿ ಅವರ ಭವಿಷ್ಯಕ್ಕೆ ಭದ್ರವಾದ ಬುನಾದಿಯನ್ನು ಹಾಕಿ, ನಿಮ್ಮ ಹೆಂಗಸರನ್ನು ಗಿರಿಜನ ಮಹಿಳಾ ಕಲ್ಯಾಣ ಕೇಂದ್ರಗಳಿಗೆ ಕಳುಹಿಸಿ ಅವರು ಉತ್ತಮ ಅಭ್ಯಾಸಗಳನ್ನು, ಉತ್ತಮ ಜೀವನದ ವಿಧಾನಗಳನ್ನು ಕಲಿತುಕೊಳ್ಳುವಂತೆ ಮಾಡಿ. ಗಂಡಸರು ಶ್ರಮಪಟ್ಟು ಕೆಲಸಮಾಡಿ, ಹೆಚ್ಚು ಸಂಪಾದನೆಯನ್ನು ಮಾಡಿ ಮತ್ತು ಲೇಸಾದ ಬದುಕನ್ನು ನಡೆಸಿ.

- ದುರದೃಷ್ಟದಿಂದ, ಸ್ವಾತಂತ್ರ್ಯವು ಬಂದು 13 ವರ್ಷಗಳಾದರೂ ಲಿಖಿತ ಭಾರತ ಹಾಗೂ ರಾಜ್ಯಮಟ್ಟದ ಸೇವಾ ಹುದ್ದೆಗಳಲ್ಲಿ ಅದರಲ್ಲಿಯೂ, ಐಎಎಸ್ ಮತ್ತು IPS ಹುದ್ದೆಗಳಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳವರು ಪ್ರಾತಿನಿಧ್ಯವನ್ನು ಪಡೆಯುವಲ್ಲಿ ಪ್ರಗತಿಯೇನೂ ಸಾಧ್ಯವಿಲ್ಲ. ಈ ಪರಿಸ್ಥಿತಿ ಸುಧಾರಿಸಬೇಕು. ಮುಂದಿನ ಭವಿಷ್ಯ ಭಾರತದ ಕೊರತೆಯಾಗದಿರಲಿ.

- ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳವರ ಶೈಕ್ಷಣಿಕ ಮತ್ತು ಆರ್ಥಿಕ ಹಿತಾಸಕ್ತಿಗಳನ್ನು ಪ್ರೋತ್ಸಾಹಿಸಬೇಕು. ಮತ್ತು ಈ ವರ್ಗಗಳವರನ್ನು ಸಾಮಾಜಿಕ ಅನ್ಯಾಯಗಳಿಂದ ಹಾಗೂ ಎಲ್ಲಾ ರೀತಿಯ ಶೋಷಣೆಗಳಿಂದ ಮುಕ್ತರನ್ನಾಗಿಸಬೇಕು.
- ಪ್ರತಿಯೊಂದು ಹಳ್ಳಿಯಲ್ಲಿಯೂ ಜೀವನದ ಪ್ರಾಥಮಿಕ ಅಗತ್ಯವನ್ನು ಪೂರೈಸಬೇಕು. ಗಾಳಿ, ಬೆಳಕು ಮತ್ತು ಭೂಮಿಯಂತೆ ನೀರು ಕೂಡ ದೇವರ ಉಚಿತ ಕೊಡುಗೆ ಮತ್ತು ಇದನ್ನು ಉಪಯೋಗಿಸುವುದು ಪ್ರತಿಯೊಬ್ಬನ ಆಜನ್ಮಸಿದ್ಧ ಹಕ್ಕು.
- ಮಕ್ಕಳಿಗೆ ಶಿಕ್ಷಣದ ಸೌಲಭ್ಯಗಳನ್ನು ಹಾಗೂ ವಯಸ್ಕರ ಶಿಕ್ಷಣ ಕಾರ್ಯಕ್ರಮವೊಂದನ್ನು ಒದಗಿಸಿವುದು. ಮನರಂಜನಾ ಕಾರ್ಯಕ್ರಮಗಳನ್ನು ನೀಡುವುದು ಮತ್ತು ಮನೆಯಲ್ಲಿ, ಕುಟುಂಬದಲ್ಲಿ ಜೀವನದ ಮಟ್ಟವನ್ನು ಹೆಚ್ಚು ಮಾಡುವುದು. ಸಮುದಾಯದ ಅಭಿವೃದ್ಧಿಯ ಮಾರ್ಗದರ್ಶಿಯ ಪ್ರಕಾರ ಹಳ್ಳಿಯ ಹೆಂಗಸರು ಮತ್ತು ಯುವಕರಿಗೆ ಕಾರ್ಯಕ್ರಮಗಳನ್ನು ನೀಡುವುದು ಮುಂತಾದವು. ಹಳ್ಳಿಗಳಿಗೆ ಹೊಸ ರೂಪವನ್ನು ನೀಡುವಂತಹ ಸಾಮಾಜಿಕ ವಾತಾವರಣವನ್ನು ಮತ್ತು ಧೋರಣೆಯನ್ನು ಸೃಜಿಸುವುದು ತಮ್ಮ ಜೀವನದ ರೀತಿಯನ್ನು ಹಾಗೂ ಅವರ ಪಾರಂಪರಿಕ ಅಭ್ಯಾಸಗಳನ್ನು, ವಿಧಾನಗಳನ್ನು ಉತ್ತಮಗೊಳಿಸುವಂತೆ ಮಾಡುವುದು. ಸಮಾಜದ ಅಭಿವೃದ್ಧಿ ಮತ್ತು ರಾಷ್ಟ್ರೀಯ ವಿಸ್ತರಣಾ ಯೋಜನೆಗಳಲ್ಲಿ ತೊಡಗಿಸಿಕೊಂಡಿರುವ ಎಲ್ಲಾ ಅಧಿಕಾರಿಗಳ ಅಥವಾ ಅಧಿಕಾರೇತರರ ಉದ್ದೇಶವಾಗಿರಬೇಕು. ಇದಕ್ಕೆ ಬೇಕಾದುದು ಮಾನವೀಯ ಭಾವನೆ ಮತ್ತು ಗ್ರಾಮಾಂತರ ಪ್ರದೇಶಗಳಲ್ಲಿನ ಸಾಮಾಜಿಕ, ಆರ್ಥಿಕ ಮತ್ತು ಶೈಕ್ಷಣಿಕ ವಾತಾವರಣದ ಬಗ್ಗೆ ಮಾನವೀಯ ಪರಿಗಣನೆ.

## ♦ ಕೃಷಿ ಮತ್ತು ಕೈಗಾರಿಕಾ ಕೇಂದ್ರಿತ ಪ್ರಜ್ಞೆ

- ಆಧುನಿಕ ಕೃಷಿ ಪದ್ಧತಿಗಳನ್ನು ಅಳವಡಿಸಿಕೊಂಡು ಆಹಾರೋತ್ಪಾದನೆಯ ಮಟ್ಟವನ್ನು ಹೆಚ್ಚಿಸುವ ಜವಾಬ್ದಾರಿ ಹಳ್ಳಿಗಳಿಂದಲೇ ಆಗಬೇಕು.

- ಆಹಾರ ಸಮಸ್ಯೆಯನ್ನು ಪರಿಣಾಮಕಾರಿಯಾಗಿ ಪರಿಹರಿಸಲು, ಕನಿಷ್ಟ ತಾಲ್ಲೂಕು ಮಟ್ಟದಲ್ಲಿಯಾದರೂ ಸಂಯುಕ್ತ ಬೇಸಾಯ ಪದ್ಧತಿಯನ್ನು ಜಾರಿಗೆ ತರಬೇಕು.
- ಕೃಷಿಯಲ್ಲಿ ಆಧುನಿಕ ಪದ್ಧತಿಯನ್ನು ಅನುಸರಿಸುವುದರೊಂದಿಗೆ ಅನೇಕ ನಿರುದ್ಯೋಗಿಗಳಿಗೆ ವರ್ಷಪೂರ್ತಿ ಉದ್ಯೋಗವನ್ನು ನೀಡಬಹುದಾದ ಹಂದಿ ಸಾಕಾಣೆ, ಕೋಳಿ ಸಾಕಾಣೆ, ಕುರಿ ಸಾಕಾಣೆ, ಹಾಲಿನ ಉತ್ಪಾದನೆ, ತೋಟಗಾರಿಕೆ, ಒಳನಾಡು ಮೀನುಗಾರಿಕೆ ಮತ್ತು ಇತರ ಕೃಷಿಗೆ ಸಂಬಂಧಿಸಿದ ಕೈಗಾರಿಕೆಗಳು ಸ್ಥಾಪಿತವಾಗಬೇಕು.
- ಸಣ್ಣಪುಟ್ಟ ಹಿಡುವಳಿದಾರರು ಸಹಕಾರ ತತ್ವಗಳ ಆಧಾರದ ಮೇಲೆ ಒಟ್ಟಾಗಿ ಬೇಸಾಯ ಮಾಡುವ ಪದ್ಧತಿಯನ್ನು ಅನುಸರಿಸಿ ತಮ್ಮ ಬಳಿಯಿರುವ ಸ್ವಲ್ಪ ಜಮೀನಿನಿಂದಲೇ ಅಧಿಕ ಲಾಭವನ್ನು ಪಡೆಯಬೇಕು. ಈ ಸಹಕಾರಿ ವ್ಯವಸಾಯಗಾರರಿಗೆ ಸಕಾಲದಲ್ಲಿ ಸೇವೆಗಳನ್ನು ಸಲ್ಲಿಸುವ, ಕಡಿಮೆ ಬಡ್ಡಿದರದಲ್ಲಿ ಸಾಲಗಳನ್ನು, ರಸಗೊಬ್ಬರಗಳನ್ನು ಮತ್ತು ಉಪಕರಣಗಳನ್ನು ನೀಡುವ ಕರ್ತವ್ಯದಲ್ಲಿ ಸೇವಾ ಸಹಕಾರಿ ಸಂಘಗಳು ಸದಾ ಸಿದ್ಧವಾಗಿರಬೇಕು.
- ಕೃಷಿ ಕಾರ್ಮಿಕರಿಗೆ ಉದ್ಯೋಗವನ್ನು ಒದಗಿಸಲು ಮತ್ತು ಆಹಾರದ ಸಮಸ್ಯೆಯನ್ನು ಪರಿಹರಿಸಲು ಸರಕಾರವು ಸಾಕಷ್ಟು ಜಮೀನು ಮತ್ತು ಸೌಲಭ್ಯಗಳು ತನ್ನ ಅಧೀನದಲ್ಲಿರುವೆಡೆಗಳಲ್ಲಿ ತೋಟಗಾರಿಕೆ ಮತ್ತು ಪಶುಸಂಗೋಪನಾ ಕೇಂದ್ರಗಳನ್ನು ತೆರೆಯಬೇಕು. ಕೋಳಿಗಳಿಗೆ, ಮೊಟ್ಟೆಗಳಿಗೆ ಮಾಂಸ ಮತ್ತು ಮೀನುಗಳಿಗೆ ಹಾಗೂ ತರಕಾರಿ ಮತ್ತು ಹಣ್ಣುಗಳಿಗೆ ವಿಪರೀತವಾದ ಬೇಡಿಕೆಗಳಿವೆ. ಈ ಬೇಡಿಕೆಗಳನ್ನು ಪೂರೈಸುವ ನಿಟ್ಟಿನಲ್ಲಿ ನಾವು ಕಾರ್ಯಕ್ರಮವನ್ನು ಹಮ್ಮಿಕೊಂಡರೆ, ಕೃಷಿ ಕಾರ್ಮಿಕರ ನಿರುದ್ಯೋಗ ಸಮಸ್ಯೆಯನ್ನು ಪರಿಹರಿಸುವುದರ ಜೊತೆಗೆ ರಾಷ್ಟ್ರೀಯ ಪೌಷ್ಟಿಕತೆಯಲ್ಲಿನ ಗುಣಮಟ್ಟವನ್ನೂ ಹೆಚ್ಚಿಸಬಹುದು.
- ಸರ್ಕಾರದ ಅಭಿವೃದ್ಧಿ ಕಾರ್ಯಕ್ರಮಗಳೆಂದರೆ ಅದು ಶೋಷಿಸಲ್ಪಡುತ್ತಿರುವ ಮತ್ತು ಕೆಳಕ್ಕೆ ತುಳಿಯಲ್ಪಡುತ್ತಿರುವ ಬಡ ಹಾಗೂ

ಶ್ರಮ ಜೀವಿ ವರ್ಗಗಳ ರಕ್ಷಣೆಯನ್ನು ನಮ್ಮ ಪ್ರಥಮ ಕರ್ತವ್ಯವೆಂದೇ ನಂಬಿ ಜಾರಿಗೊಳಿಸೋದು.

- ವಿಜ್ಞಾನ ಮತ್ತು ತಂತ್ರಜ್ಞಾನದ ಅನುಕೂಲಗಳನ್ನು ನಾವು ಹೊಲಗದ್ದೆಗಳಲ್ಲಿ ಕೆಲಸ ಮಾಡುವವರಿಗೆ ತೋರಿಸಿಕೊಡಬೇಕು. ಈ ಉದ್ದೇಶಕ್ಕಾಗಿ ಪ್ರತಿಯೊಂದು ಜಿಲ್ಲಾಕೇಂದ್ರಗಳಲ್ಲಿಯೂ, ಸಾಧ್ಯವಾದರೆ ತಾಲ್ಲೂಕು ಕೇಂದ್ರಗಳಲ್ಲಿಯೂ, ವಸ್ತು ಪ್ರದರ್ಶನಕ್ಕೆ ಖಾಯಂ ಆದ ಕಟ್ಟಡಗಳನ್ನು ಹೊಂದಿರುವುದು. ಈ ಕಟ್ಟಡಗಳಲ್ಲಿ ಕೆಲವು ಆಕೃತಿಗಳು, ಚಿತ್ರಗಳು, ಗ್ರಾಫ್‌ಗಳು ಇದ್ದು, ಇಂತಹವುಗಳು ಮಾತ್ರ ಇದ್ದರೆ ಅದು ಹಳ್ಳಿಯ ಜನರ ಮನಸ್ಸಿನ ಮೇಲೆ ನೈಜವಾದ ಪರಿಣಾಮಗಳನ್ನು ಬೀರುತ್ತಿದ್ದಷ್ಟು ಪ್ರಭಾವಕಾರಿಯಲ್ಲ. ನಾವು ಅಭಿವೃದ್ಧಿ ಹೊಂದಿದ ದೇಶಗಳಲ್ಲಿ ನೋಡುವ ಹಾಗೆ, ಸಹಜವಾದ ಜಮೀನಿನಲ್ಲಿ ಸಹಜವಾದ ಪ್ರಾಣಿಗಳು, ಸಸ್ಯಗಳನ್ನು ಹೊಂದಿರಬೇಕು.
- ರೈತರು ಹಳೆಯ ವಿಧಾನಗಳು ಮತ್ತು ಹೊಸ ವೈಜ್ಞಾನಿಕ ಮತ್ತು ತಾಂತ್ರಿಕ ಸಾಧನಗಳಿಂದ ಸಾಧ್ಯವಾದ ವಿಧಾನಗಳು – ಇವೆರಡರ ನಡುವೆ ಇರುವ ವ್ಯತ್ಯಾಸವನ್ನು ಗುರುತಿಸಿ ಅವುಗಳಲ್ಲಿ ಲಾಭದಾಯಕರವಾದುದ್ದನ್ನು ಆಯ್ದುಕೊಳ್ಳುತ್ತಾರೆ. ಅವರ ಕಲ್ಪನೆಯನ್ನು ನಿಜವಾದ ಪ್ರಾಣಿಗಳು, ಸಸ್ಯಗಳು ಮತ್ತು ಅವುಗಳು ಹುಟ್ಟುವ ಸಾಕಲ್ಪಡುವ ಸಂಭಾಳಿಸುವ ವಿಧಾನಗಳು ಹಿಡಿದಿಡುವಷ್ಟು ಪ್ರತಿಮೆಗಳು, ರೂಪಕಗಳು ಇತ್ಯಾದಿ ನಿರ್ಜೀವ ವಸ್ತುಗಳು ಹಿಡಿದಿಡಲಾರವು. ಈ ವಿಷಯಕ್ಕೆ ಇನ್ನೂ ಹೆಚ್ಚಿನ ಗಂಭೀರವಾದ ಗಮನವನ್ನು ನೀಡುವುದು ಅಗತ್ಯ. ಆದಷ್ಟು ಹೆಚ್ಚಿನ ಸಂಖ್ಯೆಯಲ್ಲಿ ನಮ್ಮ ಸ್ವಂತದ ವಸ್ತು ಪ್ರದರ್ಶನದ ಕಟ್ಟಡಗಳನ್ನು ಬೇರೆ ಬೇರೆಯ ಮಟ್ಟಗಳಲ್ಲಿ ಹೊಂದಿರಬೇಕು.
- ಆಹಾರ ಕೊರತೆಯನ್ನು ನಿವಾರಿಸಲು, ಸ್ವಾತಂತ್ರ್ಯ ಬಂದಾಗಿನಿಂದಲೂ ಇಲ್ಲಿಯವರೆಗಿನ 12 ವರ್ಷಗಳಲ್ಲಿ 1500 ಕೋಟಿ ರೂ ಮೌಲ್ಯದ ಆಹಾರ ಧಾನ್ಯಗಳನ್ನು ಆಮದು ಮಾಡಿಕೊಂಡಿದ್ದೇವೆ. ಆಮದಿನ ಮೇಲಿನ ಅವಲಂಬನೆಯನ್ನು ಮುಂದುವರೆಸಿಕೊಂಡು ಹೋಗುವುದು

ತೀರ ಅಪೇಕ್ಷಣೀಯ. ಕೃಷಿಯ ಉತ್ಪಾದನೆಯು, ಅದರಲ್ಲಿಯೂ ಆಹಾರ ಧಾನ್ಯಗಳ ಉತ್ಪಾದನೆಯನ್ನು ಅಧಿಕಗೊಳಿಸದೇ ಹೋದರೆ ದೊಡ್ಡ ಪ್ರಮಾಣದ ಅಭಿವೃದ್ಧಿ ಸಾಧ್ಯವಿಲ್ಲ. ಕೃಷಿಯ ಬಿಟ್ಟು ಉತ್ಪಾದನೆಯನ್ನು ಹೆಚ್ಚು ಮಾಡಬೇಕಾದರೆ, ನಾವು ಪ್ರತಿ ಎಕರೆಯ ಉತ್ಪಾದನೆಯ ಪ್ರಮಾಣವನ್ನು ಈಗಿನದಕ್ಕಿಂತ ಹಲವು ಪಟ್ಟು ಹೆಚ್ಚಿಸಬೇಕು ಎನ್ನುವ ಉದ್ದೇಶ ಹೊಂದಿದ್ದರು.

ಒಟ್ಟಾರೆ ಎನ್. ರಾಚಯ್ಯನವರ ಚಿಂತನೆಗಳು ಭೂಮಿಯಿಂದ ಆಕಾಶದವರೆಗೆ ಬೆಳೆದ ಬೆಳೆಗಳು. ಸಮಾಜದ ಎಲ್ಲಾ ದಮನಿತು ಆ ಬೆಳೆಯ ಒಳಗೆ ಜಾಗ ಪಡೆದಿರವುದೇ ಆ ಚಿಂತನೆಗಳು ಇಂದಿಗೂ ಪ್ರಸ್ತುತವಾಗುವುದರ ಕಾರಣವಾಗಿವೆ.



ಕುಗ್ರಾಮ ಒಂದರಲ್ಲಿ ಸಚಿವ ರಾಚಯ್ಯನವರು ದಲಿತ
ಸಮುದಾಯದ ಕುಂದು ಕೊರತೆಗಳನ್ನು ಆಲಿಸುತ್ತಿರುವ ಸಂದರ್ಭ



ಬೆಂಗಳೂರು ಕುಮಾರ ಕೃಪಾದಲ್ಲಿ ಬಾಬೂ ಜಗಜೀವನರಾಂ
ಅವರೊಂದಿಗೆ ಸಚಿವ ರಾಚಯ್ಯ ಮತ್ತು ಕೆಂಪರಾಜೇ ಅರಸು



ಬಾಪೂಜಿ ವಿದ್ಯಾರ್ಥಿ ನಿಲಯ ಹಮ್ಮಿಕೊಂಡಿದ್ದ ಸನ್ಮಾನ ಸಮಾರಂಭದಲ್ಲಿ ಶ್ರೀಯುತರುಗಳಾದ ವೈ. ರಾಮಕೃಷ್ಣ, ಶ್ರೀ ಬಸವಲಿಂಗಪ್ಪ ಹಾಗೂ ಲೋಕಸೇವಾ ನಿರತ ಎಂ. ಹನುಮಂತಯ್ಯ ರಾಚಯ್ಯನವರೊಡನೆ



1958–59ರಲ್ಲಿ ಸಮಾಜ ಕಲ್ಯಾಣ, ಅಬಕಾರಿ, ಪಶುಸಂಗೋಪನ ಇಲಾಖೆ ಸಚಿವರಾಗಿ ಅಧಿಕಾರ ವಹಿಸಿಕೊಂಡನಂತರ ಕಛೇರಿಯಲ್ಲಿ



ಸಚಿವ ರಾಚಯ್ಯ ಅವರ ಹುಟ್ಟುಹಬ್ಬದಂದು
ಶುಭಕೋರಿದ ಅಧಿಕಾರಿಗಳೊಂದಿಗೆ



ರಾಚಯ್ಯನವರ ತೃತೀಯ ಪುತ್ರಿಯ ಆರತಕ್ಷತೆಯ ಸಂದರ್ಭದಲ್ಲಿ
ಸಚಿವ ಹುಚ್ಚು ಮಾಸ್ತಿಗೌಡರ ಜತೆ



ಸಚಿವ ರಾಚಯ್ಯನವರ ಹುಟ್ಟು ಹಬ್ಬದಂದು ಆಪ್ತಕಾರ್ಯದರ್ಶಿ ಹೆಚ್.ಆರ್. ತಿಪ್ಪಯ್ಯ ಶುಭಕೋರಿದ ಸಂದರ್ಭ



ರಾಜ್ಯದಲ್ಲಿ ಏಕಕಾಲದಲ್ಲಿ 200 ವಿದ್ಯಾರ್ಥಿನಿಲಯಗಳು ಅಸ್ತಿತ್ವಕ್ಕೆ ತರುವಲ್ಲಿ ಯಶಸ್ಸು ಕಂಡ ಸುಸಂದರ್ಭಕ್ಕೆ ಮುಖ್ಯಮಂತ್ರಿ ಬಿ.ಡಿ. ಜತ್ತಿ, ಬಸವಲಿಂಗಪ್ಪ ಮತ್ತು ಸಮಾಜ ಕಲ್ಯಾಣ ಅಧಿಕಾರಿಗಳೊಡನೆ



ರಾಜ್ಯಮಟ್ಟದ ಜಿಲ್ಲಾ ಪಂಚಾಯತ್ ಸಮಾವೇಶದಲ್ಲಿ
ಕೇಂದ್ರಸಚಿವ ಸಿ. ಸುಬ್ರಮಣ್ಯಂ ಅವರೊಡನೆ ರಾಚಯ್ಯನವರು



ಕರ್ನಾಟಕ ರಾಜ್ಯ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ನಿಗಮ
ಮಂಡಳಿ ಉದ್ಘಾಟಿಸಿದ ಬಾಬು ಜಗಜೀವನರಾಂ ಅವರ ಜತೆ
ಮುಖ್ಯಮಂತ್ರಿ ಅವರ ಜತೆ ಮುಖ್ಯಮಂತ್ರಿ ದೇವರಾಜೇ ಅರಸ್
ಕೇಂದ್ರ ಆರೋಗ್ಯ ಸಚಿವ ಮತ್ತು ರಾಚಯ್ಯನವರು
ಉಪಸ್ಥಿತರಿದ್ದರು.



ನ್ಯೂಜಿಲೆಂಡ್ ಡೆಲಿಗೇಟ್ಸ್ ಗಳಿಗೆ ಬೆಂಗಳೂರು ರಾಜಭವನದಲ್ಲಿ ಔತಣಕೂಟ



ಬಿ.ಡಿ. ಜತ್ತಿ ಮಂತ್ರಿಮಂಡಲದ ಜೊತೆ ರಾಷ್ಟ್ರಪತಿ ರಾಜೇಂದ್ರ ಪ್ರಸಾದ್



ದ್ವಿತೀಯ ಪುತ್ರಿಯೊಡನೆ ರಾಚಯ್ಯನವರು



1941–42 ಮೈಸೂರು ಸಂಸ್ಥಾನ ವಿದ್ಯುಚ್ಛಕ್ತಿ ಮಂಡಳಿಯಲ್ಲಿ ಕಾರಕೂನರಾಗಿ ಸಲ್ಲಿಸಿದ ರಾಚಯ್ಯನವರು ಬಲಗಡೆಯಿಂದ ಎಡಕ್ಕೆ ಮೂರನೆಯವರು (ಕಳಿಕ ಸಾಲು) ನೆಲದ ಮೇಲೆ ಕುಳಿತಿರುವ (ಮಧ್ಯದ ಹುಡುಗ) ಸಹೋದರ ಮಾಜಿ ಸಚಿವ ಟಿ.ಎನ್. ನರಸಿಂಹಮೂರ್ತಿ



ದೆಹಲಿಯಲ್ಲಿ ಬಾಬು ಜಗಜೀವನರಾಂ ಅವರನ್ನು
ಪ್ರಧಾನಮಂತ್ರಿ ಪಟ್ಟ ಕಟ್ಟಲು ಹೋರಾಟ ನಡೆಸಿದ
ಚರಿತ್ರಾರ್ಹ ಛಾಯಚಿತ್ರ



ಧರ್ಮಪತ್ನಿ ಶ್ರೀಮತಿ ಲಕ್ಷ್ಮಮ್ಮ (ಬಟ್ಟು)ನವರ
ಜೊತೆ ರಾಚಯ್ಯನವರು



ರಾಚಯ್ಯನವರು ತಮ್ಮ ಹುಟ್ಟುಹಬ್ಬದ ಸಂದರ್ಭದಲ್ಲಿ ತಮ್ಮ ಗಂಡುಮಕ್ಕಳಾದ ಆರ್. ಧರ್ಮಸೇನ (ಇಂದಿನ ಎಂ.ಎಲ್.ಸಿ) ಮತ್ತು ಆರ್. ಚಿತ್ತಬೋಧ್‌ರೊಡನೆ



ಬಾಬೂಜಗಜೀವನರಾಂ ಮತ್ತು ಸಂಗಡಿಗರೊಂದಿಗೆ
ರಾಚಯ್ಯನವರು



ರಾಚಯ್ಯನವರ ರಾಜಕೀಯ ನಡೆ



ದೇವರಾಜ ಅರಸ್ ಮತ್ತು ಬಾಬೂ ಜಗಜೀವನರಾಂ ಜೊತೆ



ರಾಜ್ಯಪಾಲರಾದ ಜಿ.ಎಸ್. ಪಾಠಕ್ ಅಧ್ಯಕ್ಷತೆಯಲ್ಲಿ
ರಾಚಯ್ಯನವರು ಮಾತಾಡುತ್ತಿರುವುದು



ಚಾಮರಾಜನಗರ ತಾಲೋಕು ಅರಕಲವಾಡಿ ಗ್ರಾಮಕ್ಕೆ
ಬೆಂಕಿ ಬಿದ್ದ ಸಂದರ್ಭದಲ್ಲಿ ಸಾಂತ್ವನ ಭೇಟಿ



ಸರ್ಕಾರಿ ಸಮಾರಂಭದಲ್ಲಿ ರಾಜ್ಯಪಾಲ ಪಾಠಕ್ ಕಾಂಗ್ರೆಸ್
ಅಧ್ಯಕ್ಷ ಸಾಹುಕಾರ್ ಚನ್ನಯ್ಯ ಮಾಜಿ ಮುಖ್ಯಮಂತ್ರಿ
ನಿಜಲಿಂಗಪ್ಪ ಸಚಿವರುಗಳಾದ ಎನ್. ರಾಚಯ್ಯ ಮತ್ತು
ಬಸವಲಿಂಗಪ್ಪ



ದಿ. ಸಂಜೀವಯ್ಯನವರ ಗೌರವಾರ್ಥ ರಾಚಯ್ಯನವರಿಂದ
ಸರ್ಕಾರಿ ಔತಣಕೂಟದ ನೋಟ



ರಾಚಯ್ಯನವರ ಕುಟುಂಬ



ರಾಚಯ್ಯನವರ ರೇಸ್‌ಕೋರ್ಸ್ ಮನೆಗೆ
ಶ್ರೀಮತಿ ಇಂದ್ರಾಣಿ ಬಾಬೂಜಿ



ರಾಜಕೀಯ ಚಟುವಟಿಕೆ ನಿರತ ರಾಚಯ್ಯ



ಗ್ರಾಮೀಣ ಜನರೊಂದಿಗೆ ಸಂವಾದ



ರಾಚಯ್ಯನವರು (ಲೇಡಿಸ್‌ಕ್ಲಬ್) ಸರ್ಕಾರಿ ಅಧಿಕೃತ ನಿವಾಸದ
ಮುಂಭಾಗ ತಮ್ಮ ಸೇವಕರು ಮತ್ತು ಸಿಬ್ಬಂದಿಯೊಡನೆ



ಹಾವನೂರು ವರದಿ ಸಲ್ಲಿಸಿದ ಸಂದರ್ಭ ಸಚಿವ
ಹಾವನೂರುರವರು ರಾಚಯ್ಯನವರನ್ನು ಅಭಿನಂದಿಸುತ್ತಿರುವುದು
ಮುಖ್ಯಮಂತ್ರಿ ದೇವರಾಜ ಅರಸು ಉಪಸ್ಥಿತರಿದ್ದರು



ಯೂರೋಪ್ ಪ್ರವಾಸದಲ್ಲಿ ಒಂದು ಸಂದರ್ಭ



**ಸಚಿವ ರಾಚಯ್ಯನವರು ಗ್ರಾಮೀಣ ಭೇಟಿಯಲ್ಲಿ ದಲಿತರ ಮಕ್ಕಳೊಡನೆ**



ಸಮಾರಂಭ ಒಂದರಲ್ಲಿ ಮಾಜಿಮುಖ್ಯಮಂತ್ರಿ ಕಡಿದಾಳ್
ಮಂಜಪ್ಪನವರು, ಬಸವಲಿಂಗಪ್ಪ ಹಾಗೂ ರಾಚಯ್ಯನವರು
ಕಾರ್ಯಕ್ರಮವೊಂದರಲ್ಲಿ



ರಾಚಯ್ಯನವರು ಪ್ರಪ್ರಥಮ ಲೋಕಸಭಾ ಸದಸ್ಯರಾಗಿ
ದೆಹಲಿಯಲ್ಲಿ ರಾಷ್ಟ್ರಪತಿ ಡಾ. ರಾಜೇಂದ್ರ ಪ್ರಸಾದರಿಗೆ ತಮ್ಮನ್ನು
ಪರಿಚಯಿಸಿಕೊಂಡ ಸಂದರ್ಭ



ಲೋಕಸಭಾ ಲಾಂಜ್‌ನಲ್ಲಿ : ಜಾಯಿಂಟ್ ಸೆಷನ್‌ನಲ್ಲಿ
ಭಾಗಿಯಾಗುವ ಮುನ್ನ 'ಚಹಾ' ಸಮಯದಲ್ಲಿ ಬಲಗಡೆ ಎರಡನೆ
ಸಾಲಿನಲ್ಲಿ ನಿಂತವರು ಎರಡನೆಯವರು




ರಾಚಯ್ಯನವರ ಆತ್ಮೀಯ ವಾಹನ



ರಾಚಯ್ಯನವರು ತಮ್ಮ ಪ್ರವಾಸ ಕಾಲದಲ್ಲಿ ದಲಿತರ ಗುಡಿಸಲಲ್ಲಿ ಕುಂದುಕೊರತೆಯನ್ನು ವಿಚಾರಿಸುತ್ತಿರುವುದು



ಎ.ಡಿ. ಸಂಜೀವಯ್ಯ (ಆಂಧ್ರ ಮು.ಮಂ.) ಭೇಟಿಯಾದಾಗ



ಮಾನ್ಯಶ್ರೀ ಎನ್. ರಾಚಯ್ಯನವರ ಅಂತಿಮ ಯಾತ್ರೆ
ದಲಿತ ಬೆಳಕಿನ ನಿರ್ಗಮನ

# ಪ್ರತಿಭಾವಂತ ಸಂಸದೀಯ ಪಟು ಪುಸ್ತಕ ಮಾಲಿಕೆ

## ಪ್ರಕಟಗೊಂಡ ಪುಸ್ತಕಗಳು

| ಕ್ರ.ಸಂ. | ಪುಸ್ತಕದ ಹೆಸರು | ಲೇಖಕರ ಹೆಸರು | ದರ |
|---|---|---|---|
| 1. | ಕೆ. ಹನುಮಂತಯ್ಯ | ಪ್ರೊ॥ ಎಸ್.ಬಿ. ಪಂಗಣ್ಣಾಯ ಹಾಗೂ ಇತರರು | 20–00 |
| 2. | ಎಸ್. ನಜಲಿಂಗಪ್ಪ | ಡಾ॥ ಸಂದೀಪ್ ಶಾಸ್ತ್ರಿ | 15–00 |
| 3. | ಶಾಂತವೇರಿ ಗೋಪಾಲಗೌಡ | ಪ್ರೊ॥ ಎಸ್.ಬಿ. ಪಂಗಣ್ಣಾಯ | 15–00 |
| 4. | ವೈಕುಂಠ ಬಾಳಿಗಾ | ಡಾ॥ ಪಿ. ಜೀವನ್ ಕುಮಾರ್ | 20–00 |
| 5. | ವೀರೇಂದ್ರ ಪಾಟೀಲ್ | ಡಾ॥ ಎಸ್.ಹೆಚ್. ಕವಂಟೆ ಹಾಗೂ ಇತರರು | 20–00 |
| 6. | ಕಡಿದಾಳ್ ಮಂಜಪ್ಪ | ಡಾ॥ ಎಸ್.ಹೆಚ್. ಕವಂಟೆ ಹಾಗೂ ಇತರರು | 15–00 |
| 7. | ಜಿ.ವಿ. ಹಳ್ಳಿಕೇರಿ | ಡಾ. ಆರ್.ಎಂ.ಎಲ್. ಪಾಟೀಲ್ | 15–00 |
| 8. | ಕೆ.ಎಸ್. ನಾಗರತ್ನಮ್ಮ | ಪ್ರೊ॥ ಎಸ್.ಬಿ. ಪಂಗಣ್ಣಾಯ ಹಾಗೂ ಇತರರು | 15–00 |
| 9. | ಡಿ. ದೇವರಾಜ ಅರಸು | ಜೆ.ಎಸ್. ಸದಾನಂದ | 15–00 |
| 10. | ಕೆ.ಟಿ. ಭಾಷ್ಯಂ | ಡಾ. ವಿಘ್ನೇಶ್ ಎನ್. ಭಟ್ | 15–00 |
| 11. | ಕೆ. ಪುಟ್ಟಸ್ವಾಮಿ | ಜಿ. ದಕ್ಷಿಣಾಮೂರ್ತಿ | 15–00 |
| 12. | ಟಿ. ಸಿದ್ದಲಿಂಗಯ್ಯ | ಜಿ. ದಕ್ಷಿಣಾಮೂರ್ತಿ | 20–00 |
| 13. | ಜಗಳೂರು ಇಮಾಂ | ಜಿ.ಎಸ್. ಸದಾನಂದ | 15–00 |
| 14. | ಕೆ.ಸಿ. ರೆಡ್ಡಿ | ಡಾ. ಸಂಧ್ಯಾ ರೆಡ್ಡಿ | 20–00 |
| 15. | ಬಿ.ವಿ. ಕಕ್ಕಿಲ್ಲಾಯ | ಎಂ.ಕೆ. ಭಂಡಿ | 20–00 |
| 16. | ಹೆಚ್.ಎಂ. ಚೆನ್ನಬಸಪ್ಪ | ಪ್ರೊ॥ ಬಿ.ಎಸ್. ಚಂದ್ರಯ್ಯ | 20–00 |
| 17. | ಬಿ. ರಾಚಯ್ಯ | ನಂಜಯ್ಯ ಹೊಂಗನೂರ್ | 20–00 |
| 18. | ಎಂ. ನಾಗಪ್ಪ | ಡಾ. ಎಂ.ಎಸ್. ಪಾಟೀಲ್ | 15–00 |
| 19. | ಜೆ.ಬಿ. ಮಲ್ಲಾರಾಧ್ಯ | ಡಾ. ಹೆಚ್.ಎಂ.ಪಂಚಾಕ್ಷರಯ್ಯ | 15–00 |
| 20. | ಗಂಗಾಧರ್ ನಮೋಶಿ | ಡಾ. ಕವಂಟೆ ಹಾಗೂ ಇತರರು | 15–00 |

| ಕ್ರ.ಸಂ. | ಪುಸ್ತಕದ ಹೆಸರು | ಲೇಖಕರ ಹೆಸರು | ದರ |
|---|---|---|---|
| 21. | ಬಿ.ಡಿ. ಜತ್ತಿ | ಕೃಷ್ಣ ಕೊಲ್ಹಾರ ಕುಲಕರ್ಣಿ | 15-00 |
| 22. | ಆರ್. ಗುಂಡೂರಾವ್ | ಈಶ್ವರ ದೈತೋಟ | 20-00 |
| 23. | ಕೆ.ಎಚ್. ಪಾಟೀಲ್ | ಎಂ.ಕೆ. ಭಂಡಿ | 15-00 |
| 24. | ಅಜೀಜ್ ಸೇಠ್ | ಹೆಚ್.ಕೆ. ಬಾಲಸೂರಿ | 15-00 |
| 25. | ಸಿ.ಎಂ. ಆರ್ಮುಗಂ | ಹೆಚ್.ಕೆ. ಬಾಲಸೂರಿ | 15-00 |
| 26. | ಜೆ.ಹೆಚ್. ಪಟೇಲ್ | ಶೇಷಚಂದ್ರಿಕ | 30-00 |
| 27. | ಬಿ.ಎಲ್. ಸುಬ್ಬಮ್ಮ | ಡಾ. ಡಿ.ಎಸ್. ಜಯಪ್ಪಗೌಡ | 15-00 |
| 28. | ಟಿ.ಆರ್. ಶಾಮಣ್ಣ | ಎಲ್.ಎನ್. ಮುಕುಂದರಾಜ್ | 20-00 |
| 29. | ಎಸ್.ಡಿ. ಗಾಂವಕರ್ | ಮೋಹನ್ ವೆರ್ಣೇಕರ್ | 20-00 |
| 30. | ಎಂ.ಪಿ.ಎಲ್. ಶಾಸ್ತ್ರಿ | ಹಾರೋಗದ್ದೆ ಉಷಾ, ರಮೇಶ್ ನಾಯಕ್ | 20-00 |
| 31. | ಎಸ್. ಶಿವಪ್ಪ | ಕೂಡ್ಲಿಗೆರೆ ಮಲ್ಲಿಕಾರ್ಜುನ | 30-00 |
| 32. | ಕಾಗೋಡು ಚಳವಳಿ | ಕೂಡ್ಲಿಗೆರೆ ಮಲ್ಲಿಕಾರ್ಜುನ | 15-00 |
| 33. | ಕೆ.ವಿ. ಶಂಕರಗೌಡ | ಜಗದೀಶ ಕೊಪ್ಪ | 20-00 |
| 34. | ಟಿ.ಎಸ್. ನರಸಿಂಹಮೂರ್ತಿ | ಕೆ.ಜಿ. ಸುರೇಶ್ | 25-00 |
| 35. | ಎಸ್.ಆರ್. ಕಂಠಿ | ಮನು ಬಳಿಗಾರ್ | 30-00 |
| 36. | ಎಸ್.ಸಿ. ಮಲ್ಲಯ್ಯ | ಡಾ. ಟಿ.ಸಿ. ಪೂರ್ಣಿಮಾ | 20-00 |
| 37. | ಅಬ್ದುಲ್ ನಜೀರ್‌ಸಾಬ್ | ಮನು ಬಳಿಗಾರ್ | 30-00 |
| 38. | ಪಿ.ಎಂ. ನಾಡಗೌಡ | ಗಂಗಾಧರಯ್ಯ ಹಿರೇಮಠ | 30-00 |
| 39. | ಕೆ. ಪಟ್ಟಾಭಿ ರಾಮನ್ | ಸಂಜಯ್ ದೊರೆ | 20-00 |
| 40. | ಎಂ.ಎಸ್.ಕೃಷ್ಣನ್ | ಹೆಚ್.ಕೆ. ಬಾಲಸೂರಿ | 20-00 |
| 41. | ಎಂ.ವಿ. ಕೃಷ್ಣಪ್ಪ | ಜೆ.ಜಿ. ನಾಗರಾಜ್ | 15-00 |
| 42. | ಕೆ.ಎಚ್. ರಂಗನಾಥ್ | ಎಲ್.ಎನ್. ಮುಕುಂದರಾಜ್ | 20-00 |
| 43. | ರಾಮಕೃಷ್ಣ ಹೆಗಡೆ | ಶೂದ್ರ ಶ್ರೀನಿವಾಸ್ | 20-00 |
| 44. | ಸಿ. ಬೈರೇಗೌಡ | ಪ್ರಹ್ಲಾದರಾವ್ | 20-00 |
| 45. | ಎಸ್.ಎಂ. ಯಾಹ್ಯಾ | ಬಿ.ಎಂ. ಹನೀಫ್ | 20-00 |

| ಕ್ರಸಂ. | ಪುಸ್ತಕದ ಹೆಸರು | ಲೇಖಕರ ಹೆಸರು | ದರ |
|---|---|---|---|
| 46. | ಬಾಪುಗೌಡ ದರ್ಶನಾಪುರ | ಗಂಗಾಧರಯ್ಯ ಹಿರೇಮಠ | 20-00 |
| 47. | ಡಾ॥ ಎಚ್. ನರಸಿಂಹಯ್ಯ | ಪ್ರೊ॥ ಗಂಗಾಧರ ಮೂರ್ತಿ | 20-00 |
| 48. | ಕರ್ನಾಟಕ ಏಕೀಕರಣ ಮತ್ತು ನಾಮಕರಣ | ಡಾ. ಸಿ.ಆರ್. ಗೋವಿಂದರಾಜ್ | 15-00 |
| 49. | ಕರ್ನಾಟಕ ರೈತ ಚಳುವಳಿ-ಸತ್ಯಾಗ್ರಹಗಳು, ಸಂಪುಟ-1 | ಡಾ. ಎಂ.ಜಿ. ನಾಗರಾಜ್ | 15-00 |
| 50. | ಕರ್ನಾಟಕ ರೈತ ಚಳುವಳಿ-ಸತ್ಯಾಗ್ರಹಗಳು, ಸಂಪುಟ-2 | ಡಾ. ಎಂ.ಜಿ. ನಾಗರಾಜ್ | 25-00 |
| 51. | ಕರ್ನಾಟಕ ರೈತ ಚಳುವಳಿ-ಸತ್ಯಾಗ್ರಹಗಳು, ಸಂಪುಟ-3 | ಡಾ. ಎಂ.ಜಿ. ನಾಗರಾಜ್ | 25-00 |
| 52. | ಬಿ.ಎಂ. ಹೊರಕೇರಿ | ಡಾ. ಎಂ.ಎಸ್. ಪಾಟೀಲ | 20-00 |
| 53. | ಕೆ. ಕೆಂಚಪ್ಪ | ಚಂದ್ರಶೇಖರ ತಾಳ್ಯ | 20-00 |
| 54. | ಕೇಶವರಾವ್ ನಿಟ್ಟೂರಕರ್ | ಡಾ. ಜಿ.ಬಿ. ವಿಸಾಜಿ | 20-00 |
| 55. | ಸರದಾರ ಶರಣಗೌಡ ಇನಾಂದಾರ | ಡಾ. ಬಿ.ವ್ಹಿ. ಮಲ್ಲಾಪುರ | 20-00 |
| 56. | ಬಸವರಾಜೇಶ್ವರಿ | ಪ್ರಹ್ಲಾದ ಬೆಟಗೇರಿ | 20-00 |
| 57. | ಕೊಲೂರು ಮಲ್ಲಪ್ಪ | ಗಂಗಾಧರಯ್ಯ ಹಿರೇಮಠ, ಡಾ. ದೇ.ಮಾ. ಪಾಟೀಲ | 20-00 |
| 58. | ದೇವೇಂದ್ರಪ್ಪ ಘಾಳಪ್ಪ ಜಮಾದಾರ | ಡಾ. ನಾಗಬಾಯಿ ಬಿ.ಬುಳ್ಳಾ | 20-00 |
| 59. | ಮೊಹಮ್ಮದ್ ಅಲಿ | ಪ್ರೊ॥ ಶಿವರಾಜ ಪಾಟೀಲ | 20-00 |
| 60. | ಬಿ. ಶ್ಯಾಮಸುಂದರ್ | ಗಂಧರ್ವ ಸೇನಾ | 20-00 |
| 61. | ಶಂಕರಶೆಟ್ಟಿ ಪಾಟೀಲ | ಡಾ. ಮಲ್ಲಿಕಾರ್ಜುನ ಶಿವಪ್ಪ ಲಠ್ಠೆ | 20-00 |
| 62. | ಸದಾಶಿವ.ಎಸ್.ಶೆಟ್ಟರ್ | ನಾರಾಯಣ ಘಳಗಿ | 20-00 |
| 63. | ಅಂದಾನಪ್ಪ ದೊಡ್ಡಮೇಟಿ | ಪ್ರೊ. ಸಿ.ವಿ. ಕೆರಿಮನಿ | 25-00 |
| 64. | ಎಸ್.ವೈ. ಪಾಟೀಲ | ಡಾ. ಎಂ.ಎಸ್. ಪಾಟೀಲ್ | 20-00 |
| 65. | ವೈ. ರಾಮಚಂದ್ರ | ಪ್ರೊ. ಚಿಕ್ಕಣ್ಣ | 20-00 |

| ಕ್ರ.ಸಂ. | ಪುಸ್ತಕದ ಹೆಸರು | ಲೇಖಕರ ಹೆಸರು | ದರ |
|---|---|---|---|
| 66. | ಕೆ.ಪಿ. ರೇವಣ್ಣಸಿದ್ದಪ್ಪ | ಸಿದ್ದಗಂಗಯ್ಯ ಕಂಬಾಳ್ | 20–00 |
| 67. | ವೈ.ಕೆ. ರಾಮಯ್ಯ | ಡಾ. ಹಿ.ಚಿ. ಬೋರಲಿಂಗಯ್ಯ | 20–00 |
| 68. | ಸೋಲೂರು ಸಿದ್ದಪ್ಪ | ಸಿದ್ದಗಂಗಯ್ಯ ಕಂಬಾಳ್ | 20–00 |
| 69. | ಎಂ.ವೈ. ಘೋರ್ಪಡೆ | ಮಹಾಬಲೇಶ್ವರ ಕಾತ್ರಹಳ್ಳಿ | 20–00 |
| 70. | ಎಂ.ಪಿ. ಪಾಟೀಲ್ | ಡಾ. ಗುರುಪಾದ ಮರಿಗುದ್ದಿ | 20–00 |
| 71. | ಎಚ್.ವಿ. ಕೌಜಲಗಿ | ಡಾ. ಡಿ.ಎಸ್. ಜಯಪ್ಪಗೌಡ | 20–00 |
| 72. | ಡಾ|| ಎಂ.ಆರ್. ತಂಗಾ | ಎಸ್. ಸುರೇಶ್ ಕುಮಾರ್ | 25–00 |
| 73. | ಕೆ.ಎನ್. ನಾಗೇಗೌಡ | ಪ್ರೊ. ಹೆಚ್.ಎಸ್. ಮುದ್ದೇಗೌಡ | 20–00 |
| 74. | ಎ.ಆರ್. ಪಂಚಗಾವಿ | ಪ್ರೊ. ಚಂದ್ರಶೇಖರ ಅಕ್ಕಿ | 20–00 |
| 75. | ಡಾ: ಕೆ. ನಾಗಪ್ಪ ಆಳ್ವ | ಶ್ರೀ ರಘುಶೆಟ್ಟಿಗಾರ್ | 20–00 |
| 76. | ಎಚ್. ಸಿದ್ದವೀರಪ್ಪ | ಶ್ರೀ ಆರ್.ಜಿ. ಹಳ್ಳಿನಾಗರಾಜ | 35–00 |
| 77. | ಕೊಂಡಜ್ಜಿ ಬಸಪ್ಪ | ಡಾ. ಸಾ.ಶಿ. ಮರುಳಯ್ಯ | 20–00 |
| 78. | ಟಿ.ಎ. ಪೈ | ಡಾ: ಶಿವಾನಂದ ಬೇಕಲ್ | 30–00 |
| 79. | ವಿಶ್ವನಾಥ ಕತ್ತಿ | ಡಾ. ರಾಮಕೃಷ್ಣ ಮರಾಠೆ | 15–00 |
| 80. | ಎನ್. ಹುಚ್ಚಮಾಸ್ತಿಗೌಡ | ಶ್ರೀ ಕವಿತಾ ಕೃಷ್ಣ | 20–00 |
| 81. | ಡಿ.ವಿ. ಗುಂಡಪ್ಪ | ಶ್ರೀ ರಾಘವೇಂದ್ರ ಪಾಟೀಲ | 20–00 |
| 82. | ಕರ್ನಾಟಕ ರೈತ ಚಳುವಳಿ ಸತ್ಯಾಗ್ರಹಗಳು ಸಂಪುಟ–4 | ಡಾ. ಎಂ.ಜಿ. ನಾಗರಾಜ್ | 25–00 |
| 83. | ಕರ್ನಾಟಕ ರೈತ ಚಳುವಳಿ ಸತ್ಯಾಗ್ರಹಗಳು ಸಂಪುಟ–5 | ಡಾ. ಎಂ.ಜಿ. ನಾಗರಾಜ್ | 20–00 |
| 84. | ಕರ್ನಾಟಕ ರೈತ ಚಳುವಳಿ ಸತ್ಯಾಗ್ರಹಗಳು ಸಂಪುಟ–6 | ಡಾ. ಎಂ.ಜಿ. ನಾಗರಾಜ್ | 30–00 |
| 85. | ಪಿ.ಎಂ. ಬಾಂಗಿ | ಡಾ|| ಎಂ.ಎಸ್. ಪಾಟೀಲ | 30–00 |
| 86. | ದಿ. ಎಸ್.ಆರ್. ಬೊಮ್ಮಾಯಿ | ಚಂದ್ರಶೇಖರ ಬೆಳಗೆರೆ | 20–00 |
| 87. | ಶ್ರೀ ಬಿ.ಜಿ. ಬಣಕಾರ | ಡಾ|| ಭೋಜರಾಜ ಪಾಟೀಲ | 40–00 |
| 88. | ಶ್ರೀ ಚಂದ್ರಶೇಖರ ಪಾಟೇಲ್ ಮಹಂಗಾವ್ | ಡಾ|| ಶಿವಾನದಂದಕ ಬೇಕಲ್ | 30–00 |

# ಭಾಷಾಂತರ ಪುಸ್ತಕಗಳು

| ಕ್ರಸಂ. | ಪುಸ್ತಕದ ಹೆಸರು | ಲೇಖಕರ ಹೆಸರು | ದರ |
|---|---|---|---|
| 1. | ಡಾ॥ ಬಿ.ಆರ್. ಅಂಬೇಡ್ಕರ್ | ಭಾಷಾಂತರ ನಿರ್ದೇಶನಾಲಯ | 20–00 |
| 2. | ಡಾ॥ ರಾಂ ಮನೋಹರ ಲೋಹಿಯಾ | ಭಾಷಾಂತರ ನಿರ್ದೇಶನಾಲಯ | 15–00 |
| 3. | ವಿ.ಕೆ. ಕೃಷ್ಣ ಮೆನನ್ | ರಾಜ್ಯ ಭಾಷಾ ಆಯೋಗದ ಅಧ್ಯಕ್ಷರು | 20–00 |
| 4. | ಡಾ॥ ಶ್ಯಾಂಪ್ರಸಾದ್ ಮುಖರ್ಜಿ | ಭಾಷಾಂತರ ನಿರ್ದೇಶನಾಲಯ | 20–00 |
| 5. | ಶೇಖ್ ಮಹಮದ್ ಅಬ್ದುಲ್ಲಾ | ಭಾಷಾಂತರ ನಿರ್ದೇಶನಾಲಯ | 15–00 |
| 6. | ಡಾ॥ ರಾಜೇಂದ್ರ ಪ್ರಸಾದ್ | ಆರ್.ಕೆ. ಹುಡಗಿ | 20–00 |
| 7. | ಭೂಪೇಶ್ ಗುಪ್ತ | ಆರ್.ಕೆ. ಹುಡಗಿ | 20–00 |
| 8. | ಅನಂತಶಯನಂ ಅಯ್ಯಂಗಾರ್ | ಭಾಷಾಂತರ ನಿರ್ದೇಶನಾಲಯ | 15–00 |
| 9. | ರಾಜಕುಮಾರಿ ಅಮೃತಾಕೌರ್ | ಕೆ.ಹೆಚ್. ಸಾವಿತ್ರಿ | 20–00 |
| 10. | ಡಾ॥ ಚಿಂತಾಮಣಿ ಡಿ. ದೇಶಮುಖ್ | ಬೇಲೂರು ಸುದರ್ಶನ್ | 20–00 |
| 11. | ಪನಂ[illegible] ಗೋವಿಂದ ಮೆನನ್ | ಭಾಷಾಂತರ ನಿರ್ದೇಶನಾಲಯ | 15–00 |
| 12. | ಜೈ ಸುಖಲಾಲ್ ಹಾಥಿ | ಎಸ್. ಸುಮಿತ್ರಾ | 15–00 |
| 13. | ಎಸ್.ಎಂ. ಜೋಷಿ | ಕೆ.ಹೆಚ್. ಸಾವಿತ್ರಿ | 15–00 |
| 14. | ಡಾ॥ ಲಂಕಾ ಸುಂದರಂ | ಜವರಯ್ಯ | 15–00 |

# ೧೪. ಸುದ್ದಿಯ ಹಿಂದಿನ ಸ್ವಾರಸ್ಯಗಳು

**ಆರ್. ಶರ್ಮಾ ತಲವಾಟ**

ಬೆಳಿಗ್ಗೆ ಹುಟ್ಟಿ ಸಂಜೆ ಸಾಯುವ ತನ್ನ ಒಂದು ದಿನದ ಆಯಿಸ್ಸಿನಲ್ಲಿ ಅಲ್ಲೋಲಕಲ್ಲೋಲ ಮಾಡಬಲ್ಲ ದಿನಪತ್ರಿಕೆ ಎಂಬ ಮಾಯಾಲೋಕ ಬಹಳಷ್ಟು ಜನರನ್ನು ಸೆಳೆಯುತ್ತದೆ. ಮಕ್ಕಳು ವೃದ್ಧರಾದಿಯಾಗಿ ಪೇಪರ್ ಓದಬೇಕಾದ ಇಂದಿನ ದಿನಗಳಲ್ಲಿ ಅವರವರ ಖಯಾಲಿಗೆ ತಕ್ಕಂತೆ ದಿನಪತ್ರಿಕೆಗಳು ದೊರಕುತ್ತವೆ. ದಿನಪತ್ರಿಕೆಗಳ ವಿಚಾರದಲ್ಲಿ ಓದುಗರ ಕಥೆ ಒಂದೆಡೆಯಾದರೆ ನಿತ್ಯ ಓದುಗರ ಮನತಣಿಸಲು ಸಾವಿರಾರು ಜನ ಪತ್ರಿಕೆಯ ಹಿಂದೆ ತೊಡಗಿಸಿಕೊಳ್ಳುತ್ತಾರಲ್ಲ ಅವರದ್ದು ಸ್ವಾರಸ್ಯಕರಕತೆ. ಎಂಥಾ ವಿಚಿತ್ರ ನೋಡಿ, ಓದುಗರು ಸವಿ ನಿದ್ರೆಯಲ್ಲಿದ್ದಾಗ ಇವರು ಎಚ್ಚರವಾಗಿರುತ್ತಾರೆ. ಓದುಗರು ಬೆಳಗ್ಗೆ ಮುಂಚೆ ಕಾಫಿ ಹೀರುತ್ತಾ ಪತ್ರಿಕೆ ಓದುವಾಗ ಅದರ ಸೃಷ್ಟಿಕರ್ತರು ನಿದ್ರೆಯಲ್ಲಿರುತ್ತಾರೆ.

ಪತ್ರಿಕೆಗಳಿಗೆ ಸುದ್ದಿಯ ಸರಬರಾಜು ಮಾಡುವ ಕೆಲಸ ವರದಿಗಾರರದ್ದು. ಜಿಲ್ಲಾ ವರದಿಗಾರ, ತಾಲ್ಲೂಕು ವರದಿಗಾರ ಹೋಬಳಿ ವರದಿಗಾರ ಹೀಗೆ ಆಯಾ ಪಟ್ಟಣಕ್ಕೆ ತಕ್ಕಂತೆ ನಿಯಮಿಸಲ್ಪಡುತ್ತಾರೆ. ಸಣ್ಣ ಪಟ್ಟಣಗಳಲ್ಲಿ ಈ ತರಹದ ವರದಿಗಾರರಾಗಿ ನೇಮಕಗೊಳ್ಳುವವರು ಇದನ್ನು ಉಪವೃತ್ತಿಯಾಗಿ ಆಯ್ಕೆ ಮಾಡಿಕೊಂಡಿರುತ್ತಾರೆ. ಬರವಣಿಗೆ ವಿಷಯವೇ ಹಾಗೆ, ಯಾರ ಬಳಿಯಾದರೂ ನಾನು ವರದಿಗಾರನ ವೃತ್ತಿ ಮಾಡುತ್ತಿದ್ದೇನೆ. ಎಂದು ಹೇಳಿ ನೋಡಿ. ಹಾಗಾದರೆ ಜೀವನ ನಿರ್ವಹಣೆಗೆ ಏನು ಮಾಡುತ್ತಿದ್ದೀರಾ? ಎಂಬ ಸಿಡಿಗುಂಡಿನಂತಹ ಮರುಪ್ರಶ್ನೆ ಬರುತ್ತದೆ. ಅದು ಇರಲಿ ನಾನು ರಿಪೋರ್ಟರ್ ಅಂತ ಹೇಳಿಕೊಂಡು ಓಡಾಡಿ ಗತ್ತು ಪ್ರದರ್ಶಿಸುವ ಜನರು ಪತ್ರಿಕೆಗಳ ದೃಷ್ಟಿಯಲ್ಲಿ ಸ್ಟ್ರಿಂಜರ್ಸ್ ಅಂತ. ಹಾಗೆಂದರೆ ಬಿಡಿ ಸುದ್ದಿ ಬರಹಗಾರ ಎಂದು. ಅವರಿಗೆ ಬರೆದು ಕಳುಹಿಸಿ ಪ್ರಕಟವಾದ ಸುದ್ದಿಗೆ ಇಂತಿಷ್ಟು ಅಂತ ಪುಡಿಗಾಸು ನೀಡುತ್ತಾರಷ್ಟೆ. ನಮ್ಮ ಸ್ನೇಹಿತನೊಬ್ಬ ತನ್ನನ್ನು ನಾವು ಬಿಡಿ ಅಲ್ಲ ಬೀಡಿ ಸುದ್ದಿ ಬರಹಗಾರ ಅಂತ ಅನ್ನುತ್ತಿದ್ದ. ಕಾರಣ ಅವನಿಗೆ ಪತ್ರಿಕೆಯಿಂದ ಬರುವ ಹಣದ ಜತೆಗಿನ ಪತ್ರವೊಂದರಲ್ಲಿ ಬಿ ಮುಂದೆ ದೀರ್ಘ ಸೇರಿ ಬಂದಿತ್ತಂತೆ. ಅದರಿಂದ ಬರುವ ಕಾಸು ಬೀಡಿಗೆ ಸಾಕಾಗುವುದರಿಂದ ಹಾಗೆ ಬರೆದಿರಬಹುದು

ಸ.ಕೇ.ಮು. ಬೆಂ-59 ಕಾ.ಸೂ. ಓ-013 /1800 ಪ್ರತಿಗಳು, ದಿನಾಂಕ: 02-05-2016